# ಕೂರ್ಮ ಮಹಾಪುರಾಣ

ಪಂ. ಪಂಢರೀನಾಥಾಚಾರ್ಯ ಗಲಗಲಿ





ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಕೂರ್ಮ ಮಹಾಪುರಾಣ


ಅನುವಾದ-ಲೇಖಕರು

ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ



-: ಪ್ರಕಾಶಕರು :-

**ಖೋಡೇ ಫೌಂಡೇಶನ್**

ಗ್ರಂಥಪ್ರಕಟಣಾ ವಿಭಾಗ

ನಂ.9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 6644754 ಫ್ಯಾಕ್ಸ್ : 0091-80-6646098

KŪRMA MAHĀPURĀṆA of Bhagavān Sri Vedavyāsā,
Edited and Translated in Kannada by *Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha* Panditha Sri Pandarinathāchārya Galagali, Vishveswara Nagar, Shanti Colony, Hubli-580 032. Ph.: (0836) 353970

First Edition : 1999

No. of Pages : xv + 387

No. of Copies : 1,000



Price : Rs. 126=00

*Typeset at* : VĀGARTHA,
No.149, 8th Cross, N.R. Colony, Bangalore-560 019.
Ph.: 6527677

*Printed at* : **SRI VENKATESHWARA PRINTERS,**
No.35, Newcross Road, Chick Mavalli,
Near Ganapathi Vidya Mandira, Bangalore-560 004.
Ph.: (080) 6671001

# ಪ್ರಸ್ತಾವನೆ

ಭಾರತೀಯ ಧರ್ಮ, ಸಂಸ್ಕೃತಿ ಹಾಗೂ ಇತಿಹಾಸದೃಷ್ಟಿಯಿಂದ ಪುರಾಣಗಳಿಗೆ ವಿಶಿಷ್ಟಸ್ಥಾನವುಂಟು. ವೇದ, ಸ್ಮೃತಿಗಳ ಅನಂತರ ಪುರಾಣಗಳೇ ಭಾರತೀಯರ ಆಚಾರ, ವಿಚಾರ, ಸಂಪ್ರದಾಯಗಳಿಗೆ ಆಧಾರಭೂತವಾದ ಪ್ರಮಾಣಗ್ರಂಥಗಳಾಗಿವೆ. **''ಇತಿಹಾಸ-ಪುರಾಣಾಭ್ಯಾಂ ವೇದಂ ಸಮುಪ ಬೃಂಹಯೇತ್''** ಎಂದು ಹೇಳಿದ ಪ್ರಕಾರ ವೈದಿಕದರ್ಶನಕ್ಕೆ ನಿದರ್ಶನಗಳನ್ನು ಪುರಾಣಗಳು ಪ್ರದರ್ಶನ ಮಾಡುತ್ತವೆ. ವೇದಾರ್ಥಗಳು ವೇದ್ಯವಾಗುವುದು ಪುರಾಣಗಳಿಂದಲೇ.

ಭಗವಾನ್ ಶ್ರೀವೇದವ್ಯಾಸರು ರಚಿಸಿದ ಹದಿನೆಂಟು ಮಹಾಪುರಾಣಗಳಲ್ಲಿ ಕೂರ್ಮ ಪುರಾಣವು ಹದಿನೈದನೆಯ ಮಹಾಪುರಾಣವಾಗಿದೆ. ಮತ್ಸ್ಯಪುರಾಣದಲ್ಲಿ ಕೂರ್ಮಪುರಾಣದ ಬಗ್ಗೆ ಸಂಕ್ಷಿಪ್ತವಾಗಿ

**''ಯತ್ರ ಧರ್ಮಾರ್ಥಕಾಮಾನಾಂ ಮೋಕ್ಷಸ್ಯ ಚ ರಸಾತಲೇ ।**
**ಮಾಹಾತ್ಮ್ಯಂ ಕಥಯಾಮಾಸ ಕೂರ್ಮರೂಪೀ ಜನಾರ್ದನಃ ॥**
**ಇಂದ್ರದ್ಯುಮ್ನ ಪ್ರಸಂಗೇನ ಋಷಿಭ್ಯಃ ಶುಕಸನ್ನಿಧೌ ।**
**ಅಷ್ಟಾದಶಸಹಸ್ರಾಣಿ ಲಕ್ಷ್ಮೀಕಲ್ಪಾನುಷಂಗಿಕಮ್ ॥**

ಸಾಕ್ಷಾತ್ ಶ್ರೀಹರಿಯು ಕೂರ್ಮರೂಪದಿಂದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ಚತುರ್ವಿಧಪುರುಷಾರ್ಥಗಳ ಮಹಿಮೆಯನ್ನು ಈ ಕೂರ್ಮಪುರಾಣದಲ್ಲಿ ಹೇಳಿದ್ದಾನೆ. ಇಂದ್ರದ್ಯುಮ್ನನ ಪ್ರಸಂಗದಿಂದ ಶ್ರೀ ಶುಕಮುನಿಗಳ ಉಪಸ್ಥಿತಿಯಲ್ಲಿ ಋಷಿಗಳಿಗೆ ಲಕ್ಷ್ಮೀ ಕಲ್ಪಾನುಸಾರಿಯಾಗಿ ಹದಿನೆಂಟು ಸಾವಿರ ಪದ್ಯರೂಪದಿಂದ ರಸಾತಲದಲ್ಲಿ ಈ ಪುರಾಣವನ್ನು ನಿರೂಪಿಸಿದ್ದಾನೆ'' ಎಂದು ಹೇಳಲಾಗಿದೆ.

ಇದರಂತೆ ನಾರದ ಮಹಾಪುರಾಣದಲ್ಲಿಯೂ ಕೂರ್ಮಪುರಾಣದ ಬಗೆಗೆ

**''ಶೃಣು-ವತ್ಸ! ಮರೀಚೇಽದ್ಯ ಪುರಾಣಂ ಕೂರ್ಮಸಂಜ್ಞಿತಮ್ ।**
**ಲಕ್ಷ್ಮೀಕಲ್ಪಾನುಚರಿತಂ ಯತ್ರ ಕೂರ್ಮವಪುರ್ಹರಿಃ ॥**
**ಧರ್ಮಾರ್ಥಕಾಮಮೋಕ್ಷಾಣಾಂ ಮಾಹಾತ್ಮ್ಯಂ ಚ ಪೃಥಕ್ ಪೃಥಕ್ ।**
**ಇಂದ್ರದ್ಯುಮ್ನಪ್ರಸಂಗೇನ ಪ್ರಾಹರ್ಷಿಭ್ಯೋ ದಯಾನ್ವಿತಃ ॥**

ಕೂರ್ಮರೂಪಿಹರಿಯು ಲಕ್ಷ್ಮೀಕಲ್ಪಕ್ಕೆ ಅನುಸಾರವಾಗಿ ಧರ್ಮಾರ್ಥಕಾಮಮೋಕ್ಷಗಳ ಮಹಿಮೆಯನ್ನು ಇಂದ್ರದ್ಯುಮ್ನನ ಪ್ರಸಂಗದಿಂದ ಋಷಿಗಳಿಗೆ ಹೇಳಿದ್ದಾನೆ'' ಎಂದು ತಿಳಿಸಲಾಗಿದೆ. ಇದರಲ್ಲಿ ಹದಿನೇಳು ಸಾವಿರ ಪದ್ಯಗಳಿವೆ ಎಂದು ಹೇಳಲಾಗಿದೆ. ಮತ್ಸ್ಯಪುರಾಣದಲ್ಲಿ ಹದಿನೆಂಟುಸಾವಿರ ಶ್ಲೋಕಗಳೆಂದು ಬಂದಿದೆ. ಇದರಲ್ಲಿ ನಾಲ್ಕು

ಸಂಹಿತೆಗಳು ಇರುತ್ತವೆ ಎಂದು ಕೂರ್ಮಪುರಾಣ ಪೂರ್ವಾರ್ಧದಲ್ಲಿ ಹೇಳಲಾಗಿದೆ. ನಾರದಾದಿ ಪುರಾಣಗಳಲ್ಲಿಯೂ ಕೂರ್ಮಪುರಾಣದ ನಾಲ್ಕು ಸಂಹಿತೆಗಳು, ಅಲ್ಲಿಯ ವರ್ಣವಿಷಯಗಳು ಅವುಗಳ ವ್ಯಾಪ್ತಿ ವಿಸ್ತಾರದ ಬಗ್ಗೆ ಸುಸ್ಪಷ್ಟ ವಿವರಣೆ ಬರುತ್ತದೆ.

**ಚತುರ್ಣಾಂ ಸಂಸ್ಥಿತಂ ಪುಣ್ಯಂ ಸಂಹಿತಾನಾಂ ಪ್ರಭೇದತಃ ।**
**ಬ್ರಾಹ್ಮೀ ಭಾಗವತೀ ಸೌರೀ ವೈಷ್ಣವೀ ಚ ಪ್ರಕೀರ್ತಿತಾ ॥**

ಬ್ರಾಹ್ಮೀಸಂಹಿತಾ, ಭಾಗವತೀ ಸಂಹಿತಾ, ಸೌರೀ (ಸೂರ್ಯಸಂಬಂಧಿ) ಸಂಹಿತಾ, ವೈಷ್ಣವೀ ಸಂಹಿತಾ ಎಂದು ಕೂರ್ಮಪುರಾಣವು ನಾಲ್ಕು ಭಾಗಗಳಲ್ಲಿ ವಿಂಗಡಿಸಲ್ಪಟ್ಟಿದೆ. (ಕೂರ್ಮಪುರಾಣ ಪೂರ್ವಾರ್ಧ ೧/೨೧/೨೨)

ಇದರ ಮೊದಲನೆಯ ಭಾಗವಾದ ಬ್ರಾಹ್ಮೀಸಂಹಿತೆಯಲ್ಲಿ ಪೂರ್ವಾರ್ಧ ಉತ್ತರಾರ್ಧ ಎಂದು ಎರಡು ಭಾಗಗಳಿವೆ. ಎರಡನೆಯ ಭಾಗವತೀ ಸಂಹಿತೆಯಲ್ಲಿ ಐದು ಪಾದಗಳಿವೆ. ಆದುದರಿಂದ ಅದಕ್ಕೆ ಪಂಚಪದೀ ಎಂದು ಹೆಸರು. ನಾಲ್ಕನೆಯದಾದ ವೈಷ್ಣವೀ ಸಂಹಿತೆಯಲ್ಲಿ ನಾಲ್ಕು ಪಾದಗಳಿದ್ದು ಅದಕ್ಕೆ ಚತುಷ್ಪಾದೀ ಎಂದು ಕರೆಯುತ್ತಾರೆ. ಸೌರೀಸಂಹಿತೆಯಲ್ಲಿ ಎರಡು ಸಾವಿರ ಪದ್ಯಗಳಿವೆ ಎಂದು ಹೇಳಲಾಗಿದೆ.

ಬ್ರಾಹ್ಮೀಸಂಹಿತೆಯಲ್ಲಿ ೬,೦೦೦, ಭಾಗವತೀ ಸಂಹಿತೆಯಲ್ಲಿ ೪,೦೦೦, ಸೌರೀ ಸಂಹಿತೆಯಲ್ಲಿ ೨,೦೦೦, ವೈಷ್ಣವೀಸಂಹಿತೆಯಲ್ಲಿ ೫,೦೦೦ ಶ್ಲೋಕಗಳು ಇರುತ್ತವೆ. ಒಟ್ಟು ಈ ಪುರಾಣದಲ್ಲಿ ಹದಿನೇಳು ಸಾವಿರ ಶ್ಲೋಕಗಳು ಇರುತ್ತವೆ ಎಂದು ನಾರದ ಪುರಾಣದಲ್ಲಿ ಇದರ ಸಂಖ್ಯೆಯನ್ನು ಕೊಟ್ಟಿದ್ದಾರೆ. ಮತ್ಸ್ಯಪುರಾಣದಲ್ಲಿ ಹದಿನೆಂಟು ಸಾವಿರ ಪದ್ಯಗಳೆಂದು ಹೇಳಲಾಗಿದೆ.

ಆದರೆ ಈಗ ಈ ಪುರಾಣದ ಬ್ರಾಹ್ಮೀಸಂಹಿತೆ ಮಾತ್ರ ಉಪಲಬ್ಧವಿದ್ದು ಭಾಗವತೀ ಸಂಹಿತಾ, ಸೌರೀಸಂಹಿತಾ, ವೈಷ್ಣವೀಸಂಹಿತೆಗಳು ಎಲ್ಲಿಯೂ ದೊರಕುವುದಿಲ್ಲ. ಈಗ ಉಪಲಬ್ಧವಿದ್ದ ಕೂರ್ಮಪುರಾಣದ ಬ್ರಾಹ್ಮೀಸಂಹಿತೆ ಪೂರ್ವಾರ್ಧ ಉತ್ತರಾರ್ಧ ಎರಡ-ರಲ್ಲಿಯೂ ಒಟ್ಟು ಆರುಸಾವಿರ ಶ್ಲೋಕಗಳಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳ ಮಾಹಾತ್ಮ್ಯವು ನಿರೂಪಿಸಲ್ಪಟ್ಟಿದೆ.

ಪೂರ್ವದಲ್ಲಿ ಸಮುದ್ರಮಂಥನ ಸಮಯದಲ್ಲಿ ಮಂದರ ಪರ್ವತವನ್ನು ಬೆನ್ನಮೇಲೆ ಎತ್ತಿ ದೇವತೆಗಳಿಗೆ ಅಮೃತಪ್ರಾಪ್ತಿಗೆ ಅನುಕೂಲಮಾಡಿಕೊಟ್ಟ ಕೂರ್ಮರೂಪಿ ಶ್ರೀಹರಿಯು ಇಂದ್ರದ್ಯುಮ್ನ ಮಹಾರಾಜನ ಕಥಾನಕ ಪ್ರಸಂಗದಿಂದ ಋಷಿಗಳಿಗೆ ಈ ಪುರಾಣವನ್ನು ಹೇಳಿದ್ದರಿಂದ ಇದಕ್ಕೆ ಕೂರ್ಮಪುರಾಣ ಎಂದು ಹೆಸರು ಬಂದಿದೆ.

ಮೂಲತಃ ಮುಖ್ಯತಃ ಇದು ವೈಷ್ಣವಪುರಾಣ. ಬ್ರಾಹ್ಮೀಸಂಹಿತೆಯ ಮೊದಲಿನ ಅಧ್ಯಾಯಗಳಲ್ಲಿ ಲಕ್ಷ್ಮೀ ಹಾಗೂ ನಾರಾಯಣರು ''ಶ್ರೀಹರಿಯೇ ಪರಬ್ರಹ್ಮ ಪರಮಾತ್ಮ''

ಎಂದು ಹೇಳಿದ್ದಾರೆ. ಸ್ವಯಂ ಕೂರ್ಮರೂಪಿಯಾದ ವಿಷ್ಣುವು ಸ್ಪಷ್ಟವಾಗಿಯೇ "ನಾನೇ ನಾರಾಯಣ. ಆದಿಯಲ್ಲಿ ನಾನೊಬ್ಬನೇ ಶೇಷಶಯ್ಯೆಯಲ್ಲಿ ಮಲಗಿದ್ದೆ. ಪ್ರಳಯಕಾಲದ ಕೊನೆಯಲ್ಲಿ ಸೃಷ್ಟಿ ಮಾಡುವ ಉದ್ದೇಶದಿಂದ ನಾನೇ ಚತುರ್ಮುಖ ಬ್ರಹ್ಮದೇವನನ್ನು ಮೊದಲು ಸೃಷ್ಟಿಸಿದೆ. ಅನಂತರ ನನ್ನ ನಸುಕೋಪದಿಂದ ಶಿವನು ಹುಟ್ಟಿದನು. ಅವನಲ್ಲಿ ಮೂರುಲೋಕಗಳನ್ನೂ ಸುಡುವಷ್ಟು ಉಜ್ವಲವಾದ ತೇಜಸ್ಸು ಇದ್ದಿತು. ಅದಕ್ಕೂ ಮೊದಲು ಚಿದಚಿದಾತ್ಮಕವಾದ ಪ್ರಕೃತಿಯ ನಿಯಾಮಕಳಾದ ಮಹಾಲಕ್ಷ್ಮಿಯ ಪ್ರಾದುರ್ಭಾವವಾಯಿತು. ನನ್ನ ಆಜ್ಞೆಯಿಂದ ಪ್ರಕೃತಿಸ್ವರೂಪಳಾದ ಮಹಾಲಕ್ಷ್ಮಿಯೇ ಜೀವರಾಶಿಯನ್ನೆಲ್ಲ ಮೋಹಗೊಳಿಸಿ ಸಂಸಾರದಲ್ಲಿ ತೊಡಗಿಸಿದಳು. ಪ್ರಕೃತಿಬಂಧದಿಂದ ನಾನೇ ಅವರನ್ನು ಕೊನೆಗೆ ಬಿಡುಗಡೆಗೊಳಿಸಿ ಮುಕ್ತಿಯನ್ನು ಕೊಡುವೆನು" ಎಂದು ಸ್ಪಷ್ಟವಾಗಿ ಹೇಳಿದ್ದಾನೆ.

**ಏತತ್ ಪುರಾಣಂ ಸಕಲಂ ಭಾಷಿತಂ ಕೂರ್ಮರೂಪಿಣಾ ।**
**ಸಾಕ್ಷಾದ್ ದೇವಾಧಿದೇವೇನ ವಿಷ್ಣುನಾ ವಿಶ್ವಯೋನಿನಾ ॥**

ಎಂದು ಕೂರ್ಮಪುರಾಣದ ಉತ್ತರಾರ್ಧ (೪೬/೧೨೨)ದಲ್ಲಿ ದೇವಾಧಿದೇವನಾದ ವಿಷ್ಣುವೇ ಕೂರ್ಮರೂಪದಿಂದ ಈ ಸಮಗ್ರ ಕೂರ್ಮಪುರಾಣವನ್ನು ನಿರೂಪಿಸಿದ್ದಾನೆಂದು ಹೇಳಲಾಗಿದೆ.

ಕೂರ್ಮಪುರಾಣದ ಬ್ರಾಹ್ಮೀಸಂಹಿತೆಯೊಂದು ಮಾತ್ರ ಈಗ ಉಳಿದಿದ್ದು ಉಳಿದ ಮೂರುಭಾಗಗಳು ನಷ್ಟವಾಗಿವೆ. ಈಗ ಉಳಿದ ಆರುಸಾವಿರ ಶ್ಲೋಕಾತ್ಮಕವಾದ ಬ್ರಾಹ್ಮೀ ಸಂಹಿತೆಯಲ್ಲಿಯೂ ಮೊದಲಿನ ಎರಡು ಅಧ್ಯಾಯ ಬಿಟ್ಟು ಮುಂದಿನ ಭಾಗದಲ್ಲಿ ಬಹಳಷ್ಟು ಆವಾಪ ಉದ್ವಾಪಗಳು ನಡೆದಿವೆ ಎಂದು ಢಾಕಾ ಯುನಿವರ್ಸಿಟಿಯ ಪ್ರೊಫೆಸರ್ ರಾಜೇಂದ್ರಚಂದ್ರಹಜ್ರಾ ಅವರು ಸಯುಕ್ತಿಕ "ಪುರಾಣಿಕ್ ರಿಕಾರ್ಡ್ಸ್ ಅಂಡ್ ರೈಟ್ಸ್ ಅಂಡ್ ಕಸ್ಟಮ್ಸ್" ಎಂಬ ಪುರಾಣ ವಿಮರ್ಶಾತ್ಮಕ ಗ್ರಂಥದಲ್ಲಿ ಹೇಳಿದ್ದಾರೆ. ಮೂಲತಃ ಇದು ಪಾಂಚರಾತ್ರಾಗಮಾನುಸಾರಿಯಾದ ವೈಷ್ಣವ ಪುರಾಣವಾಗಿದ್ದು ಅನಂತರ ಪಾಶುಪತ ಮತಾನುಸಾರಿಗಳಿಂದ ಶಿವಮಹಿಮಾ ಪ್ರತಿಪಾದಕವಾದ ಪುರಾಣವಾಗಿ ಪರಿವರ್ತಿಸಲ್ಪಟ್ಟಿದೆ.

"The position, which Shiva and Brahma occupy in the earlier portions of the extant Kurma Purana, is certainly inferior to that of Vishnu. They are ranked as comman gods."

"It has been shown above that the extant Kurma Purana belonged originally to the Pancharatras but was later appropriated by the Pashupatas who should be distinguished from the Agamic Saivas and other Saivaic sects."

ಈ ಎಲ್ಲ ಪ್ರಕ್ಷೇಪ ವಿಕ್ಷೇಪಗಳು ಏನೇ ಇದ್ದರೂ ಪ್ರಕೃತ ಕೂರ್ಮಪುರಾಣ ವಿಷ್ಣು ಹಾಗೂ ಶಿವರ ಸ್ನೇಹ ಸಾಮರಸ್ಯ ಪ್ರತಿಪಾದಕವಾಗಿದೆ. ಬ್ರಹ್ಮ, ವಿಷ್ಣು, ಮಹೇಶ್ವರ ಮೂರೂ ದೇವತೆಗಳು ಪರಬ್ರಹ್ಮದ ಪ್ರತಿರೂಪಗಳಾಗಿ ಸೃಷ್ಟಿಸಂಹಾರಾದಿಗಳಿಗೆ ಕಾರಣವಾಗಿವೆ ಎಂದು ತಿಳಿಸಲಾಗಿದೆ. ಸ್ವಯಂ ವಿಷ್ಣುವೇ ನಾನು ಶಂಕರನ ಅಪರಮೂರ್ತಿ ಎಂದಿದ್ದಾನೆ.

**.....ಸೋಽಯ ಮಾಯಾತಿ ಶಂಕರಃ ।**
**ಅಸ್ಯೈವಚಾ ಪರಾ ಮೂರ್ತಿಃ ವಿಶ್ವಯೋನಿಂ ಸನಾತನೀಂ ।**
**ವಾಸುದೇವಾಭಿಧಾನಂ ಮಾಮವೇಹಿ ಪ್ರಪಿತಾಮಹ ॥**

ಎಂದು ಬ್ರಹ್ಮನನ್ನು ಕುರಿತು ಹೇಳಿದ್ದಾನೆ. ಇದರಂತೆ ರುದ್ರದೇವರೂ ಕೂಡ-

**ತ್ರಿಧಾ ಭಿನ್ನೋಽಸ್ಮ್ಯಹಂ ಬ್ರಹ್ಮನ್ ಬ್ರಹ್ಮವಿಷ್ಣು ಹರಾತ್ಮನಾ ।**
**ಸರ್ವರಕ್ಷಾಲಯಗುಣ್ಯೈಃ ನಿಷ್ಕಲಃ ಪರಮೇಶ್ವರಃ ॥**
**ತಸ್ಯೈವ ಪರಮಾ ಮೂರ್ತಿಃ ತನ್ಮಯೋಽಹಂ ನ ಸಂಶಯಃ ।**
**ನಾವಯೋರ್ವಿದ್ಯತೆ ಭೇದೋ ವೇದೇಷ್ವೇತನ್ನ ಸಂಶಯಃ ॥**

ಎಂದು ತನ್ನ ಹಾಗೂ ವಿಷ್ಣುವಿನ ಭಾವೈಕ್ಯ, ಮತ್ಯೈಕ್ಯ, ರೂಪೈಕ್ಯಗಳನ್ನು ಸಾರಿದ್ದಾರೆ.

ಪ್ರೊ. ರಾಜೇಂದ್ರ ಚಂದ್ರ ಹಜ್ರಾರರ ಅಭಿಪ್ರಾಯದಂತೆ ಈ ಪುರಾಣವು ಪ್ರಾರಂಭದಲ್ಲಿ ವಿಷ್ಣುಪಾರಮ್ಯ ಪ್ರತಿಪಾದಕವಾಗಿದ್ದು ಅನಂತರ ಸಂಪೂರ್ಣ ಶಿವಮಾಹಾತ್ಮ್ಯ ಪ್ರತಿಪಾದಕವಾಗಿದೆ. ಶೈವವೈಷ್ಣವ ಭಕ್ತಿಸಂಪ್ರದಾಯಗಳ ಸಮೀಕರಣ, ಶಿವವಿಷ್ಣುಗಳ ಪರಸ್ಪರ ಮಹಿಮಾ ಪ್ರತಿಪಾದನೆಗಳಿಂದ ಇದು ದೇವತಾ ಸಮನ್ವಯಸಾಧಕವಾದ ಮಹಾಪುರಾಣ ಎಂದು ಪಾಶ್ಚಾತ್ಯ ಪೌರಸ್ತ್ಯ ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ.

ಅನೇಕ ಪಾಶ್ಚಾತ್ಯ ವಿಮರ್ಶಕರೂ ಕೆಲವು ಪೌರ್ವಾತ್ಯ ಸಂಶೋಧಕರೂ ಇದರಲ್ಲಿ ಶಾಂಭವ, ಯಾಮಲ, ಶಾಕ್ತ, ಮೌಲ, ಕೌಲೀಯ, ಡಾಮರ ಮುಂತಾದ ಅರ್ವಾಚೀನ ತಂತ್ರಗ್ರಂಥಗಳ ಉಲ್ಲೇಖವಿರುವುದರಿಂದ ಇದರ ಕಾಲವನ್ನು ೮-೯-೧೦ನೆಯ ಶತಮಾನಗಳವರೆಗೂ ಎಳೆದಿದ್ದಾರೆ. ಆದರೆ ಆದಿಶಂಕರಾಚಾರ್ಯರ ಕಾಲದಲ್ಲಿಯೇ ಅರವತ್ತುನಾಲ್ಕು ತಂತ್ರಗಳು ಪ್ರಚಲಿತವಿದ್ದು ಅವರು ಆನಂದಲಹರೀ ಎಂಬ ಗ್ರಂಥದಲ್ಲಿ ''ಚತುಃಷಷ್ಟ್ಯಾ ಗ್ರಂಥೈಃ ಸಕಲಮಭಿಧಾಯ ತ್ರಿಭುವನಂ'' ಎಂದು ಅವುಗಳ ಉಲ್ಲೇಖವನ್ನು ಮಾಡಿದ್ದಾರೆ. ಆದುದರಿಂದ ಇದು ಹತ್ತನೆ ಶತಮಾನದಷ್ಟು ಅರ್ವಾಚೀನ ಎಂದು ವಿಮರ್ಶಕರು ಹೇಳುವುದು ಸರಿಯಲ್ಲ.

ಶ್ರೀ ಶಂಕರಾಚಾರ್ಯರಲ್ಲದೆ ಅನೇಕ ಪ್ರಾಚೀನ ಧರ್ಮಶಾಸ್ತ್ರಕಾರರೂ ಸ್ಮೃತಿಕಾರ ವ್ಯಾಖ್ಯಾನಕಾರರೂ ಈ ಕೂರ್ಮಪುರಾಣದ ವಚನಗಳನ್ನು ತಮ್ಮ ಗ್ರಂಥಗಳಲ್ಲಿ ಹೇರಳವಾಗಿ ಎತ್ತಿಕೊಂಡಿದ್ದಾರೆ.

ಸ್ವಯಂ ಶಂಕರಾಚಾರ್ಯರೇ ಕೂರ್ಮಪುರಾಣದ ಪೂರ್ವಭಾಗದಲ್ಲಿ ಬರುವ ಈಶ್ವರ ಗೀತಾ ವ್ಯಾಸಗೀತೆಗಳಿಂದ ಅನೇಕ ಅವತರಣಿಕೆಗಳನ್ನು ತಮ್ಮ ವಿಷ್ಣುಸಹಸ್ರನಾಮಭಾಷ್ಯ ಮತ್ತು ಮಹಾಭಾರತದ ಸನತ್ಸುಜಾತೀಯ ಭಾಷ್ಯಗಳಲ್ಲಿ ಉದ್ಧರಿಸಿದ್ದಾರೆ. ಈಶ್ವರಗೀತೆಗೆ ವಿಜ್ಞಾನ ಭಿಕ್ಷುವೂ ಭಾಷ್ಯ ಬರೆದಿದ್ದಾರೆ.

ಇದಲ್ಲದೇ ಅನೇಕ ಸ್ಮೃತಿಕಾರ ವ್ಯಾಖ್ಯಾನಕಾರರೂ, ನಿಬಂಧಕಾರರೂ ಕೂರ್ಮಪುರಾಣದ ಪದ್ಯಗಳನ್ನು ಪರಮಪ್ರಮಾಣತ್ವೇನ ತಮ್ಮ ಗ್ರಂಥಗಳಲ್ಲಿ ಧಾರಾಳವಾಗಿ ಬಳಸಿಕೊಳ್ಳುತ್ತಾರೆ.

ವಿದ್ಯಾಕರ ವಾಜಪೇಯಿಯು *'ನಿತ್ಯಾಚಾರಪದ್ಧತಿ'* ಗ್ರಂಥದಲ್ಲಿ ಕೂರ್ಮಪುರಾಣದ ಪೂರ್ವಭಾಗದಿಂದ ಹಾಗೂ ಉತ್ತರಭಾಗದಿಂದ ಪದ್ಯಗಳನ್ನು ಉದಾಹರಿಸುತ್ತಾನೆ. ಇದರಂತೆ ನರಸಿಂಹವಾಜಪೇಯಿಯು ತನ್ನ 'ನಿತ್ಯಾಚಾರ ಪ್ರದೀಪ'ದಲ್ಲಿಯೂ ವಾಚಸ್ಪತಿ ಮಿಶ್ರರು ತಮ್ಮ 'ತೀರ್ಥಚಿಂತಾಮಣಿ'ಯಲ್ಲಿಯೂ, ಶೂಲಪಾಣಿಯು ತನ್ನ 'ಪ್ರಾಯಶ್ಚಿತ್ತ ವಿವೇಕ' ದಲ್ಲಿಯೂ, ಮದನಪಾಲನು ತನ್ನ 'ಮದನ ಪಾರಿಜಾತ'ದಲ್ಲಿಯೂ, ಮಾಧವಾಚಾರ್ಯರು ತಮ್ಮ ಪರಾಶರ ಸ್ಮೃತಿಯ ಮೇಲಿನ ಭಾಷ್ಯದಲ್ಲಿಯೂ ಹೇಮಾದ್ರಿಯು ತನ್ನ 'ಚತುರ್ವರ್ಗ ಚಿಂತಾಮಣಿ'ಯಲ್ಲಿಯೂ, ದೇವಣಭಟ್ಟನು ತನ್ನ 'ಸ್ಮೃತಿಚಂದ್ರಿಕೆ'ಯಲ್ಲಿಯೂ, ಅನಿರುದ್ಧ ಭಟ್ಟನು ತನ್ನ 'ಹಾರಲತಾ'ದಲ್ಲಿಯೂ ಬಲ್ಲಾಳಸೇನನು ತನ್ನ 'ದಾನಸಾಗರ'ದಲ್ಲಿಯೂ ಕೂರ್ಮಪುರಾಣದ ಅನೇಕಾನೇಕ ಪದ್ಯಗಳನ್ನು ಆಧಾರವಾಗಿ ಹಿಡಿದಿದ್ದಾರೆ.

ಶಿವ ವಿಷ್ಣು ಉಭಯ ಮಹಿಮಾ ಪ್ರತಿಪಾದಕವಾದ ಈ ಪುರಾಣದಲ್ಲಿ ವಿಷ್ಣುವು ಶಿವರೂಪದಿಂದ, ಗೌರಿಯು ಲಕ್ಷ್ಮಿಯ ಪ್ರಕೃತಿರೂಪದಿಂದ ಚಿತ್ರಿಸಲ್ಪಟ್ಟಿದ್ದಾರೆ. ಪಾರ್ವತೀ ದೇವಿಯ ಸಹಸ್ರನಾಮಸ್ತೋತ್ರದಿಂದ ಶಕ್ತಿಪೂಜೆಗೆ ಮಹತ್ವವನ್ನು ಒತ್ತಿನೀಡಲಾಗಿದೆ. ಶಕ್ತಿದೇವಿಯ ಆ ಸಹಸ್ರನಾಮಗಳನ್ನು ಭಕ್ತರಿಗೆ ಪಠಿಸಿ ಪಾರಾಯಣಮಾಡಲು ಅನುಕೂಲ-ವಾಗಲಿ ಎಂದು ಇಡಿಕಿಡಿಯಾಗಿಯೇ ಈ ಪುಸ್ತಕದ ಅನುವಾದದಲ್ಲಿ ಕೊಡಲಾಗಿದೆ. ಇಲ್ಲಿ ಬರುವ ಪರಶಿವನ ಮಹಿಮೆಯು ಯಾವ ಶೈವ ಪುರಾಣಕ್ಕೂ ಕಡಿಮೆ ಇಲ್ಲ. ಮೊದಲಿನ ಕೆಲಭಾಗಬಿಟ್ಟರೆ ಇಡೀ ಪುರಾಣವೆಲ್ಲ ಶಿವಮಹಿಮೆಯನ್ನು ಚೆನ್ನಾಗಿ ಬಣ್ಣಿಸುತ್ತದೆ.

ಈ ಪುರಾಣದ ಪೂರ್ವಭಾಗದಲ್ಲಿ ಪುರಾಣ ಉಪಪುರಾಣಗಳ ಹೆಸರು, ಉಪಕ್ರಮ, ಲಕ್ಷ್ಮಿ ಇಂದ್ರದ್ಯುಮ್ನ, ವಿಷ್ಣು ಇಂದ್ರದ್ಯುಮ್ನ, ಋಷಿ, ವಿಷ್ಣು-ಸಂವಾದ, ವರ್ಣಾಶ್ರಮಾಚಾರ ಸಂಹಿತಾ, ಸೃಷ್ಟಿಪ್ರಕರಣಗಳಿವೆ. ಅನಂತರ ಪಾರ್ವತಿಯ ತಪಸ್ಸು, ಭೃಗುವಂಶವರ್ಣನೆ, ಸ್ವಾಯಂಭುವ ವರ್ಣನೆ, ದಕ್ಷಯಜ್ಞ ವಿಧ್ವಂಸ, ವ್ಯಾಸಪಾಂಡವ ಸಂವಾದ, ಯುಗಧರ್ಮ ನಿರೂಪಣ, ಕಾಶೀ ಪ್ರಯಾಗಾದಿ ಅನೇಕಾನೇಕ ತೀರ್ಥಕ್ಷೇತ್ರಗಳ ವರ್ಣನೆ, ಈಶ್ವರಗೀತಾ, ವ್ಯಾಸಗೀತಾ, ನಾಕೂವರ್ಣ, ಆಶ್ರಮಗಳ ಕರ್ತವ್ಯ ನಿರ್ದೇಶನ, ಶ್ರಾದ್ಧಪ್ರಕರಣದ ವಿಸ್ತಾರವಾದ ವಿವೇಚನೆ, ಬ್ರಹ್ಮಚಾರಿಯ ನಿಯಮನಿಷ್ಠೆ ಕರ್ತವ್ಯಗಳು, ಸರ್ವಧರ್ಮದವರ ಶುದ್ಧ ಆಚಾರ ವಿಚಾರಗಳ ಸುವ್ಯವಸ್ಥಿತ ನಿರೂಪಣೆಗಳನ್ನು ಕೂರ್ಮಪುರಾಣದಲ್ಲಿ ಸಾಂಗೋಪಾಂಗವಾಗಿ ಮಾಡಿದ್ದನ್ನು ನಾವು ಕಾಣುತ್ತೇವೆ.

ಇದರಲ್ಲಿ ವೇದ ಹಾಗೂ ವೈದಿಕಧರ್ಮಗಳಿಗೆ ಪ್ರಾಶಸ್ತ್ಯ ಪ್ರಾಧಾನ್ಯಗಳನ್ನು ಕೊಟ್ಟಿದ್ದು ವೇದಬಾಹ್ಯರು, ವೇದನಿಂದಕರ ಜೊತೆ ಮಾತನ್ನೂ ಕೂಡ ಆಡಬಾರದು ಎಂದು ಕಟ್ಟುನಿಟ್ಟಾಗಿ ಬೋಧಿಸಲಾಗಿದೆ.

**ನ ಚ ವೇದಾದೃತೇ ಕಿಂಚಿತ್ ಶಾಸ್ತ್ರಂ ಧರ್ಮವಿಧಾಯಕಮ್ ।**
**ಯೋಽನ್ಯತ್ರ ರಮತೇ ಸೋಽಸೌ ನ ಸಂಭಾಷ್ಯೋ ದ್ವಿಜಾತಿಭಿಃ ॥**

ವೇದದ ಹೊರತು ಧರ್ಮವಿಧಾಯಕವಾದ ಬೇರೆ ಶಾಸ್ತ್ರವೇ ಜಗತ್ತಿನಲ್ಲಿ ಇಲ್ಲ. ವೇದ ಬಿಟ್ಟು ಬೇರೆ ಮತ ಶಾಸ್ತ್ರ ಅನುಸರಿಸುವವನ ಜೊತೆಗೆ ದ್ವಿಜರು ಸರ್ವಾತ್ಮನಾ ಮಾತನಾಡ ಕೂಡದು ಎಂದು ಕೂರ್ಮಪುರಾಣ ಪೂರ್ವಾರ್ಧದ (೧೨/೨೬೦) ಪದ್ಯದಲ್ಲಿ ಅನುಶಾಸನ ಗೈದಿದ್ದಾರೆ.

ಕೂರ್ಮಪುರಾಣದಿಂದ 'ಕಲ್ಪತರು' ಗ್ರಂಥದಲ್ಲಿ ಶ್ರಾದ್ಧ ವಿಷಯಕ ಎರಡು ಪದ್ಯಗಳನ್ನೂ ಅಪರಾರ್ಕದಲ್ಲಿ ಮೂರು ಶ್ಲೋಕಗಳನ್ನೂ ಉದ್ಧರಿಸಿದ್ದಾರೆ. ಆದರೆ ಸ್ಮೃತಿಚಂದ್ರಿಕೆಯಲ್ಲಿ ಈ ಪುರಾಣದಿಂದ ನೂರು ಶ್ಲೋಕಗಳನ್ನು ಉದಾಹರಿಸಿದ್ದು ಅವುಗಳಲ್ಲಿ (೯೪) ತೊಂಬತ್ತನಾಲ್ಕು ಪದ್ಯಗಳು ಕೇವಲ ಆಹ್ನಿಕ ವಿಷಯದಲ್ಲಿ ಉದ್ಧರಿಸಲ್ಪಟ್ಟಿವೆ.

ಹೀಗೆ ಈ ಪುರಾಣವು ಸರ್ವಮಾನ್ಯವೂ ಶಂಕರಾಚಾರ್ಯ ಮಧ್ವಾಚಾರ್ಯ ಭಾಸ್ಕರಾಚಾರ್ಯ ಮುಂತಾದ ಮತಸ್ಥಾಪಕರಾದ ಆಚಾರ್ಯರಿಂದ ಪರಮಪ್ರಮಾಣತ್ವೇನ ಪರಿಗೃಹೀತವೂ ಆಗಿದೆ. ಇಲ್ಲಿಯ ಶೈಲಿಯು ಸರಳವೂ ಸುಬೋಧವೂ ಆಗಿದೆ. ಆದರೆ ಇದರ ಬಂಧ ಹಲಕೆಲವು ಕಡೆ ಬಿಗುವು ಕಡಿಮೆಯಾಗಿ ಅಲ್ಲಲ್ಲಿ ಶೈಥಿಲ್ಯವು ಉಂಟಾಗಿದೆ. ಕಥಾಭಾಗವು ವಿರಳವಾಗಿ ಓದಲು ನೀರಸ ಎನಿಸುತ್ತದೆ. ಪುನರುಕ್ತಿ, ಅತ್ಯವಶ್ಯವಲ್ಲದ ವಿಷಯಗಳ ಮೇಲೆ ಒತ್ತುಕೊಡುವುದು, ಹಲಕೆಲವು ಅಶಕ್ಯ ವಿಷಯಗಳ ಪ್ರತಿಪಾದನೆ, ಪೂರ್ವಾಪರವಿಷಯ ವೈಸಾದೃಶ್ಯ, ಪೂರ್ವೋತ್ತರ ಭಾಗಗಳಲ್ಲಿ ಪ್ರತಿಪಿಪಾದಯಿಷಿತ ವಸ್ತುವಿಷಯಗಳ ಮೇಲೆ ನೈರ್ಭರ್ಯವಿಲ್ಲದಿರುವುದು, ವಿವಕ್ಷಿತ ವಿಷಯಗಳ ನಿರೂಪಣೆಯ ನಡುವೆ ತೂಗಾಡುವ ಸಂದೇಹದ ಆಂದೋಲಿಕೆ ಮುಂತಾಗಿ ಹಲವಾರು ಕೂರ್ಮಪುರಾಣದ ನ್ಯೂನತೆಗಳನ್ನು ಪಟ್ಟಿಮಾಡಿ ಆಧುನಿಕ ವಿಮರ್ಶಕರು ತೋರಿಸುವುದುಂಟು.

ಆದರೆ ಇದರಲ್ಲಿ ಆಸ್ತಿಕರಿಗೂ ಭಾವುಕರಿಗೂ ಬೇಕಾಗುವ ಶಿವ-ವಿಷ್ಣು, ಲಕ್ಷ್ಮಿ-ಪಾರ್ವತಿ ಮುಂತಾದ ದೇವದೇವಿಯರ ಮಹಿಮಾನು ವರ್ಣನೆ, ಉಪಾಸನೆಯ ಪದ್ಧತಿ, ಆಚಾರ ಸಂಹಿತೆ, ಕರ್ತವ್ಯ ನಿರ್ದೇಶನಗಳು ಚೊಕ್ಕವಾಗಿ ಪ್ರತಿಪಾದಿಸಲ್ಪಟ್ಟಿದ್ದು ಸುಜ್ಞರಿಗೆ ಉಪಾದೇಯವಾಗಿವೆ.

ನಮ್ಮ ಪುರಾಣಗಳ ಮೂಲಪ್ರತಿಸಂಶೋಧನೆ, ತಾಡವಾಲಿ ಪೋಥಿಗಳ ವಾಚನ, ಅರ್ಥಾಪಣೆ, ಪರಿವರ್ತನೆ, ಶುದ್ಧೀಕರಣ ಮುಂತಾದ ವಿದ್ವದೈಕ ಸಾಧ್ಯವಾದ ಕಾರ್ಯಗಳಲ್ಲಿ ಅನೇಕ ಪಂಡಿತರು ಸಹಾಯ ಸಹಕಾರ ನೀಡುತ್ತಿದ್ದಾರೆ. ಪಂಡಿತ ಹಯವದನ ಪುರಾಣಿಕ,

ಪಂಡಿತ ಅನಂತ ತಂತ್ರಿ, ಪಂಡಿತ ಬದರೀ ಆಚಾರ್ಯ, ಪಂಡಿತ ಸುರೇಶಾಚಾರ್ಯ, ಪಂಡಿತ ನಾಗರಾಜಾಚಾರ್ಯ, ಪಂಡಿತ ವಾದಿರಾಜಾಚಾರ್ಯ, ಡಾ|| ನಾರಾಯಣಾಚಾರ್ಯ, ಡಾ|| ಧೂಳಖೇಡ, ಎಂ.ಎ., ಪಿ.ಎಚ್.ಡಿ., ಪಂಡಿತ ಮುರಳೀಧರಾಚಾರ್ಯ, ಪಂಡಿತ ನರಸಿಂಹಾಚಾರ್ಯ, ಸೌಭಾಗ್ಯವತೀ ವಾಣೀ, ವಾಸುದೇವಾಚಾರ್ಯ, ಗೋಪೀನಾಥ, ಪಂಡಿತ ನಾರಾಯಣಾಚಾರ್ಯ ಮೊದಲಾದವರು ತುಂಬ ಸಹಾಯ ಸಹಕಾರ ನೀಡಿ ನಮ್ಮ ಪುರಾಣ ಪುಸ್ತಕಗಳು ಹೊರಬರಲು ಸಹಕರಿಸುತ್ತಿದ್ದಾರೆ. ಇವರೆಲ್ಲರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಮುಖ್ಯವಾಗಿ ಈ ಪುರಾಣದ ಪರಿಶೀಲನ, ಪರಿವರ್ತನ, ಪರಿಷ್ಕರಣ, ಅನುವಾದ, ಪರಿಶೋಧನಾದಿ ಸಕಲಕಾರ್ಯಗಳಲ್ಲಿಯೂ ಮುಖ್ಯಭಾಗವಹಿಸಿ ಈ ಗ್ರಂಥವನ್ನು ಪ್ರಕಾಶಿಸಲು ಅನುವು ಮಾಡಿಕೊಟ್ಟ ಡಾ|| ಹೆಚ್. ಶ್ರೀನಿವಾಸಮೂರ್ತಿ, ಎಂ.ಎ., ಪಿ.ಎಚ್.ಡಿ., ಇವರ ಉಪಕಾರವನ್ನು ನಾನು ಎಷ್ಟು ನೆನೆದರೂ ಸಾಲದು. ಅವರೇ ಈ ಗ್ರಂಥದ ಮುಖ್ಯ ಶಿಲ್ಪಿಗಳು.

ಈ ಪುರಾಣ ಪುಸ್ತಕವನ್ನು ಅತ್ಯಲ್ಪ ಅವಧಿಯಲ್ಲಿ ಅತ್ಯಂತ ಸುಂದರವಾದ ಅಕ್ಷರಗಳಲ್ಲಿ ಅಕ್ಷರ ಜೋಡಣೆ ಮಾಡಿಕೊಟ್ಟ **ವಾಗರ್ಥ ಪ್ರಿಂಟಾನಿಕ್ಸ್**‌ರವರಿಗೆ ನಾನು ಅತ್ಯಂತ ಆಭಾರಿಯಾಗಿದ್ದೇನೆ. ಈ ಮಹಾಪುರಾಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ **ಶ್ರೀ ವೆಂಕಟೇಶ್ವರ ಪ್ರಿಂಟರ್ಸ್**, ನಂ. 35, ನ್ಯೂ ಕ್ರಾಸ್‌ರೋಡ್, *(ಗಣಪತಿ ವಿದ್ಯಾಮಂದಿರ)* ಚಿಕ್ಕಮಾವಳ್ಳಿ, ಬೆಂಗಳೂರು-560-004. ಇದರ ಮಾಲೀಕರಾದ **ಮುದ್ರಣ ಪ್ರಶಸ್ತಿ ವಿಜೇತರಾದ ಶ್ರೀಮಾನ್ ಕೆ.ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ** ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ.

ಇದೆಲ್ಲಕ್ಕೂ ಬಹುಮುಖ್ಯವಾಗಿ ನನ್ನನ್ನು ದಾನಿಧುರೀಣ, ಹೃದಯವೈಶಾಲ್ಯದ ಕವಿ ಹಾಗೂ ಕೈಗಾರಿಕೋದ್ಯಮಿ ಶ್ರೀಮಾನ್ ಕೆ.ಎಲ್. ಶ್ರೀಹರಿಖೋಡೆಯವರ ಬಳಿಗೆ ಕರೆದು ಕೊಂಡು ಹೋಗಿ ಅವರಿಗೆ ಈ ಕಾರ್ಯದ ಮಹತ್ವ ಹಾಗೂ ಆವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ **ಶ್ರೀಮಾನ್ ಅನಂತರಾವ್ ಮತ್ತು ಕುಟುಂಬದವರಿಗೂ** ನಾನು ಆಭಾರಿಯಾಗಿದ್ದೇನೆ.

27-3-99 ಮಹಾಮಹೋಪಾಧ್ಯಾಯ

ಹುಬ್ಬಳ್ಳಿ **ಶ್ರೀ ಪಂಢರೀನಾಥಾಚಾರ್ಯ ಗಲಗಲಿ**

*ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ, ಶ್ರೀ ವಿಶ್ವೇಶತೀರ್ಥ ಪ್ರಶಸ್ತಿ,*
*ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣೀ ಅಲಂಕರಣ ಪ್ರಶಸ್ತಿ ವಿಜೇತರು*
**ಶಾಂತಿಕಾಲನಿ, ವಿಶ್ವೇಶ್ವರನಗರ, ಹುಬ್ಬಳ್ಳಿ - 580032**

# ಕೃತಜ್ಞತಾಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತುಸಾವಿರ ಜನರಲ್ಲಿ ಒಬ್ಬನು ವಾಕ್‌ಚತುರನಿರುತ್ತಾನೆ. ಆದರೆ ಕೊಡುಗೈದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಪಂಡಿತರಾದ ಶ್ರೀಹರಿಖೋಡೆಯವರು.

ಹತ್ತುಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಶ್ರೀಖೋಡೆಯವರ ಸೊತ್ತಾಗಿದೆ. ದಾನದಲ್ಲಿಯಂತೂ ಅವರಂಥ ಕೊಡುಗೈದಾನಿಗಳು ಲಕ್ಷಕ್ಕೊಬ್ಬರೂ ದೊರಕಲಾರರು.

ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತಪೂರ್ವವಾದ **'ನ ಭೂತೋ ನ ಭವಿಷ್ಯತಿ'** ಎನ್ನುವಂಥ ಮಹಾಕಾರ್ಯವಾಗಿತ್ತು. ಆದರ ವೈಭವಪೂರ್ಣವಾದ ಆಚರಣೆಯ ವಿಜೃಂಭಣೆಯ ನೆನಪು ಬೆಂಗಳೂರು ನಾಗರಿಕರ ಹೃದಯದ ಹೊಲದಲ್ಲಿ ಇನ್ನೂ ಹಚ್ಚಹಸಿರಾಗಿಯೇ ಇದೆ.

ಶ್ರೀ ಪರಮಪೂಜ್ಯ ಪೇಜಾವರಸ್ವಾಮಿಗಳವರ ಪೂರ್ಣಪ್ರಜ್ಞವಿದ್ಯಾಪೀಠಕ್ಕೆ ನೂರಾರು ಚೀಲ ಅಕ್ಕಿಕೊಟ್ಟು ಅನ್ನದಾನ ಮಾಡಿ ಶ್ರೀಹರಿಯವರು ನಿಜವಾಗಿಯೂ ಶ್ರೀಹರಿಯ ಪೂರ್ಣಕೃಪೆಗೆ ಪಾತ್ರರಾಗಿದ್ದಾರೆ. ವೇದಪಾರಾಯಣ ಮಾಡುವ ವಟುಗಳಿಗೆ ದಿನನಿತ್ಯ ಅನ್ನಸಂತರ್ಪಣೆ ಕಾರ್ಯದಲ್ಲಿ ನಿರತರಾಗಿದ್ದಾರೆ.

ಮುಖ್ಯವಾಗಿ ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದರಪರ್ವತವನ್ನು ಹೊತ್ತಂತೆ ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನ ಪರಿಶೀಲನ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಅದಕ್ಕಾಗಿ ನಮ್ಮ ಹಾಗೂ ಅವರ ಕುಲಸ್ವಾಮಿಯಾದ ಶ್ರೀಪಾಂಡುರಂಗ ವಿಠಲದೇವರು ಅವರಿಗೂ ಅವರ ಕುಟುಂಬ ಪರಿವಾರವರ್ಗಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ, ವೀರ್ಯ ಸೌಭಾಗ್ಯಗಳನ್ನು ಇತ್ತು ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ ಇನ್ನೂ ಜನರಿಗೆ ಗೊತ್ತಿಲ್ಲ. ಅವರೊಬ್ಬ ಶ್ರೀಹರಿಯ ಪರಮಭಕ್ತರು ಮಹಾಕವಿಗಳು, ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು ಪುರಂದರದಾಸ, ಕನಕದಾಸ, ಜಗನ್ನಾಥದಾಸರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೇನಿನ ಹೆಜ್ಜೆಗಳಾಗಿವೆ. ಅನುಭಾವಿಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ನವ್ಯ, ನವೋದಯ, ಭಾವಗೀತ, ಕೀರ್ತನ, ಕಾವ್ಯಗಳ ಸೊಗಡು ಸೊಂಪು ಸೊಬಗು ಸೊಗಸುಗಳು ಇವರ ಪದಪದ್ಯಗಳಲ್ಲಿ ಕಂಪಿಂಪುಗಳ ಪೆಂಪನ್ನು ಸೂಸಿ ಹಾಸುತ್ತವೆ. ಇಲ್ಲಿಯ ಪದಪುಂಜಗಳಲ್ಲಿ ರಸಕಾರಂಜಿಯೇ ಪುಟಿಯುತ್ತಿದೆ. ಇವುಗಳ ಭಾವಾನುಭಾವಗಳು ಒಮ್ಮೊಮ್ಮೆ ಕನಕದಾಸ, ಶರೀಫಸಾಹೇಬ, ಖಲೀಲಗಿಬ್ರಾನ, ರವೀಂದ್ರನಾಥ ಠಾಗೋರರ ಕೃತಿಗಳಂತೆ ಗೂಢಗುಂಜನವಾಗಿ ವಿದ್ವದ್‌ಗಮ್ಯವೂ ಸಹೃದಯ ರಮ್ಯವೂ ಆಗಿ ವಿಜೃಂಭಿಸುತ್ತಿವೆ.

ಈ ವಾಗ್‌ವೈಖರಿಯ ಮಧುಮಾಧುರಿ ಹಾಗೂ ಅರ್ಥಚಾತುರಿಗಳ ಮಾದರಿಯು ಜನರಿಗೆ ಗೊತ್ತಾಗಲಿ ಎಂದು ಅವರ ಹತ್ತಾರು ಹಾಡುಗಳನ್ನು ಮುಂದಿನ ಗ್ರಂಥಗಳಲ್ಲಿ ಪ್ರಕಟಿಸಲಾಗುತ್ತದೆ. ಇವರ ಆ ಅನುಭಾವಿಪದ್ಯಗಳನ್ನು ತಬಲತಂಬೂರಿ ಪೇಟಿ ಫಿಡಲ್‌ಗಳ ಸಹಾಯದಿಂದ ಗಮಕಿಗಳು ಯಮಕದ ಗತ್ತುಗಮ್ಮತ್ತಿನಿಂದ ಹಾಡಿದಾಗ ರಸಿಕ ಸಹೃದಯರ ಹೃದಯದಂಗಳದಲ್ಲಿ ನಲಿವು ನವಿಲಿನ ನಲ್ಗುಣಿತ ನಡೆಸುತ್ತದೆ.

ಸಾಕ್ಷಾತ್ತಾಗಿ ಧ್ವನಿಮುದ್ರಿಕೆಯಲ್ಲಿ ಕೇಳಿದಾಗ ನನಗೆ ಆದ ಆ ನಾದಾನಂದದ ಅನುಭೂತಿಯನ್ನು ನಮ್ಮ ಪುರಾಣವಾಚಕರಾದ ರಸಿಕಹೃದಯರೂ ಅನುಭವಿಸಲಿ ಎಂದು ಇಲ್ಲಿ ಕೊಡಲಾಗಿದೆ. ಅವರಿಗೆ ಹೇಳದೆ ಈ ಮೀಸಲು ಮುರಿಯದ ಗುಪ್ತನಿಧಿಯ ಮೌನಮಂಜೂಷಿಕೆಯ ಮುಚ್ಚಳ ತೆಗೆದು ಕೆಲವು ಮಣಿಮುತ್ತುಗಳನ್ನು ಆಯ್ದು ಇಲ್ಲಿ ಪ್ರಕಟಿಸಿದ್ದನ್ನು ಶ್ರೀಹರಿಖೋಡೆಯವರು ಅನುಮೋದಿಸುವರೆಂದು ನಂಬಿದ್ದೇನೆ.

27-3-99 — ಮಹಾಮಹೋಪಾಧ್ಯಾಯ

ಹುಬ್ಬಳ್ಳಿ — **ಪಂಢರೀನಾಥಾಚಾರ್ಯಗಲಗಲಿ**

# ಕೂರ್ಮಮಹಾಪುರಾಣ

## ವಿಷಯಾನುಕ್ರಮಣಿಕೆ

ಅಧ್ಯಾಯ ಪುಟ ಸಂಖ್ಯೆ

॥ ಶ್ರೀರಾಮಾಯನಮಃ ॥
॥ ಶ್ರೀ ವಿಘ್ನೇಶ್ವರಾಯನಮಃ ॥

ಭಗವಾನ್ ಶ್ರೀ ವೇದವ್ಯಾಸದೇವರಿಂದ ರಚಿತವಾದ

# ಕೂರ್ಮಮಹಾಪುರಾಣ

## ಅಧ್ಯಾಯ-೧

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥

### ಮಂಗಳಾಚರಣೆ

ನಮಸ್ಕೃತ್ಯಾಪ್ರಮೇಯಾಯ ವಿಷ್ಣವೇ ಕೂರ್ಮರೂಪಿಣೇ ।
ಪುರಾಣಂ ಸಂಪ್ರವಕ್ಷ್ಯಾಮಿ ಯದುಕ್ತಂ ವಿಶ್ವಯೋನಿನಾ ॥

ಪೂರ್ಣವಾಗಿ ತಿಳಿಯಲಾಗದ, ಅಳತೆಗೆ ಸಿಗದ ಕೂರ್ಮರೂಪಿಯಾದ ವಿಷ್ಣುವನ್ನು ನಮಸ್ಕರಿಸಿ ಚತುರ್ಮುಖಬ್ರಹ್ಮನು ಉಪದೇಶಿಸಿದ ಪುರಾಣವನ್ನು ಹೇಳುವೆನು.

### ನೈಮಿಷಾರಣ್ಯವಾಸಿಗಳಾದ ಮುನಿಗಳಿಂದ ಸೂತರನ್ನು ಕುರಿತು ಪ್ರಾರ್ಥನೆ

ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳು ತಾವು ನಡೆಸುತ್ತಿದ್ದ ಸತ್ರಯಾಗದ ಕೊನೆಯಲ್ಲಿ ಸೂತ ರೋಮಹರ್ಷಣರನ್ನು ಪುರಾಣಸಂಹಿತೆಯ ಬಗ್ಗೆ ಕೇಳಿದರು:

''ಮಹಾಜ್ಞಾನಿಗಳಾದ ಸೂತರೇ, ನೀವು ಇತಿಹಾಸ-ಪುರಾಣಗಳ ಜ್ಞಾನವನ್ನು ಪಡೆಯುವುದಕ್ಕಾಗಿ ಅತಿಶ್ರೇಷ್ಠಬ್ರಹ್ಮಜ್ಞಾನಿಗಳಾದ ಭಗವಾನ್ ವ್ಯಾಸರ ಶುಶ್ರೂಷೆಯನ್ನು ಚೆನ್ನಾಗಿ ಮಾಡಿದಿರಿ. ಆ ವೇದವ್ಯಾಸರ ಮಾತಿನಿಂದ ನಿಮಗೆ ಬಹಳ ರೋಮಾಂಚನವಾಯಿತು. ಆದ್ದರಿಂದ ನಿಮಗೆ ರೋಮಹರ್ಷಣ ಎಂಬ ಪ್ರಸಿದ್ಧಿ.

ಹಿಂದೆ ವೇದವ್ಯಾಸರು ನಿಮಗೆ ಪುರಾಣಸಂಹಿತೆಯನ್ನು ಉಪದೇಶಿಸಿ ಮುನಿಗಳಿಗೆ ಇದನ್ನು ಹೇಳಲು ಆದೇಶಿಸಿದರು.

ಹಿಂದೆ ಚತುರ್ಮುಖಬ್ರಹ್ಮನು ಸುತ್ಯಾಹ ಯಜ್ಞವನ್ನು ಸಾಂಗವಾಗಿ ನಡೆಸಿದನು. ಆ ಸಂದರ್ಭದಲ್ಲಿ ನೀವು ಶ್ರೀಹರಿಯ ಒಂದು ಅಂಶದ ವಿಶೇಷ ಸನ್ನಿಧಾನವುಳ್ಳವರಾಗಿ ಈ ಪುರಾಣಸಂಹಿತೆಯ ಪ್ರವಚನವನ್ನು ಮಾಡಿದಿರಿ. ಆದ್ದರಿಂದ ಪುರಾಣಾರ್ಥವಿಶಾರದರಾದ ನೀವು ದಯವಿಟ್ಟು ಶ್ರೇಷ್ಠವಾದ ಕೂರ್ಮಮಹಾಪುರಾಣವನ್ನು ನಮಗೆ ಹೇಳಬೇಕು.''

## ರೋಮಹರ್ಷಣರ ಪ್ರವಚನ-ಪ್ರಾಸ್ತಾವಿಕ :

ಮುನಿಗಳ ಮಾತನ್ನು ಕೇಳಿದ ರೋಮಹರ್ಷಣರು ಗುರುಗಳಾದ ವೇದವ್ಯಾಸರನ್ನು ಮನಸಾ ನಮಸ್ಕರಿಸಿ ಮಾತನಾಡಿದರು.

"ಜಗತ್ತಿನ ಸೃಷ್ಟಿಕರ್ತೃವಾದ, ಕೂರ್ಮರೂಪಧರನಾದ ಹರಿಯನ್ನು ನಮಸ್ಕರಿಸಿ ಪಾಪನಾಶಿನಿಯಾದ ದಿವ್ಯವಾದ ಪುರಾಣಕಥೆಯನ್ನು ಹೇಳುವೆನು. ಪಾಪಿಯೂ ಕೂಡ ಇದನ್ನು ಕೇಳಿ ಸದ್ಗತಿಯನ್ನು ಪಡೆಯುತ್ತಾನೆ. ಈ ಪುಣ್ಯಕಥೆಯನ್ನು ನಾಸ್ತಿಕರಿಗೆ ಹೇಳಬಾರದು. ನಾರಾಯಣನಿಂದಲೇ ರಚಿತವಾದ ಈ ಪುರಾಣಕಥೆಯನ್ನು ಆಸ್ತಿಕರೂ, ಶಾಂತರೂ, ಧರ್ಮನಿರತರೂ ಆದ ದ್ವಿಜರಿಗೆ ಹೇಳಬೇಕು.

ಪುರಾಣಗಳಿಗೆ ಐದು ಅಂಗಗಳು. ಅವು : ಸೃಷ್ಟಿ, ಸಂಹಾರ, ವಂಶ, ಮನ್ವಂತರ ಮತ್ತು ವಂಶದಲ್ಲಿ ಆಗಿಹೋದ ಮಹಾತ್ಮರ ಚರಿತ್ರೆ, ಪುರಾಣಗಳು ಇವುಗಳ ವರ್ಣನೆಯನ್ನು ಒಳಗೊಂಡಿರಬೇಕು.

ಪುರಾಣಗಳು ಹದಿನೆಂಟು. ಅವು : ಬ್ರಾಹ್ಮ, ಪಾದ್ಮ, ವಿಷ್ಣು, ಭಾಗವತ, ಭವಿಷ್ಯ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಬ್ರಹ್ಮವೈವರ್ತ, ಲಿಂಗ, ವರಾಹ, ಸ್ಕಾಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ವಾಯು, ಬ್ರಹ್ಮಾಂಡ.

ಈ ಹದಿನೆಂಟು ಪುರಾಣಗಳನ್ನು ಶ್ರವಣಮಾಡಿದ ಮುನಿಗಳು ಬೇರೆ ಉಪಪುರಾಣಗಳನ್ನು ಸಂಕ್ಷೇಪವಾಗಿ ರಚಿಸಿದ್ದಾರೆ. ಅವು:

ಸನತ್ಕುಮಾರ ಪ್ರಣೀತ ನಾರಸಿಂಹ, ಷಣ್ಮುಖ ಪ್ರಣೀತ ಸ್ಕಾಂದ, ನಂದೀಶಕೃತ ಶಿವಧರ್ಮ, ದುರ್ವಾಸಪ್ರಣೀತ ಆಶ್ಚರ್ಯ, ನಾರದೀಯ, ಕಾಪಿಲ, ವಾಮನ, ಔಶನಸ, ಬ್ರಹ್ಮಾಂಡ, ವಾರುಣ, ಕಾಲಿಕಾ, ಮಾಹೇಶ್ವರ, ಸಾಂಬ, ಸೌರ, ಪಾರಾಶರ, ಮಾರೀಚ, ಭಾರ್ಗವ.

ಸಂಹಿತೆಗಳು ಬ್ರಾಹ್ಮೀ, ಭಾಗವತೀ, ಸೌರೀ, ವೈಷ್ಣವೀ ಎಂದು ನಾಲ್ಕು ವಿಧ. ಇವುಗಳಿಂದ ಧರ್ಮ, ಅರ್ಥ, ಕಾಮ, ಮೋಕ್ಷಗಳು ಲಭಿಸುತ್ತವೆ.

ಈ ಕೂರ್ಮಪುರಾಣವು ಬ್ರಾಹ್ಮೀ ಸಂಹಿತೆ. ಇದು ನಾಲ್ಕು ವೇದಗಳಿಗೆ ಸಮಾನ. ಇದರಲ್ಲಿ ಆರುಸಾವಿರ ಶ್ಲೋಕಗಳಿವೆ. ಈ ಪುರಾಣದಿಂದ ಧರ್ಮಾರ್ಥಕಾಮ-ಮೋಕ್ಷಗಳ ಮಹತ್ವದ ಮತ್ತು ಪರಬ್ರಹ್ಮನ ಜ್ಞಾನವು ಉಂಟಾಗುತ್ತದೆ.

ಈ ಪುರಾಣದಲ್ಲಿ ಸೃಷ್ಟಿ, ಪ್ರಲಯ, ಸೂರ್ಯಚಂದ್ರಾದಿವಂಶ, ಮನ್ವಂತರ ಮತ್ತು ವಂಶಪರಂಪರೆಯಲ್ಲಿ ಬಂದವರ ಚರಿತ್ರೆ -ಈ ಐದು ಅಂಶಗಳ ವಿವರಣೆಯು ಇದೆ. ಧಾರ್ಮಿಕರೂ, ವೇದಪಾರಂಗತರೂ ಆದ ಬ್ರಾಹ್ಮಣ ಮೊದಲಾದವರು ಇದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

## ಕಥಾರಂಭ : ಸಮುದ್ರಮಥನ-ಲಕ್ಷ್ಮೀಪ್ರಾದುರ್ಭಾವ :

ಬಹಳ ಹಿಂದೆ ದೇವತೆಗಳು ದೈತ್ಯ-ದಾನವರ ಜೊತೆ, ಮಂದರ-ಪರ್ವತವನ್ನು ಕಡಗೋಲು ಮಾಡಿಕೊಂಡು, ಕ್ಷೀರಸಾಗರದ ಮಥನವನ್ನು ಮಾಡಿದರು. ಆಗ ಶ್ರೀಹರಿಯು ಕೂರ್ಮ ರೂಪದಿಂದ ಮಂದರಪರ್ವತವನ್ನು ಅದು ಸಾಗರದಲ್ಲಿ ಮುಳುಗದಂತೆ ಎತ್ತಿಹಿಡಿದನು. ಆಗ ದೇವತೆಗಳು ಮತ್ತು ನಾರದಾದಿಮಹರ್ಷಿಗಳು ಕೂರ್ಮರೂಪಧಾರಿಯಾದ, ಸಕಲ ಲೋಕವನ್ನು ಸ್ವಯಂ ನೋಡುವ, ವಿಕಾರರಹಿತನಾದ ವಿಷ್ಣುವನ್ನು ಸ್ತುತಿಸಿದರು. ಮಥನವು ನಡೆಯುತ್ತಿದ್ದಾಗ ಶ್ರೀಹರಿವಲ್ಲಭೆಯಾದ ಲಕ್ಷ್ಮೀದೇವಿಯು ಪ್ರಾದುರ್ಭವಿಸಿದಳು. ಶ್ರೀಹರಿಯು ಅವಳನ್ನು ಪರಿಗ್ರಹಿಸಿದನು.

## ದೇವತೆಗಳ ಮತ್ತು ನಾರದರ ಪ್ರಶ್ನೆ :

ಲಕ್ಷ್ಮಿಯ ತೇಜಸ್ಸಿನಿಂದ ಮೋಹಿತರಾದ ಇಂದ್ರ ಮತ್ತು ನಾರದಾದಿ ಮಹರ್ಷಿಗಳು ''ಈ ದೇವಿ ಯಾರು? ದಯವಿಟ್ಟು ತಿಳಿಸು'' ಎಂದು ವಿಷ್ಣುವನ್ನು ಪ್ರಾರ್ಥಿಸಿದರು.

## ಲಕ್ಷ್ಮಿ ಹರಿಪ್ರಿಯೆ-ಪ್ರಕೃತಿತತ್ವದ ಅಭಿಮಾನಿ ದೇವತೆ :

ನಾರದಾದಿಗಳಿಗೆ ವಿಷ್ಣುವು ಹೇಳಿದನು : ''ಇವಳು ನನ್ನ ಪ್ರಿಯೆ. ನಾನೊಬ್ಬನೇ ಇವಳ ಪ್ರಭು. ಕಾಲ-ದೇಶಗಳ ಮಿತಿಯಿಲ್ಲದವಳು. (ಜಡಪ್ರಕೃತಿಯ ಅಭಿಮಾನಿನಿಯಾಗಿ) ಇವಳು ಜಗತ್ತಿಗೆ ಆಧಾರ. ಆದ್ದರಿಂದಲೇ ಇವಳು ಮಹಾಶಕ್ತಿ. ಮಹಾಮಹಿಮಳು. ನಾನು, ಇವಳ ಮೂಲಕವೇ ಇಡೀ ಜಗತ್ತನ್ನು ದೇವ, ಅಸುರ, ಮಾನವರನ್ನು ಸೃಷ್ಟಿಸುತ್ತೇನೆ, ಮೋಹಕ್ಕೆ ಒಳಪಡಿಸುತ್ತೇನೆ, ನಾಶಮಾಡುತ್ತೇನೆ. ಜಗತ್ತಿನ ಸೃಷ್ಟಿ-ಪ್ರಲಯಗಳ ಪ್ರಕ್ರಿಯೆಯನ್ನೂ, (ಹುಟ್ಟುವ, ಸಾಯುವ ಜೀವಾತ್ಮರ ಜೊತೆ) ಪಂಚಭೂತಗಳ ಗಮನ-ಆಗಮನವನ್ನು ಶಾಸ್ತ್ರಗಳಿಂದ ತಿಳಿದವರು ಮಾತ್ರ ಈ ಮಾಯೆಯ ಬಂಧನದಿಂದ ಬಿಡುಗಡೆಯನ್ನು ಪಡೆಯಬಲ್ಲರು. ಬ್ರಹ್ಮ, ಶಿವ ಮೊದಲಾದ ಎಲ್ಲ ದೇವತೆಗಳೂ ಇವಳ ಅನುಗ್ರಹದಿಂದಲೇ ತಮ್ಮ, ತಮ್ಮ ಶಕ್ತಿಗಳನ್ನು ಪಡೆದುಕೊಂಡಿದ್ದಾರೆ. ಇವಳು ಜಗನ್ಮಾತೆ, ಸತ್ವ-ರಜಸ್-ತಮಸ್ ಎಂಬ ಗುಣಗಳ ಸ್ವರೂಪವಾದ ಜಡಪ್ರಕೃತಿಯ ಅಭಿಮಾನಿ (ನಿಯಾಮಕ)ದೇವತೆ. ಕ್ಷೀರಸಾಗರಮಥನಕ್ಕಿಂತ ಮೊದಲೇ ನನ್ನಿಂದಲೇ ಆವಿರ್ಭವಿಸಿದವಳು, ಚತುರ್ಭುಜಳು, ಶಂಖಚಕ್ರಪದ್ಮಧಾರಿಣಿ, ಮಾಲಾಧಾರಿಣಿ, ಕೋಟಿಸೂರ್ಯರ ಪ್ರಕಾಶದಷ್ಟು ಪ್ರಕಾಶವನ್ನು ಹೊಂದಿದವಳು. ಸರ್ವಮೋಹಕಳು, ದೇವತೆಗಳು, ಪಿತೃಗಳು, ಮಾನವರು ಯಾರಿಗೂ ಇವಳ ಮಾಯೆಯಿಂದ ತಪ್ಪಿಸಿಕೊಳ್ಳುವ ಸಾಮರ್ಥ್ಯವಿಲ್ಲ''.

## ನಾರಾಯಣ-ತ್ರಿಕಾಲಾಬಾಧ್ಯತತ್ವ :

ಅನಂತರ ನಾರದಾದಿ ಮುನಿಗಳು ತ್ರಿಕಾಲಾಬಾಧ್ಯವಾದ ತತ್ವ ಯಾವುದು? ಎಂದು ವಿಷ್ಣುವನ್ನು ಕೇಳಿದರು. ಉತ್ತರವನ್ನು ಹೇಳಲು ಉಪಕ್ರಮಿಸಿದ ಶ್ರೀಹರಿ ಇಂದ್ರದ್ಯುಮ್ನನ ಕಥೆಯನ್ನು ಆರಂಭಿಸಿದನು.

"ಇಂದ್ರದ್ಯುಮ್ನ ಒಬ್ಬ ಶ್ರೇಷ್ಠಬ್ರಾಹ್ಮಣ. ಹಿಂದಿನ ಜನ್ಮದಲ್ಲಿ ರಾಜನಾಗಿದ್ದನು. ರುದ್ರಾದಿದೇವತೆಗಳಿಗೂ ಅವನನ್ನು ಸೋಲಿಸಲಾಗಿರಲಿಲ್ಲ. ಅವನು ನನ್ನ ಕೂರ್ಮರೂಪದ ದರ್ಶನವನ್ನು ಪಡೆದು, ನನ್ನಿಂದಲೇ ಪುರಾಣಸಂಹಿತೆಯ ಶ್ರವಣವನ್ನು ಮಾಡಿದ್ದನು. ಮುನಿಶ್ರೇಷ್ಠರನ್ನೂ, ಚತುರ್ಮುಖ ಬ್ರಹ್ಮನನ್ನೂ, ಶಿವಾದಿದೇವತೆಗಳನ್ನೂ ತನ್ನ ಶಕ್ತಿಗನುಗುಣವಾಗಿ ಸತ್ಕರಿಸಿದ್ದನು. ಅವರೆಲ್ಲರೂ ನನ್ನ ಶಕ್ತಿಯನ್ನು ಅವಲಂಬಿಸಿರುವುದನ್ನು ತಿಳಿದು ನನಗೆ ಶರಣಾಗತನಾಗಿದ್ದನು. ಆಗ ನಾನು ಅವನಿಗೆ ಹೇಳಿದ್ದೆನು: "ನೀನು ಬ್ರಾಹ್ಮಣ ಜನ್ಮವನ್ನು ಪಡೆಯುವಿ. ಇಂದ್ರದ್ಯುಮ್ನ ಎಂದು ನೀನು ಪ್ರಸಿದ್ಧನಾಗುವಿ. ಆಗ ನಿನಗೆ ಪೂರ್ವಜನ್ಮದ ಸ್ಮರಣೆಯಿರುತ್ತದೆ. ಯಾವುದೇ ಚೇತನಕ್ಕೆ, ದೇವತೆಗಳಿಗೂ ಕೂಡ ತಿಳಿಯದ ಅತ್ಯಂತ ರಹಸ್ಯವಾದ ತತ್ವವನ್ನು ನಿನಗೆ ಉಪದೇಶಿಸುವೆನು. ನನ್ನ ಜ್ಞಾನವನ್ನು ಪಡೆದು ಕೊನೆಗೆ ನನ್ನನ್ನೇ ಹೊಂದುವಿ".

"ಅವನು ನನ್ನನ್ನು ನಮಸ್ಕರಿಸಿ ತನ್ನ ರಾಜಧಾನಿಗೆ ಹಿಂದಿರುಗಿದನು. ಅಲ್ಲಿ ರಾಜ್ಯವನ್ನು ಆಳುತ್ತಾ ಇದ್ದನು. ಕಾಲಕ್ರಮದಲ್ಲಿ ಮರಣವನ್ನು ಹೊಂದಿದನು. ಅನಂತರ ಶ್ವೇತದ್ವೀಪದಲ್ಲಿ (ಅಮುಕ್ತಸ್ಥಾನದಲ್ಲಿ) ನಾನಾವಿಧವಾದ, ಯೋಗಿಗಳಿಗೂ ದುರ್ಲಭವಾದ ವೈಷ್ಣವಭೋಗಗಳನ್ನು ಅನುಭವಿಸಿದನು. ಅನಂತರ ನನ್ನ ಆಜ್ಞೆಯಂತೆ ಬ್ರಾಹ್ಮಣಕುಲದಲ್ಲಿ ಪುನಃ ಹುಟ್ಟಿದನು.

ಅವನು ವಾಸುದೇವ ಎಂಬ ಹೆಸರಿನ, ಪರಬ್ರಹ್ಮ ಎಂದು ಜ್ಞಾನಿಗಳಿಂದ ತಿಳಿಯಲ್ಪಟ್ಟ ನನ್ನನ್ನು ವಿದ್ಯೆ-ಅವಿದ್ಯೆಗಳ ನಿಯಾಮಕ, ಅವ್ಯಕ್ತ, ಸಕಲ ಚೇತನಾಚೇತನಗಳ ಆಶ್ರಯ, ಪರಮೇಶ್ವರ ಎಂದು ತಿಳಿದುಕೊಂಡನು. ವ್ರತ, ಉಪವಾಸ, ನಿಯಮ, ಹೋಮಗಳಿಂದಲೂ ಬ್ರಾಹ್ಮಣಸಂತರ್ಪಣೆಗಳಿಂದಲೂ ನನ್ನನ್ನು ಆರಾಧಿಸಿದನು. ಯೋಗಿಗಳ ಹೃದಯ ನಿವಾಸಿಯಾದ, ಮಹಾದೇವನಾದ ನನ್ನನ್ನು, ನನ್ನಲ್ಲೇ ಮನಸ್ಸಿಟ್ಟು, ನನ್ನನ್ನೇ ಬಯಸುತ್ತಾ, ನಮಸ್ಕರಿಸುತ್ತಾ ಆರಾಧಿಸಿದನು. ಹೀಗೆ ಬ್ರಹ್ಮನಿಷ್ಠನಾಗಿದ್ದ ಅವನಿಗೆ ಒಮ್ಮೆ ಮಹಾಲಕ್ಷ್ಮಿಯು ದರ್ಶನವನ್ನು ಕೊಟ್ಟಳು. ವಿಷ್ಣುಪತ್ನಿಯಾದ ಅವಳನ್ನು ನೋಡಿ, ಶಿರಸಾ ನಮಸ್ಕರಿಸಿ, ವಿವಿಧ ಸ್ತೋತ್ರಗಳಿಂದ ಸ್ತುತಿಸಿ ಕೈಮುಗಿದು ಮಾತನಾಡಿದನು". "ವಿಷ್ಣು ಚಿಹ್ನೆಯನ್ನು ಧರಿಸಿರುವ, ಮಂಗಳ ಸ್ವರೂಪಳಾದ ದೇವಿ! ನೀನು ಯಾರು? ದಯವಿಟ್ಟು ನಿನ್ನ ಸ್ವರೂಪವನ್ನು ಯಥಾರ್ಥವಾಗಿ ತಿಳಿಸು".

ಮಹಾಲಕ್ಷ್ಮಿಯು ಹೇಳಿದಳು : "ನಾನು ಶ್ರೀಮನ್ನಾರಾಯಣನ ಪತ್ನಿಯಾದ ಮಹಾಲಕ್ಷ್ಮೀ. ಅವನಲ್ಲಿಯೇ ನಿಷ್ಠೆವುಳ್ಳವಳು. ಅವನ ನಿಯಂತ್ರಣಕ್ಕೊಳಪಟ್ಟವಳು. ಅವನ ಇಚ್ಛೆಯಂತೆ ಜಡಪ್ರಕೃತಿಯ ನಿಯಾಮಕಳಾಗಿರುವುದರಿಂದ ನನಗೆ ಮಾಯಾ ಎಂದು ಹೆಸರು. ನನಗೆ ಯಾವುದೇ ವಿಷಯದಲ್ಲೂ ನಾರಾಯಣನ ಅಭಿಪ್ರಾಯಕ್ಕಿಂತ ಭಿನ್ನ ಅಭಿಪ್ರಾಯ ವಿಲ್ಲ. ನಾರಾಯಣನೇ ಪರಬ್ರಹ್ಮ. ಅವನೇ ವಿಷ್ಣು. ನಾನು ಅವನಿಗೆ ಅಧೀನ. ಸಕಲ ಚೇತನಾಚೇತನಗಳಿಗೆ ಆಶ್ರಯನಾದ ಆ ಪುರುಷೋತ್ತಮನನ್ನು ಯಾರು ಜ್ಞಾನಯೋಗದಿಂದ

ಮತ್ತು ಕರ್ಮಯೋಗದಿಂದ ಆರಾಧಿಸುತ್ತಾರೋ ಅವರ ಮೇಲೆ ನಾನು ಯಾವ ಪ್ರಭುತ್ವವನ್ನೂ ಹೊಂದಿಲ್ಲ. ಆದ್ದರಿಂದ ಆದಿ, ಅಂತ್ಯಗಳಿಲ್ಲದ ಅನಂತನಾದ *(ತ್ರಿಕಾಲಾಬಾಧ್ಯನಾದ)* ನಾರಾಯಣನನ್ನು ಕರ್ಮಯೋಗನಿಷ್ಠನಾಗಿ ಜ್ಞಾನಮಾರ್ಗದಿಂದ ಆರಾಧಿಸು; ಇಂತಹ ಆರಾಧನೆಯಿಂದ ಮೋಕ್ಷವನ್ನು ಪಡೆಯುವಿ.''

ಹೀಗೆ ಉಪದೇಶಿಸಲ್ಪಟ್ಟ ಇಂದ್ರದ್ಯುಮ್ನನು ಪುನಃ ಮಹಾಲಕ್ಷ್ಮಿಯನ್ನು ನಮಸ್ಕರಿಸಿ ತ್ರಿಕಾಲಾಬಾಧ್ಯನೂ, ದೋಷರಹಿತನೂ ಆದ ನಾರಾಯಣನನ್ನು ತಿಳಿಯುವ ಬಗೆ ಯಾವುದು? ದಯವಿಟ್ಟು ಹೇಳಬೇಕು ಎಂದು ಪ್ರಾರ್ಥಿಸಿದನು.

ಆಗ ಮಹಾಲಕ್ಷ್ಮಿಯು 'ನಾರಾಯಣನೇ ನಿನಗೆ ಜ್ಞಾನವನ್ನು ಕೊಡುತ್ತಾನೆಂದು' ಹೇಳಿ, ತನ್ನ ಎರಡೂ ಕೈಗಳಿಂದ ಅವನನ್ನು ಮುಟ್ಟಿ, ಪರಾತ್ಪರನಾದ ವಿಷ್ಣುವನ್ನು ಸ್ಮರಿಸುತ್ತ ಅಂತರ್ಧಾನವನ್ನು ಹೊಂದಿದಳು.

ಅನಂತರ ಇಂದ್ರದ್ಯುಮ್ನನು ಶರಣಾಗತರ ದುಃಖವನ್ನು ಪರಿಹರಿಸುವ ಆ ನಾರಾಯಣನನ್ನು ನೋಡುವ ಹಂಬಲದಿಂದ ಉತ್ತಮಧ್ಯಾನದಿಂದ ಅವನನ್ನು ಆರಾಧಿಸಿದನು. ದೀರ್ಘಕಾಲದ ಧ್ಯಾನಾನಂತರ ಪೀತಾಂಬರಧಾರಿಯಾದ ನಾರಾಯಣನು ದರ್ಶನವನ್ನು ಕೊಟ್ಟನು. ತನ್ನ ಕಡೆ ಬರುತ್ತಿರುವ, ಗರುಡಧ್ವಜನಾದ ಆ ನಾರಾಯಣನನ್ನು ನೋಡಿ ನೆಲದ ಮೇಲೆ ಮಂಡಿಗಳನ್ನೂರಿ ಪ್ರಾರ್ಥಿಸಿದನು.

**ಇಂದ್ರದ್ಯುಮ್ನಕೃತ ನಾರಾಯಣಸ್ತುತಿ-ಪ್ರಣಾಮ :**

ಯಜ್ಞೇಶ, ಅಚ್ಯುತ, ಗೋವಿಂದ, ಮಾಧವ, ಅನಂತ, ಕೇಶವ, ಕೃಷ್ಣ, ವಿಷ್ಣೋ, ಹೃಷೀಕೇಶ, ಜಗದಂತರ್ಯಾಮಿಯಾದ ನಿನಗೆ ನಮಸ್ಕಾರ. ಪುರಾಣ ಪುರುಷನಾದ, ಸರ್ವರೂಪಧಾರಿಯಾದ, ಸೃಷ್ಟಿ ಸ್ಥಿತಿ ಸಂಹಾರ ಕಾರಣನಾದ, ಅನಂತಶಕ್ತಿಯನ್ನು ಹೊಂದಿದ ನಿನಗೆ ನಮಸ್ಕಾರ. ಸತ್ವ-ರಜಸ್-ತಮೋಗುಣರಹಿತನಾದ ನಿನಗೆ ನಮಸ್ಕಾರ. ಪೂರ್ಣನಾದ, ವಿರಾಡ್ರೂಪಿಯಾದ ನಿನಗೆ ನಮಸ್ಕಾರ. ಸರ್ವಜಗನ್ನಿವಾಸನಾಗಿ ಬೆಳಗುವ, ಸರ್ವವ್ಯಾಪಿಯಾದ, ಸೃಷ್ಟಿಕಾರಣನಾದ ನಿನಗೆ ನಮಸ್ಕಾರ. ಆದಿ-ಮಧ್ಯ-ಅಂತ್ಯಗಳಿಲ್ಲದ ಜ್ಞಾನಮಾರ್ಗದಿಂದ ಒಲಿಯುವ ನಿನಗೆ ನಮಸ್ಕಾರ. ವಿಕಾರರಹಿತನಾದ, ಪ್ರಪಂಚಭಿನ್ನನಾದ, ಅನ್ಯಥಾಜ್ಞಾನರಹಿತನಾದ ಜೀವೈಕ್ಯರಹಿತನಾದ, ಅನಂತರೂಪಿಯಾದ ನಿನಗೆ ನಮಸ್ಕಾರ. ದುಃಖತಾರಕನೂ, ಶಾಂತನೂ, ಪ್ರತಿಘಾತ ರಹಿತನೂ ಆದ ನಿನಗೆ ನಮಸ್ಕಾರ. ಅನಂತಮೂರ್ತಿಯಾದ, ಪ್ರಾಕೃತಮೂರ್ತಿಯಲ್ಲದ ನಿನಗೆ ನಮಸ್ಕಾರ. ಸರ್ವೋತ್ತಮನಾದ, ಪ್ರಕೃತಿಬಂಧನವಿಲ್ಲದ ನಿನಗೆ ನಮಸ್ಕಾರ. ಶ್ರೇಷ್ಠನಿಯಾಮಕನಾದ, ಪೂರ್ಣನಾದ ನಿನಗೆ ನಮಸ್ಕಾರ. ಅತ್ಯಂತಸೂಕ್ಷ್ಮನಾದ, ಶ್ರೇಷ್ಠದೇವನಾದ, ಪೂರ್ಣನಾದ ನಿನಗೆ ನಮಸ್ಕಾರ. ಮಂಗಳಕರನೂ, ಶುದ್ಧನೂ ಆದ ನಿನಗೆ ನಮಸ್ಕಾರ. ನೀನೇ ಈ ಇಡೀ ಜಗತ್ತನ್ನು ಸೃಷ್ಟಿಸಿರುವಿ. ನೀನೇ ಎಲ್ಲರ

ಅಂತಿಮ ಗಮ್ಯಸ್ಥಾನ. ನೀನು ಎಲ್ಲರ ತಂದೆ, ತಾಯಿ, ನಾಶರಹಿತ. ಪರಮತೇಜಸ್ವೀ, ಶುದ್ಧಚೇತನ, ಆಕಾಶದಂತೆ ನಿಷ್ಕಲಂಕ, ಸರ್ವಾಧಾರ, ಅವ್ಯಕ್ತ, ಅನಂತ, ಪ್ರಕೃತಿಸ್ಪರ್ಶರಹಿತ. ಜ್ಞಾನದೀಪದಿಂದ ಮಾತ್ರ ನಿನ್ನನ್ನು ಜ್ಞಾನಿಗಳು ಕಾಣುತ್ತಾರೆ. ಸರ್ವತ್ರವ್ಯಾಪ್ತವಾದ ನಿನ್ನ ಪರಮಪದಕ್ಕೆ ನಾನು ಶರಣಾಗುತ್ತೇನೆ.

## ಇಂದ್ರದ್ಯುಮ್ನನಿಗೆ ಭಗವದನುಗ್ರಹ-ಜ್ಞಾನಪ್ರಾಪ್ತಿ :

ಹೀಗೆ ಸ್ತೋತ್ರಮಾಡಿದ ಇಂದ್ರದ್ಯುಮ್ನನನ್ನು ಜಗದಂತರ್ಯಾಮಿಯೂ ಜಗಜ್ಜನಕನೂ ಆದ ನಾರಾಯಣನು ಎರಡೂ ಕೈಗಳಿಂದ ಮುಟ್ಟಿದನು. ಭಗವಂತನ ಈ ಸ್ಪರ್ಶಮಾತ್ರದಿಂದ ಇಂದ್ರದ್ಯುಮ್ನನು ಪರಮತತ್ತ್ವದ ಜ್ಞಾನವನ್ನು ಪಡೆದನು. ಸಂತುಷ್ಟನಾದ ಇಂದ್ರದ್ಯುಮ್ನ ಕಮಲಾಕ್ಷನೂ ಪೀತಾಂಬರಧಾರಿಯೂ ಆದ ನಾರಾಯಣನನ್ನು ನಮಿಸಿ ಹೇಳಿದನು: "ಪುರುಷೋತ್ತಮ! ನಿನ್ನ ಅನುಗ್ರಹದಿಂದ ನನಗೆ ಪರಮಾನಂದಸಿದ್ಧಿಯನ್ನು ಕೊಡುವ ಬ್ರಹ್ಮಜ್ಞಾನವು ಸುಸ್ಪಷ್ಟವಾಗಿ ಉಂಟಾಗಿದೆ. ಜಗದಾಶ್ರಯನಾದ ನಿನಗೆ ನಮಸ್ಕಾರ. ಇನ್ನು ಮುಂದೆ ನಾನು ಏನು ಮಾಡಬೇಕು? ದಯವಿಟ್ಟು ತಿಳಿಸು."

## ಲೋಕಹಿತಕರವಾದ ನಾರಾಯಣನ ಉಪದೇಶ :

ಜನರು ವರ್ಣಾಶ್ರಮ ನಿಯಮಗಳನ್ನು ಪಾಲಿಸುತ್ತ ಜ್ಞಾನ-ಭಕ್ತಿಗಳಿಂದ ಶ್ರೀಹರಿಯನ್ನು ಪೂಜಿಸಬೇಕು. ಮುಕ್ತಿಯನ್ನು ಬಯಸುವವನು ಪರತತ್ತ್ವವನ್ನೂ ಅದರ ವಿಭೂತಿ, ಸಕಲ ಕಾರ್ಯಕಾರಣತ್ವ ಮತ್ತು ಪ್ರವೃತ್ತಿ-ಇವುಗಳನ್ನು ತಿಳಿದುಕೊಂಡು ಅದನ್ನು ಪೂಜಿಸಬೇಕು. ಜಗತ್ತು ಸತ್ತ್ವ-ರಜಸ್-ತಮೋಗುಣಮಯ, ಆದ್ದರಿಂದಲೇ ಬಂಧಕ ಎಂದು ತಿಳಿದುಕೊಂಡು, ಸರ್ವಸಂಗಪರಿತ್ಯಾಗವನ್ನು ಮಾಡಿ ಸರ್ವೋತ್ತಮನಾದ ಜಗದಂತರ್ಯಾಮಿಯನ್ನು ಚಿಂತಿಸು. ಆಗ ಮತ್ತಷ್ಟು ಪರಮಾತ್ಮ ತತ್ತ್ವದ ಜ್ಞಾನವು ನಿನಗೆ ಆಗುವುದು. ಸರ್ವವಿಧ ಪ್ರಯತ್ನಗಳಿಂದ ಜಗದೀಶನ ಆರಾಧನೆಯನ್ನು ಮಾಡಬೇಕು ಇದು ಮುಕ್ತಿಮಾರ್ಗ.

ನಿರ್ವಿಕಾರವಾದ ಪರಬ್ರಹ್ಮವೇ ಪರತತ್ತ್ವ. ಅದು ನಿತ್ಯಾನಂದಮಯ. ಜ್ಯೋತಿಸ್ಸ್ವರೂಪ. ಪ್ರಕೃತಿಯನ್ನು ಮೀರಿದ ತತ್ತ್ವ. ಅವನ ಈಶ್ವರತ್ವವೇ ಸರ್ವತೋಮುಖವಾದ ಪ್ರಭುತ್ವ. ಅವನ ವಿಭೂತಿ. ಜಗತ್ತು ಕಾರ್ಯ. ಅವ್ಯಕ್ತನಾದ ಪರಬ್ರಹ್ಮವೇ ಕಾರಣ. ನಾನೇ ಆ ಸರ್ವಜಗದಂತರ್ಯಾಮಿಯಾದ ಈಶ್ವರ. ನಾನು ಮಾಡುವ ಸೃಷ್ಟಿ ಸ್ಥಿತಿ ಸಂಹಾರಗಳೇ ನನ್ನ ಪ್ರವೃತ್ತಿ. ಇದನ್ನು ಮನನದಿಂದ ಚೆನ್ನಾಗಿ ತಿಳಿದುಕೊಂಡು ಕರ್ಮಯೋಗಿಯಾಗಿ ನನ್ನ ಆರಾಧನೆಯನ್ನು ಮಾಡು.

## ಇಂದ್ರದ್ಯುಮ್ನನ ಪ್ರಶ್ನೆಗಳು :

ಭಗವನ್! ನೀನು ಪ್ರಸ್ತಾಪಿಸಿರುವ ವರ್ಣಾಶ್ರಮ ನಿಯಮಗಳು ಯಾವುವು? ತ್ರಿವಿಧಧ್ಯಾನ(ಭಾವನಾ)ದಿಂದ ಲಭಿಸುವ ದಿವ್ಯಜ್ಞಾನದ ಸ್ವರೂಪವೇನು? ಹಿಂದೆ ಜಗತ್ತಿನ ಸೃಷ್ಟಿ ಹೇಗೆ ಆಯಿತು? ಇದರ ಸಂಹಾರ ಹೇಗೆ ಆಗುತ್ತದೆ? ಲೋಕದಲ್ಲಿ ಎಷ್ಟು ಸೃಷ್ಟಿಗಳು?

ವಂಶಗಳು ಮತ್ತು ಮನ್ವಂತರಗಳು ಎಷ್ಟು? ಅವುಗಳನ್ನು ತಿಳಿಸುವ ಪ್ರಮಾಣಗಳು ಯಾವುವು? ಪಾವನವ್ರತಗಳು ಯಾವುವು? ತೀರ್ಥಗಳು ಯಾವುವು? ಸೂರ್ಯ ಮೊದಲಾದ ಗ್ರಹಗಳ ಸ್ಥಿತಿ ಹೇಗೆ? ಭೂಮಿಯ ಉದ್ದ- ಅಗಲ ಎಷ್ಟು? ದ್ವೀಪಗಳು, ಸಮುದ್ರಗಳು, ಪರ್ವತಗಳು, ನದಿಗಳು ಮತ್ತು ನದಗಳು ಇವುಗಳ ಸಂಖ್ಯೆ ಎಷ್ಟು? ಈ ಎಲ್ಲ ವಿಷಯಗಳನ್ನು ತನಗೆ ತಿಳಿಸಬೇಕೆಂದು ಇಂದ್ರದ್ಯುಮ್ನನು ನಾರಾಯಣನನ್ನು ಕೇಳಿದನು.

*(ಕ್ಷೀರಸಾಗರಮಥನದಲ್ಲಿ ಆವಿರ್ಭವಿಸಿದ ಮಹಾಲಕ್ಷ್ಮಿಯನ್ನು ಪರಿಗ್ರಹಿಸಿದ ಕೂರ್ಮರೂಪಿ ವಿಷ್ಣುವು, ಆಗ ನಾರದಾದಿಮಹರ್ಷಿಗಳು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಹೇಳುತ್ತಾ ಇಂದ್ರದ್ಯುಮ್ನನ ಕಥೆಯನ್ನು ಇಲ್ಲಿಯವರೆಗೆ ಹೇಳಿದನು. ಮುಂದುವರಿಸಿ ಇಂದ್ರದ್ಯುಮ್ನನ ಪ್ರಶ್ನೆಗಳಿಗೆ ತಾನು ಉತ್ತರ ಹೇಳಿದ್ದನ್ನು ಕೂರ್ಮರೂಪಿ ಮಹಾವಿಷ್ಣುವು ನಾರದಾದಿಗಳಿಗೆ ಹೇಳುತ್ತಾನೆ.)*

**ಕೂರ್ಮ ಉವಾಚ :**

ಭಕ್ತಾನುಗ್ರಹದ ಇಚ್ಛೆಯಿಂದ ನಾನು ಅವನ ಎಲ್ಲ ಪ್ರಶ್ನೆಗಳಿಗೂ ಉತ್ತರವನ್ನು ಹೇಳಿದೆನು. ಅವನನ್ನು ಅನುಗ್ರಹಿಸಿ ಅಂತರ್ಧಾನನಾದೆನು. ಆ ಇಂದ್ರದ್ಯುಮ್ನ ನಾನು ಹೇಳಿದ ವಿಧಾನದಿಂದ ಸರ್ವ ಕರ್ಮಗಳನ್ನೂ ನನಗೆ ಅರ್ಪಿಸಿ, ಉತ್ಕೃಷ್ಟವೈರಾಗ್ಯವನ್ನು ಹೊಂದಿ, ಪುತ್ರ ಮೊದಲಾದವರಲ್ಲಿ ಬಂಧಕವಾದ ಅಭಿಮಾನವನ್ನು ಬಿಟ್ಟು ದ್ವಂದ್ವರಹಿತನೂ, ಪರಿಗ್ರಹ ರಹಿತನೂ ಆಗಿ ಪರತತ್ತ್ವವನ್ನು ಆರಾಧಿಸಿದನು. ತನ್ನಲ್ಲಿ ಆ ಪರತತ್ತ್ವವನ್ನೂ, ಅದರಲ್ಲಿ ಸಮಸ್ತ ಜಗತ್ತನ್ನೂ ಚಿಂತಿಸಿದನು. ಪ್ರಾಣಜಯವನ್ನು ಸಾಧಿಸಿದ, ಅಜ್ಞಾನವನ್ನು ಕಳೆದುಕೊಂಡ ಮೋಕ್ಷಾಕಾಂಕ್ಷಿಗಳು ಯಾವ ಧ್ಯಾನಸ್ಥಿತಿಯಿಂದ ಪರಬ್ರಹ್ಮನ ಸಾಕ್ಷಾತ್ಕಾರವನ್ನು ಪಡೆಯು ವರೋ ಅಂತಹ ಯೋಗದ ಪರಮಸ್ಥಿತಿಯನ್ನು ತಲುಪಿದನು. ಅನಂತರ ಈ ಯೋಗಿ ಶ್ರೇಷ್ಠನು ಒಮ್ಮೆ ಸೂರ್ಯದೇವನ ನಿರ್ದೇಶನದಂತೆ ಬ್ರಹ್ಮನನ್ನು ನೋಡಲು ಮಾನಸೋತ್ತರ ಪರ್ವತಕ್ಕೆ ಹೋದನು. ಅವನ ಯೋಗ ಪ್ರಭಾವದಿಂದ ಸೂರ್ಯನಂತೆ ಹೊಳೆಯುವ ವಿಮಾನವೊಂದು ಅವನಲ್ಲಿಗೆ ಬಂದಿತು. ಆ ವಿಮಾನದಲ್ಲಿ ಕುಳಿತು ಅವನು ಪಯಣಿಸಿದನು. ಅವನನ್ನು ದೇವತೆಗಳೂ, ಗಂಧರ್ವರೂ ಅಪ್ಸರೆಯರೂ ಅನುಸರಿಸಿದರು. ಅವನನ್ನು ನೋಡಿ ಬೇರೆ ಸಿದ್ಧರೂ ಬ್ರಹ್ಮರ್ಷಿಗಳೂ ಮಾನಸೋತ್ತರ ಪರ್ವತಕ್ಕೆ ಹೋದರು.

ಪರ್ವತವನ್ನು ತಲುಪಿ ಅಲ್ಲಿದ್ದ ಪರಮಪುರುಷ ಶ್ರೀಹರಿಯ ಸ್ಥಾನವನ್ನು ತಲುಪಿದನು. ಆ ಸ್ಥಳ ಯೋಗಿಗಳು ವಾಸಿಸುವ ಸ್ಥಳ. ಅಸಂಖ್ಯ ಸೂರ್ಯರ ಪ್ರಭೆಯನ್ನು ಹೊಂದಿದ ಸ್ಥಳ. ಇನ್ನೂ ಮುಂದಕ್ಕೆ ಹೋಗಿ ದೇವತೆಗಳಿಗೂ ದುರ್ಗಮವಾದ ಒಳಭವನವನ್ನು ಪ್ರವೇಶಿಸಿದನು. ಅಲ್ಲಿ ಸಂಸಾರಿಗಳೆಲ್ಲರಿಗೂ ರಕ್ಷಕನಾದ ಆದಿ, ಅಂತ್ಯಗಳಿಲ್ಲದ, ಶ್ರೀಹರಿಯನ್ನು ಪ್ರಾರ್ಥಿಸಿ ದನು. ದೇವದೇವನಾದ ಪಿತಾಮಹ ಶ್ರೀಹರಿಯನ್ನು ಪ್ರಾರ್ಥಿಸಿದನು. ಆಗ ಅವನೆದುರಿಗೆ

ಪರಮಾದ್ಭುತವಾದ ಪ್ರಕಾಶವೊಂದು ಆವಿರ್ಭವಿಸಿತು. ಆದರ ಮಧ್ಯದಲ್ಲಿ ಬ್ರಹ್ಮದ್ವೇಷಿಗಳಿಂದ ಅಗಮ್ಯನಾದ, ತೇಜಸ್ಸಿನ ಭಾರಿ ರಾಶಿಯಾದ, ಸರ್ವೋತ್ಕೃಷ್ಟ ಗಮ್ಯಸ್ಥಾನನಾದ ಶ್ರೇಷ್ಠ ಪುರುಷನನ್ನು ನೋಡಿದನು. ಅವನಿಗೆ ನಾಲ್ಕು ಮುಖ, ಶ್ರೇಷ್ಠವಾದ ಅಂಗಗಳು ಇದ್ದವು. ಅವನು ತೇಜಸ್ಸಿನ ಜ್ವಾಲೆಗಳಿಂದ ಶೋಭಿಸುತ್ತಿದ್ದನು.

ಆ ಜಗದಂತರ್ಯಾಮಿಯಾದ ಭಗವಂತನು, ನಮಸ್ಕರಿಸುತ್ತಿರುವ ಆ ಯೋಗಿ ಇಂದ್ರದ್ಯುಮ್ನನನ್ನು ನೋಡಿ ಸ್ವಾಗತಿಸಿ ಆಲಿಂಗಿಸಿದನು. ಆ ದೇವನ ಆಲಿಂಗನ ಪಡೆದ ಆ ಬ್ರಾಹ್ಮಣನ ದೇಹದಿಂದ ಭಾರಿ ಪ್ರಕಾಶವೊಂದು ಹೊರಬಂದು ಸೂರ್ಯಮಂಡಲವನ್ನು ಪ್ರವೇಶಿಸಿತು. ಅಲ್ಲಿ ಯಜ್ಞದ ಆಹುತಿಗಳನ್ನು ಸ್ವೀಕರಿಸುವ ಹಿರಣ್ಯಗರ್ಭನಾಮಕ ಹರಿಯು ಇದ್ದಾನೆ. ಆ ಸೂರ್ಯಮಂಡಲವು ಯೋಗಿಗಳ ಪ್ರಥಮಸ್ಥಾನವೆಂದು ವೇದಾಂತಶಾಸ್ತ್ರವು ಪ್ರತಿಪಾದಿಸಿದೆ. ಜ್ಞಾನಿಗಳ ಮಧ್ಯೆ ಗಣನೆಯನ್ನು ಪಡೆದ ಯೋಗಿಗೆ ಮಾತ್ರ ಅಲ್ಲಿ ತೇಜೋಮಯವಾದ ಬ್ರಹ್ಮಸ್ವರೂಪದ ದರ್ಶನವಾಗುತ್ತದೆ. ಶ್ರೀಹರಿಯಿಂದ ನೋಡಲ್ಪಟ್ಟ ಕೂಡಲೇ ತೇಜೋಮಯನಾದ ಆ ಮುನಿಯು (ಇಂದ್ರದ್ಯುಮ್ನನು) ಸರ್ವತ್ರವ್ಯಾಪ್ತವೂ, ಮಂಗಳಕರವೂ, ಶಾಂತವೂ ಆದ, ಪರಮಗಮ್ಯವಾದ ಮಹಾವೈಷ್ಣವತೇಜಸ್ಸನ್ನು ನೋಡಿದನು. ಸರ್ವಾಂತರ್ಯಾಮಿಯಾದ ಆ ಪರಮಾತ್ಮನನ್ನೇ ಧ್ಯಾನಿಸುತ್ತಾ, ಮಹಾಸಾಮರ್ಥ್ಯವನ್ನು ಪಡೆದು, ಆನಂದರೂಪವೂ, ಅಚಲವೂ ಆದ ಮೋಕ್ಷ ಎಂಬ ಹೆಸರಿನ ಭಗವಂತನ ಧಾಮವನ್ನು ಹೊಂದಿದನು. ಆದ್ದರಿಂದ ವಿವೇಕಿಯಾದವನು ಸರ್ವಪ್ರಯತ್ನಗಳಿಂದಲೂ ವರ್ಣಾಶ್ರಮವಿಧಿಗಳನ್ನು ಅನುಸರಿಸುತ್ತಾ ಬ್ರಹ್ಮಧ್ಯಾನದ ಸ್ಥಿತಿಯನ್ನು ತಲುಪಿ ಆ ಮಹಾಲಕ್ಷ್ಮಿಯ ಶಾಸನಕ್ಕೊಳಪಟ್ಟ ಮಾಯೆಯನ್ನು - ಅಂದರೆ ಪ್ರಕೃತಿಯನ್ನು ದಾಟಬೇಕು.

### ಸೂತರು (ರೋಮಹರ್ಷಣರು) ಹೇಳಿದರು :

ಕ್ಷೀರಸಾಗರ ಮಥನ ಕಾಲದಲ್ಲಿ ಕೂರ್ಮರೂಪಿ ಹರಿಯಿಂದ ಮೇಲಿನ ಕಥೆಯನ್ನು ಶ್ರವಣ ಮಾಡಿದ ಇಂದ್ರಾದಿದೇವತೆಗಳು ಮತ್ತು ನಾರದಾದಿಮಹರ್ಷಿಗಳು ಅನಂತರ ಶ್ರೀಹರಿಯನ್ನು ಪ್ರಾರ್ಥಿಸಿದರು. *(ಎಂದು ರೋಮಹರ್ಷಣರು ನೈಮಿಷಾರಣ್ಯವಾಸಿ ಮುನಿಗಳಿಗೆ ಹೇಳಿದರು)*.

### ದೇವತೆಗಳ ಮತ್ತು ಋಷಿಗಳ ಪ್ರಾರ್ಥನೆ :

"ದೇವದೇವ, ಹೃಷಿಕೇಶ, ನಾರಾಯಣ, ಇಂದ್ರದ್ಯುಮ್ನನಿಗೆ ನೀನು ಉಪದೇಶಿಸಿದ ಧರ್ಮಾದಿಗಳ ಸ್ವರೂಪ - ಅನುಷ್ಠಾನ ಮೊದಲಾದವುಗಳನ್ನು ನಮಗೂ ವಿವರವಾಗಿ ಉಪದೇಶಿಸು".

ಹೀಗೆ ಪ್ರಾರ್ಥಿತನಾದ ಕೂರ್ಮರೂಪಿ ಹರಿಯು ಇಂದ್ರಾದಿದೇವತೆಗಳಿಗೆ ಮತ್ತು ನಾರದಾದಿ ಮಹರ್ಷಿಗಳಿಗೆ ದೇವೇಂದ್ರನ ಸನ್ನಿಧಿಯಲ್ಲಿ ಉತ್ತಮವಾದ ಕೂರ್ಮ ಮಹಾಪುರಾಣವನ್ನು ಸಮಗ್ರವಾಗಿ ಉಪದೇಶಿಸಿದನು.

ಮುನಿಗಳೇ! ಧನ, ಯಶಸ್ಸು, ಆಯಸ್ಸು, ಪುಣ್ಯ ಮತ್ತು ಮೋಕ್ಷ ಇವುಗಳನ್ನು ಉಂಟುಮಾಡುವ ಆ ಪುರಾಣವನ್ನು ನಿಮಗೆ ನಾನು *(ರೋಮಹರ್ಷಣ)* ಹೇಳುತ್ತೇನೆ. ಈ ಪುರಾಣದ ಒಂದು ಅಧ್ಯಾಯವನ್ನು ಶ್ರವಣ ಮಾಡಿದರೂ ಎಲ್ಲ ಪಾಪಗಳ ಪರಿಹಾರ ವಾಗುತ್ತದೆ. ಒಂದು ಉಪಾಖ್ಯಾನವನ್ನು ಶ್ರವಣ ಮಾಡಿದರೂ ಬ್ರಹ್ಮಲೋಕದ ಪ್ರಾಪ್ತಿ ಯಾಗುತ್ತದೆ. ಈ ಪುರಾಣದ ಬಗ್ಗೆ ಎಲ್ಲ ದ್ವಿಜರೂ ಶ್ರದ್ಧೆಯನ್ನು ಹೊಂದಿರಬೇಕು.

* * *

## ಅಧ್ಯಾಯ-೨

ರೋಮಹರ್ಷಣರು ಕೂರ್ಮರೂಪಿ ಭಗವಂತನ ಮಾತಿನಲ್ಲಿಯೇ ಕೂರ್ಮ ಮಹಾಪುರಾಣದ ಪ್ರವಚನವನ್ನು ಆರಂಭಿಸಿದರು.

**ಕೂರ್ಮ ಉವಾಚ :**

ಈ ಪುರಾಣ ಇಂದ್ರದ್ಯುಮ್ನನಿಗೆ ಉಪದೇಶಿಸಿದ ಕಥೆಯ ವಿಚಾರವನ್ನು ಒಳಗೊಂಡಿದೆ. ಭೂತ, ಭವಿಷ್ಯತ್, ವರ್ತಮಾನಗಳ ಚರಿತ್ರೆಯೇ ಈ ಪುರಾಣ. ಇದರಲ್ಲಿ ಮೋಕ್ಷಧರ್ಮದ ವಿವರಣೆ ಇದೆ

**ಸೃಷ್ಟಿಯ ಆರಂಭ :**

ನಾನು ನಾರಾಯಣ. ಆದಿಯಲ್ಲಿ ನಾನೊಬ್ಬನೇ ಇದ್ದೆನು. ಬೇರೆ ಯಾರೂ ಇರಲಿಲ್ಲ. ಶೇಷಶಯ್ಯೆಯಲ್ಲಿ ಮಲಗಿದ್ದೆನು- ಅಂದರೆ ಸೃಷ್ಟಿ ಪಾಲನ ಮೊದಲಾದ ಕೆಲಸಗಳಿಲ್ಲದೆ ಇದ್ದೆನು. ಈ ಸ್ಥಿತಿಯೇ ಪ್ರಲಯಕಾಲ. ಕೊನೆಯಲ್ಲಿ ಸೃಷ್ಟಿಯನ್ನು ಮಾಡಲು ಆಲೋಚನೆ ಉಂಟಾಯಿತು. ನನ್ನಲ್ಲಿ ವಿಲಕ್ಷಣವಾದ ಒಂದು ಪ್ರಸನ್ನ ಸ್ಥಿತಿ ಉಂಟಾಯಿತು. ಈ ಸ್ಥಿತಿಯಲ್ಲಿ ನನ್ನಿಂದ ಚತುರ್ಮುಖ ಬ್ರಹ್ಮದೇವರ ಆವಿರ್ಭಾವವಾಯಿತು. ಸ್ವಲ್ಪಕಾಲಾನಂತರ ನನ್ನಲ್ಲಿ ಕ್ರೋಧಸ್ಥಿತಿ ಉಂಟಾಯಿತು. ಈ ಕ್ರೋಧವೃತ್ತಿಯಿಂದ ಶೂಲಪಾಣಿಯೂ, ಮುಕ್ಕಣ್ಣನೂ ಕ್ರೋಧಸ್ವರೂಪನೂ ಆದ ಶಿವನು ಹುಟ್ಟಿದನು. ಆಗ ಅವನಲ್ಲಿ ಸೂರ್ಯ ಸದೃಶ ತೇಜಸ್ಸು ಇತ್ತು. ಮೂರು ಲೋಕಗಳನ್ನು ಸುಡಲು ಸಾಕಾಗುವಷ್ಟು ತೇಜಸ್ಸು ಅವನಲ್ಲಿತ್ತು.

**ಮಹಾಲಕ್ಷ್ಮಿಯ ಪ್ರಾದುರ್ಭಾವ :**

ಅನಂತರ ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ ಲಕ್ಷ್ಮೀದೇವಿಯ ಆವಿರ್ಭಾವ ವಾಯಿತು. ಆ ಲಕ್ಷ್ಮೀದೇವಿ ಉತ್ತಮ ರೂಪವಂತಳು, ಸೌಮ್ಯಮುಖಿಯೂ, ಸರ್ವರಿಗೂ

ಮೋಹಕಳೂ, ಶುದ್ಧವಾದ ಮಂದಹಾಸವುಳ್ಳವಳೂ, ಪ್ರಸನ್ನಳೂ, ಮಂಗಳಕರಳೂ, ಮಹಿಮಾನಿಧಿಯೂ ಆಗಿದ್ದಳು. ದಿವ್ಯಕಾಂತಿಯನ್ನು ಹೊಂದಿದ್ದಳು. ದಿವ್ಯವಾದ ಮಾಲೆಯನ್ನು ಧರಿಸಿದ್ದಳು. ಅವಳು ನಾರಾಯಣನ ಪತ್ನಿ. ಎಲ್ಲ ಮಾಯೆಗಳ *(ಬಂಧಕಶಕ್ತಿಗಳ)* ನಿಯಾಮಕಳು. ಪ್ರಕೃತಿಯ ಅಭಿಮಾನಿನಿ. ಅವಳ ಕಾಂತಿ ಜಗತ್ತನ್ನೇ ವ್ಯಾಪಿಸಿತ್ತು. ಇಂತಹ ಲಕ್ಷ್ಮೀದೇವಿ ನನ್ನ ಪಕ್ಕದಲ್ಲಿ ಕುಳಿತಳು. ಅವಳನ್ನು ನೋಡಿ ಚತುರ್ಮುಖಬ್ರಹ್ಮನು ನನಗೆ ಹೇಳಿದನು.

"ಮಾಧವ, ನನ್ನ ಸೃಷ್ಟಿ ಚೆನ್ನಾಗಿ ಬೆಳೆಯಲು ಜನಗಳಿಗೆ ಪ್ರಕೃತಿಯ ಮೋಹ ಉಂಟಾಗಲೇಬೇಕು. ಆದ್ದರಿಂದ ಪ್ರಕೃತಿ ನಿಯಾಮಕಳಾದ ಈ ಲಕ್ಷ್ಮೀದೇವಿಯನ್ನು ಸರ್ವರನ್ನೂ ಮೋಹಗೊಳಿಸುವ ಕಾರ್ಯದಲ್ಲಿ ತೊಡಗಿಸು." ಅವನ ಪ್ರಾರ್ಥನೆಯಂತೆ ನಾನು ಮಹಾಲಕ್ಷ್ಮಿಗೆ ಹೇಳಿದೆನು. "ದೇವಿ! ಇಡೀ ಪ್ರಪಂಚವನ್ನು - ದೇವತೆಗಳನ್ನು, ಅಸುರರನ್ನು, ಮನುಷ್ಯರನ್ನು ಮೋಹಗೊಳಿಸಿ ಅವರನ್ನು ಸಂಸಾರದಲ್ಲಿ ಬೀಳಿಸು. ಆದರೆ ಜ್ಞಾನಯೋಗನಿಷ್ಠರೂ, ಇಂದ್ರಿಯ ನಿಗ್ರಹವುಳ್ಳವರೂ, ಅತಿಶಯವಾದ ಬ್ರಹ್ಮಜ್ಞಾನವುಳ್ಳವರೂ, ಬ್ರಹ್ಮವಾದಿಗಳೂ, ಕ್ರೋಧರಹಿತರೂ, ಸತ್ಯಪರರೂ, ಆದ ಜನರನ್ನು ಬಿಟ್ಟು ಬಿಡು. ಅವರನ್ನು ಮೋಹಗೊಳಿಸಬೇಡ. ಧ್ಯಾನನಿರತರೂ, ಮಮಕಾರರಹಿತರೂ, ಶಾಂತರೂ, ಧಾರ್ಮಿಕರೂ, ವೇದ ಪಾರಂಗತರೂ, ಯಜ್ಞಗಳನ್ನು ನಡೆಸುವವರೂ ಆದ ಸಜ್ಜನರನ್ನು ಮೋಹಗೊಳಿಸಬೇಡ. ವೇದವೇದಾಂತಗಳ ವಿಶಿಷ್ಟಜ್ಞಾನದಿಂದ ಎಲ್ಲ ಸಂಶಯಗಳನ್ನು ಪರಿಹರಿಸಿಕೊಂಡಿರುವ, ಮಹಾಯಜ್ಞನಿರತರಾದ ಅವರನ್ನು ಬಿಟ್ಟುಬಿಡು. ಯಾರು ವೇದಾಧ್ಯಯನ, ಜಪ, ಹೋಮಗಳಿಂದ ಪರಬ್ರಹ್ಮನನ್ನು ಪೂಜಿಸುವರೋ ಅವರನ್ನು ಬಿಟ್ಟು ಬಿಡು. ಭಕ್ತಿಯೋಗನಿಷ್ಠರಾದ, ಈಶ್ವರನಲ್ಲಿ ಮನಸ್ಸನ್ನು ಅರ್ಪಿಸಿರುವ ಪ್ರಾಣಾಯಾಮ ಮೊದಲಾದ ಯೋಗಾಂಗಗಳ ಅನುಷ್ಠಾನವನ್ನು ಮಾಡುವ ನಿರ್ಮಲ ಜನರನ್ನು ಬಿಟ್ಟು ಬಿಡು. ಓಂಕಾರದಲ್ಲಿ ಆಸಕ್ತರಾದ, ರುದ್ರ ಜಪನಿರತರಾದ, ಧರ್ಮನಿಷ್ಠರನ್ನು ಬಿಟ್ಟುಬಿಡು. ಹೆಚ್ಚು ವಿವರವೇಕೆ? ಸ್ವಧರ್ಮಪರಿಪಾಲಕರಾಗಿ ಈಶ್ವರನ ಆರಾಧನೆಯಲ್ಲಿ ನಿರತರಾದ ಯಾರನ್ನೂ ಮೋಹಗೊಳಿಸಬೇಡ." ಹೀಗೆ ನನ್ನ ಆದೇಶಕ್ಕನುಗುಣವಾಗಿ ಮಾಯಾಭಿಮಾನಿನಿಯಾದ ಲಕ್ಷ್ಮಿಯು ಪ್ರಪಂಚವನ್ನು ಮೋಹಕ್ಕೊಳಪಡಿಸಿದಳು. ಆದ್ದರಿಂದ ಮೋಹದಿಂದ ಬಿಡುಗಡೆಯನ್ನು ಪಡೆಯುವ ಅಪೇಕ್ಷೆಯುಳ್ಳವರೆಲ್ಲರೂ ಮಹಾಲಕ್ಷ್ಮಿಯನ್ನು ಪೂಜಿಸಬೇಕು. ಪೂಜಿತಳಾದ ಅವಳು ಸಂಪತ್ತು, ಪುಷ್ಟಿ, ಮೇಧಾ, ಯಶಸ್ಸು, ಬಲಗಳನ್ನು ಕೊಡುತ್ತಾಳೆ.

## ಸೃಷ್ಟಿಯ ಮುನ್ನಡೆ :

ಅನಂತರ ಚತುರ್ಮುಖ ಬ್ರಹ್ಮನು, ನನ್ನ ಆಜ್ಞೆಯಂತೆ, ಹಿಂದೆ ಇದ್ದಂತೆಯೇ ಸ್ಥಾವರ ಜಂಗಮಗಳನ್ನು ಸೃಷ್ಟಿಸಿದನು. ಚತುರ್ಮುಖ ಬ್ರಹ್ಮನು ತನ್ನ ಯೋಗಸಾಮರ್ಥ್ಯದಿಂದ

ಮರೀಚಿ, ಭೃಗು, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠ - ಈ ಒಂಬತ್ತು ಜನರನ್ನು ಸೃಷ್ಟಿಸಿದನು. ಇವರೆಲ್ಲರೂ ಬ್ರಹ್ಮವಾದಿಗಳು, ಸಾಧಕರು. ಚತುರ್ಮುಖಾಂತ ರ್ಯಾಮಿಯಾದ ಶ್ರೀಹರಿಯು ತನ್ನ ಮುಖದಿಂದ ಬ್ರಾಹ್ಮಣರನ್ನು, ಭುಜದಿಂದ ಕ್ಷತ್ರಿಯರನ್ನು ತೊಡೆಗಳಿಂದ ವೈಶ್ಯರನ್ನು, ಪಾದಗಳಿಂದ ಶೂದ್ರರನ್ನು ಸೃಷ್ಟಿಸಿದನು. ಯಜ್ಞಗಳ ಸಿದ್ಧಿಗಾಗಿ ಪರಬ್ರಹ್ಮನು ಬ್ರಾಹ್ಮಣಾದಿ ತ್ರೈವರ್ಣಿಕರನ್ನು ಸೃಷ್ಟಿಸಿದನು. ದೇವತೆಗಳ ಪಾಲನೆಗಾಗಿ ಮಾಡಲ್ಪಡುತ್ತಿದ್ದ ಆ ಯಜ್ಞಗಳು ಚೆನ್ನಾಗಿ ಶೋಭಿಸುತ್ತಿದ್ದವು. ನಾಲ್ಕು ವೇದಗಳು ಪರಮ ಮುಖ್ಯ ವೃತ್ತಿಯಿಂದ ಬ್ರಹ್ಮನನ್ನೇ ಪ್ರತಿಪಾದಿಸುತ್ತಾ ಅವನ ಸಹಜ ರೂಪವೇ ಆಗಿವೆ.

## ವೇದಗಳ ಅಭಿವ್ಯಕ್ತಿ-ಅವುಗಳ ಮಹತ್ವ :

ಚತುರ್ಮುಖ ಬ್ರಹ್ಮನು ಮೊದಲು ವೇದಗಳನ್ನು ಸೃಷ್ಟಿಸಿದನು. ಮಾನವನ ಎಲ್ಲ ಪ್ರವೃತ್ತಿಗಳು, ಆರಂಭದಲ್ಲಿ, ಆ ವೇದಗಳ ನಿರ್ದೇಶನಕ್ಕನುಗುಣವಾಗಿಯೇ ಇದ್ದವು. ಅನಂತರ ವೇದಾನುಗುಣವಲ್ಲದ ಎಷ್ಟೋ ಶಾಸ್ತ್ರಗಳು ಬೇರೆ ಬೇರೆಯವರಿಂದ ರಚಿತ ವಾದವು. ವೇದವಿರೋಧಿಗಳು ಆ ಶಾಸ್ತ್ರಗಳಲ್ಲೇ ಅಭಿರುಚಿಯನ್ನು ಹೊಂದಿರುತ್ತಾರೆ. ವೇದ ಗಳನ್ನು ತಿಳಿದವರು ಆ ಶಾಸ್ತ್ರಗಳನ್ನು ಮೆಚ್ಚುವುದಿಲ್ಲ. ವೇದಾರ್ಥವನ್ನು ಬಹಳ ಚೆನ್ನಾಗಿ ತಿಳಿದ ಮುನಿಗಳು ಏನನ್ನು ಚಿಂತನಪೂರ್ವಕವಾಗಿ ಹೇಳಿದ್ದಾರೋ ಅದನ್ನು ಮಾಡಬೇಕು. ಅದೇ ಪರಮಧರ್ಮ. ಬೇರೆ ಶಾಸ್ತ್ರಗಳು ಹೇಳುವ ವಿಚಾರಗಳು ಧರ್ಮವಲ್ಲ. ವೇದಬಾಹ್ಯವಾದ ಚಿಂತನೆಗಳೆಲ್ಲವೂ ನಿಷ್ಫಲವೇ. ಅವುಗಳನ್ನನುಸರಿಸುವವರಿಗೆ ಸದ್ಗತಿಯಾಗುವುದಿಲ್ಲ.

## ಮೊದಲ ಕಲ್ಪದಲ್ಲಿ ಸೃಷ್ಟಿಗೆ ಬಂದ ಪ್ರಜೆಗಳು :

ಮೊದಲ ಕಲ್ಪದಲ್ಲಿ ಸೃಷ್ಟಿಗೆ ಬಂದ ಪ್ರಜೆಗಳು ಶುದ್ಧಾಂತಃಕರಣವುಳ್ಳವರೂ, ಸ್ವಧರ್ಮಪರಿಪಾಲಕರೂ, ಯಾವುದೇ ಬಾಧೆಗಳಿಲ್ಲದವರೂ ಆಗಿದ್ದರು. ಕಾಲ ಪ್ರಭಾವದಿಂದ ಅವರಲ್ಲಿ ರಾಗ-ದ್ವೇಷ ಮೊದಲಾದ ದೋಷಗಳು ಉಂಟಾದವು. ಅಧರ್ಮವು ಸ್ವಧರ್ಮಾನುಷ್ಠಾನಕ್ಕೆ ಪ್ರತಿಬಂಧಕ. ಆದ್ದರಿಂದ ಹಿಂದಿನ ಸಾತ್ವಿಕವಾದ ಸಹಜಸಿದ್ಧಿಗಳು ಅವರಿಗೆ ಒಲಿಯಲಿಲ್ಲ. ಆಗ ರಜೋ ಗುಣಮಯವಾದ *(ರಾಜಸ)* ಸಿದ್ಧಿಗಳು ಅವರಿಗೆ ಒಲಿದವು. ಕಾಲಕ್ರಮೇಣ ಆ ಸಾಮರ್ಥ್ಯವನ್ನೂ ಕಳೆದುಕೊಂಡರು. ಆಗ ಜನಗಳು ಕೃಷಿ, ವ್ಯಾಪಾರ ಮೊದಲಾದ ಜೀವನೋಪಾಯಗಳನ್ನು ಆರಂಭಿಸಿದರು. ಕೈ ಕೆಲಸಗಳಲ್ಲಿ ಕೌಶಲವನ್ನು ಸಾಧಿಸಿದರು. ಆ ಕಾಲದಿಂದ ಸೃಷ್ಟಿಕರ್ತೃವಾದ ಚತುರ್ಮುಖ ಬ್ರಹ್ಮನು ಜನಗಳಿಗೆ ಕರ್ಮನಿಮಿತ್ತವಾದ ಜೀವನೋಪಾಯವನ್ನು ಕಲ್ಪಿಸಿದನು.

## ಸ್ವಾಯಂಭುವ ಮನು ಉಪದೇಶಿಸಿದ ಧರ್ಮ :

ಚತುರ್ಮುಖಬ್ರಹ್ಮದೇವನ ಮಗನಾದ, ಆದ್ದರಿಂದ ಅವನ ಮೂರ್ತಿಯೇ ಆಗಿದ್ದ, ಸರ್ವಜ್ಞನಾದ ಸ್ವಾಯಂಭುವ ಮನುವು ಜನಗಳು ಅನುಸರಿಸಬೇಕಾದ ಧರ್ಮಗಳನ್ನು

ಉಪದೇಶಿಸಿದನು. ಭೃಗು ಮೊದಲಾದ ಮುನಿಗಳು ಅದನ್ನು ಮುಂದಿನ ಪರಂಪರೆಗೆ ಉಪದೇಶಿಸಿದರು.

**ವರ್ಣಧರ್ಮ :**

ಯಾಗವನ್ನು ಮಾಡುವುದು, ಮಾಡಿಸುವುದು, ಕೊಡುವುದು *(ದಾನ)* ತೆಗೆದು ಕೊಳ್ಳುವುದು, ಕಲಿಯುವುದು *(ಅಧ್ಯಯನ)* ಕಲಿಸುವುದು *(ಅಧ್ಯಾಪನ)* - ಈ ಆರು ಬ್ರಾಹ್ಮಣನ ಧರ್ಮ. ದಾನ, ಅಧ್ಯಯನ, ಯಜ್ಞ - ಇವು ಕ್ಷತ್ರಿಯರ ಮತ್ತು ವೈಶ್ಯರ ಧರ್ಮ. ಅಪರಾಧಿಗಳಿಗೆ ಶಿಕ್ಷೆಯನ್ನು ವಿಧಿಸುವುದು ಮತ್ತು ಯುದ್ಧ ಕ್ಷತ್ರಿಯರ ಧರ್ಮ. ಕೃಷಿ ವೈಶ್ಯರ ಧರ್ಮ. ದ್ವಿಜರ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ) ಸೇವೆ ಶೂದ್ರರ ಧರ್ಮ. ಕುಶಲಕರ್ಮ, ಚಿತ್ರಕಲೆ, ಯಂತ್ರಗಳ ಮತ್ತು ಯಂತ್ರಗಳಿಂದ ಉತ್ಪಾದನೆ, ಧರ್ಮಶಾಸ್ತ್ರಕ್ಕನುಗುಣವಾಗಿ ಅಡಿಗೆಯ ಕೆಲಸ - ಇವು ಶೂದ್ರವರ್ಣದವರ ಜೀವನೋಪಾಯಗಳು.

**ಆಶ್ರಮಧರ್ಮ :**

ಅಗ್ನಿರಕ್ಷಣೆ *(ಗೃಹಸ್ಥಾಶ್ರಮ ಸ್ವೀಕಾರ ಸಂದರ್ಭದಲ್ಲಿ ಅನುಷ್ಠಾನಕ್ಕಾಗಿ ಸ್ವೀಕರಿಸಲ್ಪಟ್ಟ ಅಗ್ನಿಯ ರಕ್ಷಣೆ)* ಅತಿಥಿಶುಶ್ರೂಷೆ, ಯಜ್ಞ, ದಾನ, ದೇವತಾರ್ಚನ - ಇವು ಸಂಕ್ಷೇಪವಾಗಿ ಗೃಹಸ್ಥ ಧರ್ಮಗಳು ಹೋಮ, ಕೇವಲ ಕಂದ ಮೂಲಗಳ ಸೇವನೆ, ವೇದಾಧ್ಯಯನ ಮತ್ತು ತಪಸ್ಸು, ಹಾಗೂ ನ್ಯಾಯವಾಗಿ ಆಸ್ತಿವಿಭಾಗ - ಇವು ವಾನಪ್ರಸ್ಥಾಶ್ರಮಿಯ ಧರ್ಮ.

ಭಿಕ್ಷಾನ್ನಭೋಜನ, ವಿಶೇಷವಾದ ಮೌನ, ತಪಸ್ಸು, ಧ್ಯಾನ, ಸಮೀಚೀನಜ್ಞಾನ, ವೈರಾಗ್ಯ - ಇವು ಸನ್ಯಾಸಿಯ ಧರ್ಮಗಳು. ಭಿಕ್ಷಾಟನೆ, ಗುರುಸೇವೆ, ವೇದಾಧ್ಯಯನ, ಸಂಧ್ಯಾವಂದನೆ, ಅಗ್ನಿಕಾರ್ಯ -ಇವುಗಳು ಬ್ರಹ್ಮಚಾರಿಯ ಧರ್ಮಗಳು. ಬ್ರಹ್ಮಚಾರಿ, ವಾನಪ್ರಸ್ಥ ಮತ್ತು ಸನ್ಯಾಸಿ ಈ ಮೂವರೂ ಬ್ರಹ್ಮಚರ್ಯವನ್ನು ಪಾಲಿಸಲೇಬೇಕು.

ಪರ್ವಕಾಲವನ್ನು ಬಿಟ್ಟು, ಬೇರೆ ಋತುದಿನಗಳಲ್ಲಿ *(ಗರ್ಭಧಾರಣೆಯಾಗುವ ದಿನಗಳಲ್ಲಿ)* ತನ್ನ ಪತ್ನಿಯ ಜೊತೆ ಸಂಗಮವು ಗೃಹಸ್ಥಾಶ್ರಮಿಯ ಬ್ರಹ್ಮಚರ್ಯಕ್ಕೆ ಕುಂದುಂಟು ಮಾಡುವುದಿಲ್ಲ. ಗರ್ಭಧಾರಣೆಯಾಗುವವರೆಗೆ ತಪ್ಪುಗಳನ್ನು ಮಾಡದೇ ಪತ್ನೀ ಸಮಾಗಮ-ವನ್ನು ಗೃಹಸ್ಥಾಶ್ರಮಿಯು ಮಾಡಬೇಕು. ಇದು ಚತುರ್ಮುಖ ಬ್ರಹ್ಮದೇವರ ಆಜ್ಞೆ. ಹೀಗೆ ಮಾಡದವನು ಭ್ರೂಣ ಹತ್ಯೆಯ ಪಾಪಕ್ಕೆ ಭಾಗಿಯಾಗುತ್ತಾನೆ. ಪ್ರತಿನಿತ್ಯವೂ ವೇದಾಧ್ಯಯನ, ಶಕ್ತಿಯಿದ್ದಷ್ಟು ಪಿತೃಶ್ರಾದ್ಧ, ಅತಿಥಿಸತ್ಕಾರ, ದೇವತಾರ್ಚನೆ ಇವು ಗೃಹಸ್ಥನ ಶ್ರೇಷ್ಠ ಕರ್ತವ್ಯಗಳು. ಇವನು ವಿವಾಹಕಾಲದಲ್ಲಿ ಸ್ವೀಕರಿಸಿದ ಅಗ್ನಿಯಲ್ಲಿ ಪ್ರಾತಃಕಾಲ-ಸಾಯಂಕಾಲಗಳಲ್ಲಿ ತಪ್ಪದೇ ಔಪಾಸನ ಹೋಮವನ್ನು ಮಾಡಬೇಕು. ಬೇರೆ ಊರಿಗೆ ಹೋದರೂ ಹೆಂಡತಿಯು ಮೃತಳಾದರೂ ಈ ಔಪಾಸನವನ್ನು ಬಿಡಬಾರದು. ಗೃಹಸ್ಥಾಶ್ರಮಿಯು ಇನ್ನು ಮೂರು ಆಶ್ರಮದಲ್ಲಿರುವವರಿಗೆ ಆಧಾರ. ಆದ್ದರಿಂದ ಗೃಹಸ್ಥಾಶ್ರಮಿಗೆ ಶ್ರೇಷ್ಠತೆ. ನಾಲ್ಕು

ಆಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಶ್ರೇಷ್ಠವೆಂದು ವೇದಗಳು ಹೇಳುತ್ತವೆ. ಆದ್ದರಿಂದ ಗೃಹಸ್ಥಾಶ್ರಮವನ್ನು ಅತಿಮುಖ್ಯವಾದ ಧರ್ಮಸಾಧನ ಎಂದು ತಿಳಿಯಬೇಕು.

## ಧರ್ಮ, ಅರ್ಥ, ಕಾಮ :

ಧರ್ಮವಿಲ್ಲದ ಅರ್ಥ-ಕಾಮಗಳನ್ನು ಬಿಟ್ಟುಬಿಡಬೇಕು. ಧರ್ಮವು ಸರ್ವಜನ ವಿರೋಧಿಯಾಗಿದ್ದರೆ ಅದನ್ನು ಆಚರಿಸಬಾರದು. ಧರ್ಮದಿಂದಲೇ ಅರ್ಥ. ಧರ್ಮದಿಂದಲೇ ಕಾಮ. ಧರ್ಮದಿಂದಲೇ ಮೋಕ್ಷ. ಧರ್ಮ-ಅರ್ಥ-ಕಾಮಗಳು ಸತ್ವ-ರಜಸ್-ತಮೋ-ಗುಣಗಳ ಸಂಬಂಧವನ್ನು ಹೊಂದಿವೆ. ಮೂರರಲ್ಲಿಯೂ ಮೂರೂ ಗುಣಗಳ ಸಂಬಂಧ ವಿದ್ದರೂ ಧರ್ಮದಲ್ಲಿ ಸತ್ವಗುಣ ಅಧಿಕವಾಗಿದೆ. ಅರ್ಥದಲ್ಲಿ ರಜಸ್, ಕಾಮದಲ್ಲಿ ತಮಸ್ ಹೆಚ್ಚಾಗಿವೆ. ಆದ್ದರಿಂದ ಧರ್ಮವನ್ನೇ ಅವಲಂಬಿಸಬೇಕು. ಸಾತ್ವಿಕರು ಉನ್ನತಿಯನ್ನು ಪಡೆಯುತ್ತಾರೆ. ರಾಜಸರು ಮಧ್ಯದಲ್ಲಿ ನಿಲ್ಲುತ್ತಾರೆ. ತಾಮಸರು ಅವನತಿಯನ್ನು ಹೊಂದುತ್ತಾರೆ. ಯಾರು ಧರ್ಮದಿಂದ ಅರ್ಥ-ಕಾಮಗಳನ್ನು ಸಂಪಾದಿಸುತ್ತಾರೋ ಅವರು ಈ ಲೋಕದಲ್ಲಿ ಸುಖವಾಗಿದ್ದು ಮರಣಾನಂತರ ಮುಕ್ತಿಯನ್ನೇ ಪಡೆಯುತ್ತಾರೆ. ಧರ್ಮವು ಮೋಕ್ಷಸಾಧನ. ಅರ್ಥವು ಕಾಮಸಾಧನ. ಹೀಗೆ ಧರ್ಮವು ಅರ್ಥ, ಕಾಮ, ಮೋಕ್ಷಗಳ ಸಾಧನವಾಗಿದ್ದರೆ, ಅರ್ಥ, ಕಾಮಗಳು ಧರ್ಮ ಸಾಧನವಾಗಿವೆ. ಹೀಗೆ ಧರ್ಮಾರ್ಥ ಕಾಮ ಮೋಕ್ಷಗಳ ಮಹತ್ವವನ್ನು ತಿಳಿದು ಅವುಗಳ ಅನುಷ್ಠಾನವನ್ನು ಮಾಡುವವನು ಅನಂತ ಫಲವನ್ನು ಪಡೆಯುವನು. ಆದ್ದರಿಂದ ಕೇವಲ ಅರ್ಥ-ಕಾಮಗಳೇ ನಮ್ಮ ಗುರಿಯಾಗದೆ, ಧರ್ಮವು ಗುರಿಯಾಗಬೇಕು. ಧರ್ಮವೇ ಸ್ಥಾವರ-ಜಂಗಮಸ್ವರೂಪದ ಇಡೀ ಪ್ರಪಂಚಕ್ಕೆ ಆಧಾರ. ಪೋಷಕ, ಅರ್ಥಾತ್ ಹಿತಕಾರಿ.

## ಧರ್ಮ ಬ್ರಹ್ಮನ ಶಕ್ತಿ :

ಆದಿ-ಅಂತ್ಯಗಳಿಲ್ಲದ ಈ ಧರ್ಮವು ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನ ಶಕ್ತಿ. ಜ್ಞಾನ ಮತ್ತು ಕರ್ಮಗಳಿಂದ ಅದನ್ನು ಗಳಿಸಲು ಸಾಧ್ಯ. ಆದ್ದರಿಂದ ಜ್ಞಾನಸಹಿತವಾದ ಕರ್ಮ ಯೋಗದ ಅನುಷ್ಠಾನವನ್ನು ಮಾಡಬೇಕು.

ವೇದೋಕ್ತವಾದ ಕರ್ಮ ಎರಡು ವಿಧ. ಪ್ರವೃತ್ತ ಮತ್ತು ನಿವೃತ್ತ. ಜ್ಞಾನ ಪೂರ್ವಕರ್ಮ ನಿವೃತ್ತ, ಹಾಗಲ್ಲದ ಕರ್ಮ ಪ್ರವೃತ್ತ, ನಿವೃತ್ತಕರ್ಮದ ಅನುಷ್ಠಾನವನ್ನು ಮಾಡುವವನು ಮುಕ್ತಿಯನ್ನು ಪಡೆಯುತ್ತಾನೆ. ಆದ್ದರಿಂದ ನಿವೃತ್ತಕರ್ಮವನ್ನೇ ಆಚರಿಸಬೇಕು. ಹಾಗೆ ಮಾಡದವನು ಸಂಸಾರದಲ್ಲೇ ಇರುತ್ತಾನೆ.

## ಎಲ್ಲರೂ ಅನುಸರಿಸಬೇಕಾದ ಧರ್ಮ :

ತಾಳ್ಮೆ, ಇಂದ್ರಿಯನಿಗ್ರಹ, ದಯೆ, ದಾನ, ಔದಾರ್ಯ, ತ್ಯಾಗ, ನೇರ ನಡವಳಿಕೆ (ಆರ್ಜವ), ಅಸೂಯಾರಾಹಿತ್ಯ, ಉತ್ತಮರ ಅನುಸರಣೆ, ಸತ್ಯ, ಸಂತೋಷ, ಆಸ್ತಿಕ್ಯ,

ದೇವತಾರ್ಚನೆ, ಬ್ರಾಹ್ಮಣ ಸತ್ಕಾರ, ಅಹಿಂಸೆ, ಪ್ರಿಯವಾದ ಮಾತು, ಅದ್ರೋಹ ಕಳಂಕವನ್ನು ಹಚ್ಚದಿರುವುದು, ಅತಿಯಾಗಿ ಮಾತನಾಡದಿರುವುದು- ಇವು ಎಲ್ಲ ವರ್ಣ, ಆಶ್ರಮದವರೂ ಅನುಸರಿಸಬೇಕಾದ ಸಾಮಾನ್ಯ ಧರ್ಮ ಎಂದು ಮನು ಹೇಳಿದ್ದಾನೆ.

**ವರ್ಣಾಶ್ರಮ ಧರ್ಮಗಳನ್ನು ಅನುಸರಿಸಿದವರಿಗೆ ಲಭಿಸುವ ಸ್ಥಾನಗಳು :**

ಸ್ವಧರ್ಮನಿಷ್ಠನಾದ ಬ್ರಾಹ್ಮಣನಿಗೆ ಬ್ರಹ್ಮಲೋಕದ ಪ್ರಾಪ್ತಿಯಾಗುವುದು. ಯುದ್ಧದಿಂದ ಪಲಾಯನ ಮಾಡದ ಕ್ಷತ್ರಿಯನಿಗೆ ಇಂದ್ರಲೋಕ, ಸ್ವಧರ್ಮನಿಷ್ಠರಾದ ವೈಶ್ಯನಿಗೆ ಮರುತ್‌ಲೋಕ. ಅಂತಹ ಶೂದ್ರರಿಗೆ ಗಂಧರ್ವಲೋಕ.

ಬ್ರಹ್ಮಚಾರಿಗಳಿಗೆ ಊರ್ಧ್ವರೇತಸ್ಕರಾದ ಎಂಭತ್ತುಸಾವಿರ ಋಷಿಗಳು ಇರುವ ಸ್ಥಾನವು ಲಭಿಸುತ್ತದೆ. ವಾನಪ್ರಸ್ಥರಿಗೆ ಸಪ್ತರ್ಷಿಗಳ ಸ್ಥಾನ. ಗೃಹಸ್ಥಾಶ್ರಮಿಗಳಿಗೆ ಪ್ರಜಾಪತಿ ಲೋಕ. ಊರ್ಧ್ವರೇತಸ್ಕರಾದ ಸನ್ಯಾಸಿಗಳಿಗೆ ಹಿರಣ್ಯಗರ್ಭಸ್ಥಾನ. ಈ ಸ್ಥಾನವನ್ನು ಪಡೆದವರು ಪುನಃ ಜನ್ಮ-ಮರಣ ಚಕ್ರಕ್ಕೆ ಸಿಕ್ಕುವುದಿಲ್ಲ. ಯೋಗಿಗಳಿಗೆ ವ್ಯೋಮ ಎಂಬ ಅಮೃತ ಸ್ಥಾನವು ಲಭಿಸುತ್ತದೆ. ಅಲ್ಲಿ ಪರಮೈಶ್ವರ್ಯದ ಆನಂದದ ಅನುಭವವಿದೆ. ಅದೇ ಸರ್ವೋತ್ಕೃಷ್ಟ ಸ್ಥಿತಿ. ಸರ್ವೋತ್ಕೃಷ್ಟ ಗಮ್ಯ

**ಋಷಿಗಳ ಪ್ರಶ್ನೆ :**

ಭಗವನ್, ನಾಲ್ಕು ಆಶ್ರಮಗಳೆಂದು ಹೇಳಿದ್ದೀರಿ. ಇವುಗಳಿಂದ ಹೊರಗೆ ಯೋಗಿಯನ್ನು ಗುರುತಿಸಿದ್ದೀರಿ. ಇದು ಹೇಗೆ?

**ಭಗವಾನ್ ಉವಾಚ :**

ಸರ್ವಕರ್ಮಗಳನ್ನು ಭಗವಂತನಿಗೆ ಅರ್ಪಿಸಿ, ಅವುಗಳನ್ನು ಆಚರಿಸುವ ಅವಶ್ಯಕತೆಯಿಲ್ಲದಂತಹ ಅಚಲ ಸಮಾಧಿ ಸ್ಥಿತಿಯನ್ನು ಹೊಂದುವ ಸನ್ಯಾಸಿಯೇ ಯೋಗಿ. ಅವನು ಚಾತುರ್ವರ್ಣ್ಯದ ಹೊರಗೆ ಇಲ್ಲ. ಎಲ್ಲ ಆಶ್ರಮಗಳೂ ಎರಡು ವಿಧ ಎಂದು ಶೃತಿಗಳು ಹೇಳುತ್ತವೆ. ಬ್ರಹ್ಮಚಾರಿಗಳು, ಎರಡು ವಿಧ. (೧) ಉಪಕುರ್ವಾಣ (೨) ಕೇವಲ ಬ್ರಹ್ಮನಿಷ್ಠನಾದ ನೈಷ್ಠಿಕ. ವಿಧಿಗನುಗುಣವಾಗಿ ವೇದಾಧ್ಯಯನವನ್ನು ಮಾಡಿ ಗೃಹಸ್ಥಾಶ್ರಮವನ್ನು ಸ್ವೀಕರಿಸುವವನು ಉಪಕುರ್ವಾಣ. ಆಮರಣ ಮದುವೆಯಾಗದವನು ನೈಷ್ಠಿಕ.

ಗೃಹಸ್ಥಾಶ್ರಮಿಗಳಲ್ಲಿ ಎರಡು ವಿಧ. (೧) ಉದಾಸೀನ (೨) ಸಾಧಕ. ಕುಟುಂಬ ಪೋಷಣೆಯಲ್ಲಿ ಆಸಕ್ತನಾದವನು ಸಾಧಕ. ದೇವ, ಋಷಿ, ಪಿತೃ ಋಣಗಳನ್ನು ಪರಿಹರಿಸಿ-ಕೊಂಡು, ಕುಟುಂಬ, ಆಸ್ತಿ ಇತ್ಯಾದಿಗಳನ್ನು ಬಿಟ್ಟು ಏಕಾಕಿಯಾಗಿ ಬ್ರಹ್ಮಜ್ಞಾನಸಾಧನೆಯನ್ನು ಮಾಡುವವನು ಉದಾಸೀನ. ಅವನಿಗೆ ಮೋಕ್ಷವೇ ಗುರಿ.

ವಾನಪ್ರಸ್ಥಾಶ್ರಮಿಗಳಲ್ಲಿ (೧) ತಾಪಸ ಮತ್ತು (೨) ಸಾನ್ಯಾಸಿಕ ಎಂದು ಎರಡು ವಿಧ. ತಪಸ್ಸು, ದೇವತಾರಾಧನೆ ಮತ್ತು ವೇದಾಧ್ಯಯನ - ಇವುಗಳಲ್ಲಿ ನಿರತನಾದವನು ತಾಪಸ. ತಪಸ್ಸು ಮಾಡುತ್ತಾ ದೇಹವನ್ನು ಸವೆಸಿರುವ, ಧ್ಯಾನನಿಷ್ಠನು ಸಾನ್ಯಾಸಿಕ.

ಸನ್ಯಾಸಾಶ್ರಮಿಗಳಲ್ಲಿ (೧) ಪಾರಮೇಷ್ಠಿಕ ಮತ್ತು (೨) ಯೋಗಿ ಎಂದು ಎರಡು ವಿಧ. ಜಿತೇಂದ್ರಿಯನೂ, ಯೋಗಾಭ್ಯಾಸ ನಿರತನೂ, ಜ್ಞಾನನಿಷ್ಠನೂ ಆದ ಸನ್ಯಾಸಿ ಪಾರಮೇಷ್ಠಿಕ. ಕೇವಲ ಪರಬ್ರಹ್ಮ ಚಿಂತನೆಯಲ್ಲೇ ಆನಂದವನ್ನನುಭವಿಸುವ, ನಿತ್ಯತೃಪ್ತನಾದ, ಪರಪಕ್ವ ಯಥಾರ್ಥಜ್ಞಾನವುಳ್ಳ ಮಹಾಮುನಿಯೇ ಯೋಗಿ. ಪಾರಮೇಷ್ಠಿಕರು ಮೂರು ವಿಧ. (೧) ಜ್ಞಾನನಿರತ ಸನ್ಯಾಸಿ, (೨) ವೇದನಿಷ್ಠರಾದ ಆದರೆ ವೇದಾವಲಂಬನೆ ಇಲ್ಲದ ವೇದಸನ್ಯಾಸಿ, (೩) ಕರ್ಮಸನ್ಯಾಸಿ.

ಯೋಗಿಗಳೂ ಮೂರು ವಿಧ. (೧) ಭೌತಿಕ (೨) ಸಾಂಖ್ಯ (೩) ಯೋಗದ ಪರಾಕಾಷ್ಠೆಯನ್ನು ತಲುಪಿದ ಆಶ್ರಮೀ. ಭಗವದ್ಧ್ಯಾನದ ಬೇರೆ ಬೇರೆ ಹಂತಗಳಿಗನುಗುಣವಾಗಿವೆ ಈ ಮೂರು ವಿಧಗಳು. ಆಶ್ರಮಿಯು ಭಗವಧ್ಧ್ಯಾನದ ಪರಾಕಾಷ್ಠೆಯನ್ನು ತಲುಪುತ್ತಾನೆ.

ಆದ್ದರಿಂದ ನಾಲ್ಕೇ ಆಶ್ರಮಗಳು. ಇದು ಸಕಲ ವೇದ ಶಾಸ್ತ್ರಗಳ ನಿರ್ಣಯ. ಯೋಗಿಯು ಸನ್ಯಾಸಾಶ್ರಮಿಗಳ ಒಂದು ವಿಧ. ಐದನೆಯ ಆಶ್ರಮಿಯಲ್ಲ. ಹೀಗೆ ಚತುರ್ಮುಖಬ್ರಹ್ಮನು ವರ್ಣಾಶ್ರಮಗಳ ವ್ಯವಸ್ಥೆಯನ್ನು ಮಾಡಿ ದಕ್ಷ ಮೊದಲಾದ ತನ್ನ ಪುತ್ರರಿಗೆ ಸೃಷ್ಟಿಯನ್ನು ಮುಂದುವರಿಸಬೇಕೆಂದು ಆಜ್ಞೆ ಮಾಡಿದನು.

ಬ್ರಹ್ಮದೇವರ ಆಜ್ಞೆಯಂತೆ ದಕ್ಷ ಮೊದಲಾದವರು ದೇವ, ಮಾನುಷ ಮೊದಲಾದ ಪ್ರಜಾಸೃಷ್ಟಿಯನ್ನು ಮಾಡಿದರು. ಹೀಗೆ ಚತುರ್ಮುಖ ಬ್ರಹ್ಮದೇವರು ಸೃಷ್ಟಿಕಾರ್ಯದಲ್ಲಿ ನಿರತರು. ನಾನು *(ಕೂರ್ಮರೂಪನಾದ ನಾರಾಯಣ)* ಈ ಜಗತ್ತಿನ ಪಾಲಕ. ಶೂಲಧಾರಿ ಶಿವನು ಸಂಹಾರಕ.

**ತ್ರಿಮೂರ್ತಿಗಳು :**

ಬ್ರಹ್ಮ, ವಿಷ್ಣು, ಮಹೇಶ್ವರರು ತ್ರಿಮೂರ್ತಿಗಳು. ಪರಬ್ರಹ್ಮನಿಗೆ ಅಧೀನವಾದ ಸತ್ವ, ರಜಸ್, ತಮಸ್‌ಗಳ ಅಭಿವ್ಯಕ್ತಿಯನ್ನು ಮಾಡುವವರು. ಇವರು ಪರಸ್ಪರ ಅನುರಾಗ, ಪರಸ್ಪರ ಅವಲಂಬನೆ, ಪರಸ್ಪರ ನಮಸ್ಕಾರಗಳ ವಿಡಂಬನೆಯನ್ನು ಮಾಡುವರು.

ಬ್ರಾಹ್ಮೀ, ಮಾಹೇಶ್ವರೀ ಮತ್ತು ಅಕ್ಷರ ಎಂದು ಮೂರು ಭಾವನೆಗಳು. *(ಭಾವನಾ= ಧ್ಯಾನ, ಚಿಂತನ)* *(ಯಾವ ಧ್ಯಾನಕ್ಕೆ ಚತುರ್ಮುಖಬ್ರಹ್ಮನು ವಿಷಯನಾಗುವನೋ ಅದು ಬ್ರಾಹ್ಮೀಭಾವನಾ. ಶಿವವಿಷಯಕಧ್ಯಾನವು ಮಾಹೇಶ್ವರೀ ಭಾವನಾ. ಹರಿವಿಷಯಕ ಧ್ಯಾನವು ಅಕ್ಷರಭಾವನಾ)* ಶಿವನಲ್ಲಿ ಮೂರು ಭಾವನೆಗಳು ಸಾಧ್ಯ. *(ಶಿವ ಹರಿ ಮತ್ತು ಚತುರ್ಮುಖ ಬ್ರಹ್ಮರ ಅಧೀನನಾದ್ದರಿಂದ ಅವನ ಯಶಸ್ಸಿನಲ್ಲಿ, ಮಹಿಮೆಯಲ್ಲಿ ಅವರಿಬ್ಬರ ಪಾತ್ರವೂ ಇದೆ. ಆದ್ದರಿಂದ ಶಿವಮಹಿಮೆಯ ಧ್ಯಾನದಲ್ಲಿ ಚತುರ್ಮುಖಬ್ರಹ್ಮ ಮತ್ತು ಪರಬ್ರಹ್ಮ (ಹರಿ)ರೂ ವಿಷಯರಾಗುತ್ತಾರೆ. ಆದ್ದರಿಂದ ಶಿವನಲ್ಲಿ ಮೂರು ಭಾವನೆಗಳು, ಅರ್ಥಾತ್*

*ಶಿವಧ್ಯಾನ ಎಂದರೆ ತ್ರಿಮೂರ್ತಿಗಳ ಧ್ಯಾನ).* ಚತುರ್ಮುಖಬ್ರಹ್ಮನಲ್ಲಿ ಬ್ರಾಹ್ಮೀ ಮತ್ತು ಅಕ್ಷರ ಭಾವನೆಗಳು ನಡೆಯುತ್ತವೆ. *(ಚತುರ್ಮುಖಬ್ರಹ್ಮ ಧ್ಯಾನ ಎಂದರೆ ಅವನ ಮತ್ತು ಪರಬ್ರಹ್ಮರ ಧ್ಯಾನ).*

ಪರಬ್ರಹ್ಮನಲ್ಲಿ ಅಕ್ಷರ ಭಾವನೆಯು ಮಾತ್ರ ನಡೆಯುತ್ತದೆ. *(ಅವನು ಯಾರಿಗೂ ಅಧೀನನಲ್ಲವಾದ್ದರಿಂದ, ಅವನ ಸ್ವಾತಂತ್ರ್ಯಾನುಸಂಧಾನದ ಫಲವಾಗಿ ಅವನ ಧ್ಯಾನವೆಂದರೆ ಕೇವಲ ಅವನ ಧ್ಯಾನ).* ನನಗೆ ಮತ್ತು ಶಿವನಿಗೆ ಭಿನ್ನಾಭಿಪ್ರಾಯಗಳಿಲ್ಲ.

ಸರ್ವಸಮರ್ಥನಾದ, ಸರ್ವಾಂತರ್ಯಾಮಿಯಾದ ಪರಬ್ರಹ್ಮನು ಬ್ರಹ್ಮ, ವಿಷ್ಣು ಮಹೇಶ್ವರ ಎಂಬ ಮೂರು ರೂಪಗಳನ್ನು ತೆಗೆದುಕೊಂಡು ಸಕಲಲೋಕಸೃಷ್ಟಿಗಾಗಿ ಚತುರ್ಮುಖಬ್ರಹ್ಮಾಂತರ್ಯಾಮಿಯಾಗಿದ್ದಾನೆ. ಸಂಹಾರಕ್ಕಾಗಿ ರುದ್ರಾಂತರ್ಯಾಮಿ-ಯಾಗಿದ್ದಾನೆ. ಆದ್ದರಿಂದ ಮುಕ್ತಿಯ ಅಪೇಕ್ಷೆಯಿರುವವನು ವರ್ಣಾಶ್ರಮಧರ್ಮಗಳನ್ನು ಪಾಲಿಸುತ್ತಾ ಭಕ್ತಿಯಿಂದ ತ್ರಿಮೂರ್ತಿಗಳನ್ನು ವಿಶೇಷವಾಗಿ, ಶ್ರದ್ಧೆಯಿಂದ ಪೂಜಿಸಬೇಕು. ಅದಕ್ಕಾಗಿ ಎಲ್ಲ ಪ್ರಯತ್ನಗಳನ್ನೂ ಮಾಡಬೇಕು.

**ಮೂರು ಆಶ್ರಮಗಳು :**

ಹರಾಶ್ರಮ, ಬ್ರಾಹ್ಮಾಶ್ರಮ ಮತ್ತು ವೈಷ್ಣವಾಶ್ರಮ- ಈ ಮೂರೂ ಸಾಧಕನ ಜೀವನದ ಬೇರೆ ಬೇರೆ ಅವಧಿಗಳು *(ವ್ಯಕ್ತಿಯ ಜೀವನದಲ್ಲಿ ಹರನ ಉಪಾಸನೆಯ ಅವಧಿ ಹರಾಶ್ರಮ, ಬ್ರಹ್ಮೋಪಾಸನೆಯ ಅವಧಿ ಬ್ರಾಹ್ಮಾಶ್ರಮ, ವಿಷ್ಣುವಿನ ಉಪಾಸನೆಯ ಅವಧಿ ವೈಷ್ಣವಾಶ್ರಮ).* ಹರ ಮೊದಲಾದವರ ಉಪಾಸನೆಯ ಪ್ರಾಧಾನ್ಯಕ್ಕನುಗುಣವಾಗಿ ಈ ಹೆಸರುಗಳು. ಸಾಧಕನು ಬ್ರಹ್ಮವಿದ್ಯೆಯಲ್ಲಿ ನಿಷ್ಠನಾಗಿ, ತ್ರಿಮೂರ್ತಿಗಳ ಭಕ್ತರ ಮೇಲೆ ವಾತ್ಸಲ್ಯವುಳ್ಳವನಾಗಿ ಆಯಾಯಾ ದೇವತೆಗಳ ಚಿಹ್ನೆಗಳನ್ನು ಧರಿಸಿ ಈ ದೇವತೆಗಳ ಧ್ಯಾನವನ್ನು ಮಾಡಬೇಕು.

ಎಲ್ಲ ಭಕ್ತರೂ ಶಿವಚಿಹ್ನೆಯನ್ನು ಧರಿಸಲೇಬೇಕು. ಭಗವಾನ್ ನಾರಾಯಣನ ಮೇಲೆ ಭಕ್ತಿ ಇರುವವರು ಬಿಳಿ ಬೂದಿಯಿಂದ ಹಣೆಯ ಮೇಲೆ ತ್ರಿಪುಂಡ್ರವನ್ನು ಧರಿಸಬೇಕು. ಶಿವನ ಮೇಲೆ ಭಕ್ತಿ ಇರುವವರು ಹಣೆಯ ಮೇಲೆ ಗಂಧೋದಕದಿಂದ ತ್ರಿಶೂಲವನ್ನು ಧರಿಸಬೇಕು. ಜಗಜ್ಜನಕನಾದ ಚತುರ್ಮುಖಬ್ರಹ್ಮನ ಮೇಲೆ ಭಕ್ತಿ ಇರುವವರು ತಿಲಕವನ್ನು ಧರಿಸಬೇಕು. ತ್ರಿಪುಂಡ್ರವನ್ನು ಧರಿಸುವುದರಿಂದ ಸತ್ವ-ರಜಸ್-ತಮೋಗುಣಗಳ ಅಭಿಮಾನಿಗಳಾದ ತ್ರಿಮೂರ್ತಿಗಳನ್ನೇ ಧರಿಸಿದಂತಾಗುವುದು. ಶೂಲಧಾರಣದಿಂದ ಬ್ರಹ್ಮ ತೇಜೋಮಯವೂ, ಶುದ್ಧವೂ ಆದ ಸೂರ್ಯಮಂಡಲವನ್ನು ಧರಿಸಿದಂತಾಗುವುದು. ತಿಲಕಧಾರಣೆಯಿಂದ ಸರ್ವೋತ್ಕೃಷ್ಟವಾದ ಸ್ಥಾನವನ್ನೇ ಧರಿಸಿದಂತಾಗುವುದು. ಇವುಗಳ ಧಾರಣೆಯು ಆಯುಸ್ಸನ್ನು ಹೆಚ್ಚಿಸುತ್ತದೆ. ಸಾಧಕನು ಜಿತೇಂದ್ರಿಯನಾಗಿ ತ್ರಿಮೂರ್ತಿಗಳನ್ನು ಉದ್ದೇಶಿಸಿ

ಹೋಮಗಳನ್ನೂ ಜಪಗಳನ್ನೂ ಮಾಡಬೇಕು. ವರ್ಣಾಶ್ರಮಗಳ ವಿಧಿಗಳನ್ನು ತಿಳಿದುಕೊಂಡು ಸಮಾಧಾನವುಳ್ಳ ಚಿತ್ತವುಳ್ಳವನಾಗಿ, ಶಾಂತನೂ, ದಾಂತನೂ, ಕ್ರೋಧರಹಿತನೂ ಆಗಿ ಸಮಗ್ರ ಜೀವನವನ್ನು ಹೀಗೆಯೇ ನಡೆಸಬೇಕು. ಈ ಸಾಧನೆಯಿಂದ ಸಾಧಕನು ತನ್ನ ಸ್ವರೂಪಾಭಿವ್ಯಕ್ತಿಯನ್ನು ಹೊಂದುತ್ತಾನೆ.

* * *

## ಅಧ್ಯಾಯ-೩

**ಋಷಿಗಳ ಪ್ರಾರ್ಥನೆ :**

"ಭಗವನ್! ನಾಲ್ಕು ವರ್ಣಗಳ ಮತ್ತು ನಾಲ್ಕು ಆಶ್ರಮಗಳ ಬಗ್ಗೆ ನಮಗೆ ತಿಳಿಸಿದ್ದೀರಿ. ಈಗ ದಯವಿಟ್ಟು ಆಶ್ರಮಗಳ ಕ್ರಮವನ್ನು ತಿಳಿಸಿರಿ."

**ಕೂರ್ಮ ಉವಾಚ :**

ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ - ಇದು ಆಶ್ರಮದ ಕ್ರಮ. ವಿಶೇಷ ಕಾರಣವಿದ್ದರೆ ವ್ಯತ್ಯಾಸವೂ ಆಗಬಹುದು. ಅಂದರೆ ಬ್ರಹ್ಮಚರ್ಯದಿಂದ ಸನ್ಯಾಸಾಶ್ರಮಕ್ಕೆ ನೇರವಾಗಿ ಹೋಗಬಹುದು. ಬ್ರಹ್ಮಚಾರಿಯಾಗಿದ್ದಾಗಲೇ ಪ್ರಪಂಚದ ಬಗ್ಗೆ ಬಹಳ ಸ್ಫುಟವಾದ ಜ್ಞಾನವನ್ನು ಪಡೆದು, ಪರಮವೈರಾಗ್ಯವನ್ನೂ ಹೊಂದಿ, ಮುಕ್ತಿಯನ್ನು ಪಡೆಯಲು ಹಂಬಲವುಂಟಾದರೆ, ಬ್ರಹ್ಮಚರ್ಯಾಶ್ರಮದಿಂದಲೇ ಸನ್ನ್ಯಾಸಾಶ್ರಮಕ್ಕೆ ಹೋಗಬಹುದು. ಹೀಗಿಲ್ಲದ ಸಾಮಾನ್ಯನು ಶಾಸ್ತ್ರವಿಧಿಯಂತೆ ಮದುವೆಯಾಗಿ ಯಜ್ಞಾದಿಗೃಹಸ್ಥಾಶ್ರಮ ಕರ್ತವ್ಯಗಳನ್ನು ನಿರ್ವಹಿಸಿ, ಸಂತತಿಯನ್ನು ಪಡೆದು, ಅನಂತರ ವಿರಕ್ತನಾದರೆ ಸನ್ಯಾಸಿಯಾಗಬೇಕು. ಗೃಹಸ್ಥಾಶ್ರಮಿಯು ಶಾಸ್ತ್ರವಿಧಿಯಂತೆ ಯಜ್ಞಗಳನ್ನು ಮಾಡದೆ, ಸಂತತಿಯನ್ನು ಪಡೆಯದೆ ಗೃಹಸ್ಥಾಶ್ರಮವನ್ನು ಬಿಡಬಾರದು. ಹೀಗೆ ಬಿಡುವುದು ವಿವೇಕವಲ್ಲ. ಆದರೂ ಗೃಹಸ್ಥಾಶ್ರಮಿಗೆ ತನ್ನ ಕರ್ತವ್ಯಗಳನ್ನು ಮಾಡುವ ಮೊದಲೇ ತೀವ್ರಸ್ವರೂಪದ ವೈರಾಗ್ಯವಿದ್ದರೆ, ಕರ್ತವ್ಯಗಳನ್ನು ಮಾಡದೆ ಸನ್ಯಾಸಿಯಾಗಬಹುದು. ಆದರೆ ವಿವಿಧ ಯಜ್ಞಗಳನ್ನು ಮಾಡಿ, ಸಂತತಿಯನ್ನು ಪಡೆದು, ಅನಂತರ ವಾನಪ್ರಸ್ಥನಾಗಿ ತಪಸ್ಸನ್ನು ಮಾಡಿ ತಪೋಬಲದಿಂದ ವಿರಕ್ತನಾಗಿ ಸನ್ಯಾಸಿಯಾಗುವುದು ಒಳ್ಳೆಯದು. ಮುಂದಿನ ಆಶ್ರಮಕ್ಕೆ ಹೋದವನು ಹಿಂದಿನ ಆಶ್ರಮಕ್ಕೆ ಬರಲು ಅವಕಾಶವಿಲ್ಲ. ಗೃಹಸ್ಥಾಶ್ರಮಿಯು ಪ್ರಾಜಾಪತ್ಯ ಯಜ್ಞವನ್ನು ಅಥವಾ ಆಗ್ನೇಯೀಯಜ್ಞವನ್ನು ಮಾಡಿ ನೇರವಾಗಿ ಸನ್ಯಾಸಿಯಾಗಬಹುದು. ಅಥವಾ ವಾನಪ್ರಸ್ಥನಾಗಿ ಸನ್ಯಾಸಿಯಾಗಬಹುದು. ಯಾಗ, ದಾನ, ಹೋಮ ಮೊದಲಾದವುಗಳನ್ನು ಮಾಡಲು

ಅಸಮರ್ಥರಾದ ಕುರುಡರು, ಕುಂಟರು, ಬಡವರು ಕೂಡ ವಿರಕ್ತರಾಗಿದ್ದರೆ ಸನ್ಯಾಸಿಗಳಾಗಬಹುದು. ಸನ್ಯಾಸಿಗಳಾಗಬಯಸುವ ಎಲ್ಲರಿಗೂ ವೈರಾಗ್ಯವು ಇರಲೇಬೇಕು. ಇದು ಕಡ್ಡಾಯ,. ಈ ನಿಯಮಕ್ಕೆ ಯಾವ ರಿಯಾಯಿತಿಯೂ ಇಲ್ಲ. ವೈರಾಗ್ಯವಿಲ್ಲದೆ ಸನ್ಯಾಸವನ್ನು ಬಯಸುವವನು ದುರ್ಗತಿಯನ್ನೇ ಹೊಂದುವನು. ಮರಣಪರ್ಯಂತ ಯಾವುದಾದರೂ ಒಂದೇ ಆಶ್ರಮದಲ್ಲಿ ಇರಬಹುದು. ತಾನು ಆರಿಸಿಕೊಂಡ ಆಶ್ರಮದಲ್ಲಿ ಶ್ರದ್ಧಾವಂತನಾಗಿದ್ದರೆ ಮುಕ್ತಿಯನ್ನೇ ಪಡೆಯಲು ಸಾಧ್ಯ.

**ಸಾಧಕನ ಜೀವನ :**

ನ್ಯಾಯಮಾರ್ಗದಿಂದ ಸಂಪಾದಿಸಿದ ಧನ, ಶಾಂತಿ, ಬ್ರಹ್ಮವಿದ್ಯಾನಿಷ್ಠೆ, ಸ್ವಧರ್ಮ ಪರಿಪಾಲನೆ - ಇವುಗಳು ಮುಕ್ತಿಯ ದಾರಿ. ಫಲಾಪೇಕ್ಷೆಯಿಲ್ಲದಿರುವಿಕೆ, ಕಾಮರಾಹಿತ್ಯ, ಪ್ರಸನ್ನ ಮನಸ್ಸಿನಿಂದ ಕರ್ಮಾನುಷ್ಠಾನ, ಬ್ರಹ್ಮನಲ್ಲಿ ಕರ್ಮಗಳ ಸಮರ್ಪಣೆ - ಇವು ಮುಕ್ತಿಯ ದಾರಿ. ಬ್ರಹ್ಮಾರ್ಪಣ ಎಂದರೆ ಎಲ್ಲವನ್ನೂ ಬ್ರಹ್ಮನೇ ಕೊಟ್ಟಿದ್ದಾನೆ; ಅದನ್ನು ಅವನಿಗೇ ಅರ್ಪಿಸುತ್ತೇನೆ ಎನ್ನುವ ಅನುಸಂಧಾನ. ನಾನು ಕರ್ತನಲ್ಲ; ಬ್ರಹ್ಮನೇ ಎಲ್ಲವನ್ನೂ ಮಾಡುತ್ತಾನೆ ಎನ್ನುವ ಅನುಸಂಧಾನವೇ ಬ್ರಹ್ಮಾರ್ಪಣ ಎಂದು ತತ್ವದರ್ಶಿಗಳಾದ ಋಷಿಗಳು ಹೇಳಿದ್ದಾರೆ. ತಾನು ಮಾಡಿದ ಕರ್ಮಗಳಿಂದ ಬ್ರಹ್ಮನು ಪ್ರೀತನಾಗಲಿ ಎಂಬ ಅನುಸಂಧಾನವೇ ಬ್ರಹ್ಮಾರ್ಪಣ. ಕರ್ಮದ ಫಲವನ್ನು ಅಪೇಕ್ಷಿಸದೆ ಅವುಗಳನ್ನು ಬ್ರಹ್ಮನಿಗೆ ಅರ್ಪಿಸುವುದೇ ಬ್ರಹ್ಮಾರ್ಪಣ. ಮಾಡಬೇಕಾದ ಕರ್ಮವನ್ನು ತಪ್ಪದೇ, ಫಲಾಪೇಕ್ಷೆಯಿಲ್ಲದೆ ಮಾಡಿದರೆ ಅದರಿಂದ ಮುಕ್ತಿಯು ಲಭಿಸುವುದು. ಫಲಾಪೇಕ್ಷೆಯಿಂದ ಕರ್ಮಗಳನ್ನು ಮಾಡಿದರೆ ಸಂಸಾರಬಂಧನದ ಬಿಗಿ ಹೆಚ್ಚಾಗುವುದು. ಆದ್ದರಿಂದ ಅಜ್ಞಾನಿಯೂ ಕೂಡ ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನು ಮಾಡಬೇಕು. ಇದರಿಂದ ಮುಕ್ತಿಯು ಲಭಿಸುತ್ತದೆ. ಕರ್ಮಾನುಷ್ಠಾನದಿಂದ ಈಗಿನ ಜನ್ಮದ ಮತ್ತು ಪೂರ್ವಜನ್ಮಗಳ ಪಾಪಗಳೂ ನಾಶವಾಗುತ್ತವೆ. ಮನಸ್ಸು ಪ್ರಸನ್ನವಾಗುತ್ತದೆ. ಅದರಿಂದ ಬ್ರಹ್ಮಜ್ಞಾನವು ಲಭಿಸುತ್ತದೆ. ಕರ್ಮಾನುಷ್ಠಾನ ಸಹಿತವಾದ ಜ್ಞಾನವು ಮುಕ್ತಿಗೆ ಉತ್ತಮ ಸಾಧನವಾಗುತ್ತದೆ. ಇಂತಹ ಜ್ಞಾನವು ದೋಷ ಮುಕ್ತವಾಗಿರುತ್ತದೆ.

ಆದ್ದರಿಂದ ಯಾವುದೇ ಆಶ್ರಮದಲ್ಲಿದ್ದರೂ, ಭಗವತ್ಪ್ರೀತಿಕರವಾದ ಕರ್ಮಗಳನ್ನು ಮಾಡಬೇಕು. ಇದರಿಂದ ಮುಕ್ತಿಯಾಗುತ್ತದೆ. ಸಾಧಕನು ಕರ್ಮಾನುಷ್ಠಾನದಿಂದ ಭಗವಂತನ ಅನುಗ್ರಹಕ್ಕೆ ಪಾತ್ರನಾಗಿ ಮುಕ್ತಿಸಾಧನವಾದ ಜ್ಞಾನವನ್ನು ಪಡೆಯುತ್ತಾನೆ. ಅಂತಹವನು ನಾನು, ನನ್ನದು ಎಂಬ ಅಭಿಮಾನದಿಂದ ಮುಕ್ತನಾಗಿ ಬದುಕಿರುವಾಗಲೇ ಸುಖಿಯಾಗುತ್ತಾನೆ. ಇಂತಹ ಸಾಧಕನು ಅಂತರಂಗದಲ್ಲಿ ಆನಂದವನ್ನು ಅನುಭವಿಸುತ್ತಾ ಪರಮಾತ್ಮನ ದರ್ಶನವನ್ನು ಪಡೆಯುತ್ತಾನೆ. ಆದ್ದರಿಂದ ಪರಮಾತ್ಮನ ಪ್ರೀತಿಗಾಗಿ, ಪ್ರಸನ್ನ ಮನಸ್ಸಿನಿಂದ ಕರ್ಮಯೋಗವನ್ನು ಅವಲಂಬಿಸಬೇಕು.

ಇದು ನಾಲ್ಕು ಆಶ್ರಮಗಳ ಬಗ್ಗೆ ವಿವರಣೆ. ಇದನ್ನು ಮೀರಿದ ಮಾನವನಿಗೆ ಸದ್ಗತಿಯಾಗುವುದಿಲ್ಲ. *

## ಅಧ್ಯಾಯ-೪

ಇನ್ನು ಮುಂದೆ ಈ ಪ್ರಪಂಚದ ಸೃಷ್ಟಿ ಹೇಗೆ ಆಗುತ್ತದೆ? ಕಾರಣಗಳು ಯಾವುವು? ಎಲ್ಲಿ ಲಯವನ್ನು ಹೊಂದುತ್ತವೆ? ಇಡೀ ಜಗತ್ತಿನ ನಿಯಾಮಕ ಯಾರು? ಈ ಪ್ರಶ್ನೆಗಳಿಗೆ ಉತ್ತರವನ್ನು ವಿವರವಾಗಿ ತಿಳಿಸಬೇಕೆಂದು ನಾರದ ಮೊದಲಾದ ಮುನಿಗಳು ಕೂರ್ಮ ರೂಪಧರನಾದ ನಾರಾಯಣನನ್ನು ಕೇಳಿದರು.

**ಕೂರ್ಮ ಉವಾಚ :**

ಅವ್ಯಕ್ತನೂ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ರೂಪಗಳ ವ್ಯೂಹಧಾರಿಯೂ, ಸನಾತನನೂ ಆದ ಪರಬ್ರಹ್ಮ ಪರಿಪೂರ್ಣನಾದ ಈಶ್ವರ. ಅವನು ಅನಂತ. ಅವನನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಇಂತಹ ಪರಬ್ರಹ್ಮ ಇಡೀ ಜಗತ್ತಿನ ಸರ್ವತೋಮುಖ ನಿಯಾಮಕ.

ನಿತ್ಯವೂ, ಕಾರ್ಯ-ಕಾರಣ ರೂಪವೂ ಆದ ಅವ್ಯಕ್ತವು ಉಪಾದಾನ ಕಾರಣ. ಈ ಅವ್ಯಕ್ತವನ್ನೇ ಪ್ರಧಾನ ಎಂದೂ, ಪ್ರಕೃತಿ ಎಂದೂ ತತ್ವ ಚಿಂತಕರು ಹೇಳುತ್ತಾರೆ.

ಪ್ರಲಯ ಕಾಲದಲ್ಲಿ ಕಾರ್ಯಾವಸ್ಥೆಯನ್ನು ಕಳೆದುಕೊಂಡ, ಅಜರವೂ, ಅಕ್ಷಯವೂ, ಶಾಶ್ವತವೂ ಆದ ಪ್ರಕೃತಿಯು ಪರಬ್ರಹ್ಮನನ್ನು ಆಶ್ರಯಿಸಿತ್ತು. ಈ ಪ್ರಕೃತಿ ತ್ರಿಗುಣಾತ್ಮಕ. ಜಗತ್ತಿನ ಉಪಾದಾನಕಾರಣ. ಎಲ್ಲರಿಗೂ, ಎಲ್ಲ ವಸ್ತುವಿಗೂ ಮೂಲಾಧಾರನಾದ ಪೂರ್ಣವಾಗಿ ಅರಿವಿಗೆಸಿಗದ ಪರಬ್ರಹ್ಮನು ಸೃಷ್ಟಿಯ ಆದಿಯಲ್ಲಿ ಇದ್ದನು. ಸತ್ವ-ರಜಸ್-ತಮೋಗುಣಗಳ ಸಮಾವಸ್ಥೆಯೇ ಪ್ರಳಯ. ಸೃಷ್ಟಿಯ ಆರಂಭವಾಗುವವರೆಗಿನ ಈ ಸ್ಥಿತಿಯನ್ನು ಪ್ರಾಕೃತ ಪ್ರಳಯ ಎಂದು ಕರೆಯುತ್ತಾರೆ. ಈ ಪ್ರಲಯ ಕಾಲವನ್ನು ಬ್ರಹ್ಮನ ರಾತ್ರಿ ಎಂದೂ ಹೇಳುತ್ತಾರೆ. ಸೃಷ್ಟಿ-ಸ್ಥಿತಿ ಕಾಲವೇ ಬ್ರಹ್ಮದೇವರ ಹಗಲು. ವಸ್ತುತಃ ಈ ಪರಬ್ರಹ್ಮನಿಗೆ ಹಗಲು-ರಾತ್ರಿಗಳಿಲ್ಲ, ಇವೆ ಎಂಬ ಮಾತು ಕೇವಲ ಔಪಚಾರಿಕ. ರಾತ್ರಿಯ=ಪ್ರಲಯಕಾಲದ ಕೊನೆಯಲ್ಲಿ ಸೃಷ್ಟ್ಯುನ್ಮುಖನಾದ ಪರಮಪುರುಷನು ಚಿತ್ಪ್ರಕೃತಿ *(ಲಕ್ಷ್ಮೀದೇವಿ)* ಮತ್ತು ಅಚಿತ್ಪ್ರಕೃತಿ *(ಸತ್ವ-ರಜಸ್-ತಮೋ ಗುಣಾತ್ಮಕವಾದ ಜಡಪ್ರಕೃತಿ)* ಗಳಿಗೆ ಸೃಷ್ಟಿಗಾಗಿ ಚಾಲನೆಯನ್ನು ಕೊಟ್ಟನು. ಚಾಲನೆಯನ್ನು ಕೊಡುವ ಪರಮಪುರುಷನೇ ಚಾಲನೆಯನ್ನು ಪಡೆಯಬೇಕಾದ ಎರಡು ಪ್ರಕೃತಿಯಲ್ಲಿ ವಿಧದ ರೂಪಾಂತರದಿಂದ ಇದ್ದು ಅವುಗಳಿಗೆ ಚಾಲನೆಯನ್ನು ಪಡೆಯುವ ಸಾಮರ್ಥ್ಯವನ್ನು ಕೊಡುವನು. ಆದ್ದರಿಂದ ಪರಮಪುರುಷನೇ ಕ್ಷೋಭಕ *(ಚಾಲಕ)* ಮತ್ತು ಕ್ಷೋಭ್ಯ *(ಚಾಲ್ಯ)*.

ಹೀಗೆ ಚಾಲಿತವಾದ ಪ್ರಕೃತಿಯಿಂದ ಮಹತತ್ವವು ಹುಟ್ಟಿತು. ಈ ತತ್ವಕ್ಕೆ ಚತುರ್ಮುಖ ಬ್ರಹ್ಮನು ಅಭಿಮಾನಿದೇವತೆ. ಪ್ರಜ್ಞಾ, ಧೃತಿ, ಸ್ಮೃತಿ, ಸಂವಿತ್ ಇವುಗಳು ಮಹತ್ವದಿಂದ

ಆವಿಷ್ಕಾರ ಹೊಂದುವ ಗುಣಗಳು. ಮಹತ್ತ್ವದಿಂದ ಅಹಂಕಾರ ತತ್ತ್ವವು ಉದಯಿಸಿತು. ಇದು ವೈಚಾರಿಕ, ತೈಜಸ ಮತ್ತು ತಾಮಸ ಎಂದು ಮೂರು ವಿಧ. ಅಹಂಕಾರ, ಅನುಚಿತವಾದ ಅಭಿಮಾನ ನಾನು ಕರ್ತೃ, ಜ್ಞಾತೃ ಮೊದಲಾದ ಭಾವಗಳು ಅಹಂಕಾರ ತತ್ತ್ವದಿಂದ ಆವಿಷ್ಕಾರ ಹೊಂದುವ ಗುಣಗಳು. ಅಹಂಕಾರ ತತ್ತ್ವದಿಂದ ಪಂಚಭೂತಗಳು ಪಂಚ ತನ್ಮಾತ್ರಗಳು, ಎಲ್ಲ ಇಂದ್ರಿಯಗಳು ಹುಟ್ಟಿದವು. ವೈಚಾರಿಕ ಅಹಂಕಾರದಿಂದ ತೇಜೋಮಯವಾದ ಇಂದ್ರಿಯ ಗಳು ಮತ್ತು ಇಂದ್ರಿಯಾಭಿಮಾನಿದೇವತೆಗಳು ಹುಟ್ಟಿದರು. ಮನಸ್ ಕೂಡ ಹುಟ್ಟಿತು.

ಅಹಂಕಾರ ತತ್ತ್ವವು ವಿಕೃತಗೊಂಡಾಗ ಶಬ್ದತನ್ಮಾತ್ರ ಮತ್ತು ಆಕಾಶಗಳು ಹುಟ್ಟಿದವು. ಶಬ್ದ ಆಕಾಶದ ಗುಣ. ಆಕಾಶವು ವಿಕೃತಗೊಂಡಾಗ ಸ್ಪರ್ಶತನ್ಮಾತ್ರವು ಹುಟ್ಟಿತು. ಅದರಿಂದ ವಾಯುವು ಹುಟ್ಟಿತು. ಸ್ಪರ್ಶ ಅದರ ಗುಣ. ವಾಯುವು ವಿಕೃತಗೊಂಡಾಗ ರೂಪತನ್ಮಾತ್ರವು ಹುಟ್ಟಿತು. ಅದರಿಂದ ಅಗ್ನಿಯು ಹುಟ್ಟಿತು. ರೂಪ ಅದರ ಗುಣ. ಅಗ್ನಿಯು ವಿಕೃತಗೊಂಡಾಗ ರಸತನ್ಮಾತ್ರವು ಹುಟ್ಟಿತು. ಅದರಿಂದ ನಾನಾ ವಿಧವಾದ ನೀರು ಹುಟ್ಟಿತು. ರಸ ಅದರ ಗುಣ . ಅಪವಿಕೃತಗೊಂಡಾಗ ಗಂಧತನ್ಮಾತ್ರವ್ಯ ಹುಟ್ಟಿತು. ಅದರಿಂದ ಪೃಥಿವಿಯು ಹುಟ್ಟಿತು. ಗಂಧ ಅದರ ಗುಣ.

ಆಕಾಶದಲ್ಲಿ ಕೇವಲ ಶಬ್ದ ತನ್ಮಾತ್ರವು ಇದೆ. ಈ ಶಬ್ದತನ್ಮಾತ್ರವು ಸ್ಪರ್ಶ ತನ್ಮಾತ್ರದಲ್ಲಿ ಬೆರೆತಿದೆ. ಆದ್ದರಿಂದ ವಾಯುವಿನಲ್ಲಿ ಶಬ್ದ ಮತ್ತು ಸ್ಪರ್ಶ - ಈ ಎರಡು ಗುಣಗಳು ಇವೆ. ಶಬ್ದ-ಸ್ಪರ್ಶಗಳು ರೂಪತನ್ಮಾತ್ರದಲ್ಲಿ ಬೆರೆತಿರುವುದರಿಂದ ತೇಜಸ್‌ನಲ್ಲಿ ಶಬ್ದ, ಸ್ಪರ್ಶ, ರೂಪ -ಈ ಮೂರು ಗುಣಗಳಿವೆ. ರಸತನ್ಮಾತ್ರದಲ್ಲಿ ಈ ಮೂರು ಗುಣಗಳ ಸಮಾವೇಶ ವಿರುವುದರಿಂದ ಜಲದಲ್ಲಿ ಶಬ್ದ, ಸ್ಪರ್ಶ, ರೂಪ, ರಸ - ಎಂಬ ನಾಲ್ಕು ಗುಣಗಳಿವೆ. ಗಂಧ ತನ್ಮಾತ್ರದಲ್ಲಿ ಈ ನಾಲ್ಕು ಗುಣಗಳ ಸಮಾವೇಶವಿರುವುದರಿಂದ ಪೃಥಿವಿಯಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ - ಎಂಬ ಐದು ಗುಣಗಳಿವೆ.

ತನ್ಮಾತ್ರಾಸಹಿತವಾದ ಈ ಪಂಚಭೂತಗಳಿಂದ *(ಬ್ರಹ್ಮಾಂಡ ಸೃಷ್ಟಿಯ ನಂತರ)* ಶಾಂತ, ಘೋರ, ಮೂಢ *(ಸುಖ, ದುಃಖ, ಮೋಹ)* ಎಂಬ ಅವಸ್ಥೆಗಳು ಉಂಟಾಗುತ್ತವೆ.

ಈ ಏಳು ಮಹಾತತ್ತ್ವಗಳು ವ್ಯವಸ್ಥಿತವಾದ ಸಮಾವೇಶವನ್ನು ಹೊಂದದೆ ಪ್ರಜಾಸೃಷ್ಟಿ ಯಾಗಲು ಅನುಕೂಲವಾದ ಸನ್ನಿವೇಶವೇ ಉಂಟಾಗುವುದಿಲ್ಲ. ಆದ್ದರಿಂದ ಸೃಷ್ಟಿ ಮುಂದು ವರಿಯುವುದಕ್ಕೋಸ್ಕರ ಪರಮಪುರುಷನ ಸನ್ನಿಧಾನದಿಂದ ಮತ್ತು ಅವ್ಯಕ್ತದ ಅಭಿಮಾನಿನಿ- ಯಾದ ಲಕ್ಷ್ಮೀದೇವಿಯ ಅನುಗ್ರಹದಿಂದ ಮಹತ್ತ್ವ ಮೊದಲಾದ ಏಳು ತತ್ತ್ವಗಳಿಂದ ಅಂಡದ ಸೃಷ್ಟಿಯಾಯಿತು. ಈ ಅಂಡವು ನೀರಿನ ಮೇಲಿನ ಗುಳ್ಳೆಯಂತೆ ಬೆಳೆದು ಬಹಳ ದೊಡ್ಡದಾಯಿತು. ಆದ್ದರಿಂದ ಬ್ರಹ್ಮಾಂಡ ಎಂದು ಹೆಸರು. ಇದು ನೀರಿನ ಮೇಲೆ ತೇಲುತ್ತಿರುತ್ತದೆ. ಈ ಬ್ರಹ್ಮಾಂಡದಲ್ಲಿ ದೇವತೆಗಳು, ಅಸುರರು, ಮಾನವರು, ಚಂದ್ರ- ಸೂರ್ಯರು, ನಕ್ಷತ್ರಗಳು, ಗ್ರಹಗಳು ಇತ್ಯಾದಿಗಳು ಉತ್ಪನ್ನವಾದವು.

ಈ ಬ್ರಹ್ಮಾಂಡಕ್ಕೆ ಏಳು ಆವರಣಗಳಿವೆ. ಮೊದಲನೆಯದು ನೀರಿನ ಆವರಣ. ಈ ಆವರಣ ಬ್ರಹ್ಮಾಂಡಕ್ಕಿಂತ ಹತ್ತು ಪಟ್ಟು ದೊಡ್ಡದಾಗಿದೆ. ಇದರ ಸುತ್ತಲೂ ಅಗ್ನಿಯ ಆವರಣ. ಅದರ ಸುತ್ತಲೂ ವಾಯುವಿನ ಆವರಣ, ಅದರ ಸುತ್ತಲೂ ಆಕಾಶಾವರಣ, ಅದರ ಸುತ್ತಲೂ ಅಹಂಕಾರ ತತ್ತ್ವದ ಆವರಣ, ಅದರ ಸುತ್ತಲೂ ಮಹತ್ವದ ಆವರಣವಿದೆ. ಪೂರ್ವಾವರಣಕ್ಕಿಂತ ಉತ್ತರಾವರಣವು ಹತ್ತು ಪಟ್ಟು ದೊಡ್ಡದಾಗಿದೆ.

ಈ ಬ್ರಹ್ಮಾಂಡದಲ್ಲಿ ತತ್ತ್ವಾಭಿಮಾನಿ ದೇವತೆಗಳೂ, ಮಹಾಸಮರ್ಥರೂ, ಯೋಗ ನಿರತರೂ, ತತ್ತ್ವಚಿಂತಕರೂ, ಸರ್ವಜ್ಞರೂ, ರಜೋಗುಣವನ್ನು ಕಳೆದುಕೊಂಡವರೂ, ತೃಪ್ತರೂ ಆದ ಜನರಿದ್ದಾರೆ.

ಈ ಇಡೀ ಬ್ರಹ್ಮಾಂಡವು ಪರಮಾತ್ಮನ ಎರಡನೆಯ ಪ್ರತಿಮೆಯಾಗಿದೆ. ಚತುರ್ಮುಖ ಬ್ರಹ್ಮನಲ್ಲಿ ಶ್ರೀಹರಿಯು ಬ್ರಹ್ಮರೂಪದಿಂದ ಇರುವುದರಿಂದ ಅವನು ಶ್ರೀಹರಿಯ ಮೂರನೆಯ ಪ್ರತಿಮೆ.

ಶ್ರೀಹರಿಯು ಚತುರ್ಮುಖ ಬ್ರಹ್ಮನಲ್ಲಿ ಅವನ ರೂಪದಿಂದ ಇದ್ದು ಸೃಷ್ಟಿಯನ್ನು ಮಾಡುತ್ತಾನೆ. ಸತ್ತ್ವಗುಣಕ್ಕೆ ನಿಯಾಮಕನಾಗಿ ವಿಷ್ಣುರೂಪದಿಂದ ಸೃಷ್ಟಿಸಲ್ಪಟ್ಟ ಪ್ರಪಂಚದ ಪಾಲನೆಯನ್ನು ಮಾಡುತ್ತಾನೆ. ಕೊನೆಯಲ್ಲಿ ತಮೋಗುಣವನ್ನು ಪ್ರಚೋದಿಸಿ ರುದ್ರ ರೂಪದಿಂದ ರುದ್ರನಲ್ಲಿದ್ದು ಸಂಹಾರವನ್ನು ಮಾಡುತ್ತಾನೆ.

ಸತ್ವ-ರಜಸ್-ತಮಸ್ ಎಂಬ ಮೂರು ಗುಣಗಳು ಶ್ರೀಹರಿಗೆ ಇಲ್ಲ. ಆದ್ದರಿಂದಲೇ ಅವನಿಗೆ ನಿರ್ಗುಣ ಎಂದು ಹೆಸರು. ಇವನಿಗೆ ದೋಷ ಲೇಶವೂ ಇಲ್ಲ. ಆದ್ದರಿಂದಲೇ ಇವನಿಗೆ ನಿರಂಜನ ಎಂದು ಹೆಸರು. ಇಂತಹ ಯೋಗೇಶ್ವರನಾದ ಶ್ರೀಹರಿಯು ನಾನಾ ಆಕೃತಿ, ರೂಪ, ನಾಮಗಳುಳ್ಳ ಶರೀರವನ್ನು ಅನಾಯಾಸವಾಗಿ ತೆಗೆದುಕೊಳ್ಳುತ್ತಾನೆ. ಮತ್ತು ಹಾಗೆಯೇ ಬಿಟ್ಟು ಬಿಡುತ್ತಾನೆ. ಜಗತ್ತನ್ನು ಅನಾಯಾಸವಾಗಿ ಸೃಷ್ಟಿಸಿ ಅಷ್ಟೇ ಅನಾಯಾಸವಾಗಿ ಸಂಹರಿಸುತ್ತಾನೆ.

ಶ್ರೀಹರಿಯು ಜಗತ್ತಿನ ಆದಿತತ್ತ್ವವಾದುದರಿಂದ ಇವನಿಗೆ ಆದಿದೇವ ಎಂದು ಹೆಸರು. ಅಜಾತ*(ಹುಟ್ಟದವನು)*ನಾದ್ದರಿಂದ ಅಜ ಎಂದು, ಪ್ರಜೆಗಳ ಪಾಲಕನಾದ್ದರಿಂದ ಪ್ರಜಾಪತಿ ಎಂದು, ದೇವತೆಗಳಲ್ಲಿ ಸರ್ವೋತ್ತಮನಾದ್ದರಿಂದ ಮಹಾದೇವ ಎಂದು, ಬೃಹತ್ *(ಪೂರ್ಣ)* ಆದ್ದರಿಂದ ಬ್ರಹ್ಮ ಎಂದು, ಪರ*(ಸರ್ವೋತ್ಕೃಷ್ಟ)*ನಾದ್ದರಿಂದ ಪರಮೇಶ್ವರ ಎಂದು, ಸಕಲ ವಸ್ತುಗಳಿಗೆ ನಿಯಾಮಕನಾಗಿದ್ದು, ಸ್ವತಂತ್ರನಾದ್ದರಿಂದ ಈಶ್ವರ ಎಂದು, ಸರ್ವತ್ರ ವ್ಯಾಪ್ತನಾದ್ದರಿಂದ ಋಷಿ ಎಂದು, ಸರ್ವವನ್ನೂ ಹರಣ ಮಾಡುವುದರಿಂದ ಹರಿ ಎಂದು, ಉತ್ಪತ್ತಿಯಿಲ್ಲದೆ ಯಾವಾಗಲೂ ಇರುವುದರಿಂದ ಸ್ವಯಂಭೂ ಎಂದು, ನಿತ್ಯರಾದ ಜೀವಾತ್ಮರಿಗೆ, ನಿತ್ಯವಾದ ವೇದ ಮೊದಲಾದವುಗಳಿಗೆ *(ನಾಶವಾಗದ ವಸ್ತುಗಳಿಗೆ ನರ ಎಂದು ಹೆಸರು).*

ಆಶ್ರಯದಾತನಾದ್ದರಿಂದ ನಾರಾಯಣ ಎಂದು, ಸಂಸಾರದ ಹರಣವನ್ನು ಮಾಡುವದರಿಂದ ಹರ ಎಂದು, ಸರ್ವತ್ರ ವ್ಯಾಪಿಸಿರುವುದರಿಂದ ವಿಷ್ಣು ಎಂದು, ರಕ್ಷಣವನ್ನು (ಅವನ) ಮಾಡುವುದರಿಂದ ಓಂ ಎಂದು ಎಲ್ಲವನ್ನು ತಿಳಿದಿರುವುದರಿಂದ ಸರ್ವಜ್ಞ ಎಂದೂ, ಭಗವಾನ್ ಎಂದೂ, ಸರ್ವಾಂತರ್ಯಾಮಿಯಾದುದರಿಂದ ಸರ್ವ ಎಂದೂ, ನಿರ್ಮಲನಾದುದರಿಂದ ಶಿವ ಎಂದೂ, ಸರ್ವತ್ರ ವ್ಯಾಪ್ತನಾದ್ದರಿಂದ ವಿಭು ಎಂದೂ, ಎಲ್ಲರ ಎಲ್ಲ ದುಃಖಗಳಿಂದಲೂ ಬಿಡುಗಡೆಯನ್ನು ಕೊಡುವದರಿಂದ ತಾರಕ ಎಂದೂ ಇವನಿಗೆ ಹೆಸರು. ಬಹಳ ಮಾತೇಕೆ? ವಿಶ್ವದ ಪ್ರತಿಯೊಂದು ವಸ್ತುವೂ, ಸಂಗತಿಯೂ ಪರಬ್ರಹ್ಮನ ಪ್ರಭಾವಕ್ಕೊಳಗಾಗಿದೆ. ಅವನ ಅನೇಕ ರೂಪಗಳು ಅವನ ವಿಹಾರ, ಅಷ್ಟೆ.

ಇಲ್ಲಿಗೆ ಪ್ರಕೃತಿಯಿಂದ ಆಗುವ ಸೃಷ್ಟಿಯ ವಿವರಣೆ ಮುಗಿಯಿತು.

* * *

## ಅಧ್ಯಾಯ-೫

### ಕಾಲ ವಿವರಣೆ

ಚತುರ್ಮುಖ ಬ್ರಹ್ಮನ ನೂರು ವರ್ಷ ಆಯುಷ್ಯಕ್ಕೆ ಪರ ಎಂದು ಹೆಸರು. ಇದರ ಅರ್ಧವು ಪರಾರ್ಧ ಎಂದು ಪ್ರಸಿದ್ಧ.

ಹದಿನೈದು ನಿಮೇಷ = ಒಂದು ಕಾಷ್ಠಾ

(ಕಣ್ಣಿನ ಎವೆಯನ್ನು ಒಮ್ಮೆ ಮಿಳುಕಿಸಿ ತೆರೆಯುವ ಕಾಲದ ಅವಧಿಗೆ ಒಂದು ನಿಮೇಷ ಎಂದು ಹೆಸರು)

ಮೂವತ್ತು ಕಾಷ್ಠಾ= ಒಂದು ಕಲಾ, ಮೂವತ್ತು ಕಲಾ= ಒಂದು ಮುಹೂರ್ತ, ಮೂವತ್ತು ಮುಹೂರ್ತ= ಮಾನವರ ಒಂದು ದಿವಸ (ಹಗಲು+ರಾತ್ರಿ) ಮೂವತ್ತು ದಿನಗಳು= ಒಂದು ಮಾನವ ಮಾಸ. ಆರು ಮಾಸಗಳು= ಒಂದು ಅಯನ. ಎರಡು ಅಯನಗಳು= ಒಂದು ವರ್ಷ. ಮಾನವರ ದಕ್ಷಿಣಾಯನ ದೇವತೆಗಳ ರಾತ್ರಿ. ಉತ್ತರಾಯಣ ಅವರ ಹಗಲು. ಮಾನವರ ಒಂದು ವರ್ಷ ದೇವತೆಗಳ ಒಂದು ದಿನ. ದೇವಮಾನದ ಸಾವಿರ ವರ್ಷಗಳಿಂದ ಕೃತ ಮೊದಲಾದ ಯುಗಗಳ ಪರಿಗಣನೆಯನ್ನು ಮಾಡಲಾಗಿದೆ.

ಕೃತಯುಗದ ಅವಧಿ ದೇವಮಾನದ ನಾಲ್ಕುಸಾವಿರ ವರ್ಷಗಳು. ತ್ರೇತಾಯುಗದ ಅವಧಿ ಮೂರು ಸಾವಿರ ವರ್ಷಗಳು. ದ್ವಾಪರಯುಗದ ಅವಧಿ ಎರಡು ಸಾವಿರ ವರ್ಷಗಳು.

ಕಲಿಯುಗದ ಅವಧಿ ಒಂದು ಸಾವಿರ ವರ್ಷಗಳು. ಒಂದು ಯುಗ ಮುಗಿದು ಮುಂದಿನ ಯುಗ ಆರಂಭವಾಗುವವರೆಗಿನ ಅವಧಿಗೆ ಸಂಧಿಕಾಲ ಎಂದು ಹೆಸರು. ಪ್ರತಿಯುಗಕ್ಕೂ ಎರಡು ಸಂಧಿಕಾಲಗಳು. ಆಯಾಯ ಯುಗದ ಅವಧಿಯ ಶತಮಾನಾವಧಿ ಅದರ ಸಂಧಿಕಾಲ. ಕೃತಯುಗದ ಆರಂಭದ ಸಂಧ್ಯಾಕಾಲ ನಾಲ್ಕುನೂರು ವರ್ಷ. ಕೊನೆಯ ಸಂಧ್ಯಾಕಾಲವೂ ನಾಲ್ಕುನೂರು ವರ್ಷ. ತ್ರೇತಾಯುಗದ ಆದಿ-ಅಂತ್ಯ ಸಂಧ್ಯಾಕಾಲ ಮುನ್ನೂರು+ಮುನ್ನೂರು ವರ್ಷ. ದ್ವಾಪರ ಯುಗಕ್ಕೆ ಇನ್ನೂರು+ಇನ್ನೂರು ವರ್ಷ, ಕಲಿಯುಗಕ್ಕೆ ನೂರು+ನೂರು ವರ್ಷ. ಹೀಗೆ ಒಂದು ಯುಗಚಕ್ರ ಎಂದರೆ ದೇವಮಾನದ ಹನ್ನೆರಡುಸಾವಿರ ವರ್ಷಗಳು.

ಎಪ್ಪತ್ತೊಂದು ಚತುರ್ಯುಗಗಳ ಅವಧಿಗೆ ಒಂದು ಮನ್ವಂತರ ಎಂದು ಹೆಸರು. ಚತುರ್ಮುಖಬ್ರಹ್ಮನ ಒಂದು ದಿನದಲ್ಲಿ ಹದಿನಾಲ್ಕು ಮನ್ವಂತರಗಳಾಗುತ್ತವೆ. ಸ್ವಾಯಂಭುವ ಮೊದಲಾದವರು ಮತ್ತು ಸಾವರ್ಣಿಕ ಮೊದಲಾದ ಹದಿನಾಲ್ಕು ಮಂದಿ ಮನುಗಳು. (ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ, ರೈವತ, ಚಾಕ್ಷುಷ, ವೈವಸ್ವತ, ಸೂರ್ಯಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ). ಒಂದು ಸಾವಿರ ಯುಗಚಕ್ರದ ಅವಧಿಯನ್ನು ಈ ಹದಿನಾಲ್ಕು ಮನುಗಳು ಆಳುತ್ತಾರೆ.

**ಚತುರ್ಮುಖಬ್ರಹ್ಮನ ನೂರು ವರ್ಷ :**

ಒಂದು ಸಾವಿರ ಯುಗಚಕ್ರದ ಅವಧಿಗೆ ಒಂದು ಕಲ್ಪ ಎಂದು ಹೆಸರು. ಇಂತಹ ಮುನ್ನೂರಅರವತ್ತು ಕಲ್ಪಗಳು ಬ್ರಹ್ಮನ ಒಂದು ವರ್ಷ. ಇಂತಹ ನೂರುವರ್ಷಕ್ಕೆ ಪರಾರ್ಧ ಎಂದು ಹೆಸರು. *(ಪರ ಎಂದೇ ಈ ಅವಧಿ ಹೆಚ್ಚು ಪ್ರಸಿದ್ಧವಾಗಿದೆ.)*

**ಪ್ರಾಕೃತ ಪ್ರಲಯ :**

ಇಂತಹ ನೂರುವರ್ಷ ಮುಗಿದನಂತರ ಪ್ರಪಂಚದ ಸಕಲ ವಸ್ತುಗಳು ಅವುಗಳ ಕಾರಣಗಳೂ ಪ್ರಕೃತಿಯಲ್ಲಿ ಲಯವನ್ನು ಹೊಂದುತ್ತವೆ. ಆದ್ದರಿಂದ ಈ ಲಯಕ್ಕೆ ಪ್ರಾಕೃತ-ಪ್ರಲಯ *(ಪ್ರತಿಸಂಚರ)* ಎಂದು ಹೆಸರು. ಪ್ರಳಯಕಾಲದಲ್ಲಿ ಪರಬ್ರಹ್ಮನ ಬ್ರಹ್ಮ, ವಿಷ್ಣು ಶಿವ ರೂಪಗಳೂ ಕೂಡ ಮೂಲರೂಪದಲ್ಲಿ ಸೇರಿಹೋಗುತ್ತವೆ. ಸೃಷ್ಟಿಕಾಲದಲ್ಲಿ ಪುನಃ ಅವುಗಳ ಅಭಿವ್ಯಕ್ತಿಯಾಗುತ್ತದೆ. ಮೇಲೆ ವಿವರಿಸಲ್ಪಟ್ಟ ಕಾಲವು ಅನಾದಿ ಅನಂತವಾಗಿದೆ. ಕಾಲನಿಯಾಮಕನಾದ ಭಗವಂತ ಸರ್ವವ್ಯಾಪಿ, ಸ್ವತಂತ್ರ, ಸರ್ವನಿಯಾಮಕ. ಈಗಿನ ಚತುರ್ಮುಖ ಬ್ರಹ್ಮನ ಪ್ರಥಮ ಪರಾರ್ಧವು ಮುಗಿದು ದ್ವಿತೀಯಪರಾರ್ಧವು ಈಗ ನಡೆಯುತ್ತಿದೆ. ಈಗ ದ್ವಿತೀಯ ಪರಾರ್ಧದ ಮೊದಲನೆಯ ಕಲ್ಪ ನಡೆದಿದೆ. ಕಳೆದುಹೋದ ಕಲ್ಪಪಾದ್ಮ. ನಡೆಯುತ್ತಿರುವ ಕಲ್ಪವಾರಾಹ.

*

## ಅಧ್ಯಾಯ-೬

**ಕೂರ್ಮ ಉವಾಚ :**

ಪ್ರಲಯಕಾಲದಲ್ಲಿ ಒಂದು ಸಮುದ್ರ ಮಾತ್ರ ಇತ್ತು. ಅದರಲ್ಲಿ ಯಾವ ವಿಭಾಗವೂ ಇರಲಿಲ್ಲ. ಎಲ್ಲ ಕಡೆ ಕತ್ತಲು ಆವರಿಸಿತ್ತು. ಸಹಸ್ರಶೀರ್ಷನೂ, ಸಹಸ್ರಪಾದನೂ, ಸಹಸ್ರಾಕ್ಷನೂ, ರುಕ್ಮವರ್ಣನೂ, ಅತೀಂದ್ರಿಯನೂ ಆದ ಪರಬ್ರಹ್ಮನು, ತಾನು ನಿರ್ಮಿಸಿದ ಆ ಸಮುದ್ರಜಲದಲ್ಲಿ ಮಲಗಿದ್ದನು. ಆದ್ದರಿಂದಲೇ ಅವನಿಗೆ ನಾರಾಯಣ ಎಂದು ಹೆಸರು.

"ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ॥"

ಸೃಷ್ಟಿಯ ಆರಂಭದಲ್ಲಿ ಆ ಸಮುದ್ರದಲ್ಲಿ ಮಗ್ನವಾಗಿದ್ದ ಭೂಮಿಯನ್ನು ಮೇಲೆ ತರಲು ಬಯಸಿ ಪರಬ್ರಹ್ಮನು ಜಲಕ್ರೀಡೆಗಳಲ್ಲಿ ಶೋಭಿಸುವ ವಾರಾಹರೂಪವನ್ನು ತೆಗೆದು ಕೊಂಡನು. ಅದನ್ನು ಎದುರಿಸುವ ಆಕ್ರಮಿಸುವ ಆಲೋಚನೆಯನ್ನು ಕೂಡ ಯಾರೂ ಮಾಡಲಾರರು. ಅದು ವೇದಪ್ರತಿಪಾದ್ಯರೂಪ. ಸ್ವತಂತ್ರನಾದ ಅವನು ಪೃಥಿವಿಯನ್ನು ಮೇಲೆ ತರುವುದಕ್ಕಾಗಿ ರಸಾತಲವನ್ನು ಪ್ರವೇಶಿಸಿ ಕೋರೆಹಲ್ಲಿನಿಂದ ಅದನ್ನು ಮೇಲೆತ್ತಿದನು. ಆಗ ಜನಲೋಕದಲ್ಲಿದ್ದ ಸಿದ್ಧರು, ಬ್ರಹ್ಮರ್ಷಿಗಳು, ಕೋರೆಹಲ್ಲಿನ ಮೇಲೆ ಇಡಲ್ಪಟ್ಟಿದ್ದ ಭೂಮಿಯನ್ನು ನೋಡಿ ವರಾಹರೂಪಿ ಶ್ರೀಹರಿಯನ್ನು ಸ್ತುತಿಸಿದರು.

**ಋಷಯ ಊಚು :**

ದೇವದೇವನೂ, ಪೂರ್ಣನೂ, ಪುರಾಣ ಪುರುಷನೂ, ಶಾಶ್ವತನೂ, ಜಯಸ್ವರೂಪನೂ ಆದ ನಿನಗೆ ನಮಸ್ಕಾರ. ಅಪರಾಧೀನನಾಗಿರುವ ಸರ್ವಜ್ಞನಾದ, ಹಿರಣ್ಯಗರ್ಭನಲ್ಲಿದ್ದು ಸೃಷ್ಟಿ ಮಾಡುತ್ತ ಹಿರಣ್ಯಗರ್ಭನಾಮಕನಾದ, ಪರಮಾತ್ಮನಾದ ನಿನಗೆ ನಮಸ್ಕಾರ. ಸರ್ವತ್ರ ವ್ಯಾಪ್ತನಾದ, ಜಗಜ್ಜನ್ಮಾದಿಕಾರಣನಾದ ವಾಸುದೇವನೂ, ನಾರಾಯಣನೂ, ದೇವ-ದೇವನೂ ಹಿತಕಾರಿಯೂ ಆದ ನಿನಗೆ ನಮಸ್ಕಾರ. ಚತುರ್ಮುಖಬ್ರಹ್ಮನಲ್ಲಿದ್ದು ಚತುರ್ಮುಖನಾದ, ಶಾರ್ಙ್ಗಧನುಸ್ಸು, ಚಕ್ರ ಖಡ್ಗಗಳನ್ನು ಧರಿಸಿರುವ ಸರ್ವರ ಒಳಗಿದ್ದು ನಿಯಾಮಕನಾದ, ನಿರ್ವಿಕಾರನಾದ ನಿನಗೆ ನಮಸ್ಕಾರ. ವೇದಗಳ ಒಳ ಅರ್ಥವೇ ಆಗಿರುವ, ವೇದಗಳಿಂದ ಮಾತ್ರವೇ ಲೋಕಕ್ಕೆ ಪರಿಚಿತನಾಗುವ, ಜ್ಞಾನಸ್ವರೂಪನೂ, ಶುದ್ಧನೂ ಆದ ನಿನಗೆ ನಮಸ್ಕಾರ. ಆನಂದ ರೂಪನೂ, ಜಗತ್ತನ್ನು ನೇರವಾಗಿ ನೋಡುವವನೂ, ಅನಂತನೂ, ಅಪ್ರಮೇಯನೋ ಆದ, ಕಾರ್ಯದಲ್ಲಿದ್ದು ಕಾರ್ಯನೂ, ಕಾರಣದಲ್ಲಿದ್ದು ಕಾರಣನೂ ಆಗಿರುವ ನಿನಗೆ ನಮಸ್ಕಾರ. ಅನಿರುದ್ಧಾದಿ ಪಂಚರೂಪಧಾರಿಯಾದ, ಪಂಚಭೂತ ನಿಯಾಮಕನಾದ, ಮೂಲ ಪ್ರಕೃತಿ ನಿಯಾಮಕನಾದ, ಸ್ವೇಚ್ಛಾರೂಪವುಳ್ಳ ನಿನಗೆ ನಮಸ್ಕಾರ. ವರಾಹರೂಪನಾದ, ಮತ್ಸ್ಯರೂಪನಾಗಿದ್ದ, ಯೋಗಮಾರ್ಗದಿಂದಮಾತ್ರ

ಗಮ್ಯನಾದ ಸಂಕರ್ಷಣನಾದ ನಿನಗೆ ನಮಸ್ಕಾರ. ಚತುರ್ಮುಖ ಬ್ರಹ್ಮನಲ್ಲಿದ್ದು ಬ್ರಹ್ಮನೂ, ಶಿವನಲ್ಲಿದ್ದು ಶಿವನೂ, ಸ್ವಯಂ ವಿಷ್ಣುವೂ ಆಗಿರುವ, ಶ್ವೇತದ್ವೀಪ ಅನಂತಾಸನ, ವೈಕುಂಠ ಎಂಬ ಮೂರು ಧಾಮಗಳುಳ್ಳ, ದಿವ್ಯ ತೇಜೋಧಾರಿಯಾದ, ಸಿದ್ಧನೂ, ಪೂಜ್ಯನೂ, ಸತ್ವ-ರಜಸ್-ತಮೋಗುಣಗಳ ವಿಭಾಗ ಮಾಡಿದವನೂ ಆದ ನಿನಗೆ ನಮಸ್ಕಾರ. ಆದಿತ್ಯನಲ್ಲಿ ಆದಿತ್ಯ ರೂಪನಾದ, ಚತುರ್ಮುಖ ಬ್ರಹ್ಮನಲ್ಲಿ ಬ್ರಹ್ಮರೂಪನಾದ ಅಮೂರ್ತನೂ, ಮೂರ್ತನೂ, ಮಾಧವನೂ ಆದ ನಿನಗೆ ನಮಸ್ಕಾರಗಳು. ನೀನೇ ಈ ಇಡೀ ಜಗತ್ತಿನ ಸೃಷ್ಟಿಕರ್ತೃ. ನೀನೇ ಇದರ ರಕ್ಷಕ. ನೀನೇ ಎಲ್ಲರ ಅಂತಿಮ ಗತಿ. ನೀನು ಈ ಜಗತ್ತೆಲ್ಲವನ್ನೂ ದಯವಿಟ್ಟು ಪಾಲಿಸು. ಹೀಗೆ ಸನಕಾದಿ ಮಹರ್ಷಿಗಳಿಂದ ಸ್ತುತಿತನಾದ ವರಾಹರೂಪಧಾರಿಯಾದ ಹರಿಯು ಅವರುಗಳನ್ನು ಅನುಗ್ರಹಿಸಿದನು. ಅನಂತರ ಪೃಥಿವಿಯನ್ನು ಅದರ ಸ್ಥಾನಕ್ಕೆ ತಂದು ನಿಲ್ಲಿಸಿ ತನ್ನ ವರಾಹ ರೂಪವನ್ನು ಬಿಟ್ಟನು.

ಆ ಮಹಾಜಲರಾಶಿಯ ಮೇಲೆ ದೋಣಿಯಂತೆ ನಿಂತ ಭೂಮಿಯು, ವಿಶಾಲವಾಗಿರುವುದರಿಂದ, ಮುಳುಗಲಿಲ್ಲ. ಪೃಥಿವಿಯನ್ನು ಸಮಗೊಳಿಸಿ, ಹಿಂದೆ ಪ್ರಲಯಕಾಲದಲ್ಲಿ ಸುಟ್ಟು ಹೋಗಿದ್ದ ಗರಿಗಳನ್ನು ಸಂಗ್ರಹಿಸಿ ಭೂಮಿಯ ಮೇಲೆ ಇಟ್ಟನು. ಸೃಷ್ಟಿಯನ್ನು ಮುಂದುವರಿಸುವ ಸಂಕಲ್ಪವನ್ನು ಮಾಡಿದನು.

* * *

## ಸೃಷ್ಟಿ ವರ್ಣನೆ

**ಅಧ್ಯಾಯ-೭**

**ಕೂರ್ಮ ಉವಾಚ :**

ಹಿಂದಿನ ಕಲ್ಪಗಳಲ್ಲಿ ಮಾಡಿದಂತೆಯೆ ಸೃಷ್ಟಿ ಮಾಡಬೇಕೆಂದು ಆಲೋಚಿಸಿದ ಬ್ರಹ್ಮನಿಂದ ಮೊದಲು ಐದು ವಿಧವಾದ ಅವಿದ್ಯೆಯ ಸೃಷ್ಟಿಯು ಆಯಿತು. ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ ಮತ್ತು ಅಂಧತಾಮಿಸ್ರ - ಇವೇ ಐದು ವಿಧ. ಅವಿದ್ಯೆ ಅನಂತರ ಚತುರ್ಮುಖ ಬ್ರಹ್ಮನ ಆಲೋಚನೆಯಂತೆ, ಜ್ಞಾನಶಕ್ತಿ ಇಲ್ಲದ, ಒಳಗೂ ಹೊರಗೂ ಕೇವಲ ಕತ್ತಲೆಯೇ ತುಂಬಿರುವ ಐದು ವಿಧವಾದ ಸ್ಥಾವರಗಳ (ಗಿಡ, ಬಳ್ಳಿ, ಕಂಟಿ, ಪೊದೆ, ಹುಲ್ಲು) ಸೃಷ್ಟಿಯಾಯಿತು. ಇದು ಪ್ರಥಮ ಸೃಷ್ಟಿಯಾದುದರಿಂದ ಮುಖ್ಯ ಸೃಷ್ಟಿ ಎಂದು ಪ್ರಸಿದ್ಧವಾಗಿದೆ.

ಈ ಅಚೇತನ ಸೃಷ್ಟಿಯಿಂದ ಏನನ್ನೂ ಸಾಧಿಸಲಾಗುವುದಿಲ್ಲ ಎಂದು ಆಲೋಚಿಸಿದ ಚತುರ್ಮುಖ ಬ್ರಹ್ಮನು ತಿರ್ಯಕ್ ಪ್ರಾಣಿಗಳನ್ನು *(ಊರ್ಧ್ವಗತಿಯೂ ಇಲ್ಲದ,*

ಅಧೋಗತಿಯೂ ಇಲ್ಲದ) ಪ್ರಾಣಿಗಳನ್ನು ಸೃಷ್ಟಿಸಿದನು. ಆಹಾರ, ನಿದ್ರಾ, ಭಯಗಳಿಂದಾಗಿಯೇ ಅವುಗಳಿಗೆ ಪ್ರವೃತ್ತಿಯು ಇರುತ್ತದೆ.

ಈ ಸೃಷ್ಟಿಯಿಂದಲೂ ತೃಪ್ತನಾಗದ ಬ್ರಹ್ಮನು ಊರ್ಧ್ವಮುಖಗತಿಯುಳ್ಳವರನ್ನು ಸೃಷ್ಟಿಸಿದನು. ಈ ಸೃಷ್ಟಿಯಲ್ಲಿ ಬಂದವರು ದೇವತೆಗಳು. ಸಾತ್ವಿಕರು. ಇವರು ವಿಪುಲವಾದ ಸುಖ, ಪ್ರೀತಿಗಳನ್ನು ಹೊಂದಿದವರು. ಅಜ್ಞಾನದ ಆವರಣ ಇವರಿಗೆ ಇಲ್ಲ.

ಸಾಧಕ ವರ್ಗದ ಸೃಷ್ಟಿಯನ್ನು ಮಾಡಲು ಆಲೋಚಿಸಿದ ಬ್ರಹ್ಮನು ಬೇರೊಂದು ವಿಧವಾದ ಸೃಷ್ಟಿಯನ್ನು ಮಾಡಿದನು. ಇವರು ಮನುಷ್ಯರು. ಇವರಲ್ಲಿ ತಮೋಗುಣ ಉದ್ರಿಕ್ತವಾಗಿರುವುದರಿಂದ ದುಃಖವಿದೆ. ರಜೋಗುಣ ಅಧಿಕವಾಗಿರುವುದರಿಂದ ಕಾರ್ಯೋನ್ಮುಖತೆ ಇದೆ. ಭೂತಾದಿ ಎಂಬ ಇನ್ನೊಂದು ಸೃಷ್ಟಿಯನ್ನು ಬ್ರಹ್ಮನು ಮಾಡಿದನು.

### ಸೃಷ್ಟಿಯ ಇನ್ನೊಂದು ವಿಧವಾದ ವಿವರಣೆ :

ಸೃಷ್ಟಿಯು ಒಂಬತ್ತು ವಿಧವಾಗಿದೆ. ಮಹತ್ವದ ಸೃಷ್ಟಿ ಮೊದಲನೆಯದು. ಇದು ಬ್ರಹ್ಮನ ಶರೀರ. ಪಂಚತನ್ಮಾತ್ರಗಳ ಸೃಷ್ಟಿಯು ಎರಡನೆಯದು. ಇದು ಭೂತಸೃಷ್ಟಿ. ಇಂದ್ರಿಯ ಮತ್ತು ಇಂದ್ರಿಯಾಭಿಮಾನಿದೇವತೆಗಳ ಸೃಷ್ಟಿ ಮೂರನೆಯದು. ಇದಕ್ಕೆ ವೈಕಾರಿಕ ಸೃಷ್ಟಿ ಎಂದು ಹೆಸರು. ಸ್ಥಾವರಗಳ ಸೃಷ್ಟಿ ನಾಲ್ಕನೆಯದು. ಇದಕ್ಕೆ ಮುಖ್ಯಸೃಷ್ಟಿ ಎಂದು ಹೆಸರು *(ಸ್ಥಾವರಗಳಿಂದ ಪರೋಪಕಾರವಾಗುತ್ತದೆ. ಈ ಪರೋಪಕಾರಗುಣವನ್ನು ಪರಿಗಣಿಸಿ ಈ ಸೃಷ್ಟಿಗೆ ಮುಖ್ಯ ಎಂದು ಹೆಸರು. ನೋಡಿ ಶ್ರೀ ಮಧ್ವಾಚಾರ್ಯರ ಭಾಗವತತಾತ್ಪರ್ಯ ನಿರ್ಣಯ)* ತಿರ್ಯಕ್‌ಪ್ರಾಣಿಗಳ ಸೃಷ್ಟಿ ಐದನೆಯ ಸೃಷ್ಟಿ. ವಿವೇಕ, ಊರ್ಧ್ವದೃಷ್ಟಿಗಳಿಲ್ಲದ ದೇಹಧಾರಿಗಳೇ ತಿರ್ಯಕ್‌ಪ್ರಾಣಿಗಳು. ಊರ್ಧ್ವಮುಖರಾದ ದೇವತೆಗಳ ಸೃಷ್ಟಿ ಆರನೆಯದು. ಅಧೋಮುಖರಾದ ಮಾನವರ - ಅಸುರರ ಸೃಷ್ಟಿ ಏಳನೆಯದು. ಮಾನವರಲ್ಲಿ ರಾಜಸಪ್ರವೃತ್ತಿ. ಉನ್ನತಿಗಾಗಿ ಪ್ರಯತ್ನಿಸದಿದ್ದರೆ ಅಧೋಲೋಕಗಳಿಗೆ ಹೋಗುತ್ತಾರೆ. ಅಸುರರಲ್ಲಿ ಕೇವಲ ತಾಮಸಪ್ರವೃತ್ತಿ, ಇವರು ಉನ್ನತಿಗಾಗಿ ಪ್ರಯತ್ನಿಸುವುದೇ ಇಲ್ಲ. ಎಂಟನೆಯದು ಭೌತಿಕ ಸೃಷ್ಟಿ. ಇದರಲ್ಲಿ ಭೂತ, ಪ್ರೇತ ಮೊದಲಾದವುಗಳ ಸೃಷ್ಟಿಯಾಯಿತು. ಒಂಬತ್ತನೆಯದು ಕೌಮಾರ ಸೃಷ್ಟಿ. *(ಬ್ರಹ್ಮಾಂಡ ಸೃಷ್ಟಿಯಾದ ನಂತರ ಬ್ರಹ್ಮದೇವರ ದೇಹದಿಂದ ಭೂಮಿಯಲ್ಲಿ ದೇವತೆಗಳ ಜನ್ಮಕ್ಕೆ ಕೌಮಾರ ಸೃಷ್ಟಿ ಎಂದು ಹೆಸರು. ನೋಡಿ ಮಧ್ವಾಚಾರ್ಯರ ಭಾಗವತತಾತ್ಪರ್ಯ ನಿರ್ಣಯ)*

### ಮುಂದುವರಿದ ಸೃಷ್ಟಿ :

ಪ್ರಜಾಪತಿಯಾದ ಬ್ರಹ್ಮನು ತನ್ನ ಮನಸ್ಸಿನಿಂದ ಸನಕ, ಸನಾತನ, ಸನಂದನ, ಕ್ರತು ಮತ್ತು ಸನತ್ಕುಮಾರ ಎಂಬ ಐದು ಮಂದಿಯನ್ನು ಸೃಷ್ಟಿಸಿದನು. ಈ ಐವರೂ ಯೋಗಿಗಳು. ಭಕ್ತರು ಪರಮವಿರಕ್ತರು. ಪರಬ್ರಹ್ಮನಲ್ಲಿ ಆಸಕ್ತರು. ಆದ್ದರಿಂದ ಅವರು ಸೃಷ್ಟಿಯನ್ನು

ಮುಂದುವರಿಸಲು ಆಸಕ್ತಿಯನ್ನು ತೋರಿಸಲಿಲ್ಲ. ಸನಕಾದಿಗಳು ಹೀಗೆ ನಿರಾಸಕ್ತರಾದಾಗ, ಚತುರ್ಮುಖಬ್ರಹ್ಮನು, ಶ್ರೀಹರಿಯ ಮಾಯೆಯ ಪ್ರಭಾವದಿಂದ ಮುಂದೇನು ಮಾಡ ಬೇಕೆಂದು ತಿಳಿಯದಂತೆ ಮೋಹಕ್ಕೊಳಗಾದನು. ಅನಂತರ ಶ್ರೀಹರಿಯಿಂದಲೆ ಪ್ರಚೋದಿತ ನಾಗಿ ದೀರ್ಘಕಾಲ ಆಲೋಚಿಸಿದನು. ಆದರೂ ಮುಂದೇನು ಮಾಡಬೇಕೆಂದು ತೋಚಲಿಲ್ಲ. ಅವನಿಗೆ ಕೋಪ ಬಂದಿತು. ಅವನ ಕಣ್ಣುಗಳಿಂದ ನೀರಿನ ಹನಿಗಳು ಬಿದ್ದವು. ಹುಬ್ಬುಗಂಟಿಕ್ಕಿದ ಅವನ ಹಣೆಯಿಂದ ರುದ್ರದೇವರ ಉದ್ಭವವಾಯಿತು. ಅವನು ತೇಜೋರಾಶಿಯಾಗಿದ್ದನು. ಜ್ಞಾನಿಗಳು ತಮ್ಮ ಅಂತರ್ಯಾಮಿಯಾದ ಪರಬ್ರಹ್ಮನನ್ನೇ ಅವನಲ್ಲೂ ಕಾಣುತ್ತಾರೆ. ಚತುರ್ಮುಖಬ್ರಹ್ಮನು ನಾನಾ ವಿಧ ಪ್ರಜೆಗಳನ್ನು ಸೃಷ್ಟಿಸಬೇಕೆಂದು ರುದ್ರದೇವರಿಗೆ ಹೇಳಿದನು. ರುದ್ರನು ತನ್ನಂತೆಯೇ ಇರುವ ರುದ್ರರನ್ನು ಮನಸ್ಸಿನಿಂದಲೇ ಸೃಷ್ಟಿಸಿದನು. ಇದರಿಂದ ತೃಪ್ತನಾಗದ ಚತುರ್ಮುಖಬ್ರಹ್ಮನು ಹುಟ್ಟು ಸಾವುಗಳುಳ್ಳ ಪ್ರಜೆಗಳನ್ನು ಸೃಷ್ಟಿಸಬೇಕೆಂದು ಹೇಳಿದನು. ತಾನು ಅಂತಹ ಅಶುಭ ಪೂಜೆಗಳ ಸೃಷ್ಟಿಯನ್ನು ಮಾಡುವುದಿಲ್ಲವೆಂದು, ಬ್ರಹ್ಮದೇವರೇ ಅಂತಹ ಪ್ರಜೆಗಳ ಸೃಷ್ಟಿಯನ್ನು ಮಾಡಬೇಕೆಂದು ರುದ್ರನು ಹೇಳಿದನು.

ಚತುರ್ಮುಖಬ್ರಹ್ಮನು, ರುದ್ರದೇವರ ಸ್ವಸದೃಶರ ಸೃಷ್ಟಿಯನ್ನು ತಡೆದು ಬೇರೆ ಬೇರೆ ಸ್ಥಾನಗಳ ಮೇಲೆ ಅಭಿಮಾನವುಳ್ಳ ಪ್ರಜೆಗಳನ್ನು ಸೃಷ್ಟಿಸಿದನು. ನೀರು, ಅಗ್ನಿ, ಅಂತರಿಕ್ಷ, ದ್ಯುಲೋಕ, ವಾಯು, ಪೃಥಿವೀ, ನದೀ, ಸಮುದ್ರ, ಪರ್ವತ, ವೃಕ್ಷ, ಬಳ್ಳಿ, ಲವ, ಕಾಷ್ಠಾ, ಕಲಾ, ಮುಹೂರ್ತ, ಹಗಲು, ರಾತ್ರಿ, ಪಕ್ಷ, ಮಾಸ, ಅಯನ, ವರ್ಷ, ಯುಗ - ಇವುಗಳ ಅಭಿಮಾನಿಗಳನ್ನು ಸೃಷ್ಟಿಸಿದನು.

ಅನಂತರ ಸಾಧಕರಾದ ಮರೀಚಿ, ಭೃಗು, ಆಂಗೀರಸ, ಪುಲಸ್ತ್ಯ, ಪ್ರಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠ, ಧರ್ಮ, ಸಂಕಲ್ಪ ಎಂಬ ಮಹರ್ಷಿಗಳನ್ನು ಸೃಷ್ಟಿಸಿದನು. ಚತುರ್ಮುಖಬ್ರಹ್ಮನು ತನ್ನ ಪ್ರಾಣದಿಂದ ದಕ್ಷನನ್ನು , ಕಣ್ಣುಗಳಿಂದ ಮರೀಚಿಯನ್ನು , ತಲೆಯಿಂದ ಆಂಗೀರಸನನ್ನು , ಹೃದಯದಿಂದ ಭೃಗುವನ್ನು , ಕಣ್ಣುಗಳಿಂದ ಅತ್ರಿಯನ್ನು , ನಿಶ್ಚಯಾತ್ಮಕ ಮನಸ್ಸಿನಿಂದ ಧರ್ಮವನ್ನು, ಸಂಕಲ್ಪದಿಂದ ಸಂಕಲ್ಪವನ್ನು , ಉದಾನದಿಂದ ಪುಲಸ್ತ್ಯನನ್ನು , ವ್ಯಾನದಿಂದ ಪುಲಹನನ್ನು , ಅಪಾನದಿಂದ ಕ್ರತುವನ್ನು , ಸಮಾನದಿಂದ ವಸಿಷ್ಠರನ್ನು ಸೃಷ್ಟಿಸಿದನು. ಈ ಮಹರ್ಷಿಗಳು ಗೃಹಸ್ಥಾಶ್ರಮಿಗಳಾಗಿ, ಧರ್ಮಪರಂಪರೆಯ ಪ್ರವರ್ತಕರಾದರು.

## ದೇವ, ಅಸುರ, ಪಿತೃ, ಮಾನವರ ಸೃಷ್ಟಿ :

ಮುಂದೆ, ದೇವ, ಅಸುರ, ಪಿತೃ, ಮಾನವರ ಸೃಷ್ಟಿಯನ್ನು ಮಾಡಬೇಕೆಂದು ಬಯಸಿ ಬ್ರಹ್ಮನು ಧ್ಯಾನಮಗ್ನನಾದನು. ಧ್ಯಾನಮಗ್ನನಾಗಿದ್ದ ಬ್ರಹ್ಮದೇವರು ತಮೋಗುಣದಿಂದ, ತಮ್ಮ ಜಘನದಿಂದ ತಾಮಸರಾದ ಅಸುರರನ್ನು ಸೃಷ್ಟಿಸಿದರು. ಅಸುರರ ಸೃಷ್ಟಿಗೆ ಉಪಯುಕ್ತವಾದ

ತಮ್ಮ ದೇಹವನ್ನು ತ್ಯಾಗಮಾಡಿದರು. ಪರಿತ್ಯಕ್ತವಾದ ಆ ದೇಹವೇ ಜಗತ್ತಿನ ರಾತ್ರಿ. ಆದ್ದರಿಂದಲೇ ರಾತ್ರಿಯಲ್ಲಿ ಗಾಢ ತಮಸ್ಸು ಇರುತ್ತದೆ. ಅವರ ಪ್ರಭಾವದಿಂದಲೇ ಆ ಸಮಯದಲ್ಲಿ ಜೀವಿಗಳು ನಿದ್ರಿಸುತ್ತಾರೆ.

ಅನಂತರ ಕೇವಲ ಸತ್ವಮಯವಾದ ಬೇರೊಂದು ಶರೀರವನ್ನು ಬ್ರಹ್ಮನು ತೆಗೆದು ಕೊಂಡನು. ಬೆಳಗುವ ಶರೀರದ ಮುಖದಿಂದ ದೇವತೆಗಳು ಹುಟ್ಟಿದರು. ಬ್ರಹ್ಮದೇವರು ಆ ದೇಹವನ್ನು ಬಿಟ್ಟರು. ಸತ್ವಮಯವಾಗಿದ್ದ ಆ ದೇಹವೇ ಜಗತ್ತಿನ ಹಗಲು. ಆದ್ದರಿಂದಲೇ ಹಗಲಿನಲ್ಲಿ ಪ್ರಜೆಗಳು ಧರ್ಮಾಚರಣೆಯನ್ನು ಮಾಡುತ್ತಾರೆ. ಬ್ರಹ್ಮನು ಸತ್ವಮಯವಾದ ಮತ್ತೊಂದು ದೇಹವನ್ನು ತೆಗೆದುಕೊಂಡನು. ಆ ದೇಹದಿಂದ ಪಿತೃಗಳು ಹುಟ್ಟಿದರು. ಅನಂತರ ಆ ದೇಹವನ್ನು ವಿಸರ್ಜಿಸಿದನು. ಆ ದೇಹವೇ ಹಗಲು-ರಾತ್ರಿಗಳ ಸಂಧ್ಯಾಕಾಲ. ಆದ್ದರಿಂದಲೇ ದೇವತೆಗಳು ಅಸುರರು, ಮುನಿಗಳು ಮಾನವರು ಸಂಧ್ಯಾಕಾಲದಲ್ಲಿ ಉಪಾಸನೆಯನ್ನು ಮಾಡುತ್ತಾರೆ.

ಅನಂತರ ಬ್ರಹ್ಮನು ಕೇವಲ ರಜೋಮಯವಾದ ಮತ್ತೊಂದು ಶರೀರವನ್ನು ತೆಗೆದುಕೊಂಡನು. ಈ ಶರೀರದಿಂದ ರಜೋಗುಣವನ್ನು ಪ್ರಚುರವಾಗಿ ಹೊಂದಿರುವ ಮನುಷ್ಯರು ಹುಟ್ಟಿದರು. ಪ್ರಜಾಪತಿ ಬ್ರಹ್ಮನು ಈ ಶರೀರವನ್ನು ಬಿಟ್ಟನು. ಬಿಡಲ್ಪಟ್ಟ ಈ ಶರೀರವೇ ಬೆಳದಿಂಗಳು ಮತ್ತು ಪೂರ್ವ ಸಂಧ್ಯಾಕಾಲ ಎಂದು ಪ್ರಸಿದ್ಧವಾಗಿದೆ.

ಅನಂತರ ಬ್ರಹ್ಮನು ತಮೋ-ರಜೋಮಯವಾದ ಶರೀರವೊಂದನ್ನು ತೆಗೆದುಕೊಂಡನು. ಈ ಶರೀರದಿಂದ ಹಸಿವೆಯಿಂದ ಪೀಡಿತರಾದ ರಾಕ್ಷಸರು ಹುಟ್ಟಿದರು. ಇದೇ ಶರೀರದಿಂದ ರಜಸ್-ತಮೋ ಗುಣಗಳನ್ನು ಪ್ರಚುರವಾಗಿ ಹೊಂದಿರುವ ಬಲಶಾಲಿಗಳಾದ ನಿಶಾಚರರು, ಸರ್ಪಗಳು, ಯಕ್ಷರು, ಗಂಧರ್ವರು ಹುಟ್ಟಿದರು. ರಜಸ್-ತಮಃಪ್ರಚುರರಾದ ಬೇರೆ ಜೀವ ಸಮುದಾಯವನ್ನು ಇದೇ ದೇಹದಿಂದ ಸೃಷ್ಟಿಸಿದನು.

ಬ್ರಹ್ಮನು ತನ್ನ ವಪುಸ್ಸಿನಿಂದ ಪಕ್ಷಿಗಳನ್ನೂ, ಎದೆಯಿಂದ ಕುರಿಗಳನ್ನೂ ಸೃಷ್ಟಿಸಿದನು. ಮುಖದಿಂದ ಆಡುಗಳನ್ನು, ಹೊಟ್ಟೆಯಿಂದ ಹಸುಗಳನ್ನು, ಕಾಲುಗಳಿಂದ ಆನೆ-ಕುದುರೆ ಗಳನ್ನು, ಕತ್ತೆ, ಗವಯ, ಜಿಂಕೆಗಳನ್ನು ಸೃಷ್ಟಿಸಿದನು. ಮುಷ್ಟಿಯಿಂದ ಒಂಟೆಗಳನ್ನು ಮತ್ತು ಹೇಸರಗತ್ತೆಗಳನ್ನು ನಿರ್ಮಿಸಿದನು. ಔಷಧಿಗಳು, ಫಲಗಳೂ, ಮೂಲಗಳು ಅವನ ಶರೀರದ ರೋಮಗಳಿಂದ ಹುಟ್ಟಿದವು.

ಹೀಗೆಯೆ ಬ್ರಹ್ಮದೇವರ ಮೊದಲನೆಯ ಮುಖದಿಂದ ಗಾಯತ್ರಿಛಂದಸ್ಸು, ಋಗ್ವೇದ, ರಥಂತರ ಸಾಮ, ಅಗ್ನಿಷ್ಟೋಮ ಇವುಗಳು ಹುಟ್ಟಿದವು. ಬಲಮುಖದಿಂದ ಯಜುರ್ವೇದ, ತ್ರಿಷ್ಟುಪ್ ಛಂದಸ್ಸು, ಪಂಚದಶ ಸ್ತೋಮ, ಬೃಹತ್ಸಾಮ ಮತ್ತು ಉಕ್ಥಯಾಗ - ಇವುಗಳು ಹುಟ್ಟಿದವು. ಪಶ್ಚಿಮ ಮುಖದಿಂದ ಸಾಮವೇದ, ಜಗತೀ ಛಂದಸ್ಸು, ಸಪ್ತದಶಸ್ತೋಮ,

ವೈರೂಪ್ಯಸಾಮ ಮತ್ತು ಅತಿರಾತ್ರಯಾಗ - ಇವುಗಳು ಹುಟ್ಟಿದವು. ಉತ್ತರಮುಖದಿಂದ ಅಥರ್ವವೇದ, ಏಕವಿಂಶಸ್ತೋಮ, ಅನುಷ್ಟುಭ್ ಛಂದಸ್ಸು, ವೈರಾಜಸಾಮ, ಆಪ್ತೋರ್ಯಾಮಯಾಗ ಮುಂತಾದವುಗಳು ಹುಟ್ಟಿದವು.

ಸೃಷ್ಟಿಯನ್ನು ಮಾಡುತ್ತಿದ್ದ ಚತುರ್ಮುಖಬ್ರಹ್ಮದೇವನ ಶರೀರಗಳಿಂದ ದೊಡ್ಡ-ಸಣ್ಣ ಪ್ರಾಣಿಗಳು ಹುಟ್ಟಿದವು. ತನ್ನ ಶರೀರಗಳಿಂದಲೇ ಯಕ್ಷರನ್ನೂ, ಪಿಶಾಚಗಳನ್ನೂ, ಗಂಧರ್ವರನ್ನೂ ಅಪ್ಸರೆಯರನ್ನೂ, ದೇವ-ಋಷಿ-ಪಿತೃ-ಮಾನುಷರನ್ನೂ ಸೃಷ್ಟಿಸಿದನು. ಬೇಗ ನಾಶವಾಗುವ ಮತ್ತು ದೀರ್ಘಕಾಲ ಇರುವ ಸ್ಥಾವರ-ಜಂಗಮಗಳನ್ನು ಸೃಷ್ಟಿಸಿದನು. ಹಿಂದಿನ ಸೃಷ್ಟಿಯಲ್ಲಿ ಇದ್ದ ಸ್ವಭಾವ, ಗುಣ-ಧರ್ಮಗಳನ್ನೇ ಈ ಸೃಷ್ಟಿಯ ವಸ್ತುಗಳೆಲ್ಲ ಪಡೆದುಕೊಂಡವು. ಹಿಂಸೆಮಾಡುವ, ಮಾಡದ, ಮೃದುವಾದ, ಕ್ರೂರವಾದ ಪ್ರಾಣಿಗಳ ವಿಭಾಗ, ಧರ್ಮ, ಅಧರ್ಮ, ಸತ್ಯ-ಸುಳ್ಳು ಇತ್ಯಾದಿ ಗುಣಧರ್ಮಗಳ ವಿಭಾಗ ಇವೆಲ್ಲವೂ ಹಿಂದಿನ ಸೃಷ್ಟಿಯಲ್ಲಿ ಇದ್ದಂತೆಯೇ ಆದವು. ಪಂಚಮಹಾಭೂತಗಳಿಂದ ಉತ್ಪನ್ನವಾದ ಇಂದ್ರಿಯಗಳಿಗೆ ವಿಷಯವಾದ ಪದಾರ್ಥಗಳ ವೈವಿಧ್ಯ - ವಸ್ತುಗಳ ವೈವಿಧ್ಯ - ಇವು ಹಿಂದಿನ ಸೃಷ್ಟಿಯಲ್ಲಿ ಇದ್ದಂತೆಯೇ ಆದವು. ವಸ್ತುಗಳ ಉಪಯೋಗವನ್ನೂ, ಅವುಗಳ ನಾಮ-ರೂಪಗಳನ್ನೂ ಬ್ರಹ್ಮನು ಹಿಂದಿನಂತೆಯೇ ಏರ್ಪಡಿಸಿದನು. ಸೃಷ್ಟಿಯನ್ನೂ ಋಷಿಗಳ ಹೆಸರು ಮೊದಲಾದವುಗಳನ್ನೂ ವೇದದಲ್ಲಿ ಹೇಳಿದಂತೆಯೇ ಸೃಷ್ಟಿಸಿದ್ದಾನೆ. ಪ್ರತಿಯೊಂದು ಕಲ್ಪದ ಆರಂಭದಲ್ಲಿ ಇದೇ ರೀತಿ ಸೃಷ್ಟಿಕ್ರಿಯೆ ಮತ್ತೆ ಮತ್ತೆ ನಡೆದೇ ಇರುತ್ತದೆ.

* * *

## ಅಧ್ಯಾಯ-೮

**ಕೂರ್ಮ ಉವಾಚ :**

ಚತುರ್ಮುಖನು ಸ್ಥಾವರ-ಜಂಗಮ ಸೃಷ್ಟಿಯನ್ನು ಮಾಡಿದ ನಂತರ ಪ್ರಜಾಸೃಷ್ಟಿಯು ಇನ್ನೂ ಹೆಚ್ಚು ಹೆಚ್ಚು ಬೆಳೆಯಬೇಕೆಂದು ಬಯಸಿದನು. ಆದರೆ ಹಾಗೆ ಆಗಲಿಲ್ಲ. ಪ್ರಜಾವೃದ್ಧಿಯು ಆಗುವ ವಿಧಾನವನ್ನು ಆಲೋಚಿಸಿದ ಬ್ರಹ್ಮನು ತನ್ನ ದೇಹದಿಂದ ಒಬ್ಬ ಪುರುಷನನ್ನು ಮತ್ತು ಒಬ್ಬಳು ಸ್ತ್ರೀಯನ್ನು ಸೃಷ್ಟಿಸಿದನು. ಪುರುಷ ಸ್ವಾಯಂಭುವ ಮನು. ಇವನು ಸರ್ವತ್ರ ಶೋಭಿಸುವ, ಮಹಾಸಾಮರ್ಥ್ಯವುಳ್ಳ ವಿರಾಟ್‌ಪುರುಷ. ಸ್ತ್ರೀ ಶತರೂಪಾದೇವಿ. ಇವಳು ಮಹಾಮಹಿಮಳು. ಯೋಗಸಾಮರ್ಥ್ಯವುಳ್ಳವಳು. ಮಹಾಜ್ಞಾನಿ. ಇವಳು ತಪಸ್ಸು ಮಾಡಿ, ಅದರ ಫಲವಾಗಿ ಸ್ವಾಯಂಭುವಮನುವನ್ನು ಪತಿಯಾಗಿ ಪಡೆದಳು.

ಅವನಿಂದ ಪ್ರಿಯವ್ರತ ಮತ್ತು ಉತ್ತಾನಪಾದ ಎಂಬ ಪುತ್ರರನ್ನೂ ಪ್ರಸೂತಿ ಮತ್ತು ಆಕೂತಿ ಎಂಬ ಹೆಣ್ಣುಮಕ್ಕಳನ್ನೂ ಪಡೆದಳು. ಪ್ರಸೂತಿಯನ್ನು ದಕ್ಷಪ್ರಜಾಪತಿಯು, ಆಕೂತಿಯನ್ನು ರುಚಿಪ್ರಜಾಪತಿಯೂ ಮದುವೆಯಾದರು.

ರುಚಿ-ಆಕೂತಿ ದಂಪತಿಗಳಲ್ಲಿ ಒಂದು ಅವಳಿಯ ಜನ್ಮವಾಯಿತು. ಅವರಲ್ಲಿ ಒಬ್ಬಳಾದ ದಕ್ಷಿಣಾದೇವಿಯನ್ನು ಯಜ್ಞ ಎನ್ನುವವನಿಗೆ ಕೊಟ್ಟು ಮದುವೆ ಮಾಡಿದರು. ಈ ದಂಪತಿಗಳಿಗೆ ಹನ್ನೆರಡು ಜನ ಮಕ್ಕಳು. ಇವರಿಗೆ ಯಾಮ ಎಂದು ಸಾಮಾನ್ಯ ಹೆಸರು. ಇವರು ಸ್ವಾಯಂಭುವಮನ್ವಂತರದಲ್ಲಿ ದೇವತೆಗಳಾಗಿದ್ದರು.

ದಕ್ಷ-ಪ್ರಸೂತಿಯರಿಗೆ ಇಪ್ಪತ್ತನಾಲ್ಕು ಜನ ಹೆಣ್ಣು ಮಕ್ಕಳು. ಇವರಲ್ಲಿ ಶ್ರದ್ಧಾ, ಲಕ್ಷ್ಮೀ, ಧೃತಿ, ತುಷ್ಟಿ, ಪುಷ್ಟಿ, ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪುಸ್, ಶಾಂತಿ, ಸಿದ್ಧಿ, ಕೀರ್ತಿ - ಈ ಹದಿಮೂರು ಮಂದಿಯನ್ನು ಧರ್ಮಪ್ರಜಾಪತಿಯು ಮದುವೆಯಾದನು. ಖ್ಯಾತಿ, ಸತ್ಯಾ, ಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮಾ ಸಂತತಿ ಅನಸೂಯಾ, ಊರ್ಜಾ, ಸ್ವಾಹಾ, ಸುಧಾ - ಈ ಹನ್ನೊಂದು ಮಂದಿಯನ್ನು ಕ್ರಮವಾಗಿ ಭೃಗು, ಭವ, ಮರೀಚಿ, ಅಂಗೀರಸ, ಪುಲಸ್ತ್ಯ ಪುಲಹ, ಕ್ರತು, ಅತ್ರಿ, ವಸಿಷ್ಠ ವಹ್ನಿ ಮತ್ತು ಪಿತೃದೇವತೆಗಳು ಮದುವೆಯಾದರು.

ಶ್ರದ್ಧಾದೇವಿಯ ಮಗ ಕಾಮ. ಲಕ್ಷ್ಮಿಯ ಮಗ ದರ್ಪ, ಧೃತಿಯ ಮಗ ನಿಯಮ. ತುಷ್ಟಿಯ ಮಗ ಸಂತೋಷ. ಪುಷ್ಟಿಯ ಮಗ ಲಾಭ, ಮೇಧಾದೇವಿಯ ಮಗ ಶಮ. ಕ್ರಿಯಾದೇವಿಗೆ ದಂಡ ಮತ್ತು ನಯ ಎಂಬ ಇಬ್ಬರು ಮಕ್ಕಳು. ಬುದ್ಧಿದೇವಿಗೆ ಬೋಧ ಮತ್ತು ಅಪ್ರಮಾದ ಎಂಬ ಇಬ್ಬರು ಮಕ್ಕಳು. ಲಜ್ಜೆಯ ಮಗ ವಿನಯ. ವಪುಸ್‌ಳ ಮಗ ವ್ಯವಸಾಯಿಕ. ಶಾಂತಿಯ ಮಗ ಕ್ಷೇಮ. ಸಿದ್ಧಿಯ ಮಗ ಸಿದ್ಧ. ಕೀರ್ತಿಯ ಮಗ ಯಶಸ್. ಇದು ಧರ್ಮ ಪ್ರಜಾಪತಿಯ ಸಂತತಿಯ ವಿವರಣೆ. ಕಾಮನ ಮಗ ಹರ್ಷ ಮತ್ತು ದೇವಾನಂದ. ಹೀಗೆ ಧರ್ಮ ಪ್ರಜಾಪತಿಯ ಸಂತತಿಯಿಂದ ಸುಖದ ಉದಯವಾಗುವುದು.

ಚತುರ್ಮುಖ ಬ್ರಹ್ಮದೇವರ ತಾಮಸ ಶರೀರದಿಂದ ಅಧರ್ಮ ಮತ್ತು ಹಿಂಸೆಯ ಅಭಿಮಾನಿಗಳು ಹುಟ್ಟಿದರು. ಇವರು ದಂಪತಿಗಳಾದರು. ಅದರಿಂದ ನಿಕೃತಿ (ಮೋಸ) ಮತ್ತು ಅನೃತ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಭಯ ಮತ್ತು ನರಕ ನಿಕೃತಿಯ ಮಕ್ಕಳು. ಭಯದ ಹೆಂಡತಿ ಮಾಯಾ. ನರಕನ ಹೆಂಡತಿ ವೇದನಾ. ಭಯ-ಮಾಯೆಯರ ಮಗ ಮೃತ್ಯು. ನರಕ-ವೇದನೆಯರ ಮಗ ದುಃಖ. ಮುಪ್ಪು, ಶೋಕ, ತೃಷ್ಣಾ, ಕ್ರೋಧ - ಇವರು ಮೃತ್ಯುವಿನ ಮಕ್ಕಳು. ಇವರೆಲ್ಲರೂ ಅಧರ್ಮ ಸ್ವರೂಪರು. ಹೆಚ್ಚು ಹೆಚ್ಚು ದುಃಖ ಸ್ವರೂಪರು. ದುಃಖಜನಕರು. ಇವರಿಗೆ ಹೆಂಡತಿ-ಮಕ್ಕಳು ಇಲ್ಲ. ಬ್ರಹ್ಮದೇವರ ತಾಮಸ ಶರೀರದಿಂದ ಉಗಮವಾಗಿ ಬೆಳೆದ ಈ ತಾಮಸ ಸೃಷ್ಟಿ ಧರ್ಮ ಪ್ರತಿಬಂಧಕ.

* * *

## ಅಧ್ಯಾಯ-೯

ಚತುರ್ಮುಖಬ್ರಹ್ಮನಿಂದ ನಡೆದ ಸೃಷ್ಟಿಯ ವಿವರಣೆಯನ್ನು ಕೂರ್ಮರೂಪಧರನಾದ ಶ್ರೀಹರಿಯಿಂದ ಕೇಳಿದ ನಾರದಾದಿ ಮಹರ್ಷಿಗಳು ಲೋಕಪಿತಾಮಹನಾದ ಚತುರ್ಮುಖಬ್ರಹ್ಮನು ಪದ್ಮದಿಂದ ಹೇಗೆ ಜನಿಸಿದನು ಮತ್ತು ಪಿನಾಕಧಾರಿಯಾದ ಶಿವನು ಶ್ರೀಹರಿಯ ಪುತ್ರನಾದ ಚತುರ್ಮುಖನ ಪುತ್ರನಾದದ್ದು ಹೇಗೆ? ಎಂದು ತಿಳಿಸಬೇಕೆಂದು ಕೂರ್ಮರೂಪಿ ಶ್ರೀ ಹರಿಯನ್ನು ವಿನಂತಿಸಿದರು.

**ಕೂರ್ಮ ಉವಾಚ :**

ಹಿಂದಿನ ಕಲ್ಪವು ಮುಗಿದು ಪ್ರಲಯವಾದಾಗ ಎಲ್ಲ ಕಡೆ ಬರೀ ಅಂಧಕಾರವು ವ್ಯಾಪಿಸಿತ್ತು. ಆಗ ಸಹಸ್ರಶೀರ್ಷನೂ, ಸಹಸ್ರಾಕ್ಷನೂ, ಸಹಸ್ರಪಾದನೂ, ಸಹಸ್ರ ಬಾಹುವೂ ಆದ, ಜ್ಞಾನಿಗಳ ಧ್ಯಾನವಿಷಯನಾದ, ಸುಂದರಾಂಗನೂ, ವಿಭೂತಿಮಂತನೂ, ಯೋಗಿಗಳ ಮೇಲೆ ದಯಾಳುವೂ ಆದ ಭಗವಾನ್ ನಾರಾಯಣನು ನಿರ್ಜನವಾದ ಪ್ರಲಯ ಸಮುದ್ರದಲ್ಲಿ ಆದಿಶೇಷನ ಮೇಲೆ ಮಲಗಿದ್ದನು. ಹೀಗೆ ಮಲಗಿದ್ದ ಅವನ ನಾಭಿಯಿಂದ ದಿವ್ಯವೂ, ಅದ್ಭುತವೂ ಆದ ಮೂರು ಲೋಕಗಳನ್ನು ಸೂಕ್ಷ್ಮರೂಪದಲ್ಲಿ ತನ್ನಲ್ಲಿ ಅಡಗಿಸಿ ಕೊಂಡಿರುವ ಕಮಲವು ಉದ್ಭವಿಸಿತು. ಈ ಕಮಲವು ನೂರು ಯೋಜನ ವಿಶಾಲವಾಗಿತ್ತು. ಪ್ರಖರ ಸೂರ್ಯನಂತೆ ಉಜ್ವಲವಾಗಿತ್ತು. ಅದರಲ್ಲಿ ದಿವ್ಯಸೌರಭವಿತ್ತು. ಕರ್ಣಿಕಾ ಮತ್ತು ಕೇಸರಗಳನ್ನು ಒಳಗೊಂಡಿತ್ತು. ಹೀಗೆ ಬಹಳ ಕಾಲ ಇದ್ದ ಶಾರ್ಙ್ಗಧರನಾದ ನಾರಾಯಣನ ಬಳಿ ಚತುರ್ಮುಖಬ್ರಹ್ಮನು ಬಂದನು.

ಶ್ರೀಮನ್ನಾರಾಯಣನ ಮಾಯೆಯಿಂದ ಮೋಹಗೊಂಡ ಬ್ರಹ್ಮನು "ಕತ್ತಲಿನಿಂದ ಆವೃತವಾದ, ನಿರ್ಜನವಾದ, ಘೋರವಾದ ಈ ಸಮುದ್ರದಲ್ಲಿ ಒಬ್ಬನೇ ಇರುವ ನೀನು ಯಾರು" ಎಂದು ಅವನನ್ನು ಕೇಳಿದನು. ಶ್ರೀಮನ್ನಾರಾಯಣನು "ನಾನು ನಾರಾಯಣ, ಲೋಕಗಳ ಸೃಷ್ಟಿ-ಸಂಹಾರಗಳನ್ನು ಮಾಡುವವನು, ಮಹಾಯೋಗೀಶ್ವರ, ಪುರುಷೋತ್ತಮ, ನನ್ನಲ್ಲಿ ಪರ್ವತಗಳು, ದ್ವೀಪಗಳು, ಸಪ್ತಸಮುದ್ರಗಳು - ಇವುಗಳನ್ನೊಳಗೊಂಡ ಸಮಸ್ತ ಪ್ರಪಂಚವೇ ಇದೆ. ನೀನು ನೋಡಬಹುದು" ಎಂದು ಹೇಳಿದನು.

ಮುಂದುವರಿದು ಶ್ರೀಮನ್ನಾರಾಯಣನು ತನಗೆ ತಿಳಿದಿದ್ದರೂ ಕೂಡ "ನೀನು ಯಾರು?" ಎಂದು ಬ್ರಹ್ಮದೇವನನ್ನು ಕೇಳಿದನು. ಸಮಗ್ರ ವೇದಗಳನ್ನು ತಿಳಿದು ವೇದನಿಧಿ ಯೆನಿಸಿದ ಬ್ರಹ್ಮದೇವನು ಶ್ರೀಮನ್ನಾರಾಯಣನಿಗೆ "ನಾನು ಸೃಷ್ಟಿಕರ್ತ. ಸ್ವಯಂಭೂ. ಲೋಕದ ಪ್ರಪಿತಾಮಹ. ನನ್ನಲ್ಲಿ ವಿಶ್ವವೇ ಇದೆ" ಎಂದು ಹೇಳಿದನು. ಈ ಮಾತನ್ನು ಕೇಳಿ ಶ್ರೀಮನ್ನಾರಾಯಣನು ಬ್ರಹ್ಮನ ಅನುಮತಿಯನ್ನು ಪಡೆದು ತನ್ನ ಯೋಗಸಾಮರ್ಥ್ಯದಿಂದ ಅವನ ಶರೀರದೊಳಗೆ ಪ್ರವೇಶಿಸಿ ದೇವಾಸುರ ಮಾನವರಿಂದೊಡಗೂಡಿದ ತ್ರಿಲೋಕವನ್ನು

ಅವನ ಉದರದಲ್ಲಿ ನೋಡಿ ವಿಸ್ಮಯಗೊಂಡನು. ಬ್ರಹ್ಮದೇವನ ಬಾಯಿಂದ ಹೊರಗೆ ಬಂದ ಶ್ರೀಮನ್ನಾರಾಯಣನು "ನೀನು ಕೂಡ ಶಾಶ್ವತವಾದ ನನ್ನ ಉದರವನ್ನು ಪ್ರವೇಶಿಸಿ ಅಲ್ಲಿರುವ ವಿವಿಧ ಲೋಕಗಳನ್ನು ನೋಡು" ಎಂದು ಹೇಳಿದನು. ಬ್ರಹ್ಮದೇವನು ಶ್ರೀಹರಿಯ ಉದರವನ್ನು ಪ್ರವೇಶಿಸಿ ಅಲ್ಲಿದ್ದ ಲೋಕಗಳನ್ನೆಲ್ಲ ನೋಡಿದನು. ಎಷ್ಟು ಸಂಚರಿಸಿದರೂ ಯಾವ ದಿಕ್ಕಿನ ಕೊನೆಯನ್ನೂ ತಲುಪಲಾಗಲಿಲ್ಲ. ಹೊರಗೆ ಬರುವ ದ್ವಾರಗಳೆಲ್ಲವನ್ನೂ ಶ್ರೀಹರಿಯು ಮುಚ್ಚಿದ್ದನು. ನಿರ್ಗಮನ ದ್ವಾರವನ್ನು ಹುಡುಕುತ್ತಿದ್ದ ಬ್ರಹ್ಮದೇವನು ಶ್ರೀಹರಿಯ ಹೊಕ್ಕಳಲ್ಲಿ ಹೊರಹೋಗುವ ದಾರಿಯನ್ನು ಕಂಡು, ಯೋಗಬಲದಿಂದ ಆ ದ್ವಾರದಲ್ಲಿ ಪ್ರವೇಶಿಸಿ, ಅಲ್ಲಿದ್ದ ಕಮಲವನ್ನು ಹಾಯ್ದು ಹೊರಗೆ ಬಂದನು. ಹೀಗೆ ಬರುವಾಗ ಕಮಲದ ಮಧ್ಯದಲ್ಲಿದ್ದ ಬ್ರಹ್ಮದೇವನು ಅಲ್ಲಿ ಚೆನ್ನಾಗಿ ಶೋಭಿಸಿದನು.

ಶ್ರೀಹರಿಯನ್ನು ವಿಶ್ವೇಶ, ಸರ್ವಾಂತರ್ಯಾಮಿ, ಸಾಧಕರ ಶ್ರೇಷ್ಠ ಗಮ್ಯಸ್ಥಾನ ಎಂದು ಚಿಂತಿಸುತ್ತಾ ಬ್ರಹ್ಮದೇವನು ಶ್ರೀಹರಿಗೆ ಹೇಳಿದನು. "ಶ್ರೀಹರಿ! ನನ್ನನ್ನು ಗೆಲ್ಲಬೇಕೆಂದು ನೀನು ದ್ವಾರಗಳನ್ನು ಮುಚ್ಚಿದಿ. ಹೀಗೇಕೆ ಮಾಡಿದಿ! ನನ್ನನ್ನು ಯಾರು ಜಯಿಸಬಲ್ಲರು?" ಈ ಮಾತನ್ನು ಕೇಳಿ ಶ್ರೀಹರಿಯು "ನೀನು ಸೃಷ್ಟಿಕರ್ತೃ, ಶಾಸಕ, ನಿನ್ನ ಮೇಲೆ ಮತ್ಸರದಿಂದ ನಾನು ದ್ವಾರಗಳನ್ನು ಮುಚ್ಚಲಿಲ್ಲ. ನಿನಗೆ ತೊಂದರೆ ಕೊಡುವ ಉದ್ದೇಶದಿಂದಲೂ ಅಲ್ಲ. ವಿನೋದಕ್ಕಾಗಿ ಮುಚ್ಚಿದೆ. ಅಷ್ಟೆ. ಮಾನ್ಯನಾದ ನೀನು ತೊಂದರೆಗೆ ಈಡಾಗುವ ಸಂಭವವೇ ಇಲ್ಲ." ಎಂದು ಹೇಳಿದನು. ಮುಂದುವರಿದು "ನನ್ನ ನಾಭಿಪದ್ಮದಿಂದ ಹೊರಗೆ ಬಂದು, ಆ ಕಾರಣದಿಂದಲೇ ನನ್ನ ಪುತ್ರ, ಪದ್ಮಯೋನಿ ಎಂದು ಪ್ರಸಿದ್ಧಿಯನ್ನು ಹೊಂದು. ನನ್ನ ಪ್ರೀತಿಗೆ ಪಾತ್ರನಾಗು" ಎಂದು ಹೇಳಿದನು. ಬ್ರಹ್ಮದೇವನು ಹಾಗೆಯೇ ಆಗಲಿ ಎಂದು ಹೇಳಿ ಪುನಃ ಶ್ರೀಮನ್ನಾರಾಯಣನಿಗೆ ಹೇಳಿದನು.

"ನೀನು ಸರ್ವಾಂತರ್ಯಾಮಿ, ಅನಂತ, ಸರ್ವೇಶ್ವರ, ಪರಬ್ರಹ್ಮ, ಸನಾತನ. ನಾನೂ ಸರ್ವೇಶ್ವರ. ಪ್ರಪಂಚ ನನ್ನ ಅಧೀನ. ನಮ್ಮಿಬ್ಬರನ್ನು ಬಿಟ್ಟು ಬೇರೆ ಪರಮೇಶ್ವರ ಇಲ್ಲ. ನಾವಿಬ್ಬರೂ ಒಂದೇ ಚೇತನದ ಎರಡು ರೂಪಗಳು."

ಬ್ರಹ್ಮದೇವನ ಈ ಅಭಿಪ್ರಾಯವನ್ನು ಅಲ್ಲಗಳೆದು "ನಿನಗೆ ಅಧಿಪತಿ ಶಿವ ಎಂದು ತಿಳಿದಿಲ್ಲವೆ? ನಾನು ತಿಳಿದಿದ್ದೇನೆ. ಜ್ಞಾನನಿಷ್ಠರಾದ ಯೋಗಿಗಳು ಕೂಡ ಅವನನ್ನು ಕಾಣಲಾರರು. ಆದ್ಯಂತಗಳಿಲ್ಲದ ಆ ಬ್ರಹ್ಮನಿಗೆ ನೀನು ಶರಣಾಗತನಾಗು" ಎಂದು ಶ್ರೀಹರಿಯು ಹೇಳಿದನು. ಬ್ರಹ್ಮದೇವನು ಈ ಅಭಿಪ್ರಾಯವನ್ನು ಒಪ್ಪದೆ ತಾವಿಬ್ಬರೇ ಲೋಕೇಶ್ವರರೆಂದೂ, ಬೇರೆ ಯಾರೂ ಅಲ್ಲವೆಂದು ದೃಢವಾಗಿ ಹೇಳಿದನು. ಕೋಪವನ್ನೂ ತೋರಿಸಿದನು.

ಶ್ರೀಹರಿಯು ಸಮಾಧಾನದಿಂದ ಬ್ರಹ್ಮದೇವನಿಗೆ "ಮಹಾತ್ಮ ಶಿವನ ಬಗ್ಗೆ ಹೀಗೆ ಹೇಳಬೇಡ. ನಾನು ಸುಳ್ಳು ಹೇಳುವುದಿಲ್ಲ. ಶಿವನ ಮಾಯೆಯು ನಿನಗೆ ಮೋಹವುಂಟು ಮಾಡಿದೆ" ಎಂದು ಹೇಳಿದನು.

ಈ ಹೊತ್ತಿಗೆ ಭೂತಾಧಿಪತಿಯಾದ ಶಿವನು ಬ್ರಹ್ಮದೇವನನ್ನು ಅನುಗ್ರಹಿಸಲು ಅಲ್ಲಿಗೆ ಬಂದನು. ಅವನ ಹಣೆಯಲ್ಲಿ ಕಣ್ಣು ಇತ್ತು. ಜಟಾರಾಶಿಯಿಂದ ಅಲಂಕೃತನಾಗಿದ್ದನು. ಕೈಯಲ್ಲಿ ತ್ರಿಶೂಲವನ್ನು ಹಿಡಿದಿದ್ದನು. ತೇಜಸ್ಸಿನ ನಿಧಿಯಾಗಿದ್ದನು. ಸೂರ್ಯ, ಚಂದ್ರ, ನಕ್ಷತ್ರಗಳ ಮಾಲೆಯನ್ನೇ ಧರಿಸಿದ್ದನು. ಅವನನ್ನು ನೋಡಿದ ಬ್ರಹ್ಮದೇವನಿಗೆ ಬಹಳ ಮೋಹವುಂಟಾಯಿತು. ಅವನು ಶ್ರೀಹರಿಯನ್ನು "ಶೂಲಪಾಣಿಯೂ, ತ್ರಿಲೋಚನನೂ, ತೇಜೋರಾಶಿಯೂ, ಅಪ್ರಮೇಯನೂ ಆದ ಇವನು ಯಾರು?" ಎಂದು ಕೇಳಿದನು.

ಆಗ ಶ್ರೀಹರಿಯು ಪ್ರಲಯ ಸಮುದ್ರದಲ್ಲಿ ತೇಜಸ್ವಿಯಾಗಿ ಕಾಣಿಸುತ್ತಿದ್ದ ಶಿವನನ್ನು ನೋಡಿ, ಅವನಲ್ಲಿ ಈಶ್ವರಭಾವವನ್ನು ಕಂಡು ಅವನ ಬಗ್ಗೆ ಚತುರ್ಮುಖಬ್ರಹ್ಮನಿಗೆ ಹೀಗೆ ಹೇಳಿದನು :

"ಇವನು ಮಹಾದೇವ. ಸ್ವಯಂಜ್ಯೋತಿ, ಸನಾತನ, ಆದಿ-ಅಂತ್ಯಗಳಿಲ್ಲದವನು. ಅಚಿಂತ್ಯ; ಲೋಕಗಳ ಈಶ್ವರ; ದೊಡ್ಡವನು; ಸುಖವುಂಟು ಮಾಡುವವನು; ಸರ್ವ ನಿಯಾಮಕ; ಪರಮೇಶ್ವರ; ಭೂತಗಳ ಅಧಿಪತಿ; ಯೋಗಿ; ಮಹೇಶ; ನಿರ್ಮಲ; ಶಿವ. ಇವನು ಸೃಷ್ಟಿಕರ್ತ; ಶಾಸಕ; ಪ್ರಧಾನಪ್ರಭು; ನಾಶರಹಿತ ಬ್ರಹ್ಮಧ್ಯಾನದ ಸಂಸ್ಕಾರವುಳ್ಳ ಯೋಗಿಗಳು ಇವನನ್ನು ಸರಿಯಾಗಿ ತಿಳಿಯುವರು. ಇವನು ಕಾಲನಿಯಾಮಕನಾಗಿ ಇಡೀ ಜಗತ್ತನ್ನು ಸೃಷ್ಟಿಸುತ್ತಾನೆ; ಪಾಲಿಸುತ್ತಾನೆ ಮತ್ತು ಸಂಹರಿಸುತ್ತಾನೆ. ಯಾವುದೇ ಪ್ರಭಾವಗಳಿಗೆ ಒಳಗಾಗದೆ ತಾನೇ ತಾನಾಗಿ ಇರುವವನು. ಪಂಚಭೂತ ಮತ್ತು ಇಂದ್ರಿಯಗಳ ಕಾಟವಿಲ್ಲದವನು ಶಿವ. ಈ ಶಂಕರನು ಹಿಂದೆ ಬ್ರಹ್ಮನಾದ ನಿನ್ನನ್ನು ಸೃಷ್ಟಿಸಿ, ನಿನಗೆ ವೇದಗಳನ್ನು ಉಪದೇಶಿಸಿದ್ದನು. ನಾನು ಈ ಶಿವನ ಇನ್ನೊಂದು ರೂಪ ವಾಸುದೇವ ಎಂದು ಈ ರೂಪಕ್ಕೆ ಹೆಸರು. ಇದು ಸನಾತನ ಮತ್ತು ಜಗಜ್ಜನ್ಮಾದಿ ಕಾರಣ ರೂಪ. ಯೋಗೇಶನೂ, ಬ್ರಹ್ಮಾಧಿಪತಿಯೂ, ಅವ್ಯಯನೂ ಆದ ಇವನನ್ನು ಯಥಾರ್ಥವಾಗಿ ತಿಳಿಯುವ ದಿವ್ಯದೃಷ್ಟಿಯು ನಿನಗೆ ಬರಲಿ."

ಶ್ರೀಹರಿಯಿಂದ ದಿವ್ಯದೃಷ್ಟಿಯನ್ನು ಪಡೆದ ಚತುರ್ಮುಖ ಬ್ರಹ್ಮನು ಶಿವನನ್ನು ಯಥಾರ್ಥವಾಗಿ ತಿಳಿದುಕೊಂಡು ಅವನಿಗೆ ಶರಣಾಗತನಾದನು. ಕೈಮುಗಿದು, ಓಂಕಾರವನ್ನು ಸ್ಮರಿಸಿ ಅಥರ್ವಶಿರಸ್ ಎಂಬ ಮಂತ್ರಗಳಿಂದ ಶಿವನನ್ನು ಸ್ತುತಿಸಿದನು. ಸ್ತುತಿಸಲ್ಪಟ್ಟದ್ದರಿಂದ ಶಿವನು ಪ್ರೀತನಾಗಿ ಮುಗುಳ್ನಗುತ್ತಾ ಹೇಳಿದನು : "ನೀನು ನನಗೆ ಸಮಾನ; ನನ್ನ ಭಕ್ತ, ಜಗತ್ತನ್ನು ಸೃಷ್ಟಿಸುವುದಕ್ಕಾಗಿ ನಿನ್ನನ್ನು ನಾನು ಸೃಷ್ಟಿಸಿದ್ದೇನು; ನೀನು ಜಗತ್ತಿನ ಆದಿಪುರುಷ ನನ್ನಿಂದ ವರವನ್ನು ಬೇಡು."

ಚತುರ್ಮುಖ ಬ್ರಹ್ಮನು ಶ್ರೀಹರಿಯನ್ನು ನೋಡುತ್ತಾ ಶಿವನನ್ನು ನಮಸ್ಕರಿಸಿ ಹೇಳಿದನು. "ಭೂತ, ಭವಿಷ್ಯತ್‌ಗಳ ಅಧಿಪತಿಯಾದ, ಪಾರ್ವತೀಪತಿಯಾದ ಪೂಜ್ಯ ಮಹಾದೇವನೆ! ನೀನೇ ನನ್ನ ಮಗನಾಗು ಅಥವಾ ನಿನ್ನಂತಹ ಪುತ್ರನು ನನಗೆ ಆಗಲಿ; ನಿನ್ನ ಮಾಯೆಯಿಂದ ನಾನು ಮೋಹಕ್ಕೊಳಗಾಗಿದ್ದೇನೆ. ನಿನ್ನ ಯಥಾರ್ಥಸ್ವರೂಪದ ಜ್ಞಾನ ನನಗೆ ಇಲ್ಲ. ನೀನೇ ಭಕ್ತರ ತಾಯಿ, ತಂದೆ, ಸೋದರ ಮತ್ತು ಮಿತ್ರ. ಪ್ರಸನ್ನನಾಗು. ನಿನ್ನ ಪಾದಗಳಿಗೆ ನಮಿಸುತ್ತೇನೆ"

ಲೋಕಾಧಿಪತಿಯೂ, ವೃಷಭವಾಹನನೂ ಆದ ಶಿವನು ತನ್ನ ಮಗ ಶ್ರೀಹರಿಯನ್ನು ನೋಡುತ್ತಾ ಹೇಳಿದನು. "ಮಗು ಬ್ರಹ್ಮ! ನಿನ್ನ ಇಚ್ಛೆಯನ್ನು ಈಡೇರಿಸುವೆ. ನಿನಗೆ ಯಥಾರ್ಥಜ್ಞಾನವು ಉಂಟಾಗುತ್ತದೆ. ನೀನೇ ಎಲ್ಲ ಚರಾಚರ ವಸ್ತುಗಳ ಪ್ರಥಮಸೃಷ್ಟಿಕರ್ತ ಎಂದು ನನ್ನಿಂದ ನಿಯೋಜಿತನಾಗಿರುವಿ. ಆ ಎಲ್ಲ ವಸ್ತುಗಳಲ್ಲಿ ನೀನು ಮಾಯೆಯನ್ನು ಹರಡು. ನನ್ನ ಶ್ರೇಷ್ಠ ರೂಪಾಂತರವಾಗಿ ನನ್ನಿಂದ ಜನಿಸಿರುವ ಈ ನಾರಾಯಣನು ನಿನ್ನ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಾನೆ."

ಹೀಗೆ ಹೇಳಿ, ಸಂತುಷ್ಟನಾದ ಪರಮೇಶ್ವರನು ತನ್ನ ಕೈಗಳಿಂದ ಬ್ರಹ್ಮನನ್ನು ಮುಟ್ಟಿ ಶ್ರೀಹರಿಗೆ ಹೇಳಿದನು. "ವಿಶ್ವರೂಪನೆ! ನಾನು ನಿನ್ನ ಬಗ್ಗೆ ಪೂರ್ಣವಾಗಿ ಸಂತುಷ್ಟನಾಗಿದ್ದೇನೆ. ನೀನು ನನ್ನ ಭಕ್ತ. ವರವನ್ನು ಪಡೆದುಕೋ. ನಮ್ಮಿಬ್ಬರಿಗಿಂತ ಶ್ರೇಷ್ಠರಾದವರು ಯಾರೂ ಇಲ್ಲ." ಅನಂತರ ಶ್ರೀಹರಿಯು ಹೇಳಿದನು.

"ಸರ್ವೋತ್ತಮನಾದ ಪರಮೇಶ್ವರನನ್ನು ನೋಡುವ ಅವಕಾಶವೇ ಶ್ರೇಷ್ಠ ವರ. ನಿನ್ನಲ್ಲಿ ನನಗೆ ಭಕ್ತಿಯು ಉಂಟಾಗಲಿ" ಹಾಗೆಯೇ ಆಗಲಿ ಎಂದು ಹೇಳಿದ ಶಿವನು ಮುಂದುವರಿದು ಹೀಗೆ ಹೇಳಿದನು. "ಈ ಜಗತ್ತೆಲ್ಲವೂ ನನ್ನ ಮತ್ತು ನಿನ್ನ ನಿಯಂತ್ರಣಕ್ಕೊಳಪಟ್ಟಿದೆ. ನೀನು ಚಂದ್ರ, ನಾನು ಸೂರ್ಯ. ನೀನು ರಾತ್ರಿ, ನಾನು ಹಗಲು. ನೀನು ಅವ್ಯಕ್ತಪ್ರಕೃತಿ, ನಾನು ಪುರುಷ. ನೀನು ಜ್ಞಾನ, ನಾನು ಜ್ಞಾತೃ, ನೀನು ಮಾಯೆ, ನಾನು ಈಶ್ವರ. ನೀನು ವಿದ್ಯಾಶಕ್ತಿ, ನಾನು ಆ ಶಕ್ತಿಯನ್ನು ಪಡೆದ ಈಶ್ವರ. ನನ್ನ ಅಂತರ್ಯಾಮಿಯೂ, ನಿರ್ದೋಷನೂ, ಗುಣಪರಿಪೂರ್ಣನೂ, ಸಮರ್ಥನು ಆದ ನಾರಾಯಣನೇ ನೀನು. ಬ್ರಹ್ಮವಾದಿಗಳಾದ ಯೋಗಿಗಳು ನಮ್ಮಿಬ್ಬರನ್ನೂ ವಿರೋಧವಿಲ್ಲದಂತೆ ತಿಳಿಯುತ್ತಾರೆ. ಯೋಗಿಗಳು ನಿನ್ನನ್ನು ಆಶ್ರಯಿಸದೆ ನನ್ನನ್ನು ತಲುಪಲಾರರು. ಈ ಸಮಸ್ತ ಜಗತ್ತನ್ನು ಪಾಲಿಸು."

ಅನಾದಿಯಾದ, ತನ್ನ ಮಾಯೆಯಿಂದ ಎಲ್ಲರಿಗೂ ಮೋಹವನ್ನುಂಟು ಮಾಡಿರುವ, ಅನಂತಶಕ್ತಿ ಸಂಪನ್ನನಾದ ಶಿವನು ಉತ್ಪತ್ತಿ, ವೃದ್ಧಿ, ನಾಶಗಳಿಲ್ಲದ, ಅವ್ಯಕ್ತವಾದ ತನ್ನ ಸ್ಥಾನಕ್ಕೆ ಹೊರಟು ಹೋದನು.

* * *

## ಅಧ್ಯಾಯ-೧೦

**ಕೂರ್ಮ ಉವಾಚ :**

ಶಿವನು ತನ್ನ ಸ್ಥಾನಕ್ಕೆ ತೆರಳಿದನಂತರ ಚತುರ್ಮುಖಬ್ರಹ್ಮನು ವಿಷ್ಣುವಿನ ನಾಭಿಯಲ್ಲಿ ಹುಟ್ಟಿದ್ದ ಕಮಲವನ್ನು ಪ್ರವೇಶಿಸಿದನು. ಬಹಳ ಕಾಲಾನಂತರ ಎಣೆಯಿಲ್ಲದ ಪರಾಕ್ರಮವನ್ನು ಹೊಂದಿದ್ದ ಮಧು ಮತ್ತು ಕೈಟಭ ಎಂಬ ಅಸುರ ಸೋದರರು ಅಲ್ಲಿಗೆ ಬಂದರು. ಅವರು ಶ್ರೀಹರಿಯ ಕಿವಿಯಿಂದ ಉದ್ಭವಿಸಿದರು. ಅವರ ಶರೀರ ಪರ್ವತದಂತಿತ್ತು. ಅವರು ಕೋಪಿಷ್ಠರಾಗಿದ್ದರು. ಲೋಕಕಂಟಕರಾದ ಅವರನ್ನು ಕೊಲ್ಲಬೇಕೆಂದು ಬ್ರಹ್ಮನು ಶ್ರೀಹರಿ-ಯನ್ನು ಪ್ರಾರ್ಥಿಸಿದನು. ಶ್ರೀಹರಿಯು ತನ್ನ ಭೃತ್ಯರಿಬ್ಬರಿಗೆ ಆಜ್ಞೆಮಾಡಿದನು. ಜಿಷ್ಣು ಮತ್ತು ನಿಷ್ಣು ಎಂದು ಆ ಭೃತ್ಯರಿಬ್ಬರ ಹೆಸರು. ಹರಿಯ ಆಜ್ಞೆಯಂತೆ ಅವರು ಮಧು-ಕೈಟಭರ ಜೊತೆ ಭಾರಿ ಯುದ್ಧವನ್ನು ಮಾಡಿ ಗೆದ್ದರು.

ಅನಂತರ ಶ್ರೀಹರಿಯು ತನ್ನ ನಾಭಿಕಮಲದಲ್ಲಿ ಕುಳಿತಿದ್ದ ಚತುರ್ಮುಖ ಬ್ರಹ್ಮನಿಗೆ ಪ್ರೀತಿಯಿಂದ ಹೇಳಿದನು. ''ತೇಜೋಮಯನಾದ, ಭಾರವಾಗಿರುವ ನಿನ್ನನ್ನು ನಾನು ಹೊರಲಾರೆ, ನನ್ನ ನಾಭಿಕಮಲದಿಂದ ಹೊರಗೆ ಬಾ'' ನಾಭಿ ಕಮಲದಿಂದ ಹೊರಗೆ ಬಂದ ಚತುರ್ಮುಖಬ್ರಹ್ಮನು ವಿಷ್ಣುವಿನ ದೇಹದ ಒಳಗೆ ಪ್ರವೇಶಿಸಿದನು. ಅಲ್ಲಿ ಬಹಳ ದೀರ್ಘಕಾಲ ಬ್ರಹ್ಮಾನಂದವನ್ನು ಅನುಭವಿಸಿದನು.

ಅನಂತರ ಸೃಷ್ಟಿಯ ವಿಧಾನವನ್ನು ತಿಳಿದ ಆ ಚತುರ್ಮುಖನು ವಿಷ್ಣುವನ್ನು ಧ್ಯಾನಿಸುತ್ತಾ ಸೃಷ್ಟಿಯನ್ನು ಆರಂಭಿಸಿದನು. ಮೊದಲು ಸನಾತನ, ಸನಂದ, ಸನಕ, ಋಭು ಮತ್ತು ಸನತ್ಕುಮಾರರನ್ನು ಸೃಷ್ಟಿಸಿದನು. ಅವರು ದ್ವಂದ್ವ ಮತ್ತು ಮೋಹರಹಿತರಾಗಿದ್ದರು. ಪೂರ್ಣಪ್ರಮಾಣದ ವೈರಾಗ್ಯವನ್ನು ಹೊಂದಿದ್ದರು. ತತ್ವಜ್ಞಾನದಲ್ಲಿ ಆಸಕ್ತಿಯನ್ನು ಹೊಂದಿದ್ದರು. ಹೀಗೆ ಸನಕಾದಿಗಳು ಸೃಷ್ಟಿಯನ್ನು ಬೆಳೆಸಲು ನಿರಾಸಕ್ತರಾದಾಗ ಚತುರ್ಮುಖ ಬ್ರಹ್ಮದೇವರು ಮುಂದೆ ಏನು ಮಾಡಬೇಕು ಎಂದು ತಿಳಿಯದೆ ಚಿಂತಿಸಿದರು. ಆಗ ಪದ್ಮಸಂಭವರಾದ ಅವರಿಗೆ ಶ್ರೀಹರಿಯು ಹೇಳಿದನು.

**ವಿಷ್ಣು ಉವಾಚ :**

''ಶೂಲಪಾಣಿಯಾದ ಶಿವನನ್ನು ಅವನು ನಿನ್ನ ಮಗನಾಗಬೇಕೆಂದು ನೀನು ಕೇಳಿಕೊಂಡಿರುವ ವಿಷಯ ಮರೆತು ಹೋಯಿತೆ? ಅವನು ನಿನ್ನ ಮಗನಾಗಲು ನಿರ್ಧರಿಸಿದ್ದಾನೆ'' ಈ ಮಾತನ್ನು ಕೇಳಿ ಚತುರ್ಮುಖ ಬ್ರಹ್ಮನಿಗೆ ಮುಂದೆ ಏನು ಮಾಡಬೇಕೆಂದು ಗೊತ್ತಾಯಿತು. ಪ್ರಜಾಸೃಷ್ಟಿಯನ್ನು ಮುಂದುವರಿಸಲು ಸಾಮರ್ಥ್ಯವನ್ನು ಗಳಿಸಿಕೊಳ್ಳುವುದಕ್ಕಾಗಿ ಬಹಳ ಕಠಿಣ ತಪಸ್ಸನ್ನು ಮಾಡಿದನು. ಈ ತಪಸ್ಸಿನಿಂದ ಏನೂ ಆಗಲಿಲ್ಲ. ಹೀಗೆ

ದೀರ್ಘಕಾಲವು ಕಳೆದು ಹೋದುದರಿಂದ ಅವನಿಗೆ ದುಃಖವೂ, ಕೋಪವೂ ಉಂಟಾಯಿತು. ಕೋಪಾವಿಷ್ಟನಾದ ಅವನ ಕಣ್ಣುಗಳಿಂದ ಕಣ್ಣೀರು ಹನಿಗಳು ಬಿದ್ದವು. ಆ ಹನಿಗಳಿಂದ ಭೂತಗಳು, ಪ್ರೇತಗಳು ಉದ್ಭವಿಸಿದವು. ಅವುಗಳನ್ನು ನೋಡಿ ಬ್ರಹ್ಮನು ತನ್ನನ್ನೇ ಬೈದುಕೊಂಡನು. ಕೋಪದಿಂದ ಪ್ರಾಣಗಳನ್ನೇ ತ್ಯಜಿಸಿದನು. ಆಗ ಅವನ ಬಾಯಿಂದ ಪ್ರಾಣಮಯನಾದ ರುದ್ರನು ಆವಿರ್ಭವಿಸಿದನು. ಸಾವಿರ ಸೂರ್ಯರಂತೆ ಪ್ರಲಯಾಗ್ನಿಯಂತೆ ಇದ್ದ ಆ ಶಿವನು ದೊಡ್ಡ ಧ್ವನಿಯಿಂದ ರೋದನ ಮಾಡಿದನು. ಬ್ರಹ್ಮದೇವರು 'ಅಳಬೇಡ' ಎಂದು ಅವನಿಗೆ ಹೇಳಿ ಹುಟ್ಟುತ್ತಲೇ ಭಾರೀ ರೋದನ ಮಾಡಿದ ಕಾರಣದಿಂದ ನಿನಗೆ ರುದ್ರ ಎಂದು ಹೆಸರು ಎಂದು ಹೇಳಿದರು. ಇನ್ನು ಏಳು ನಾಮ-ರೂಪಗಳನ್ನೂ ಎಂಟು ರೂಪಗಳಿಗೆ ಎಂಟು ಸ್ಥಾನಗಳನ್ನೂ ಪತ್ನೀ-ಪುತ್ರರನ್ನೂ ಏರ್ಪಡಿಸಿದನು.

ಭವ, ಶರ್ವ, ಈಶಾನ, ಪಶುಪತಿ, ಭೀಮ, ಉಗ್ರ, ಮಹಾದೇವ - ಇವು ಏಳು ನಾಮಗಳು. ಸೂರ್ಯ, ನೀರು, ಭೂಮಿ, ವಹ್ನಿ, ವಾಯು, ಆಕಾಶ, ಯಜ್ಞವನ್ನು ಮಾಡುವ ಬ್ರಾಹ್ಮಣ, ಚಂದ್ರ - ಇವು ಎಂಟು ರೂಪಗಳು. ಈ ಸ್ಥಾನಗಳಲ್ಲಿರುವ ತನ್ನ ರೂಪಗಳನ್ನು ಧ್ಯಾನಿಸುವ, ನಮಿಸುವ ಜನರಿಗೆ ಅಷ್ಟಮೂರ್ತಿ ಶಿವನು ಪರಮಪದವನ್ನು ಕೊಡುತ್ತಾನೆ.

ಸುವರ್ಚಲಾ, ಉಮಾ ಏಕೇಶೀ, ಶಿವಾ, ಸ್ವಾಹಾ, ದಿಶಾ, ದೀಕ್ಷಾ, ರೋಹಿಣೀ -ಇವರು ಶಿವಪತ್ನಿಯರು. ಶನೈಶ್ಚರ, ಶುಕ್ರ, ಲೋಹಿತಾಂಗ, ಮನೋಜವ, ಸ್ಕಂದ, ಸರ್ಗ, ಸಂತಾನ, ಬುಧ -ಇವರು ಇವರ ಮಕ್ಕಳು.

ಮೇಲೆ ವಿವರಿಸಿದಂತೆ ನಾಮ-ರೂಪ, ಪತ್ನೀ-ಪುತ್ರರನ್ನು ಹೊಂದಿದ್ದರೂ ದೇವೋತ್ತಮನಾದ ಮಹೇಶ್ವರನು, ಮಕ್ಕಳು, ಧರ್ಮ, ಕಾಮ ಇವುಗಳನ್ನು ತ್ಯಜಿಸಿ ವಿರಕ್ತನಾದನು. ಅತಿಗಾಢವಾದ ಬ್ರಹ್ಮಧ್ಯಾನದಲ್ಲಿ ಮಗ್ನನಾದನು.

'ಪ್ರಜೆಗಳನ್ನು ಸೃಷ್ಟಿಸು' ಎಂದು ಬ್ರಹ್ಮನು ಆದೇಶಿಸಿದಾಗ ಕೇವಲ ಇಚ್ಛೆಯಿಂದ ತನ್ನಂತೆಯೇ ಇರುವ ರುದ್ರರನ್ನು ಸೃಷ್ಟಿಸಿದನು. ಇವರು ಜಟಾಧಾರಿಗಳೂ ಆತಂಕರಹಿತರೂ ನೀಲಕಂಠರೂ, ಪಿನಾಕಧಾರಿಗಳೂ, ತ್ರಿಶೂಲಧಾರಿಗಳೂ, ಉದ್ರಿಕ್ತರೂ, ಸದಾನಂದರೂ, ತ್ರಿಲೋಚನರೂ, ಮುಪ್ಪು ಸಾವುಗಳಿಲ್ಲದವರೂ ಆಸೆಯಿಲ್ಲದವರೂ, ಸರ್ವಜ್ಞರೂ ಆಗಿದ್ದರು. ಇವರ ಸಂಖ್ಯೆ ಕೋಟಿಯನ್ನು ಮೀರಿತ್ತು.

ನಿರ್ಮಲರೂ, ನೀಲರಕ್ತವರ್ಣದವರೂ, ಮುಪ್ಪುಸಾವುಗಳಿಲ್ಲದವರೂ ಆದ ಈ ರುದ್ರರನ್ನು ನೋಡಿ ಬ್ರಹ್ಮದೇವರು ಶಿವನಿಗೆ ಹೇಳಿದರು. ''ಮರಣರಹಿತರಾದ ಇಂತಹವರನ್ನು ಸೃಷ್ಟಿಸಬೇಡ; ಹುಟ್ಟಿ ಸಾಯುವ ಸ್ವಭಾವದ ಜೀವಗಳನ್ನು ಸೃಷ್ಟಿಸು.'' ಶಿವನು ''ನಾನು ಅಂತಹ ಸೃಷ್ಟಿಯನ್ನು ಮಾಡಲಾರೆ. ನೀನೇ ಅಂತಹ ಸೃಷ್ಟಿಯನ್ನು ದಯವಿಟ್ಟು

ಮಾಡು'' ಎಂದು ಹೇಳಿದನು. ಆಗಿನಿಂದ ಶಿವನು ಸೃಷ್ಟಿಯನ್ನು ಮಾಡುತ್ತಾ ಇಲ್ಲ, ಅಲ್ಲಿಯವರೆಗೆ ಆಗಿದ್ದ ತನ್ನ ಸಂತತಿಯಿಂದಲೇ ಅವನು ಸಂತುಷ್ಟನಾಗಿದ್ದಾನೆ. ಈ ಕಾರಣದಿಂದಲೆ ಅವನಿಗೆ ಸ್ಥಾಣು ಎಂದು ಹೆಸರು ಬಂದಿತು. ಈ ಶಂಕರನಲ್ಲಿ ಜ್ಞಾನ, ವೈರಾಗ್ಯ, ಐಶ್ವರ್ಯ, ತಪಸ್ಸು, ಸತ್ಯ, ಕ್ಷಮಾ, ಧೃತಿ, ಜ್ಞಾನಸಾಮರ್ಥ್ಯ, ಆತ್ಮಜ್ಞಾನ, ನಿಯಾಮಕತ್ವ - ಈ ಹತ್ತು ಗುಣಗಳು ಇವೆ. ಚತುರ್ಮುಖ ಬ್ರಹ್ಮನು ತನ್ನ ಮಾನಸ ಪುತ್ರಸಹಿತನಾದ, ಇಂತಹ ಶಿವನನ್ನು ನೋಡಿ, ಬಹಳ ಸಂತುಷ್ಟನಾಗಿ, ತನ್ನ ಜ್ಞಾನಸಾಮರ್ಥ್ಯದಿಂದ ಅವನ ಈಶ್ವರತ್ವವನ್ನು ತಿಳಿದುಕೊಂಡು, ಅವನನ್ನು ಕೈ ಮುಗಿದು ಸ್ತುತಿಸಿದನು.

## ಬ್ರಹ್ಮೋವಾಚ :

ಮಹಾದೇವ! ನಿನಗೆ ನಮಸ್ಕಾರ! ಪರಮೇಶ್ವರ ನಿನಗೆ ನಮಸ್ಕಾರ. ಶೋಭಿಸುವ ಶಿವನಿಗೆ ನಮಸ್ಕಾರ. ಬ್ರಹ್ಮರೂಪಿಯಾದ ನಿನಗೆ ನಮಸ್ಕಾರ. ಮಹೇಶ ! ನಿನಗೆ ನಮಸ್ಕಾರ. ಶಾಂತನೂ, ಸರ್ವಕಾರಣನೂ ಆದ ನಿನಗೆ ನಮಸ್ಕಾರ. ಪ್ರಧಾನ ಮತ್ತು ಪುರುಷರಿಗೆ ಈಶನೂ, ಯೋಗಾಧಿಪತಿಯೂ ಸರ್ವಸಂಹಾರಕನೂ, ಶೂಲಧಾರಿಯೂ ಆದ ನಿನಗೆ ನಮಸ್ಕಾರ. ಪಿನಾಕಹಸ್ತನಿಗೆ ನಮಸ್ಕಾರ. ತ್ರಿನೇತ್ರನಿಗೆ ನಮೋ ನಮಃ ತ್ರಿಮೂರ್ತಿಗೆ ನಮಸ್ಕಾರ. ಜಗಜ್ಜನಕನೂ, ಬ್ರಹ್ಮನೂ ಆದ ನಿನಗೆ ನಮಸ್ಕಾರ.

ಬ್ರಹ್ಮವಿದ್ಯೆಗೆ ಅಧಿಪತಿಯೂ ಬ್ರಹ್ಮವಿದ್ಯಾಪ್ರದನೂ ಆದ ನಿನಗೆ ನಮಸ್ಕಾರ. ವೇದದ ರಹಸ್ಯತತ್ವನಾದ ಸರ್ವಾಂತಕನಾದ ನಿನಗೆ ನಮಸ್ಕಾರ. ವೇದಾಂತಸಾರದ ಸಾರನಾದ ವೇದಾತ್ಮ ಮೂರ್ತಿಯಾದ ನಿನಗೆ ನಮಸ್ಕಾರ. ಬುದ್ಧನೂ, ರುದ್ರನೂ, ಯೋಗಿಗಳ ಗುರುವೂ ಆದ ನಿನಗೆ ನಮಸ್ಕಾರ. ಶೋಕಹೀನರಾದ ವಿವಿಧ ಭೂತಗಣಗಳಿಂದ ಪರಿವೃತನಾದ ನಿನಗೆ ನಮಸ್ಕಾರ. ಬ್ರಹ್ಮನಿಷ್ಠರಿಗೆ ಅನುಗ್ರಹಿಸುವ, ಶೋಭಿಸುವ ಬ್ರಹ್ಮಾಧಿಪತಿಯಾದ ನಿನಗೆ ನಮಸ್ಕಾರ. ಮುಕ್ಕಣ್ಣನೂ, ಆದಿದೇವನೂ, ಪರಮೇಷ್ಠಿಯೂ ಆದ ನಿನಗೆ ನಮಸ್ಕಾರ. ದಿಗಂಬರನೆ! ನಿನಗೆ ನಮಸ್ಕಾರ. ದಂಡಧಾರಿಯೇ! ಮುಂಡಮಾಲಾಮಂಡಿತನೆ! ನಿನಗೆ ನಮಸ್ಕಾರ. ಅನಾದಿಯಾದ ತ್ರಿಗುಣಮಲರಹಿತನೂ ಜ್ಞಾನಗಮ್ಯನೂ ಆದ ನಿನಗೆ ನಮಸ್ಕಾರ. ತಾರಕನೂ, ಪವಿತ್ರನೂ ಯೋಗಸಂಪತ್ತನ್ನು ಅನುಗ್ರಹಿಸುವವನೂ ಆದ ನಿನಗೆ ನಮಸ್ಕಾರ.

ನೀನು ಧರ್ಮನಿಷ್ಠರಿಗೆ ಮತ್ತು ಯೋಗನಿಷ್ಠರಿಗೆ ಅರ್ಥವಾಗುವವನು. ನಿನಗೆ ನಮಸ್ಕಾರ. ಪ್ರಪಂಚಕ್ಕೆ ಅಂಟಿಕೊಳ್ಳದ, ತೋರಿಕೆಗಳಿಲ್ಲದ ನಿನಗೆ ನಮಸ್ಕಾರ. ಬ್ರಹ್ಮನೂ, ವಿಶ್ವರೂಪನೂ, ಪರಮಾತ್ಮನೂ ಆದ ನಿನಗೆ ನಮಸ್ಕಾರ. ನೀನೇ ಎಲ್ಲವನ್ನೂ ಸೃಷ್ಟಿಸಿರುವಿ. ನೀನೇ ಪಾಲಿಸುತ್ತಿರುವಿ. ವಿಶ್ವಾಂತರ್ಯಾಮಿಯೇ! ನೀನೇ ಎಲ್ಲವನ್ನೂ ಸಂಹರಿಸುವಿ. ನೀನು ಈಶ್ವರ. ಮಹಾದೇವ, ಪರಬ್ರಹ್ಮ, ಮಹೇಶ್ವರ. ನೀನು ಪರಮೇಷ್ಠಿ ಶಿವ, ಶಾಂತ, ಪುರುಷ, ನಿಷ್ಕಲ,ಹರ, ಅಕ್ಷರ, ಪರಂಜ್ಯೋತಿ, ಕಾಲ-ಪರಮೇಶ್ವರ. ನೀನು ಪುರುಷ, ಅನಂತ, ಪ್ರಧಾನ, ಪ್ರಕೃತಿ, ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಅಹಂಕಾರ - ಇವು ನಿನ್ನ

ರೂಪಗಳು. ಬ್ರಹ್ಮ ಎಂಬ ಹೆಸರಿನ ನಿನಗೆ ನಮಸ್ಕಾರ. ನಿನ್ನ ವಿಶ್ವರೂಪದಲ್ಲಿ ಅಂತರಿಕ್ಷವೇ ತಲೆ. ಭೂಮಿಯೇ ಪಾದ. ದಿಕ್ಕುಗಳೇ ಭುಜ. ಆಕಾಶವೇ ಉದರ. ಅಂತಹ ವಿರಾಡ್ರೂಪಿಯಾದ ನಿನಗೆ ನಮಸ್ಕಾರ.

ತನ್ನ ತೇಜಸ್ಸಿನಿಂದ ಎಲ್ಲ ದಿಕ್ಕುಗಳಿಗೆ ಬಿಸಿಯನ್ನುಂಟು ಮಾಡುವ ಬ್ರಹ್ಮತೇಜಸ್ಸನ್ನು ಧರಿಸಿರುವ ಸೂರ್ಯಾಂತರ್ಯಾಮಿಯಾದ ನಿನಗೆ ನಮಸ್ಕಾರ. ನಿನ್ನ ತೇಜೋಮಯವಾದ ರೂಪವು ದೇವತೆಗಳಿಗೆ ಹವ್ಯವನ್ನೂ ಪಿತೃಗಳಿಗೆ ಕವ್ಯವನ್ನೂ ತಲುಪಿಸುತ್ತದೆ. ಹೀಗೆ ವಹ್ನಿಸ್ವರೂಪವಾದ ನಿನಗೆ ನಮಸ್ಕಾರ. ಇಡೀ ಲೋಕಕ್ಕೆ ಹಿತವುಂಟುಮಾಡುವ, ದೇವತಾ ಸಮುದಾಯವು ಕುಡಿಯುವ ಕಾಂತಿಯನ್ನು ಹೊಂದಿರುವ ಚಂದ್ರಸ್ವರೂಪನಾದ ನಿನಗೆ ನಮಸ್ಕಾರ. ಸರ್ವಭೂತಾಧಾರವಾದ, ಎಲ್ಲದರ ಒಳಗೆ ಸಂಚರಿಸುವ ನಿನ್ನ ಶಕ್ತಿಯೇ ವಾಯು. ವಾಯುಸ್ವರೂಪನಾದ ನಿನಗೆ ನಮಸ್ಕಾರ. ಚತುರ್ಮುಖಬ್ರಹ್ಮನು ನಿನ್ನನ್ನು ಆಶ್ರಯಿಸಿ ಜಗತ್ತನ್ನು ಸೃಷ್ಟಿಸುತ್ತಾನೆ. ಚತುರ್ಮುಖ ನಿಯಾಮಕನಾದ ನಿನಗೆ ನಮಸ್ಕಾರ. ತನ್ನ ಮಾಯೆಯಿಂದ ಜಗತ್ತನ್ನೇ ಆವರಿಸಿ ಶೇಷಶಾಯಿಯಾದ ವಿಷ್ಣುವೂ ನಿನ್ನ ರೂಪವೇ. ಅಂತಹ ನಿನಗೆ ನಮಸ್ಕಾರ. ಹದಿನಾಲ್ಕು ಲೋಕಗಳನ್ನು ತಲೆಯ ಮೇಲೆ ಹೊತ್ತಿರುವ ಶೇಷನೂ ನೀನೆ. ಅಂತಹ ನಿನಗೆ ನಮಸ್ಕಾರ. ಪ್ರಲಯಕಾಲದಲ್ಲಿ ಕೇವಲ ದೇವತೆಗಳ ಸಮ್ಮುಖದಲ್ಲಿ ಪರಮಾನಂದದಿಂದ ತಾಂಡವನೃತ್ಯವನ್ನು ಮಾಡುವ ರುದ್ರ! ನಿನಗೆ ನಮಸ್ಕಾರ. ಸರ್ವಭೂತಾಂತರ್ಯಾಮಿಯಾದ ನಿನಗೆ ನಮಸ್ಕಾರ. ಯಾರ ಕೇಶಗಳಲ್ಲಿ ಮೋಡ-ಗಳಿವೆಯೋ, ಎಲ್ಲ ಅಂಗಸಂಧಿಗಳಲ್ಲಿ ನದಿಗಳು ಇವೆಯೋ, ಉದರದಲ್ಲಿ ಸಮುದ್ರ-ಗಳಿವೆಯೋ ಅಂತಹ ಜಲರೂಪಿಯಾದ ನಿನಗೆ ನಮಸ್ಕಾರ. ನೀನು ಎಲ್ಲವನ್ನೂ ನೋಡುವವನು. ನಿನಗೆ ನಮಸ್ಕಾರ. ಜಿತೇಂದ್ರಿಯರೂ, ಪ್ರಾಣಾಯಾಮನಿಷ್ಠರೂ, ಸಂತುಷ್ಟರೂ, ಸಮದರ್ಶಿಗಳೂ ಆದ ಯೋಗಿಗಳು ಮಾತ್ರ ನಿನ್ನನ್ನು ಕಾಣಲು ಸಮರ್ಥರು, ನಿನಗೆ ನಮಸ್ಕಾರ.

ಅಂತಃಕರಣ ಮಲವನ್ನು ಪರಿಹರಿಸಿಕೊಂಡ ಯೋಗಿಯು ವಿದ್ಯೆಯಿಂದ ಅಪಾರವಾದ ಮಾಯೆಯನ್ನು ದಾಟಲು ಸಾಧ್ಯ. ಈ ವಿದ್ಯೆ ನಿನಗೆ ಅಧೀನ. ನಿನಗೆ ನಮಸ್ಕಾರ. ನಿನ್ನ ತೇಜಸ್ಸಿನಿಂದಲೆ ಸೂರ್ಯನು ಬೆಳಗುತ್ತಾನೆ. ನಿನ್ನ ತೇಜಸ್ಸು ತಮಸ್ಸನ್ನು ದೂರ ಮಾಡುತ್ತದೆ. ನೀನೇ ಪರತತ್ವ, ನಿನ್ನ ಪರಮೇಶ್ವರ ರೂಪಕ್ಕೆ ನಮಸ್ಕಾರ. ನೀನು ನಿತ್ಯಾನಂದ, ನಿನಗೆ ಯಾರೂ ಆಧಾರವಲ್ಲ; ನೀನು ಸ್ವತಂತ್ರ, ನಿಷ್ಕಲ್ಮಷ, ಪರಮ, ಶಿವ, ಪರಮಾತ್ಮ, ಪರಮೇಶ್ವರ. ನಾನು ನಿನಗೆ ಶರಣಾಗುತ್ತೇನೆ''

ಚತುರ್ಮುಖ ಬ್ರಹ್ಮದೇವರು ಹೀಗೆ ಶಿವನನ್ನು ಸ್ತುತಿಸಿ, ಆ ಚಿಂತನೆಯಿಂದಲೇ ಪ್ರಭಾವಿತರಾಗಿ ಕೈಮುಗಿದುಕೊಂಡು ನಿಂತರು. ಶಿವನು ಬ್ರಹ್ಮದೇವರಿಗೆ ದಿವ್ಯವಾದ ಯೋಗ ಸಾಮರ್ಥ್ಯವನ್ನೂ, ಈಶ್ವರಭಾವವನ್ನೂ, ವೈರಾಗ್ಯವನ್ನೂ ಕೊಟ್ಟನು. ತನ್ನನ್ನು ಆಶ್ರಯಿಸಿದವರ

ದುಃಖವನ್ನು ಪರಿಹರಿಸುವ ಶಿವನು ತನ್ನ ಕೋಮಲ ಕೈಗಳಿಂದ ಬ್ರಹ್ಮದೇವರನ್ನು ಮುಟ್ಟಿ, ಮುಗುಳ್ನಗುತ್ತಾ ಹೇಳಿದನು.

''ಬ್ರಹ್ಮನೇ, ನಾನು ನಿನ್ನ ಮಗನಾಗಬೇಕೆಂದು ನೀನು ಪ್ರಾರ್ಥಿಸಿದ್ದಿ. ಅದರಂತೆ ನಾನು ನಿನ್ನ ಮಗನಾದೆನು. ಇನ್ನು ಮುಂದೆ ವಿವಿಧ ಪ್ರಪಂಚವನ್ನು ಸೃಷ್ಟಿಸು. ನಾನೇ ಬ್ರಹ್ಮ, ವಿಷ್ಣು, ಹರ ಎಂದು ಮೂರು ರೂಪವನ್ನು ಪಡೆದಿದ್ದೇನೆ. ಈ ರೂಪಗಳಿಂದ ಕ್ರಮವಾಗಿ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವೆನು. ಸೃಷ್ಟಿಗಾಗಿ ನಾನು ನಿನ್ನನ್ನು ಮೊದಲನೆಯ ಮಗನನ್ನಾಗಿ, ನನ್ನ ಬಲಭಾಗದಿಂದ ಪಡೆದಿರುವೆನು. ಎಡಭಾಗದಿಂದ ವಿಷ್ಣುವು ಜನಿಸಿರುವನು. ಹೃದಯದಿಂದ (ಮಧ್ಯಭಾಗದಿಂದ) ನನ್ನ ರುದ್ರರೂಪವು ಜನಿಸಿದೆ. ನಾನು ಕೇವಲ ನನ್ನ ಇಚ್ಛೆಯಿಂದ ಮೇಲೆ ಹೇಳಿದ ಮೂರು ರೂಪಗಳನ್ನು, ಬೇರೆ ರೂಪಗಳನ್ನು ಪಡೆದಿದ್ದೇನೆ.

ಈ ತ್ರಿಮೂರ್ತಿಗಳಲ್ಲಿ ಯೋಗಿಗಳಿಗೆ ಶಾಂತಿಯನ್ನು ಕೊಡುವ ಮೂರು ಕಣ್ಣಿನ ಮಹೇಶ್ವರ ಮೂರ್ತಿಯು ಅತ್ಯುತ್ತಮ. ಈ ರೂಪವೇ ನಾನು. ಈ ರೂಪಕ್ಕೆ ಶಾಶ್ವತವಾದ ಐಶ್ವರ್ಯ, ವಿಜ್ಞಾನಗಳಿವೆ. ನಾನು ಅಂತಕನಾಗಿ ತಮೋಗುಣದ ನಿಯಾಮಕನಾಗಿ ಎಲ್ಲವನ್ನೂ ಸಂಹರಿಸುವೆನು. ನನ್ನನ್ನು ಯಾರೂ ಆಕ್ರಮಿಸಲಾರರು. ಪದ್ಮಸಂಭವನೆ! ನೀನು ನನ್ನನ್ನು ನೆನೆಸಿದಾಗ ನಿನ್ನಲ್ಲಿ ನನ್ನ ಸಾನ್ನಿಧ್ಯವುಂಟಾಗುತ್ತದೆ.'' ಇಷ್ಟು ಹೇಳಿ ಬ್ರಹ್ಮದೇವನನ್ನು ಅಭಿವಂದಿಸಿ, ತನ್ನ ಮಾನಸಪುತ್ರರೊಂದಿಗೆ ಶಿವನು ಅಂತರ್ಧ್ಯಾನವನ್ನು ಹೊಂದಿದನು.

ಚತುರ್ಮುಖಬ್ರಹ್ಮನು ಯೋಗಸಾಮರ್ಥ್ಯದಿಂದ ನಾನಾ ವಿಧವಾದ ಜಗತ್ತನ್ನು ಸೃಷ್ಟಿಸಿದನು. ಮರೀಚಿ, ಭೃಗು, ಅಂಗಿರಸ, ಪುಲಸ್ತ್ಯ ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠ ಇವರುಗಳನ್ನು ಯೋಗವಿದ್ಯೆಯಿಂದ ಸೃಷ್ಟಿಸಿದನು. ಇವರೆಲ್ಲರೂ ಸಾಧಕರು, ಬ್ರಹ್ಮವಾದಿಗಳು, ಬ್ರಹ್ಮನಿಗೆ ಸಮಾನರು. ಬ್ರಹ್ಮದೇವರು ಯುಗಧರ್ಮಗಳನ್ನು, ಬೇರೆ ಬೇರೆ ಸ್ಥಾನಾಭಿಮಾನಿ ದೇವತೆಗಳನ್ನು ಹಿಂದೆ ವರ್ಣಿಸಿದಂತೆ ಸೃಷ್ಟಿಸಿದರು.

* * *

## ಅಧ್ಯಾಯ-೧೧

**ಕೂರ್ಮ ಉವಾಚ :**

ಚತುರ್ಮುಖಬ್ರಹ್ಮನು ಮರೀಚಿ ಮೊದಲಾದ ತನ್ನ ಮಾನಸ ಪುತ್ರರೊಡನೆ ಕಠಿಣತಪಸ್ಸನ್ನು ಆಚರಿಸಿದನು. ತಪಸ್ಸನ್ನು ಮಾಡುತ್ತಿದ್ದ ಅವನ ಮುಖದಿಂದ ಪ್ರಲಯಾಗ್ನಿಯ ಜನಕನಾದ, ತ್ರಿಶೂಲವನ್ನು ಕೈಯಲ್ಲಿ ಹಿಡಿದ, ಮುಕ್ಕಣ್ಣ ರುದ್ರನು ಆವಿರ್ಭವಿಸಿದನು. ಅವನ ಶರೀರದ ಒಂದು ಅರ್ಧ ಭಾಗ ಪುರುಷರೂಪವನ್ನೂ, ಇನ್ನೊಂದು ಅರ್ಧಭಾಗ ಸ್ತ್ರೀರೂಪ ವನ್ನು ಹೊಂದಿ, ನೋಡಲಾಗದಷ್ಟು ಭಯಂಕರವಾಗಿತ್ತು. ಭೀತನಾದ ಬ್ರಹ್ಮನೂ ಕೂಡ "ನಿನ್ನ ದೇಹವನ್ನು ವಿಭಾಗಿಸು" ಎಂದು ಹೇಳಿ ಅಂತರ್ಧಾನನಾದನು. ರುದ್ರನು ತನ್ನ ಶರೀರವನ್ನು ಸ್ತ್ರೀ ಮತ್ತು ಪುರುಷ ಎಂದು ಎರಡು ಭಾಗ ಮಾಡಿದನು. ಪುರುಷರೂಪವನ್ನು ಹನ್ನೊಂದು ಭಾಗ ಮಾಡಿದನು. ಇವರೇ ಏಕಾದಶರುದ್ರರು ಎಂದು ಪ್ರಸಿದ್ಧರು. ಕಪಾಲಿ, ಈಶ ಮೊದಲಾದ ನಾಮಗಳನ್ನು ಹೊಂದಿದ ಇವರು ದೇವಕಾರ್ಯದಲ್ಲಿ ನಿಯೋಜಿತರಾದರು.

ರುದ್ರನು ತನ್ನ ಸ್ತ್ರೀರೂಪವನ್ನು ಸೌಮ್ಯ, ಅಸೌಮ್ಯ, ಶಾಂತ, ಅಶಾಂತ, ನೀಲ, ಅನೀಲ ಎಂಬ ವಿವಿಧ ರೂಪಗಳಿಂದ ವಿಭಾಗಿಸಿದನು. ಈ ರೂಪಗಳು ಲಕ್ಷ್ಮಿ ಮೊದಲಾದ ವಿಭೂತಿಗಳು. ಈ ರೂಪಗಳಿಂದ ಶಾಂಕರಿಯು (ಶಂಕರನ ಸ್ತ್ರೀರೂಪ) ಲೋಕವನ್ನು ವ್ಯಾಪಿಸಿದೆ. ಶಾಂಕರಿಯು ಮಹಾದೇವನ ಆದೇಶದಂತೆ ತನ್ನನ್ನು ಮತ್ತೆ ವಿಭಾಗಿಸಿ ಚತುರ್ಮುಖ ಬ್ರಹ್ಮನ ಬಳಿ ಹೋದಳು. ಬ್ರಹ್ಮನು "ದಕ್ಷ ಪ್ರಜಾಪತಿಯ ಮಗಳಾಗಿ ಹುಟ್ಟು" ಎಂದು ಅವಳಿಗೆ ಹೇಳಿದನು. ಅವಳು ಹಾಗೆ ಮಾಡಿದಳು. ಬ್ರಹ್ಮನ ಆಜ್ಞೆಯಂತೆ ದಕ್ಷನು ಅವಳನ್ನು ರುದ್ರನಿಗೆ ಕೊಟ್ಟು ಮದುವೆ ಮಾಡಿದನು.

ಬ್ರಹ್ಮನ ಆದೇಶದಂತೆ ಶಾಂಕರಿಯು ಮತ್ತೊಮ್ಮೆ ತನ್ನನ್ನು ವಿಭಾಗಿಸಿಕೊಂಡು ಮೇನಾದೇವಿಯಲ್ಲಿ ಹಿಮವಂತನ ಮಗಳಾಗಿ ಹುಟ್ಟಿದಳು. ದೇವತೆಗಳ ಕಾರ್ಯಸಾಧನೆಗಾಗಿ ಹಿಮವಂತನು ಇವಳನ್ನು ರುದ್ರನಿಗೆ ಕೊಟ್ಟು ಮದುವೆ ಮಾಡಿದನು. ಇವಳೇ ಮಾಹೇಶ್ವರಿ. ಶಿವನ ಅರ್ಧನಾರೀ. ಸುರ-ಅಸುರರಿಂದ ನಮಸ್ಕೃತಳು. ಇವಳ ಪ್ರಭಾವ ಅಸದೃಶ ಎಂದು ಇಂದ್ರಾದಿ ದೇವತೆಗಳು, ಮುನಿಗಳೂ ಹೇಳುತ್ತಾರೆ. ಶಿವ ಅಥವಾ ಶ್ರೀಹರಿ ಇವಳ ಪ್ರಭಾವವನ್ನು ಸರಿಯಾಗಿ ತಿಳಿದಿದ್ದಾರೆ.

* * *

## ಅಧ್ಯಾಯ-೧೨

**ಋಷಯ ಊಚು :**

ಶಂಕರನ ಅರ್ಧಾಂಗಿಯಾದ ಶಿವಾ, ಸತೀ, ಹೈಮವತೀ ಎಂದು ಪ್ರಸಿದ್ಧಳಾದ ಈ ದೇವಿಯ ಬಗ್ಗೆ ಮತ್ತಷ್ಟು ವಿವರವಾಗಿ ದಯವಿಟ್ಟು ಹೇಳಿರಿ.

**ಕೂರ್ಮ ಉವಾಚ :**

ಈ ವಿಚಾರವನ್ನು ಬಹಳ ಹಿಂದೆ ಚತುರ್ಮುಖ ಬ್ರಹ್ಮನು ಮೇರುಪರ್ವತದಲ್ಲಿ ದೇವತೆಗಳ ಸಭೆಯಲ್ಲಿ ಹೇಳಿದ್ದನು. ಇದು ಬಹಳ ರಹಸ್ಯವಾದ ವಿಷಯ. ಇದನ್ನು ಎಚ್ಚರದಿಂದ ರಕ್ಷಿಸಬೇಕು. ಇದು ಶ್ರೇಷ್ಠವಾದ ಸಾಂಖ್ಯಶಾಸ್ತ್ರ, ಬ್ರಹ್ಮವಿದ್ಯೆ. ಸಂಸಾರಸಾಗರದಲ್ಲಿ ಮಗ್ನರಾದವರ ಬಿಡುಗಡೆಯ ದಾರಿ.

ವ್ಯೋಮ ಎಂಬ ಹೆಸರಿನ, ಸರ್ವೋತ್ತಮವಾದ ಜ್ಞಾನರೂಪವಾದ ಮಾಹೇಶ್ವರೀ ಶಕ್ತಿಯೇ ಹೈಮವತೀ *(ಹಿಮವಂತನ ಮಗಳು)* ಈ ಶಕ್ತಿ ಮಂಗಳಕರ, ಸರ್ವವ್ಯಾಪಿ, ಅಂತರಹಿತ, ತ್ರಿಗುಣ*(ಸತ್ವ, ರಜಸ್, ತಮಸ್)*ರಹಿತ, ಜ್ಞಾನರೂಪ. ಈ ಶಕ್ತಿಗೆ ಅನೇಕ ವಿಭಾಗಗಳಿವೆ. ದೇಹ, ಇಂದ್ರಿಯ ಮೊದಲಾದ ಕಲೆಗಳು ಈ ಶಕ್ತಿಗೆ ಇಲ್ಲ.

ಕಲಾರಹಿತನಾದ ಶುದ್ಧ ತತ್ತ್ವನನ್ನು ಈ ಶಕ್ತಿಯು ಅವಲಂಬಿಸಿದೆ. ಆ ತತ್ತ್ವದ ತೇಜಸ್ಸಿನಿಂದಲೇ ಈ ಶಕ್ತಿಗೆ ಅಸ್ತಿತ್ವ. ಈ ಶಕ್ತಿ ಸೂರ್ಯನ ಪ್ರಭೆಯಂತೆ ಇದೆ. ಅದ್ವಿತೀಯವಾದ ಈ ಮಾಹೇಶ್ವರೀ ಶಕ್ತಿಯು ಅನೇಕ ಉಪಾಧಿಗಳ ಸಂಬಂಧದಿಂದ ನಾನಾ ರೂಪದಿಂದ ನಾನಾ ಪಾತ್ರಗಳನ್ನು ವಹಿಸುತ್ತಿದೆ. ಈ ಪ್ರಪಂಚವನ್ನು ಈ ಶಕ್ತಿಯು ಸೃಷ್ಟಿಸಿದೆ. ಶಾಂತಿ, ವಿದ್ಯಾ, ಪ್ರತಿಷ್ಠಾ ಮತ್ತು ನಿವೃತ್ತಿ ಎಂಬ ನಾಲ್ಕು ಶಕ್ತಿಗಳು ಇವಳ ಸ್ವರೂಪವಾಗಿವೆ. ಹೈಮವತಿಯ ಈ ನಾಲ್ಕು ಶಕ್ತಿಗಳಿಂದ ಪರಮೇಶ್ವರನು ಚತುರ್ವ್ಯೂಹ ಎಂದು ಪ್ರಸಿದ್ಧನಾಗಿದ್ದಾನೆ. ನಾಲ್ಕು ವೇದಗಳಿಂದ ಪ್ರತಿಪಾದ್ಯನಾದ ಪರಮೇಶ್ವರನು ಈ ನಾಲ್ಕು ಶಕ್ತಿಗಳ ದೇವಿಯಿಂದ ಸ್ವಾತ್ಮಾನಂದವನ್ನು ಅನುಭವಿಸುತ್ತಾನೆ. ಈ ಶಕ್ತಿ ಅತುಲೈಶ್ವರ್ಯವನ್ನು ಅನಾದಿಯಿಂದ ಹೊಂದಿದೆ. ಈ ಐಶ್ವರ್ಯ ಮತ್ತು ಪರಮಚೇತನನಾದ ರುದ್ರನ ಸಂಬಂಧ-ಇವುಗಳಿಂದ ಈ ಶಕ್ತಿ ಅನಂತವಾಗಿದೆ. ಈ ಶಕ್ತಿ ಎಲ್ಲ ವಸ್ತುಗಳಲ್ಲಿ ಕಂಡು ಬರುತ್ತಿರುವ ವಿವಿಧ ಪ್ರವೃತ್ತಿಗಳ ಪ್ರೇರಕ. ಈ ಶಕ್ತಿಗೆ ಕಾಲ, ಹರಿ, ಪ್ರಾಣ, ಮಹೇಶ್ವರ ಎಂದು ಹೆಸರು. ಇಡೀ ಜಗತ್ತು ಈ ಶಕ್ತಿಯಲ್ಲಿ ಹೆಣೆದುಕೊಂಡಿದೆ (ಸಂಪೂರ್ಣವಾಗಿ ಅಧೀನವಾಗಿದೆ) ಕಾಲರೂಪನಾದ ಈ ಶಕ್ತಿಯಿಂದಲೇ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳು ನಡೆಯುತ್ತವೆ. ಇಡೀ ಪ್ರಪಂಚ ಕಾಲಾಧೀನ. ಕಾಲ ಯಾರಿಗೂ ವಶವಲ್ಲ. ಪ್ರಕೃತಿ, ಪುರುಷ, ಮಹತ್ವ ಅಹಂಕಾರತತ್ವ ಮೊದಲಾದ ಎಲ್ಲ ತತ್ವಗಳೂ ಕಾಲ ಶಕ್ತಿಗೆ ಅಧೀನವಾಗಿವೆ. ಈ ಶಕ್ತಿಗೆ

ಮಾಯಾ ಎಂದು ಹೆಸರು. ಈ ಶಕ್ತಿಯನ್ನು ಉಪಯೋಗಿಸಿಕೊಂಡು ಪರಮೇಶ್ವರನ ಲೋಕಕ್ಕೆ ಭ್ರಮೆಯನ್ನುಂಟುಮಾಡುವನು. ಈ ಮಾಯೆಯಿಂದಲೇ ಪರಮೇಶ್ವರನ ವಿಶ್ವರೂಪವು ಪ್ರಕಟವಾಗುವುದು. ಜ್ಞಾನಶಕ್ತಿ, ಕ್ರಿಯಾಶಕ್ತಿ, ಪ್ರಾಣಶಕ್ತಿ- ಇವುಗಳು ಪರಮೇಶ್ವರನ ಇನ್ನಷ್ಟು ಶಕ್ತಿಗಳು. ಮಾಯೆಯಲ್ಲಿ ಎಲ್ಲ ಶಕ್ತಿಗಳ ಸಮಾವೇಶವಿದೆ.

ಈ ಮಾಯೆಯ ಪ್ರಭಾವವನ್ನು ತಪ್ಪಿಸಿಕೊಳ್ಳುವುದು ಬಹಳ ಕಷ್ಟ. ಮಾಯಾ-ನಿಯಾಮಕನಾದ, ಮಾಯಾವಿ ಪರಮೇಶ್ವರನು ಎಲ್ಲ ಶಕ್ತಿಗಳ ಮೇಲೆ ಪ್ರಭುತ್ವವುಳ್ಳವನು. ಅವನು ಕಾಲ. ಕಾಲ ನಿರ್ಮಾಪಕ. ಈ ಜಗತ್ತು ಕಾಲಾಧೀನ. ಕಾಲವೇ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ನಿಮಿತ್ತಕಾರಣ.

ಶಕ್ತಿಯು ಶಿವನನ್ನು ಆಶ್ರಯಿಸಿರುವುದರಿಂದ ಅವನಿಗೆ ಶಕ್ತಿಮಾನ್ ಎಂದು ಹೆಸರು. ಶಿವನನ್ನು ಆಶ್ರಯಿಸಿದ ಮೂಲಶಕ್ತಿಯಿಂದ ಇತರ ಶಕ್ತಿಗಳೂ, ಶಕ್ತ್ಯಾಧಾರಗಳೂ ಹುಟ್ಟಿವೆ. ತತ್ವಚಿಂತಕರಾದ ಯೋಗಿಗಳು ಶಕ್ತಿ ಮತ್ತು ಶಕ್ತ್ಯಾಧಾರಗಳಿಗೆ ಭೇದವನ್ನು ಹೇಳುತ್ತಾರೆ. ಅಭೇದವನ್ನು ಕಾಣುತ್ತಾರೆ. ಶಕ್ತಿ ಪಾರ್ವತಿ ಸ್ವರೂಪ. ಶಂಕರನೇ ಶಕ್ತಿಗೆ ಆಧಾರ. ಈ ವ್ಯತ್ಯಾಸವು ಬ್ರಹ್ಮವಾದಿಗಳಿಂದ ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಪರಮೇಶ್ವರನ ಪತ್ನಿಯಾದ ಈ ಶಕ್ತಿಯು ಭೋಗಯೋಗ್ಯ. ಶಿವನು ಭೋಕ್ತಾ. ಮನ್ಮಥಾಂತಕನಾದ ಸರ್ವನಿಯಾಮಕನಾದ ಶಿವನೇ ಮಂತ್ರ. ಎಂದರೆ, ಎಲ್ಲ ಜಿಜ್ಞಾಸುಗಳಿಗೆ ಸ್ಫೂರ್ತಿಯನ್ನು ನೀಡಿ ಜ್ಞಾನವನ್ನುಂಟು ಮಾಡುವವನು. ತಿಳಿಯಲ್ಪಡಬೇಕಾದ ವಿಷಯಗಳ ನಿಯಾಮಕಳೇ ಎಂದರೆ ಮತಿಪ್ರೇರಕಳೇ ಪಾರ್ವತಿ. ಬ್ರಹ್ಮವಾದಿಗಳು ಎಲ್ಲ ವೇದಾಂತವಾದಗಳಲ್ಲಿ ದೇವಿಯ ಈ ದಿವ್ಯ ಮಹಿಮೆಯನ್ನೇ ಪ್ರತಿಪಾದಿಸಿದ್ದಾರೆ.

## ಮಹಾದೇವಿಯ ಸ್ವರೂಪ :

ಮಹಾದೇವಿಯು ಅದ್ವಿತೀಯ, ಸರ್ವವ್ಯಾಪಕ, ಸೂಕ್ಷ್ಮ, ನಿರ್ವಿಕಾರ ಸ್ವರೂಪವನ್ನು ಹೊಂದಿದ್ದಾಳೆ. ಅವಳು ಆನಂದ ಸ್ವರೂಪಳೂ, ನಾಶರಹಿತಳೂ ಪೂರ್ಣಳೂ ಆಗಿದ್ದಾಳೆ. ಅವಳೇ ಪರಾತ್ಪರತರ ತತ್ತ್ವ. ನಮ್ಮ ಅಜ್ಞಾನವೇ ಅವಳ ಅದರ್ಶನಕ್ಕೆ ಕಾರಣ. ಅವಳ ಸ್ವರೂಪವು ಶುಭವೂ, ಶುದ್ಧವೂ, ನಿರಂಜನವೂ ಆಗಿದೆ. ಅಲ್ಲಿ ಸತ್ವ-ರಜಸ್-ತಮಸ್‌ಗಳಿಲ್ಲ. ಅಜ್ಞಾನವಿಲ್ಲ. ಇವಳೇ ಸೃಷ್ಟಿಕರ್ತಳೂ, ಧಾರಕಳೂ ಆಗಿದ್ದಾಳೆ. ಪರಮಾನಂದವನ್ನು ಬಯಸುವ ಎಲ್ಲರ ಸಂಸಾರ ತಾಪವನ್ನೂ ತನ್ನ ಪ್ರಭು ಶಿವನ ಅನುಗ್ರಹದಿಂದ ಪರಿಹರಿಸುತ್ತಾಳೆ. ಆದ್ದರಿಂದ ಮುಕ್ತಿಯನ್ನು ಬಯಸುವವರೆಲ್ಲ ಪಾರ್ವತಿಯನ್ನು ಆಶ್ರಯಿಸಬೇಕು.

ಪಾರ್ವತಿಯ ತಂದೆ-ತಾಯಿಯರೇ ಮುಕ್ತಿಗಾಗಿ ಅವಳನ್ನು ಆಶ್ರಯಿಸಿದರು. ಕಠಿಣವಾದ ತಪಸ್ಸನ್ನು ಆಚರಿಸಿ ಅವರು ಅವಳನ್ನು ಮಗಳನ್ನಾಗಿ ಪಡೆದಿದ್ದರು. ಅವಳು ಹುಟ್ಟಿದಾಗ

ಸೋಽಪಿ ದೃಷ್ಟ್ವಾ ತತೋ ದೇವೀಂ ತರುಣಾದಿತ್ಯಸನ್ನಿಭಾಮ್ ।
ಕಪರ್ದಿನೀಂ ಚತುರ್ವಕ್ತ್ರಾಂ ತ್ರಿನೇತ್ರಾಮತಿಲಾಲಸಾಮ್ ॥

ಅಷ್ಟಹಸ್ತಾಂ ವಿಶಾಲಾಕ್ಷೀಂ ಚಂದ್ರಾವಯವಭೂಷಣಾಮ್ ।
ನಿರ್ಗುಣಾಂ ಸಗುಣಾಂ ಸಾಕ್ಷಾತ್ ಸದಸದ್ವ್ಯಕ್ತಿವರ್ಜಿತಾಮ್ ॥

ಪ್ರಖರ ಸೂರ್ಯನಂತೆ ತೇಜಸ್ವಿನಿಯಾಗಿದ್ದಳು. ಜಟಾಜೂಟವನ್ನು ಹೊಂದಿದ್ದಳು. ನಾಲ್ಕು ಮುಖಗಳನ್ನು, ಮೂರು ಕಣ್ಣುಗಳನ್ನು ಹೊಂದಿದ್ದು ಕುತೂಹಲಕಾರಿಯಾಗಿದ್ದಳು; ಅವಳಿಗೆ ಎಂಟು ಕೈಗಳಿದ್ದವು. ಕಣ್ಣುಗಳು ವಿಶಾಲವಾಗಿದ್ದವು. ಚಂದ್ರಾಭರಣವನ್ನು ಧರಿಸಿದ್ದಳು. ತ್ರಿಗುಣರಹಿತಳೂ, ಗುಣಸಂಪನ್ನಳೂ, ಆಗಿದ್ದಳು. ಅವಳ ತೇಜಸ್ಸಿನಿಂದ ಸ್ತಬ್ಧನಾದ ಹಿಮವಂತನು ಹೆದರಿ, ಕೈಮುಗಿದು ನಮಸ್ಕರಿಸಿ

ಕಾ ತ್ವಂ ದೇವಿ ವಿಶಾಲಾಕ್ಷಿ ಶಶಾಂಕಾವಯವಾಂಕಿತೇ ।
ನ ಜಾನೇ ತ್ವಾಮಹಂ ವತ್ಸೇ ಯಥಾವದ್ ಬ್ರೂಹಿ ಪೃಚ್ಛತೇ ॥

ದೇವಿ! ವಿಶಾಲಾಕ್ಷಿ! ಚಂದ್ರಾಭರಣಭೂಷಿತೆ! ನೀನು ಯಾರು ಎಂದು ನನಗೆ ತಿಳಿದಿಲ್ಲ! ದಯವಿಟ್ಟು ಹೇಳು ಎಂದು ಪ್ರಾರ್ಥಿಸಿದನು.

ಪಾರ್ವತೀ ಉವಾಚ :

ಮಾಂ ವಿದ್ಧಿ ಪರಮಾಂ ಶಕ್ತಿಂ ಮಹೇಶ್ವರ ಸಮಾಶ್ರಯಾಮ್ ।
ಅನನ್ಯಾಮವ್ಯಯಾಮೇಕಾಂ ಯಾಂ ಪಶ್ಯಂತಿ ಮುಮುಕ್ಷವಃ ॥

ಅಹಂ ಹಿ ಸರ್ವಭಾವಾನಾಮಾತ್ಮಾ ಸರ್ವಾತ್ಮನಾ ಶಿವಾ ।
ಶಾಶ್ವತೈಶ್ವರ್ಯವಿಜ್ಞಾನಮೂರ್ತಿಃ ಸರ್ವ ಪ್ರವರ್ತಿಕಾ ।
ಅನಂತಾನಂತಮಹಿಮಾ ಸಂಸಾರಾರ್ಣವತಾರಿಣೀ ॥

ನಾನು ಮಹೇಶ್ವರನನ್ನು ಆಶ್ರಯಿಸಿರುವ ಪರಮಶಕ್ತಿ. ಮೋಕ್ಷವನ್ನು ಬಯಸುವ ಸಾಧಕರು ನನ್ನನ್ನು ಅನನ್ಯ *(ಅನ್ಯರಿಗೆ ಅಧೀನಳಲ್ಲ)* ನಾಶರಹಿತ, ಅದ್ವಿತೀಯ ಎಂದು ಚಿಂತಿಸುತ್ತಾರೆ. ನಾನು ಎಲ್ಲ ವಸ್ತುಗಳ ಅಂತರ್ನಿಯಾಮಕಳು. ಸರ್ವಾತ್ಮನಾ ಮಂಗಳ ಸ್ವರೂಪಳು. ಶಾಶ್ವತವಾದ ಐಶ್ವರ್ಯ ಮತ್ತು ವಿಜ್ಞಾನಗಳ ಮೂರ್ತಿಯೇ ಆಗಿದ್ದೇನೆ. ಸರ್ವಪ್ರವರ್ತಕಳೂ, ಅನಂತಾನಂತಮಹಿಮವುಳ್ಳವಳೂ, ಸಂಸಾರಸಾಗರವನ್ನು ದಾಟಿಸುವವಳೂ ಆಗಿದ್ದೇನೆ.

ಇಷ್ಟು ಹೇಳಿ ಹಿಮವಂತನಿಗೆ ದಿವ್ಯದೃಷ್ಟಿಯನ್ನು ಕೊಟ್ಟು ತನ್ನ ಈಶ್ವರ ಸ್ವರೂಪವನ್ನು ತೋರಿಸಿದಳು.

## ಪಾರ್ವತಿಯ ದಿವ್ಯರೂಪ :

ಕೋಟಿಸೂರ್ಯ ಪ್ರತೀಕಾಶಂ ತೇಜೋಬಿಂಬಂ ನಿರಾಕುಲಮ್ ।
ಜ್ವಾಲಾಮಾಲಾ ಸಹಸ್ರಾಢ್ಯಂ ಕಾಲಾನಲಶತೋಪಮಮ್ ।
ದಂಷ್ಟ್ರಾಕರಾಲಂ ದುರ್ಧರ್ಷಂ ಜಟಾಮಂಡಲಮಂಡಿತಮ್ ॥

ಕಿರೀಟಿನಂ ಗದಾಹಸ್ತಂ ಶಂಖಚಕ್ರಧರಂ ತಥಾ ।
ತ್ರಿಶೂಲವರಹಸ್ತಂ ಚ ಘೋರರೂಪಂ ಭಯಾನಕಮ್ ॥

ಪ್ರಶಾಂತಂ ಸೌಮ್ಯವದನಮನಂತಾಶ್ಚರ್ಯ ಸಂಯುತಮ್ ।
ಚಂದ್ರಾವಯವಲಕ್ಷ್ಮಾಣಂ ಚಂದ್ರಕೋಟಿಸಮಪ್ರಭಮ್ ।
ಕಿರೀಟಿನಂ ಗದಾಹಸ್ತಂ ನೂಪುರೈರುಪಶೋಭಿತಮ್ ।
ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ॥

ಶಂಖಚಕ್ರಧರಂ ಕಾಮ್ಯಂ ತ್ರಿನೇತ್ರಂ ಕೃತ್ತಿವಾಸಸಮ್ ।
ಅಂಡಸ್ಥಂ ಚಾಂಡಬಾಹ್ಯಸ್ಥಂ ಬಾಹ್ಯಮಾಭ್ಯಂತರಂ ಪರಮ್ ॥

ಸರ್ವಶಕ್ತಿಮಯಂ ಶುಭ್ರಂ ಸರ್ವಾಕಾರಂ ಸನಾತನಮ್ ।
ಬ್ರಹ್ಮೇಂದ್ರೋಪೇಂದ್ರ ಯೋಗೀಂದ್ರೈರ್ವಂದ್ಯಮಾನಪದಾಂಬುಜಮ್ ।
ಸರ್ವತಃ ಪಾಣಿಪಾದಾಂತಾಂ ಸರ್ವತೋಽಕ್ಷಿಶಿರೋಮುಖಮ್ ।
ಸರ್ವಮಾವೃತ್ಯ ತಿಷ್ಠಂತೀಂ ದದರ್ಶ ಪರಮೇಶ್ವರೀಮ್ ॥

ಕೋಟಿ ಸೂರ್ಯರ ತೇಜಸ್ಸನ್ನು ಹೊಂದಿದ ಆದರೂ ತಾಪಕರವಲ್ಲದ ತೇಜೋಬಿಂಬವಾದ ಸಾವಿರಾರು ಜ್ವಾಲೆಗಳ ಮಾಲೆಯನ್ನು ಹೊಂದಿದ; ನೂರಾರು ಪ್ರಲಯಾಗ್ನಿಗಳಿಗೆ ಸಮವಾದ ಕೋರೆಹಲ್ಲುಗಳಿಂದ ಕರಾಲವೂ, ಯಾವುದೇ ರೀತಿಯಿಂದ ತಿರಸ್ಕರಿಸಲಾಗದ್ದೂ ಜಟಾಮಂಡಲ ಮಂಡಿತವೂ ಆದ ತಲೆಯಲ್ಲಿ ಕಿರೀಟವನ್ನು ಧರಿಸಿದ, ಕೈಯಲ್ಲಿ ಗದೆ, ಶಂಖ, ಚಕ್ರ, ತ್ರಿಶೂಲಗಳನ್ನು ಹಿಡಿದ, ಘೋರವೂ, ಭಯಾನಕವೂ ಆದ, ಚಂದ್ರಾಭರಣ ಧಾರಿಯಾದ, ಕೋಟಿಚಂದ್ರರ ಪ್ರಭೆಯನ್ನು ಹೊಂದಿದ, ಪ್ರಶಾಂತ ಸೌಮ್ಯ ಮುಖದ ಆಶ್ಚರ್ಯಗಳ ನಿಧಿಯಾದ, ಗೆಜ್ಜೆಗಳಿಂದ ಶೋಭಿಸುತ್ತಿರುವ ದಿವ್ಯ ಮಾಲ್ಯ-ಅಂಬರಗಳನ್ನು ಧರಿಸಿದ, ದಿವ್ಯ-ಗಂಧ ಲೇಪನವುಳ್ಳ ತ್ರಿನೇತ್ರವುಳ್ಳ, ಬ್ರಹ್ಮಾಂಡದ ಒಳ ಹೊರಗನ್ನು ವ್ಯಾಪಿಸಿರುವ ಸರ್ವಶಕ್ತಿಮಯವೂ, ಶುಭ್ರವೂ, ಸರ್ವಾಕಾರವೂ, ಸನಾತನವೂ ಆದ ಬ್ರಹ್ಮ, ಇಂದ್ರ, ಉಪೇಂದ್ರ ಮತ್ತು ಯೋಗೀಂದ್ರರಿಂದ ನಮಸ್ಕರಿಸಲ್ಪಡುವ ಪಾದಕಮಲವುಳ್ಳ, ಸರ್ವತ್ರ ಪಾಣಿ, ಪಾದ, ಕಣ್ಣು, ತಲೆ, ಮುಖಗಳನ್ನು ಹೊಂದಿದ, ಎಲ್ಲವನ್ನೂ ವ್ಯಾಪಿಸಿರುವ ಪಾರ್ವತಿಯ ದಿವ್ಯರೂಪವನ್ನು ಹಿಮವಂತನು ನೋಡಿದನು.

ಅದ್ಭುತ ರೂಪದ ದರ್ಶನದಿಂದ ಅವನಿಗೆ ಏಕಕಾಲದಲ್ಲಿ ಭಯ-ಸಂತೋಷಗಳು ಉಂಟಾದವು. ಓಂಕಾರವನ್ನು ಸ್ಮರಿಸಿ ಏಕಾಗ್ರತೆಯಿಂದ ಸಾವಿರದೆಂಟು ನಾಮಗಳಿಂದ ಪಾರ್ವತಿಯನ್ನು ಸ್ತುತಿಸಿದನು.

**ಸಾವಿರದೆಂಟು ನಾಮಗಳು : ಪಾರ್ವತೀ ದೇವಿಯ ಸಹಸ್ರನಾಮ ಸ್ತೋತ್ರ :**

**ಶಿವೋಮಾ ಪರಮಾ ಶಕ್ತಿರನಂತಾ ನಿಷ್ಕಲಾಮಲಾ ।**
**ಶಾಂತಾ ಮಾಹೇಶ್ವರೀ ನಿತ್ಯಾ ಶಾಶ್ವತೀ ಪರಮಾಕ್ಷರಾ ॥**

**ಅಚಿಂತ್ಯಾ ಕೇವಲಾನಂತ್ಯಾ ಶಿವಾತ್ಮಾ ಪರಮಾತ್ಮಿಕಾ ।**
**ಅನಾದಿರವ್ಯಯಾ ಶುದ್ಧಾ ದೇವಾತ್ಮಾ ಸರ್ವಗಾಚಲಾ ॥**

**ಏಕಾನೇಕವಿಭಾಗಸ್ಥಾ ಮಾಯಾತೀತಾ ಸುನಿರ್ಮಲಾ ।**
**ಮಹಾಮಾಹೇಶ್ವರೀ ಸತ್ಯಾ ಮಹಾದೇವೀ ನಿರಂಜನಾ ॥**

**ಕಾಷ್ಠಾ ಸರ್ವಾಂತರಸ್ಥಾ ಚ ಚಿಚ್ಛಕ್ತಿರತಿ ಲಾಲಸಾ ।**
**ನಂದಾ ಸರ್ವಾತ್ಮಿಕಾ ವಿದ್ಯಾ ಜ್ಯೋತೀರೂಪಾಮೃತಾಕ್ಷರಾ ॥**

**ಶಾಂತಿಃ ಪ್ರತಿಷ್ಠಾ ಸರ್ವೇಷಾಂ ನಿವೃತ್ತಿರಮೃತಪ್ರದಾ ।**
**ವ್ಯೋಮಮೂರ್ತಿರ್ವ್ಯೋಮಲಯಾ ವ್ಯೋಮಾಧಾರಾಚ್ಯುತಾಲಯಾ ॥**

**ಅನಾದಿನಿಧನಾಮೋಘಾ ಕಾರಣಾತ್ಮಾ ಕುಲಾಕುಲಾ ।**
**ಸ್ವತಃ ಪ್ರಥಮಜಾ ನಾಭಿರಮೃತಸ್ಯಾತ್ಮಸಂಶ್ರಯಾ ॥**

**ಪ್ರಾಣೇಶ್ವರಪ್ರಿಯಾ ಮಾತಾ ಮಹಾಮಹಿಷವಾಹಿನೀ ।**
**ಪ್ರಾಣೇಶ್ವರೀ ಪ್ರಾಣರೂಪಾ ಪ್ರಧಾನಪುರುಷೇಶ್ವರೀ ॥**

**ಮಹಾಮಾಯಾ ಸುದುದುಷ್ಪರಾ ಮೂಲಪ್ರಕೃತಿರೀಶ್ವರೀ ।**
**ಸರ್ವಶಕ್ತಿಕಲಾಕಾರಾ ಜ್ಯೋತ್ಸ್ನಾ ದ್ಯೌರ್ಮಹಿಮಾಸ್ಪದಾ ॥**

**ಸರ್ವಾಕಾರನಿಯಂತ್ರೀ ಚ ಸರ್ವಭೂತೇಶ್ವರೇಶ್ವರೀ ।**
**ಸಂಸಾರಯೋನಿಃ ಸಕಲಾ ಸರ್ವಶಕ್ತಿಸಮುದ್ಭವಾ ॥**

**ಸಂಸಾರಪೋತಾ ದುರ್ವಾರಾ ದುರ್ನಿರೀಕ್ಷ್ಯಾ ದುರಾಸದಾ ।**
**ಪ್ರಾಣಶಕ್ತಿಃ ಪ್ರಾಣವಿದ್ಯಾ ಯೋಗಿನೀ ಪರಮಾ ಕಲಾ ॥**

**ಮಹಾವಿಭೂತಿರ್ದುರ್ಧರ್ಷಾ ಮೂಲಪ್ರಕೃತಿಸಂಭವಾ ।**
**ಅನಾದ್ಯನಂತವಿಭವಾ ಪರಮಾದ್ಯಾಪಕರ್ಷಿಣೀ ॥**

ಸರ್ಗಸ್ಥಿತ್ಯಂತಕರಣೀ ಸುದುರ್ವಾಚ್ಯಾ ದುರತ್ಯಯಾ ।
ಶಬ್ದಯೋನಿಃ ಶಬ್ದಮಯೀ ನಾದಾಖ್ಯಾ ನಾದವಿಗ್ರಹಾ ॥

ಅನಾದಿರವ್ಯಕ್ತಗುಣಾ ಮಹಾನಂದಾ ಸನಾತನೀ ।
ಆಕಾಶಯೋನಿರ್ಯೋಗಸ್ಥಾ ಮಹಾಯೋಗೇಶ್ವರೀಶ್ವರೀ ॥

ಮಹಾಮಾಯಾ ಸುದುಷ್ಪಾರಾ ಮೂಲಪ್ರಕೃತಿರೀಶ್ವರೀ ।
ಪ್ರಧಾನಪುರುಷಾತೀತಾ ಪ್ರಧಾನಪುರುಷಾತ್ಮಿಕಾ ॥

ಪುರಾಣಾ ಚಿನ್ಮಯೀ ಪುಂಸಾಮಾದಿ ಪುರುಷರೂಪಿಣೀ ।
ಭೂತಾಂತರಸ್ಥಾ ಕೂಟಸ್ಥಾ ಮಹಾಪುರುಷ ಸಂಜ್ಞಿತಾ ॥

ಜನ್ಮಮೃತ್ಯುಜರಾತೀತಾ ಸರ್ವಶಕ್ತಿಸಮನ್ವಿತಾ ।
ವ್ಯಾಪಿನೀಚಾನವಚ್ಛಿನ್ನಾ ಪ್ರಧಾನಾನುಪ್ರವೇಶಿನೀ ॥

ಕ್ಷೇತ್ರಜ್ಞಶಕ್ತಿರವ್ಯಕ್ತಲಕ್ಷಣಾ ಮಲವರ್ಜಿತಾ ।
ಅನಾದಿಮಾಯಾಸಂಭಿನ್ನಾ ತ್ರಿತತ್ತ್ವಾ ಪ್ರಕೃತಿಗ್ರಹಾ ॥

ಮಹಾಮಾಯಾಸಮುತ್ಪನ್ನಾ ತಾಮಸೀ ಪೌರುಷೀ ಧ್ರುವಾ ।
ವ್ಯಕ್ತಾವ್ಯಕ್ತಾತ್ಮಿಕಾ ಕೃಷ್ಣಾ ರಕ್ತಾ ಶುಕ್ಲಾ ಪ್ರಸೂತಿಕಾ ॥

ಅಕಾರ್ಯಾ ಕಾರ್ಯಜನನೀ ನಿತ್ಯಂ ಪ್ರಸವಧರ್ಮಿಣೀ ।
ಸರ್ಗಪ್ರಲಯನಿರ್ಮುಕ್ತಾ ಸೃಷ್ಟಿಸ್ಥಿತ್ಯಂತಧರ್ಮಿಣೀ ॥

ಬ್ರಹ್ಮಗರ್ಭಾ ಚತುರ್ವಿಂಶಾ ಪದ್ಮನಾಭಾಚ್ಯುತಾತ್ಮಿಕಾ ।
ವೈದ್ಯುತೀ ಶಾಶ್ವತೀ ಯೋನಿರ್ಜಗನ್ಮಾತೇಶ್ವರಪ್ರಿಯಾ ॥

ಸರ್ವಾಧಾರಾ ಮಹಾರೂಪಾ ಸರ್ವೈಶ್ವರ್ಯ ಸಮನ್ವಿತಾ ।
ವಿಶ್ವರೂಪಾ ಮಹಾಗರ್ಭಾ ವಿಶ್ವೇಶೇಚ್ಛಾನುವರ್ತಿನೀ ॥

ಮಹೀಯಸೀ ಬ್ರಹ್ಮಯೋನಿರ್ಮಹಾಲಕ್ಷ್ಮೀ ಸಮುದ್ಭವಾ ।
ಮಹಾವಿಮಾನಮಧ್ಯಸ್ಥಾ ಮಹಾನಿದ್ರಾತ್ಮಹೇತುಕಾ ॥

ಸರ್ವಸಾಧಾರಣೀ ಸೂಕ್ಷ್ಮಾ ಹ್ಯವಿದ್ಯಾ ಪಾರಮಾರ್ಥಿಕಾ ।
ಅನಂತರೂಪಾನಂತಸ್ಥಾ ದೇವೀ ಪುರುಷಮೋಹಿನೀ ॥

ಅನೇಕಾಕಾರಸಂಸ್ಥಾನಾ ಕಾಲತ್ರಯವಿವರ್ಜಿತಾ ।
ಬ್ರಹ್ಮಜನ್ಮಾ ಹರೇರ್ಮೂರ್ತಿಃ ಬ್ರಹ್ಮವಿಷ್ಣುಶಿವಾತ್ಮಿಕಾ ॥

ಬ್ರಹ್ಮೇಶವಿಷ್ಣುಜನನೀ ಬ್ರಹ್ಮಾಖ್ಯಾ ಬ್ರಹ್ಮ ಸಂಶ್ರಯಾ ।
ವ್ಯಕ್ತಾ ಪ್ರಥಮಜಾ ಬ್ರಾಹ್ಮೀ ಮಹತೀ ಬ್ರಹ್ಮರೂಪಿಣೀ ॥

ವೈರಾಗ್ಯೈಶ್ವರ್ಯಧರ್ಮಾತ್ಮಾ ಬ್ರಹ್ಮಮೂರ್ತಿರ್ಹೃದಿ ಸ್ಥಿತಾ ।
ಅಪಾಂಯೋನಿಃ ಸ್ವಯಂ ಭೂತಿರ್ಮಾನಸೀ ತತ್ವಸಂಭವಾ ॥

ಈಶ್ವರಾಣೀ ಚ ಶರ್ವಾಣಿ ಶಂಕರಾರ್ಧಶರೀರಿಣೀ ।
ಭವಾನೀ ಚೈವ ರುದ್ರಾಣೀ ಮಹಾಲಕ್ಷ್ಮೀರಥಾಂಬಿಕಾ ॥

ಮಹೇಶ್ವರಸಮುತ್ಪನ್ನಾ ಭುಕ್ತಿಮುಕ್ತಿಫಲಪ್ರದಾ ।
ಸರ್ವೇಶ್ವರೀ ಸರ್ವವಂದ್ಯಾ ನಿತ್ಯಂ ಮುದಿತಮಾನಸಾ ॥

ಬ್ರಹ್ಮೇಂದ್ರೋಪೇಂದ್ರ ನಮಿತಾ ಶಂಕರೇಚ್ಛಾನುವರ್ತಿನೀ ।
ಈಶ್ವರಾರ್ಧಾಸನಗತಾ ಮಹೇಶ್ವರಪತಿವ್ರತಾ ॥

ಸಕೃದ್ವಿಭಾತಾ ಸರ್ವಾರ್ತಿಸಮುದ್ರಪರಿಶೋಷಿಣೀ ।
ಪಾರ್ವತೀ ಹಿಮವತ್ಪುತ್ರೀ ಪರಮಾನಂದದಾಯಿನೀ ॥

ಗುಣಾಢ್ಯಾ ಯೋಗಜಾ ಯೋಗ್ಯಾ ಜ್ಞಾನಮೂರ್ತಿರ್ವಿಕಾಸಿನೀ ।
ಸಾವಿತ್ರೀ ಕಮಲಾ ಲಕ್ಷ್ಮೀಃ ಶ್ರೀರನಂತೋರಸಿ ಸ್ಥಿತಾ ॥

ಸರೋಜನಿಲಯಾ ಗಂಗಾ ಯೋಗನಿದ್ರಾ ಸುರಾರ್ದಿನೀ ।
ಸಾರಸ್ವತೀ ಸರ್ವವಿದ್ಯಾ ಜಗಜ್ಜ್ಯೇಷ್ಠಾ ಸುಮಂಗಲಾ ॥

ವಾಗ್ದೇವೀ ವರದಾ ವಾಚ್ಯಾ ಕೀರ್ತಿಃ ಸರ್ವಾರ್ಥಸಾಧಿಕಾ ।
ಯೋಗೀಶ್ವರೀ ಬ್ರಹ್ಮವಿದ್ಯಾ ಮಹಾವಿದ್ಯಾ ಸುಶೋಭನಾ ॥

ಗುಹ್ಯವಿದ್ಯಾತ್ಮವಿದ್ಯಾ ಚ ಧರ್ಮ ವಿದ್ಯಾತ್ಮ ಭಾವಿತಾ ।
ಸ್ವಾಹಾ ವಿಶ್ವಂಭರೀ ಸಿದ್ಧಿಃ ಸ್ವಧಾ ಮೇಧಾ ಧೃತಿಃ ಶ್ರುತಿಃ ॥

ನೀತಿಃ ಸುನೀತಿಃ ಸುಕೃತಿರ್ಮಾಧವೀ ನರವಾಹಿನೀ ।
ಪೂಜ್ಯಾ ವಿಭಾವತೀ ಸೌಮ್ಯಾ ಭೋಗಿನೀ ಭೋಗಶಾಯಿನೀ ॥

ಶೋಭಾ ಚ ಶಂಕರೀ ಲೋಲಾ ಮಾಲಿನೀ ಪರಮೇಷ್ಠಿನೀ ।
ತ್ರೈಲೋಕ್ಯಸುಂದರೀ ನಮ್ಯಾ ಸುಂದರೀ ಕಾಮಚಾರಿಣೀ ॥

ಮಹಾನುಭಾವಾ ಸತ್ತ್ವಸ್ಥಾ ಮಹಾಮಹಿಷಮರ್ದಿನೀ ।
ಪದ್ಮನಾಭಾ ಪಾಪಹರಾ ವಿಚಿತ್ರಮುಕುಟಾಂಗದಾ ॥

ಕಾಂತಾ ಚಿತ್ರಾಂಬರಧರಾ ದಿವ್ಯಾಭರಣಭೂಷಿತಾ ।
ಹಂಸಾಖ್ಯಾ ವ್ಯೋಮನಿಲಯಾ ಜಗತ್ಸೃಷ್ಟಿ ವಿವರ್ಧಿನೀ ॥

ನಿಯಂತ್ರೀ ಯಂತ್ರಮಧ್ಯಸ್ಥಾ ನಂದಿನೀ ಭದ್ರಕಾಲಿಕಾ ।
ಆದಿತ್ಯವರ್ಣಾ ಕೌಬೇರೀ ಮಯೂರವರವಾಹನಾ ॥

ವೃಷಾಸನಗತಾ ಗೌರೀ ಮಹಾಕಾಲೀ ಸುರಾರ್ಚಿತಾ ।
ಅದಿತಿರ್ನಿಯತಾ ರೌದ್ರಾ ಪದ್ಮಗರ್ಭಾ ವಿವಾಹನಾ ॥

ವಿರೂಪಾಕ್ಷೀ ಲೇಲಿಹಾನಾ ಮಹಾಸುರವಿನಾಶಿನೀ ।
ಮಹಾಫಲಾನವದ್ಯಾಂಗೀ ಕಾಮರೂಪಾ ವಿಭಾವರೀ ॥

ವಿಚಿತ್ರರತ್ನಮುಕುಟಾ ಪ್ರಣತಾರ್ತಿಪ್ರಭಂಜಿನೀ ।
ಕೌಶಿಕೀ ಕರ್ಷಿಣೀ ರಾತ್ರಿಸ್ತ್ರಿದಶಾರ್ತಿವಿನಾಶಿನೀ ॥

ಬಹುರೂಪಾ ಸ್ವರೂಪಾ ಚ ವಿರೂಪಾ ರೂಪವರ್ಜಿತಾ ।
ಭಕ್ತಾರ್ತಿಶಮನೀ ಭವ್ಯಾ ಭವತಾಪವಿನಾಶಿನೀ ॥

ನಿರ್ಗುಣಾ ನಿತ್ಯವಿಭವಾ ನಿಸ್ಸಾರಾ ನಿರಪತ್ರಪಾ ।
ತಪಸ್ವಿನೀ ಸಾಮಗೀತಿರ್ಭವಾಂಕನಿಲಯಾಲಯಾ ॥

ದೀಕ್ಷಾ ವಿದ್ಯಾಧರೀ ದೀಪ್ತಾ ಮಹೇಂದ್ರವಿನಿಪಾತಿನೀ ।
ಸರ್ವಾತಿಶಾಯಿನೀ ವಿಶ್ವಾ ಸರ್ವಸಿದ್ಧಿಪ್ರದಾಯಿನೀ ॥

ಸರ್ವೇಶ್ವರಪ್ರಿಯಾ ಭಾರ್ಯಾ ಸಮುದ್ರಾಂತರವಾಸಿನೀ ।
ಅಕಲಂಕಾ ನಿರಾಧಾರಾ ನಿತ್ಯಸಿದ್ಧಾ ನಿರಾಮಯಾ ॥

ಕಾಮಧೇನುರ್ಬೃಹದ್ಗರ್ಭಾ ಧೀಮಂತೀ ಮೋಹನಾಶಿನೀ ।
ನಿಃಸಂಕಲ್ಪಾ ನಿರಾತಂಕಾ ವಿನಯಾ ವಿನಯಪ್ರಿಯಾ ॥

ಜ್ವಾಲಾಮಾಲಾಸಹಸ್ರಾಢ್ಯಾ ದೇವದೇವೀ ಮನೋಮಯೀ ।
ಮಹಾಭಗವತೀ ಭರ್ಗಾ ವಾಸುದೇವ ಸಮುದ್ಭವಾ ॥

ಮಹೇಂದ್ರೋಪೇಂದ್ರಭಗಿನೀ ಭಕ್ತಿಗಮ್ಯಾ ಪರಾವರಾ ।
ಜ್ಞಾನಜ್ಞೇಯಾ ಜರಾತೀತಾ ವೇದಾಂತವಿಷಯಾಗತಿಃ ॥

ದಕ್ಷಿಣಾ ದಹತೀ ದೀರ್ಘಾ ಸರ್ವಭೂತನಮಸ್ಕೃತಾ ।
ಯೋಗಮಾಯಾ ವಿಭಾಗಜ್ಞಾ ಮಹಾಮೋಹಾ ಗರೀಯಸೀ ॥

ಸಂಧ್ಯಾ ಸರ್ವಸಮುದ್ಭೂತಿರ್ಮಹಾಶಕ್ತಿರ್ಮಹಾಮತಿಃ ।
ಬೀಜಾಂಕುರ ಸಮುದ್ಭೂತಿಃ ಮಹಾಶಕ್ತಿರ್ಮಹಾಮತಿ ॥

ಕ್ಷಾಂತಿಃ ಪ್ರಜ್ಞಾ ಚಿತಿಃ ಸಚ್ಚಿನ್ಮಹಾಭೋಗೀಂದ್ರಶಾಯಿನೀ ।
ವಿಕೃತಿಃ ಶಾಂಕರೀ ಶಾಸ್ತ್ರಿರ್ಗಣಗಂಧರ್ವಸೇವಿತಾ ॥

ವೈಶ್ವಾನರೀ ಮಹಾಶಾಲಾ ಮಹಾಸೇನಾ ಗುಹಪ್ರಿಯಾ ।
ಮಹಾರಾತ್ರಿಃ ಶಿವಾನಂದಾ ಶಚೀ ದುಃಸ್ವಪ್ನನಾಶಿನೀ ॥

ಇಜ್ಯಾ ಪೂಜ್ಯಾ ಜಗದ್ಧಾತ್ರೀ ದುರ್ವಿನೇಯಾ ಸುರೂಪಿಣೀ ।
ತಪಸ್ವಿನೀ ಸಮಾಧಿಸ್ಥಾ ತ್ರಿನೇತ್ರಾ ದಿವಿ ಸಂಸ್ಥಿತಾ ॥

ಗುಹಾಂಬಿಕಾ ಗುಣೋತ್ಪತ್ತಿರ್ಮಹಾಪೀಠಾ ಮರುತ್ಸುತಾ ।
ಹವ್ಯವಾಹಾಂತರಾಗಾದಿರ್ಹವ್ಯವಾಹಸಮುದ್ಭವಾ ॥

ಜಗದ್ಯೋನಿರ್ಜಗನ್ಮಾತಾ ಜನ್ಮ ಮೃತ್ಯುಜರಾತಿಗಾ ।
ಬುದ್ಧಿರ್ಮಹಾಬುದ್ಧಿಮತೀ ಪುರುಷಾಂತರವಾಸಿನೀ ॥

ತರಸ್ವಿನೀ ಸಮಾಧಿಸ್ಥಾ ತ್ರಿನೇತ್ರಾ ದಿವಿ ಸಂಸ್ಥಿತಾ ।
ಸರ್ವೇಂದ್ರಿಯಮನೋಮಾತಾ ಸರ್ವಭೂತಹೃದಿ ಸ್ಥಿತಾ ॥

ಸಂಸಾರತಾರಿಣೀ ವಿದ್ಯಾ ಬ್ರಹ್ಮವಾದಿಮನೋಲಯಾ ।
ಬ್ರಹ್ಮಾಣೀ ಬೃಹತೀ ಬ್ರಾಹ್ಮೀ ಬ್ರಹ್ಮಭೂತಾ ಭವಾರಣೀ ॥

ಹಿರಣ್ಮಯೀ ಮಹಾರಾತ್ರಿಃ ಸಂಸಾರಪರಿವರ್ತಿಕಾ ।
ಸುಮಾಲಿನೀ ಸುರೂಪಾ ಚ ಭಾವಿನೀ ಹಾರಿಣೀ ಪ್ರಭಾ ॥

ಉನ್ಮಿಲನೀ ಸರ್ವಸಹಾ ಸರ್ವಪ್ರತ್ಯಯಸಾಕ್ಷಿಣೀ ।
ಸುಸೌಮ್ಯಾ ಚಂದ್ರವದನಾ ತಾಂಡವಾಸಕ್ತಮಾನಸಾ ॥

ಸತ್ತ್ವಶುದ್ಧಿಕರೀ ಶುದ್ಧಿರ್ಮಲತ್ರಯವಿನಾಶಿನೀ ।
ಜಗತ್ಪ್ರಿಯಾ ಜಗನ್ಮೂರ್ತಿಸ್ತ್ರಿಮೂರ್ತಿರಮೃತಾಶ್ರಯಾ ॥

ನಿರಾಶ್ರಯಾ ನಿರಾಹಾರಾ ನಿರಂಕುಶಪದೋದ್ಭವಾ ।
ಚಂದ್ರಹಸ್ತಾ ವಿಚಿತ್ರಾಂಗೀ ಸ್ರಗ್ವಿಣೀ ಪದ್ಮಧಾರಿಣೀ ॥

ಪರಾವರವಿಧಾನಜ್ಞಾ ಮಹಾಪುರುಷ ಪೂರ್ವಜಾ ।
ವಿಶ್ವೇಶ್ವರಪ್ರಿಯಾ ವಿದ್ಯುದ್ ವಿದ್ಯುಜ್ಜಿಹ್ವಾ ಜಿತಶ್ರಮಾ ॥

ವಿದ್ಯಾಮಯೀ ಸಹಸ್ರಾಕ್ಷೀ ಸಹಸ್ರವದನಾತ್ಮಜಾ ।
ಸಹಸ್ರರಶ್ಮಿಃ ಸತ್ವಸ್ಥಾ ಮಹೇಶ್ವರ ಪದಾಶ್ರಯಾ ॥

ಕ್ಷಾಲಿನೀ ಮೃನ್ಮಯೀ ವ್ಯಾಪ್ತಾ ತೈಜಸೀ ಪದ್ಮಬೋಧಿಕಾ ।
ಮಹಾಮಾಯಾಶ್ರಯಾ ಮಾನ್ಯಾ ಮಹಾದೇವ ಮನೋರಮಾ ॥

ವ್ಯೋಮಲಕ್ಷ್ಮೀಃ ಸಿಹ್ಮರಥಾ ಚೇಕಿತಾನಾ ಚಿತಪ್ರಭಾ ।
ವೀರೇಶ್ವರೀ ವಿಮಾನಸ್ಥಾ ವಿಶೋಕಾ ಶೋಕನಾಶಿನೀ ॥

ಅನಾಹತಾ ಕುಂಡಲಿನೀ ನಲಿನೀ ಪದ್ಮಭಾಸಿನೀ ।
ಸದಾನಂದಾ ಸದಾಕೀರ್ತಿಃ ಸರ್ವಭೂತಾಶ್ರಯಸ್ಥಿತಾ ॥

ವಾಗ್ದೇವತಾ ಬ್ರಹ್ಮಕಲಾ ಕಲಾತೀತಾ ಕಲಾರಣೀ ।
ಬ್ರಹ್ಮಶ್ರೀಬ್ರಹ್ಮಹೃದಯಾ ಬ್ರಹ್ಮವಿಷ್ಣುಶಿವಪ್ರಿಯಾ ॥

ವ್ಯೋಮಶಕ್ತಿಃ ಕ್ರಿಯಾಶಕ್ತಿಃ ಜ್ಞಾನಶಕ್ತಿಃ ಪರಾಗತಿಃ ।
ಕ್ಷೋಭಿಕಾ ಬಂಧಿಕಾ ಭೇದ್ಯಾ ಭೇದಾಭೇದವಿವರ್ಜಿತಾ ॥

ಅಭಿನ್ನಾ ಭಿನ್ನ ಸಂಸ್ಥಾನಾ ವಶಿನೀ ವಂಶಹಾರಿಣೀ ।
ಗುಹ್ಯಶಕ್ತಿಃ ಗುಣಾತೀತಾ ಸರ್ವದಾ ಸರ್ವತೋಮುಖೀ ॥

ಭಗಿನೀ ಭಗವತ್ಪತ್ನೀ ಸಕಲಾ ಕಾಲಹಾರಿಣೀ ।
ಸರ್ವವಿತ್ ಸರ್ವತೋಭದ್ರಾ ಗುಹ್ಯಾತೀತಾ ಗುಹಾವಲಿಃ ॥

ಪ್ರಕ್ರಿಯಾ ಯೋಗಿಮಾತಾ ಚ ಗಂಗಾ ವಿಶ್ವೇಶ್ವರೇಶ್ವರೀ ।
ಕಲಿಲಾ ಕಪಿಲಾ ಕಾಂತಾ ಕಮಲಾಭಾ ಕಲಾಂತರಾ ॥

ಪುಣ್ಯಾ ಪುಷ್ಕರಿಣೀ ಭೋಕ್ತ್ರೀ ಪುರಂದರ ಪುರಃಸರಾ ।
ಪೋಷಿಣೀ ಪರಮೈಶ್ವರ್ಯ ಭೂತಿದಾ ಭೂತಿಭೂಷಣಾ ॥

ಪಂಚಬ್ರಹ್ಮಸಮುತ್ಪತ್ತಿಃ ಪರಮಾರ್ಥಾರ್ಥನಿಗ್ರಹಾ ।
ಧರ್ಮೋದಯಾ ಭಾನುಮತೀ ಯೋಗಿಜ್ಞೇಯಾ ಮನೋಜವಾ ॥

ಮನೋರಮಾ ಮನೋರಸ್ಕಾ ತಾಪಸೀ ವೇದರೂಪಿಣೀ ।
ವೇದಶಕ್ತಿರ್ವೇದಮಾತಾ ವೇದವಿದ್ಯಾಪ್ರಕಾಶಿನೀ ॥

ಯೋಗೇಶ್ವರೇಶ್ವರೀ ಮಾತಾ ಮಹಾಶಕ್ತಿರ್ಮನೋಮಯೀ ।
ವಿಶ್ವಾವಸ್ಥಾ ವಿಯನ್ಮೂರ್ತಿರ್ವಿದ್ಯುನ್ಮಾಲಾ ವಿಹಾಯಸೀ ॥

ಕಿನ್ನರೀ ಸುರಭೀ ವಿದ್ಯಾ ನಂದಿನೀ ನಂದಿವಲ್ಲಭಾ ।
ಭಾರತೀ ಪರಮಾನಂದಾ ಪರಾಪರವಿಭೇದಿಕಾ ॥

ಸರ್ವಪ್ರಹರಣೋಪೇತಾ ಕಾಮ್ಯಾಕಾಮೇಶ್ವರೇಶ್ವರೀ ।
ಅಚಿಂತ್ಯಾನಂತವಿಭವಾ ಭೂಲೇಖಾ ಕನಕಪ್ರಭಾ ॥

ಕೂಷ್ಮಾಂಡೀ ಧನರತ್ನಾಢ್ಯಾ ಸುಗಂಧಾ ಗಂಧದಾಯಿನೀ ।
ತ್ರಿವಿಕ್ರಮಪದೋದ್ಭೂತಾ ಧನುಷ್ಪಾಣಿಃ ಶಿವೋದಯಾ ॥

ಸುದುರ್ಲಭಾ ಧನಾಧ್ಯಕ್ಷಾ ಧನ್ಯಾ ಪಿಂಗಲಲೋಚನಾ ।
ಶಾಂತಿಃ ಪ್ರಭಾವತೀ ದೀಪ್ತಿಃ ಪಂಕಜಾಯತಲೋಚನಾ ॥

ಆದ್ಯಾ ಭೂಃ ಕಮಲೋದ್ಭೂತಾ ಗವಾಂ ಮಾತಾ ರಣಪ್ರಿಯಾ ।
ಸತ್ಕ್ರಿಯಾ ಗಿರಿಶಾ ಶುದ್ಧಿರ್ನಿತ್ಯಪುಷ್ಟಾ ನಿರಂತರಾ ॥

ದುರ್ಗಾ ಕಾತ್ಯಾಯನೀ ಚಂಡೀ ಚರ್ಚಿತಾಂಗಾ ಸುವಿಗ್ರಹಾ ।
ಹಿರಣ್ಯವರ್ಣಾ ಜಗತೀಜಗದ್ಯಂತ್ರಪ್ರವರ್ತಿಕಾ ॥

ಮಂದರಾದ್ರಿನಿವಾಸಾ ಚ ಗರಹಾ ಸ್ವರ್ಣ ಮಾಲಿನೀ ।
ರತ್ನಮಾಲಾ ರತ್ನಗರ್ಭಾ ಪುಷ್ಟಿರ್ವಿಶ್ವಪ್ರಮಾಥಿನೀ ॥

ಪದ್ಮನಾಭಾ ಪದ್ಮನಿಭಾ ನಿತ್ಯರುಷ್ಟಾऽಮೃತೋದ್ಭವಾ ।
ಧುನ್ವತೀ ದುಷ್ಪ್ರಕಂಪಾ ಚ ಸೂರ್ಯಮಾತಾ ದೃಷದ್ವತೀ ॥

ಮಹೇಂದ್ರಭಗಿನೀ ಸೌಮ್ಯಾ ವರೇಣ್ಯಾ ವರದಾಯಿಕಾ ।
ಕಲ್ಯಾಣೀ ಕಮಲಾವಾಸಾ ಪಂಚಚೂಡಾ ವರಪ್ರದಾ ॥

ವಾಚ್ಯಾऽಮರೇಶ್ವರೀ ವಿದ್ಯಾ ದುರ್ಜಯಾ ದುರತಿಕ್ರಮಾ ।
ಕಾಲರಾತ್ರಿರ್ಮಹಾವೇಗಾ ವೀರಭದ್ರಪ್ರಿಯಾ ಹಿತಾ ॥

ಭದ್ರಕಾಲೀ ಜಗನ್ಮಾತಾ ಭಕ್ತಾನಾಂ ಭದ್ರದಾಯಿನೀ ।
ಕರಾಲಾ ಪಿಂಗಲಾಕಾರಾ ಕಾಮಭೇದಾ ಮಹಾಸ್ವನಾ ॥

ಯಶಸ್ವಿನೀ ಯಶೋಮಾತಾ ಷಡಧ್ವ ಪರಿವರ್ತಿಕಾ ।
ಶಂಖಿನೀ ಪದ್ಮಿನೀ ಸಾಂಖ್ಯಾ ಸಾಂಖ್ಯಯೋಗಪ್ರವರ್ತಿಕಾ ॥

ಚೈತ್ರಾ ಸಂವತ್ಸರಾ ರೂಢಾ ಜಗತ್ಸಂಪೂರಣೀ ಧ್ವಜಾ ।
ಶುಂಭಾರೀ ಖೇಚರೀ ಸ್ವಸ್ಥಾ ಕಂಬುಗ್ರೀವಾ ಕಲಿಪ್ರಿಯಾ ॥

ಖಗಧ್ವಜಾ ಖಗಾರೂಢಾ ವಾರಾಹೀ ಪೂಗಮಾಲಿನೀ ।
ಐಶ್ವರ್ಯಪದ್ಮನಿಲಯಾ ವಿರಕ್ತಾ ಗರುಡಾಸನಾ ॥

ಜಯಂತೀ ಹೃದ್ಗುಹಾಗಮ್ಯಾ ಗಹ್ವರೇಷ್ಠಾ ಗಣಾಗ್ರಣೀಃ ।
ಸಂಕಲ್ಪಸಿದ್ಧಾ ಸಾಮಸ್ಥಾ ಸರ್ವವಿಜ್ಞಾನದಾಯಿನೀ ॥

ಕಲಿಃ ಕಲ್ಕವಿಹಂತ್ರೀ ಚ ಗುಹ್ಯೋಪನಿಷದುತ್ತಮಾ ।
ನಿಷ್ಠಾದೃಷ್ಟಿಃ ಸ್ಮೃತಿರ್ವ್ಯಾಪ್ತಿಃ ಪುಷ್ಟಿಸ್ತುಷ್ಟಿಃ ಕ್ರಿಯಾವತೀ ॥

ವಿಶ್ವಾಮರೇಶ್ವರೇಶಾನಾ ಭುಕ್ತಿರ್ಮುಕ್ತಿಃ ಶಿವಾಮೃತಾ ।
ಲೋಹಿತಾ ಸರ್ಪಮಾಲಾ ಚ ಭೀಷಣೀ ವನಮಾಲಿನೀ ॥

ಅನಂತಶಯನಾನನ್ಯಾ ನರನಾರಾಯಣೋದ್ಭವಾ ।
ನೃಸಿಂಹೀ ದೈತ್ಯಮಥನೀ ಶಂಖಚಕ್ರಗದಾಧರಾ ॥

ಸಂಕರ್ಷಣೀ ಸಮುತ್ಪತ್ತಿರಂಬಿಕಾ ಪಾದಸಂಶ್ರಯಾ ।
ಮಹಾಜ್ವಾಲಾ ಮಹಾಭೂತಿಃ ಸುಮೂರ್ತಿಃ ಸರ್ವಕಾಮಧುಕ್ ॥

ಶುಭ್ರಾ ಚ ಸುಸ್ತನಾ ಸೌರೀ ಧರ್ಮಕಾಮಾರ್ಥ ಮೋಕ್ಷದಾ ।
ಭ್ರೂಮಧ್ಯನಿಲಯಾ ಪೂರ್ವಾ ಪುರಾಣ ಪುರುಷಾರಣೀಃ ॥

ಮಹಾವಿಭೂತಿದಾ ಮಧ್ಯಾ ಸರೋಜನಯನಾ ಸಮಾ ।
ಅಷ್ಟಾದಶಭುಜಾನಾದ್ಯಾ ನೀಲೋತ್ಪಲದಲಪ್ರಭಾ ॥

ಸರ್ವಶಕ್ತ್ಯಾಸನಾರೂಢಾ ಧರ್ಮಾಧರ್ಮ ವಿವರ್ಜಿತಾ ।
ವೈರಾಗ್ಯಜ್ಞಾನನಿರತಾ ನಿರಾಲೋಕಾ ನಿರಿಂದ್ರಿಯಾ ॥

ವಿಚಿತ್ರಗಹನಾಧಾರಾ ಶಾಶ್ವತಸ್ಥಾನವಾಸಿನೀ ।
ಸ್ಥಾನೇಶ್ವರೀ ನಿರಾನಂದಾ ತ್ರಿಶೂಲವರಧಾರಿಣೀ ॥

ಅಶೇಷದೇವತಾಮೂರ್ತಿರ್ದೇವತಾ ವರದೇವತಾ ।
ಗಣಾಂಬಿಕಾ ಗಿರೇಃ ಪುತ್ರೀ ನಿಶುಂಭವಿನಿಪಾತಿನೀ ॥

ಅಪರ್ಣಾ ವರ್ಣರಹಿತಾ ತ್ರಿವರ್ಣಾ ಜೀವಸಂಭವಾ ।
ಅನಂತವರ್ಣಾನನ್ಯಸ್ಥಾ ಶಂಕರೀ ಶಾಂತಮಾನಸಾ ।

ಅಗೋತ್ರಾ ಗೋಮತೀ ಗೋಪ್ತ್ರೀ ಗುಹ್ಯರೂಪಾ ಗುಣೋತ್ತರಾ ।
ಗೌರ್ಗೀರ್ಗವ್ಯಪ್ರಿಯಾ ಗೌಣೀ ಗಣೇಶ್ವರ ನಮಸ್ಕೃತಾ ॥

ಸತ್ಯಭಾಮಾ ಸತ್ಯಸಂಧಾ ತ್ರಿಸಂಧ್ಯಾ ಸಂಧಿವರ್ಜಿತಾ ।
ಸರ್ವವಾದಾಶ್ರಯಾ ಸಂಖ್ಯಾ ಸಾಂಖ್ಯಯೋಗ ಸಮುದ್ಭವಾ ॥

ಅಸಂಖ್ಯೇಯಾ ಪ್ರಮೇಯಾಖ್ಯಾ ಶೂನ್ಯಾ ಶುದ್ಧ ಕುಲೋದ್ಭವಾ ।
ಬಿಂದುನಾದಸಮುತ್ಪತ್ತಿಃ ಶಂಭುವಾಮಾ ಶಶಿಪ್ರಭಾ ॥

ಪಿಶಂಗಾ ಭೇದರಹಿತಾ ಮನೋಜ್ಞಾ ಮಧುಸೂದನೀ ।
ಮಹಾಶ್ರೀಃ ಶ್ರೀಸಮುತ್ಪತ್ತಿಸ್ತಮಃ ಪಾರೇ ಪ್ರತಿಷ್ಠಿತಾ ॥

ತ್ರಿತತ್ತ್ವಮಾತಾ ತ್ರಿವಿಧಾ ಸುಸೂಕ್ಷ್ಮಪದಸಂಕ್ರಮಾ ।
ಶಾಂತಾ ಭೀತಾ ಮಲಾತೀತಾ ನಿರ್ವಿಕಾರಾ ಶಿವಾಶ್ರಯಾ ॥

ಶಿವಾಖ್ಯಾ ಚಿತ್ತನಿಲಯಾ ಶಿವಜ್ಞಾನಸ್ವರೂಪಿಣೀ ।
ದೈತ್ಯದಾನವನಿರ್ಮಾಥೀ ಕಾಶ್ಯಪೀ ಕಾಲಕರ್ಣಿಕಾ ॥

ಶಾಸ್ತ್ರಯೋನಿಃ ಕ್ರಿಯಾಮೂರ್ತಿಶ್ಚತುರ್ವರ್ಗಪ್ರದರ್ಶಿಕಾ ।
ನಾರಾಯಣೀ ನರೋತ್ಪತ್ತಿಃ ಕೌಮುದೀ ಲಿಂಗಧಾರಿಣೀ ॥

ಕಾಮುಕೀ ಕಲಿತಾಭಾವಾ ಪರಾವರ ವಿಭೂತಿದಾ ।
ಪರಾಂಗಜಾತಮಹಿಮಾ ಬಡವಾ ವಾಮಲೋಚನಾ ॥

ಸುಭದ್ರಾ ದೇವಕೀ ಸೀತಾ ವೇದವೇದಾಂಗಪಾರಗಾ ।
ಮನಸ್ವಿನೀ ಮನ್ಯುಮಾತಾ ಮಹಾಮನ್ಯುಸಮುದ್ಭವಾ ॥

ಅಮನ್ಯುರಮೃತಾಸ್ವಾದಾ ಪುರುಹೂತಾ ಪುರುಷ್ಟುತಾ ।
ಅಶೋಚ್ಯಾ ಭಿನ್ನವಿಷಯಾ ಹಿರಣ್ಯರಜತಪ್ರಿಯಾ ॥

ಹಿರಣ್ಯರಜನೀ ಹೈಮಾ ಹೈಮಾಭರಣಭೂಷಿತಾ ।
ವಿಭ್ರಾಜಮಾನಾ ದುರ್ಜ್ಞೇಯಾ ಜ್ಯೋತಿಷ್ಟೋಮಫಲಪ್ರದಾ ॥

ಮಹಾನಿದ್ರಾ ಸಮುದ್ಭೂತಿರನಿದ್ರಾ ಸತ್ಯ ದೇವತಾ ।
ದೀರ್ಘಾ ಕಕುದ್ಮಿನೀ ಹೃದ್ಯಾ ಶಾಂತಿದಾ ಶಾಂತಿವರ್ಧಿನೀ ॥

ಲಕ್ಷ್ಮ್ಯಾದಿಶಕ್ತಿಜನನೀ ಶಕ್ತಿಚಕ್ರಪ್ರವರ್ತಿಕಾ ।
ತ್ರಿಶಕ್ತಿಜನನೀ ಜನ್ಯಾ ಷಡೂರ್ಮಿ ಪರಿವರ್ಜಿತಾ ॥

ಸುಧೌತಾ ಕರ್ಮಕರಣೀ ಯುಗಾಂತದಹನಾತ್ಮಿಕಾ ।
ಸಂಕರ್ಷಣೀ ಜಗದ್ಧಾತ್ರೀ ಕಾಮಯೋನಿಃ ಕಿರೀಟಿನೀ ॥

ಐಂದ್ರೀ ತ್ರೈಲೋಕ್ಯನಮಿತಾ ವೈಷ್ಣವೀ ಪರಮೇಶ್ವರೀ ।
ಪ್ರದ್ಯುಮ್ನದಯಿತಾ ದಾತ್ರೀ ಯುಗ್ಮದೃಷ್ಟಿಸ್ತ್ರಿಲೋಚನಾ ॥

ಮದೋತ್ಕಟಾ ಹಂಸಗತಿಃ ಪ್ರಚಂಡಾ ಚಂಡವಿಕ್ರಮಾ ।
ವೃಷಾವೇಶಾ ವಿಯನ್ಮಾತಾ ವಿಂಧ್ಯಪರ್ವತವಾಸಿನೀ ॥

ಹಿಮವನ್ಮೇರುನಿಲಯಾ ಕೈಲಾಸಗಿರಿವಾಸಿನೀ ।
ಚಾಣೂರ ಹಂತೃತನಯಾ ನೀತಿಜ್ಞಾ ಕಾಮರೂಪಿಣೀ ॥

ವೇದವಿದ್ಯಾ ವ್ರತಸ್ನಾತಾ ಬ್ರಹ್ಮಶೈಲನಿವಾಸಿನೀ ।
ವೀರಭದ್ರಪ್ರಜಾ ವೀರಾ ಮಹಾಕಾಮಸಮುದ್ಭವಾ ॥

ವಿದ್ಯಾಧರಪ್ರಿಯಾ ಸಿದ್ಧಾ ವಿದ್ಯಾಧರ ನಿರಾಕೃತಿಃ ।
ಆಪ್ಯಾಯನೀ ಹರಂತೀ ಚ ಪಾವನೀ ಪೋಷಣೀ ಕಲಾ ॥

ಮಾತೃಕಾ ಮನ್ಮಥೋದ್ಭೂತಾ ವಾರಿಜಾ ವಾಹನಪ್ರಿಯಾ ।
ಕರೀಷಿಣೀ ಸುಧಾವಾಣೀ ವೀಣಾವಾದನ ತತ್ಪರಾ ॥

ಸೇವಿತಾ ಸೇವಿಕಾ ಸೇವ್ಯಾ ಸಿನೀವಾಲೀ ಗರುತ್ಮತೀ ।
ಅರುಂಧತೀ ಹಿರಣ್ಯಾಕ್ಷೀ ಮೃಗಾಂಕಾ ಮಾನದಾಯಿನೀ ॥

ವಸುಪ್ರದಾ ವಸುಮತೀ ವಸೋರ್ಧಾರಾ ವಸುಂಧರಾ ।
ಧಾರಾಧಾರಾ ವರಾರೋಹಾ ಪರವಾಸಸಹಸ್ರದಾ ॥

ಶ್ರೀಫಲಾ ಶ್ರೀಮತೀ ಶ್ರೀಶಾ ಶ್ರೀನಿವಾಸಾ ಶಿವಪ್ರಿಯಾ ।
ಶ್ರೀಧರಾ ಶ್ರೀಕರೀ ಕಲ್ಯಾ ಶ್ರೀಧರಾರ್ಧಶರೀರಿಣೀ ॥

ಅನಂತದೃಷ್ಟಿರಕ್ಷುದ್ರಾ ಧಾತ್ರೀಶಾ ಧನದಪ್ರಿಯಾ ।
ನಿಹಂತ್ರೀ ದೈತ್ಯಸಂಘಾನಾಂ ಸಿಂಹಿಕಾ ಸಿಂಹವಾಹನಾ ॥

ಸುವರ್ಚಲಾ ಚ ಸುಶ್ರೋಣೀ ಸುಕೀರ್ತಿಶ್ಛಿನ್ನಸಂಶಯಾ ।
ರಸಜ್ಞಾ ರಸದಾ ರಾಮಾ ಲೇಲಿಹಾನಾಮೃತಸ್ರವಾ ॥

ನಿತ್ಯೋದಿತಾ ಸ್ವಯಂಜ್ಯೋತಿರುತ್ಸುಕಾಮೃತಜೀವನಾ ।
ವಜ್ರದಂಡಾ ವಜ್ರಜಿಹ್ವಾ ವೈದೇಹೀ ವಜ್ರ ವಿಗ್ರಹಾ ॥

ಮಂಗಲ್ಯಾ ಮಂಗಲಾ ಮಾಲಾ ನಿರ್ಮಲಾ ಮಲಹಾರಿಣೀ ।
ಗಾಂಧರ್ವೀ ಕರುಕಾ ಚಾಂದ್ರೀ ಕಂಬಲಾಶ್ವತರಪ್ರಿಯಾ ॥

ಸೌದಾಮಿನೀ ಜನಾನಂದಾ ಭ್ರುಕುಟೀಕುಟಿಲಾನನಾ ।
ಕರ್ಣಿಕಾರಕರಾ ತ್ರ್ಯಕ್ಷಾ ಕಂಸಪ್ರಾಣಾಪಹಾರಿಣೀ ॥

ಯುಗಂಧರಾ ಯುಗಾವರ್ತಾ ತ್ರಿಸಂಧ್ಯಾ ಹರ್ಷವರ್ಧನೀ ।
ಪ್ರತ್ಯಕ್ಷದೇವತಾ ದಿವ್ಯಾ ದಿವ್ಯಗಂಧಾ ದಿವಃಪರಾ ॥

ಶಕ್ರಾಸನಗತಾ ಶಾಕ್ರೀ ಸಾಧ್ಯಾ ಚಾರುಶರಾಸನಾ ।
ಇಷ್ಟಾ ವಿಶಿಷ್ಟಾ ಶಿಷ್ಟೇಷ್ಟಾ ಶಿಷ್ಟಾ ಶಿಷ್ಟಪ್ರಪೂಜಿತಾ ॥

ಶತರೂಪಾ ಶತಾವರ್ತಾ ವಿನತಾ ಸುರಭಿಃ ಸುರಾ ।
ಸುರೇಂದ್ರಮಾತಾ ಸುದ್ಯುಮ್ನಾ ಸುಷುಮ್ನಾ ಸೂರ್ಯಸಂಸ್ಥಿತಾ ॥

ಸಮೀಕ್ಷ್ಯಾ ಸತ್ಪ್ರತಿಷ್ಠಾ ಚ ನಿವೃತ್ತಿರ್ಜ್ಞಾನಪಾರಗಾ ।
ಧರ್ಮಶಾಸ್ತ್ರಾರ್ಥ ಕುಶಲಾ ಧರ್ಮಜ್ಞಾ ಧರ್ಮ ವಾಹನಾ ॥

ಧರ್ಮಾಧರ್ಮವಿನಿರ್ಮಾತ್ರೀ ಧಾರ್ಮಿಕಾಣಾಂ ಶಿವಪ್ರದಾ ।
ಧರ್ಮಶಕ್ತಿರ್ಧರ್ಮಮಯೀ ವಿಧರ್ಮಾ ವಿಶ್ವಧರ್ಮಿಣೀ ॥

ಧರ್ಮಾಂತರಾ ಧರ್ಮಮಯೀ ಧರ್ಮಾ ಪೂರ್ವಾ ಧನಾವಹಾ ।
ಧರ್ಮೋಪದೇಷ್ಟ್ರೀ ಧರ್ಮಾತ್ಮಾ ಧರ್ಮಗಮ್ಯಾ ಧರಾಧರಾ ॥

ಕಾಪಾಲೀ ಶಕಲಾ ಮೂರ್ತಿಃ ಕಲಾಕಲಿತವಿಗ್ರಹಾ ।
ಸರ್ವಶಕ್ತಿವಿನಿರ್ಮುಕ್ತಾ ಸರ್ವಶಕ್ತ್ಯಾಶ್ರಯಾಶ್ರಯಾ ॥

ಸರ್ವಾ ಸರ್ವೇಶ್ವರೀ ಸೂಕ್ಷ್ಮಾ ಸೂಕ್ಷ್ಮಜ್ಞಾನಸ್ವರೂಪಿಣೀ ।
ಪ್ರಧಾನಪುರುಷೇಶೇಶಾ ಮಹಾದೈವೈಕಸಾಕ್ಷಿಣೀ ॥

ಸದಾಶಿವಾ ವಿಯನ್ಮೂರ್ತಿರ್ವೇದಮೂರ್ತಿರಮೂರ್ತಿಕಾ ।
ಏವಂ ನಾಮ್ನಾಂ ಸಹಸ್ರೇಣ ಸ್ತುತ್ವಾಸೌ ಹಿಮವಾನ್ ಗಿರಿಃ ।
ಭೂಯಃ ಪ್ರಣಮ್ಯ ಭೀತಾತ್ಮಾ ಪ್ರೋವಾಚೇದಂ ಕೃತಾಂಜಲಿಃ ॥

ಪಾರ್ವತಿಯ ವಿಶ್ವರೂಪವನ್ನು ನೋಡಿ ಭೀತನೂ, ಸಂತುಷ್ಟನೂ ಆಗಿದ್ದ ಹಿಮವಂತನು ಹೀಗೆ ಸಾವಿರ ನಾಮಗಳಿಂದ ಆ ರೂಪವನ್ನು ಸ್ತುತಿಸಿ ಮತ್ತೆ ನಮಸ್ಕರಿಸಿ ಹೀಗೆಂದನು.

''ಪರಮೇಶ್ವರಿ! ಮಹಾಸಾಮರ್ಥ್ಯಸಂಪನ್ನವಾದ, ಘೋರವಾದ ನಿನ್ನ ಈ ರೂಪವನ್ನು ನೋಡಿ ಹೆದರಿದ್ದೇನೆ. ದಯವಿಟ್ಟು ನಿನ್ನ ಸೌಮ್ಯರೂಪವನ್ನು ತೋರಿಸು.''

ಹೀಗೆ ಹಿಮವಂತನಿಂದ ಪ್ರಾರ್ಥಿತಳಾದ ಪಾರ್ವತಿಯು ತನ್ನ ಘೋರ ರೂಪವನ್ನು ಹಿಂತೆಗೆದುಕೊಂಡು

ದರ್ಶಯಾಮಾಸ ಸ್ವಂರೂಪಮಪರಂ ಪುನಃ ।
ನೀಲೋತ್ಪಲದಲಪ್ರಖ್ಯಂ ನೀಲೋತ್ಪಲ ಸುಗಂಧಿ ಚ ।
ದ್ವಿನೇತ್ರಂ ದ್ವಿಭುಜಂ ಸೌಮ್ಯಂ ನೀಲಾಲಕವಿಭೂಷಿತಮ್ ।
ರಕ್ತಪಾದಾಂಬುಜತಲಂ ಸುರಕ್ತಕರಪಲ್ಲವಮ್ ।
ಶ್ರೀಮದ್ವಿಲಾಸಸದ್ವೃತ್ತಂ ಲಲಾಟತಿಲಕೋಜ್ವಲಮ್ ।
ಭೂಷಿತಂ ಚಾರುಸರ್ವಾಂಗಂ ಭೂಷಣೈರತಿಕೋಮಲಮ್ ॥

ದಧಾನಮುರಸಾ ಮಾಲಾಂ ವಿಶಾಲಾಂ ಹೇಮ ನಿರ್ಮಿತಾಮ್ ।
ಈಷತ್ಸ್ಮಿತಂ ಸುಬಿಂಬೋಷ್ಠಂ ನೂಪುರಾರಾವಸಂಯುತಮ್ ॥
ಪ್ರಸನ್ನವದನಂ ದಿವ್ಯಮನಂತಮಹಿಮಾಸ್ಪದಮ್ ।

ನೈದಿಲೆಯ ದಳದಂತೆ ಶೋಭಿಸುವ, ನೈದಿಲೆಯ ಸುಗಂಧವನ್ನು ಹೊಂದಿರುವ ಎರಡು ಕಣ್ಣು, ಎರಡು ಭುಜಗಳನ್ನು ಹೊಂದಿರುವ, ಕಪ್ಪುಕೂದಲುಗಳಿಂದ ವಿಭೂಷಿತವಾದ, ಕೆಂಪು ಕಮಲದಂತಹ ಅಂಗಾಲನ್ನೂ ಚಿಗುರೆಲೆಯಂತೆ ಕೆಂಪಾದ ಅಂಗೈಯನ್ನೂ ಕಳೆ ತುಂಬಿದ ವಿಲಾಸವನ್ನೂ ಹೊಂದಿದ, ಹಣೆಯ ತಿಲಕದಿಂದ ಉಜ್ವಲವಾದ, ಆಭರಣಗಳಿಂದ ಭೂಷಿತವಾದ, ಬಹಳ ನಯವಾದ, ಬಂಗಾರದ ಮಾಲೆಯನ್ನು ಎದೆಯ ಮೇಲೆ ಧರಿಸಿರುವ, ಹುಂದಹಾಸ ಸೂಸುವ ಸುಂದರ ತುಟಿವುಳ್ಳ, ಕಾಲ್ಗೆಜ್ಜೆಯನಾದದಿಂದ ಮನೋಹರವಾದ ಪ್ರಸನ್ನ ಮುಖದ, ಅನಂತ ಮಹಿಮೆಯ ನಿಧಿಯಾದ, ದಿವ್ಯವಾದ ರೂಪವನ್ನು ತೋರಿಸಿದಳು.

ತದೀದೃಶಂ ಸಮಾಲೋಕ್ಯ ಸ್ವರೂಪಂ ಶೈಲಸತ್ತಮಃ ।
ಭೀತಿಂ ಸಂತ್ಯಜ್ಯ ಹೃಷ್ಟಾತ್ಮಾ ಬಭಾಷೆ ಪರಮೇಶ್ವರೀಮ್ ॥

ಇಂತಹ ರೂಪವನ್ನು ನೋಡಿದ ಹಿಮವಂತನು ಭಯವನ್ನು ತ್ಯಜಿಸಿ ಸಂತೋಷದಿಂದ ಮಾತನಾಡಿದನು.

ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತಪಃ ।
ಯನ್ಮೇ ಸಾಕ್ಷಾತ್ತ್ವಮವ್ಯಕ್ತಾ ಪ್ರಪನ್ನಾ ದೃಷ್ಟಿಗೋಚರಮ್ ।
ತ್ವಯಾ ಸೃಷ್ಟಂ ಜಗತ್ಸರ್ವಂ ಪ್ರಧಾನಾದ್ಯಂ ತ್ವಯಿ ಸ್ಥಿತಮ್ ॥

ತ್ವಯ್ಯೇವ ಲೀಯತೇ ದೇವಿ ತ್ವಮೇವ ಪರಮಾ ಗತಿಃ
ವದಂತಿ ಕೇಚಿತ್ತ್ವಾಮೇವ ಪ್ರಕೃತಿಂ ಪ್ರಕೃತೇಃ ಪರಾಮ್ ।
ಅಪರೇ ಪರಮಾರ್ಥಜ್ಞಾಃ ಶಿವೇತಿ ಶಿವಸಂಶ್ರಯಾತ್ ।

ಇಂದು ನನ್ನ ಹುಟ್ಟು ಸಫಲವಾಯಿತು. ನನ್ನ ತಪಸ್ಸು ಸಾರ್ಥಕವಾಯಿತು. ಅವ್ಯಕ್ತಳಾದ ನೀನು ನನಗೆ ದರ್ಶನವನ್ನು ಕೊಟ್ಟಿರುವುದರಿಂದ. ಪ್ರಧಾನ ಮೊದಲಾದ ಇಡೀ ಜಗತ್ತು

ನಿನ್ನಿಂದ ಸೃಷ್ಟಿಸಲ್ಪಟ್ಟಿದೆ. ನಿನ್ನಿಂದಲೇ ಅದಕ್ಕೆ ಸ್ಥಿತಿ. ನಿನ್ನಿಂದಲೇ ಲಯ. ನೀನೇ ಅತಿಶ್ರೇಷ್ಠ ಗಮ್ಯಸ್ಥಾನ.

**ಪಾರ್ವತಿಯೇ ಸಕಲ ಜಗದಾಧಾರ :**

ಕೆಲವರು ನಿನ್ನನ್ನೇ ಪ್ರಕೃತಿಯನ್ನು ಮೀರಿದ ಚೇತನ ಎಂದು ಹೇಳುತ್ತಾರೆ. ಪರಮ ತತ್ತ್ವವನ್ನು ತಿಳಿದ ಮತ್ತೆ ಕೆಲವರು ನಿನ್ನನ್ನು ಶಿವನನ್ನಾಶ್ರಯಿಸಿದ ಶಿವಾ ಎಂದು ಹೇಳುತ್ತಾರೆ.

**ತ್ವಯಿ ಪ್ರಧಾನಂ ಪುರುಷೋ ಮಹಾನ್ ಬ್ರಹ್ಮಾ ತಥೇಶ್ವರಃ ।**
**ಅವಿದ್ಯಾ ನಿಯತಿರ್ಮಾಯಾ ಕಲಾದ್ಯಾಃ ಶತಶೋಽಭವನ್ ।**
**ತ್ವಂ ಹಿ ಸಾ ಪರಮಾ ಶಕ್ತಿರನಂತಾ ಪರಮೇಷ್ಠಿನೀ ।**
**ಸರ್ವಭೇದವಿನಿರ್ಮುಕ್ತಾ ಸರ್ವಭೇದಾಶ್ರಯಾಶ್ರಯಾ ॥**

ಪ್ರಧಾನ, ಪುರುಷ, ಮಹತ್ತ್ವ, ಬ್ರಹ್ಮಾ ಮತ್ತು ಈಶ್ವರ ಈ ತತ್ತ್ವಗಳು ನಿನ್ನನ್ನು ಆಶ್ರಯಿಸಿವೆ. ಅವಿದ್ಯಾ, ನಿಯತಿ, ಮಾಯಾ, ಕಲಾ ಮೊದಲಾದ ನೂರಾರು ತತ್ತ್ವಗಳು ನಿನ್ನನ್ನು ಆಶ್ರಯಿಸಿವೆ. ನೀನೇ ಅನಂತವಾದ ಪರಮಶಕ್ತಿ. ನಿನ್ನಲ್ಲಿ ಯಾವ ಭೇದವೂ ಇಲ್ಲ. ಭಿನ್ನವಾದ ಎಲ್ಲ ವಸ್ತುಗಳಿಗೂ ನೀನೇ ಆಶ್ರಯ.

**ತ್ವಾಮಧಿಷ್ಠಾಯ ಯೋಗೇಶಿ ಮಹಾದೇವೋ ಮಹೇಶ್ವರಃ ।**
**ಪ್ರಧಾನಾದ್ಯಂ ಜಗತ್ಸರ್ವಂ ಕರೋತಿ ವಿಕರೋತಿ ಚ ॥**
**ತ್ವಯೈವ ಸಂಗತೋ ದೇವಃ ಸ್ವಾತ್ಮಾನಂದಂ ಸಮಶ್ನುತೇ ।**

ದೇವಶ್ರೇಷ್ಠನಾದ ಶಿವನೂ ಕೂಡ ನಿನ್ನನ್ನು ಅವಲಂಬಿಸಿ ಇಡೀ ಜಗತ್ತನ್ನು ಸೃಷ್ಟಿಸುತ್ತಾನೆ. ಸಂಹರಿಸುತ್ತಾನೆ. ನಿನ್ನ ಸಮಾಗಮದಿಂದಲೇ ಸ್ವಾತ್ಮಾನಂದವನ್ನು ಪಡೆಯುತ್ತಾನೆ.

**ತ್ವಮೇವ ಪರಮಾನಂದಸ್ತ್ವಮೇವಾನಂದದಾಯಿನೀ ।**
**ತ್ವಮಕ್ಷರಂ ಪರಂ ವ್ಯೋಮ ಮಹಜ್ಜ್ಯೋತಿರ್ನಿರಂತರಮ್ ॥**
**ಶಿವಂ ಸರ್ವಗತಂ ಸೂಕ್ಷ್ಮಂ ಪರಂ ಬ್ರಹ್ಮ ಸನಾತನಮ್ ।**

ನೀನೇ ಪರಮಾನಂದ ಸ್ವರೂಪಳು, ನೀನೇ ಪರಮಾನಂದವನ್ನು ಕೊಡುವವಳು. ನೀನೇ ಅಕ್ಷರ, ಮಹಾಕಾಶ, ಮಹಾಜ್ಯೋತಿ, ನೀನೇ ಶಿವವೂ, ಸರ್ವಗತವೂ, ಸೂಕ್ಷ್ಮವೂ, ಸನಾತನವೂ ಆದ ಪರಬ್ರಹ್ಮ.

**ಪಾರ್ವತಿಯ ವಿಭೂತಿಗಳು :**

**ತ್ವಂ ಶಕ್ರಃ ಸರ್ವದೇವಾನಾಂ ಬ್ರಹ್ಮಾ ಬ್ರಹ್ಮವಿದಾಮಸಿ ।**
**ವಾಯುರ್ಬಲವತಾಂ ದೇವಿ ಯೋಗಿನಾಂ ತ್ವಂ ಕುಮಾರಕಃ ॥**

ಋಷೀಣಾಂ ಚ ವಸಿಷ್ಠಸ್ತ್ವಂ ವ್ಯಾಸೋ ವೇದವಿದಾಮಪಿ ।
ಸಾಙ್ಖ್ಯಾನಾಂ ಕಪಿಲೋ ದೇವೋ ರುದ್ರಾಣಾಂ ಚಾಪಿ ಶಂಕರಃ ।
ಆದಿತ್ಯಾನಾಮುಪೇಂದ್ರಸ್ತ್ವಂ ವಸೂನಾಂ ಚೈವ ಪಾವಕಃ ।
ವೇದಾನಾಂ ಸಾಮವೇದಸ್ತ್ವಂ ಗಾಯತ್ರೀ ಛಂದಸಾಮಪಿ ।
ಅಧ್ಯಾತ್ಮವಿದ್ಯಾ ವಿದ್ಯಾನಾಂ ಗತೀನಾಂ ಪರಮಾ ಗತಿಃ ।
ಮಾಯಾ ತ್ವಂ ಸರ್ವಶಕ್ತೀನಾಂ ಕಾಲಃ ಕಲಯತಾಮಪಿ ।
ಓಂಕಾರಃ ಸರ್ವಗುಹ್ಯಾನಾಂ ವರ್ಣಾನಾಂ ಚ ದ್ವಿಜೋತ್ತಮಃ ।
ಆಶ್ರಮಾಣಾಂ ಗೃಹಸ್ಥಸ್ತ್ವಮೀಶ್ವರಾಣಾಂ ಮಹೇಶ್ವರಃ ।
ಪುಂಸಾಂ ತ್ವಮೇಕಃ ಪುರುಷಃ ಸರ್ವ ಭೂತಹೃದಿ ಸ್ಥಿತಃ ।
ಸರ್ವೋಪನಿಷದಾಂ ದೇವಿ ಗುಹ್ಯೋಪನಿಷದುಚ್ಯಸೆ ।
ಈಶಾನಶ್ಚಾಪಿ ಕಲ್ಪಾನಾಂ ಯುಗಾನಾಂ ಕೃತಮೇವ ಚ ।
ಆದಿತ್ಯಃ ಸರ್ವಮಾರ್ಗಾಣಾಂ ವಾಚಾಂ ದೇವೀ ಸರಸ್ವತೀ ।
ತ್ವಂ ಲಕ್ಷ್ಮೀಶ್ಚಾರುರೂಪಾಣಾಂ ವಿಷ್ಣುರ್ಮಾಯಾವಿನಾಮಪಿ ।
ಅರುಂಧತೀ ಸತೀನಾಂ ತ್ವಂ ಸುಪರ್ಣಃ ಪತತಾಮಪಿ ।
ಸೂಕ್ತಾನಾಂ ಪೌರುಷಂ ಸೂಕ್ತಂ ಸಾಮ ಜ್ಯೇಷ್ಠಂ ಚ ಸಾಮಸು ।
ಸಾವಿತ್ರೀ ಚಾಪಿ ಜಪ್ಯಾನಾಂ ಯಜುಷಾಂ ಶತರುದ್ರಿಯಮ್ ।
ಪರ್ವತಾನಾಂ ಮಹಾಮೇರುರನಂತೋ ಭೋಗಿನಾಮಪಿ ।
ಸರ್ವೇಷಾಂ ತ್ವಂ ಪರಂಬ್ರಹ್ಮ ತ್ವನ್ಮಯಂ ಸರ್ವಮೇವ ಹಿ ।

ಹೇ ದೇವಿ!★ ನೀನು ದೇವತೆಗಳಲ್ಲಿ ಇಂದ್ರ, ಬ್ರಹ್ಮಜ್ಞಾನಗಳಲ್ಲಿ ಬ್ರಹ್ಮ, ಬಲಶಾಲಿಗಳಲ್ಲಿ ವಾಯು, ಯೋಗಿಗಳಲ್ಲಿ ಸನತ್ಕುಮಾರ, ಋಷಿಗಳಲ್ಲಿ ವಸಿಷ್ಠ, ವೇದಜ್ಞಾನಿಗಳಲ್ಲಿ ವ್ಯಾಸ, ಸಾಂಖ್ಯರಲ್ಲಿ ಆತ್ಮತತ್ತ್ವಜ್ಞಾನಿಗಳಲ್ಲಿ - ಕಪಿಲ, ರುದ್ರರಲ್ಲಿ ಶಂಕರ, ಆದಿತ್ಯರಲ್ಲಿ ಉಪೇಂದ್ರ, ವಸುಗಳಲ್ಲಿ ಅಗ್ನಿ, ವೇದಗಳಲ್ಲಿ ಸಾಮವೇದ, ಛಂದಸಗಳಲ್ಲಿ ಗಾಯತ್ರೀ, ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆ, ಗಮ್ಯಸ್ಥಾನಗಳಲ್ಲಿ ಮುಕ್ತಿ, ಎಲ್ಲ ಶಕ್ತಿಗಳಲ್ಲಿ ಮಾಯೆ, ಸಂಹಾರ

---

★ ಅತ್ಯುಚ್ಚ ಪ್ರಮಾಣದ ಶಕ್ತಿ, ಮಹಿಮೆಗಳನ್ನು ಹೊಂದಿರುವ ಯಾವುದೇ ವಸ್ತುವಿನಲ್ಲಿ ಭಗವಂತನ ತೇಜಸ್ಸಿನ ಅಂಶವೇ ಇರುತ್ತದೆ ಎಂದು ವೇದಾಂತಿಗಳ ಅಭಿಪ್ರಾಯ. ನೋಡಿ ಭಗವದ್ಗೀತಾ ಅಧ್ಯಾಯ : ೧೦.
ಈ ವಿಷಯಗಳನ್ನು ಹೇಳುವ ಭಾಷೆ ''ತ್ವ ಶಕ್ರಃ ಸರ್ವದೇವಾನಾಂ, ಬ್ರಹ್ಮಾ ಬ್ರಹ್ಮವಿದಾಮಸಿ'' ಇತ್ಯಾದಿ. ಹೋಲಿಸಿ ಭಗವದ್ಗೀತಾ : ''ವೇದಾನಾಂ ಸಾಮವೇದೋಸ್ಮಿ ದೇವಾನಾಮಸ್ಮಿ ವಾಸವಃ'' -೧೦-೨೨.
ಒಂದೊಂದು ವರ್ಗದಲ್ಲಿ ಯಾವುದು ಶ್ರೇಷ್ಠವೋ ಅದು ನೀನು ಎಂದರೆ ನಿನ್ನ ತೇಜಸ್ಸಿನ ಅಂಶ ಅಲ್ಲಿ ಸಕ್ರಿಯವಾಗಿದೆ -ಇದು ಹಿಮವಂತನ ಮಾತಿನ ಅರ್ಥ.

ಮಾಡುವವರಲ್ಲಿ ಯಮ, ರಹಸ್ಯ ವಿದ್ಯೆಗಳಲ್ಲಿ ಓಂಕಾರ, ಆಶ್ರಮಿಗಳಲ್ಲಿ ಗೃಹಸ್ಥಾಶ್ರಮಿ, ಈಶ್ವರರಲ್ಲಿ ಮಹೇಶ್ವರ, ಪುರುಷರಲ್ಲಿ ಸರ್ವರ ಹೃದಯ ನಿವಾಸಿಯಾದ ಪೂರ್ಣ ಪುರುಷ, ಉಪನಿಷತ್ತುಗಳಲ್ಲಿ ಅತ್ಯಂತ ರಹಸ್ಯವಾದ ಉಪನಿಷತ್, ಯುಗಗಳಲ್ಲಿ ಕೃತ, ಮಾರ್ಗ ಪ್ರದರ್ಶಕರಲ್ಲಿ ಸೂರ್ಯ.

ವಾಗ್ದೇವತೆಯಲ್ಲಿ ಸರಸ್ವತಿ, ಸುಂದರಿಯರಲ್ಲಿ ಲಕ್ಷ್ಮಿ, ಮಾಯಾವಿಗಳಲ್ಲಿ ವಿಷ್ಣು, ಸತಿಯಲ್ಲಿ ಅರುಂಧತಿ, ಹಕ್ಕಿಗಳಲ್ಲಿ ಗರುಡ, ಸೂಕ್ತಗಳಲ್ಲಿ ಪುರುಷಸೂಕ್ತ, ಸಾಮಗಳಲ್ಲಿ ಜ್ಯೇಷ್ಠ ಸಾಮ, ಜಪಗಳಲ್ಲಿ ಗಾಯತ್ರೀ, ಯಜುರ್ವೇದದಲ್ಲಿ ಶತರುದ್ರಿಯ, ಪರ್ವತಗಳಲ್ಲಿ ಮೇರು, ಸರ್ಪಗಳಲ್ಲಿ ಆದಿಶೇಷ, ಚೇತನಗಳಲ್ಲಿ ಪರಬ್ರಹ್ಮ ಆಗಿರುವಿ. ಇಡಿ ಜಗತ್ತು ನಿನ್ನನ್ನು ಅವಲಂಬಿಸಿದೆ. ಎಲ್ಲ ಕಡೆ ನೀನು ತುಂಬಿರುವಿ.

**ಹಿಮವಂತನು ಮಾಡಿದ ಪಾರ್ವತೀ ಸ್ತುತಿ :**

**ರೂಪಂ ತವಾಶೇಷ ವಿಕಾರ ಹೀನ**
**ಮಗೋಚರಂ ನಿರ್ಮಲಮೇಕರೂಪಮ್ ।**
**ಅನಾದಿಮಧ್ಯಾಂತಮನಂತಮಾದ್ಯಂ**
**ನಮಾಮಿ ಸತ್ಯಂ ತಮಸಃ ಪರಸ್ತಾತ್ ॥**

ಯಾವ ವಿಕಾರವೂ ಇಲ್ಲದ, ಇಂದ್ರಿಯಗೋಚರವಲ್ಲದ, ನಿರ್ಮಲವಾದ, ಒಂದೇ ರೀತಿ ಇರುವ, ಆದಿ, ಮಧ್ಯ, ಅಂತಗಳಿಲ್ಲದ, ಅನಂತವೂ, ಸನಾತನವೂ ಸದ್ಗುಣ ಸಂಪನ್ನವೂ ಆದ ತಮಸ್ಸನ್ನು ಮೀರಿರುವ ನಿನ್ನನ್ನು ನಮಸ್ಕರಿಸುತ್ತೇನೆ.

**ಯದೇವ ಪಶ್ಯಂತಿ ಜಗತ್ಪ್ರಸೂತಿಂ**
**ವೇದಾಂತವಿಜ್ಞಾನ ಸುನಿಶ್ಚಿತಾರ್ಥಂ ।**
**ಆನಂದಮಾತ್ರಂ ಪ್ರಣವಾಭಿಧಾನಂ**
**ತದೇವ ರೂಪಂ ಶರಣಂ ಪ್ರಪದ್ಯೆ ॥**

ವೇದಾಂತಶಾಸ್ತ್ರದಿಂದ ಸ್ವಚ್ಛಜ್ಞಾನವನ್ನು ಪಡೆದವರು ಯಾವ ತತ್ತ್ವವನ್ನು ವಿಶ್ವಸೃಷ್ಟಿಕಾರಣ ಎಂದು ಕಾಣುತ್ತಾರೋ, ಆನಂದ ರೂಪವೇ ಆದ ಓಂ ಎಂಬ ಹೆಸರಿನ ಆ (ನಿನ್ನ) ರೂಪವನ್ನೇ ಆಶ್ರಯಿಸುವೆನು.

**ಅಶೇಷ ಭೂತಾಂತರ ಸನ್ನಿವಿಷ್ಟಂ**
**ಪ್ರಧಾನ ಪುಂಯೋಗನಿಯೋಗಹೇತುಮ್ ।**
**ತೇಜೋಮಯಂ ಜನ್ಮವಿನಾಶಹೀನಂ**
**ಪ್ರಾಣಾಭಿಧಾನಂ ಪ್ರಣತೋಸ್ಮಿ ರೂಪಮ್ ॥**

ಎಲ್ಲ ಸ್ಥಾವರ-ಜಂಗಮಗಳ ಒಳಗಿರುವ, ಪ್ರಕೃತಿ-ಪುರುಷರ (ದೇಹ-ಆತ್ಮಗಳ) ಸಂಯೋಗ-ವಿಯೋಗಕ್ಕೆ ಕಾರಣವಾದ, ತೇಜೋಮಯವಾದ, ಹುಟ್ಟು ಸಾವುಗಳಿಲ್ಲದ ಪ್ರಾಣ ಎಂಬ ಹೆಸರಿನ (ನಿನ್ನ) ರೂಪವನ್ನು ನಮಿಸುವೆನು.

**ಆದ್ಯಂತಹೀನಂ ಜಗದಾತ್ಮರೂಪಂ**
**ವಿಭಿನ್ನಸಂಸ್ಥಂ ಪ್ರಕೃತೇಃ ಪರಸ್ತಾತ್ ।**
**ಕೂಟಸ್ಥಮವ್ಯಕ್ತವಪುಸ್ತಥೈವ**
**ನಮಾಮಿ ರೂಪಂ ಪುರುಷಾಭಿಧಾನಮ್ ॥**

ಆದಿ, ಅಂತಗಳಿಲ್ಲದ, ಜಗದಂತರ್ಯಾಮಿಯಾದ, ನಾನಾ ರೂಪಗಳುಳ್ಳ, ಪ್ರಕೃತಿಯನ್ನು ಮೀರಿದ, ನಿರ್ವಿಕಾರವಾದ, ಯಾರಿಗೂ ಕಾಣದ ಪುರುಷ ಎಂಬ ಹೆಸರಿನ (ನಿನ್ನ) ರೂಪವನ್ನು ನಮಿಸುವೆನು.

**ಸರ್ವಾಶ್ರಯಂ ಸರ್ವಜಗದ್ವಿಧಾನಂ**
**ಸರ್ವತ್ರಗಂ ಜನ್ಮವಿನಾಶಹೀನಮ್ ।**
**ಸೂಕ್ಷ್ಮಂ ವಿಚಿತ್ರಂ ತ್ರಿಗುಣಂ ಪ್ರಧಾನಂ**
**ನತೋಽಸ್ಮಿ ತೇ ರೂಪಮರೂಪಭೇದಮ್ ॥**

ಎಲ್ಲರಿಗೂ ಆಶ್ರಯವಾದ, ಇಡೀ ಜಗತ್ತಿನ ನಿರ್ಮಾತೃವಾದ, ಎಲ್ಲ ಕಡೆ ಇರುವ, ಹುಟ್ಟು-ನಾಶಗಳಿಲ್ಲದ, ಸೂಕ್ಷ್ಮವೂ, ವಿಚಿತ್ರವೂ ಆದ ತ್ರಿಗುಣಾತ್ಮಕವಾದ ಪ್ರಕೃತಿ ನಿಯಾಮಕವಾದ ರೂಪಭೇದವಿಲ್ಲದ ನಿನ್ನ ರೂಪವನ್ನು ನಮಿಸುವೆನು.

**ಆದ್ಯಂ ಮಹಾಂತಂ ಪುರುಷಾಭಿಧಾನಂ**
**ಪ್ರಕೃತ್ಯವಸ್ಥಂ ತ್ರಿಗುಣಾತ್ಮಬೀಜಮ್ ।**
**ಐಶ್ವರ್ಯವಿಜ್ಞಾನವಿರಾಗಧರ್ಮೈಃ**
**ಸಮನ್ವಿತಂ ದೇವಿ ನತೋಽಸ್ಮಿ ರೂಪಮ್ ॥**

ಜಗತ್ತಿನ ಪ್ರಥಮ ತತ್ತ್ವವಾದ, ಶ್ರೇಷ್ಠವಾದ, ಪುರುಷ ಎಂಬ ಹೆಸರಿನ ಎಂದೂ ಮುಚ್ಚದ, ಮಾಸದ ಸ್ವರೂಪವುಳ್ಳ, ತ್ರಿಗುಣಾತ್ಮಕ ಪ್ರಕೃತಿ ನಿಯಾಮಕ ದೇವತೆಗೆ ಮೂಲಾಧಾರವಾದ, ಐಶ್ವರ್ಯ, ವಿಜ್ಞಾನ, ವೈರಾಗ್ಯ ಸಂಪನ್ನವಾದ ನಿನ್ನ ರೂಪವನ್ನು ನಮಿಸುವೆನು.

**ದ್ವಿಸಪ್ತಲೋಕಾತ್ಮಕಮಂಬುಸಂಸ್ಥಂ**
**ವಿಚಿತ್ರಭೇದಂ ಪುರುಷೈಕನಾಥಮ್ ।**

ಅನೇಕ ಭೇದೈರಧಿವಾಸಿತಂ ತೇ
ನತೋಽಸ್ಮಿ ರೂಪಂ ಜಗದಂಡಸಂಜ್ಞಮ್ ॥

ಬ್ರಹ್ಮಾಂಡ ಎಂಬ ಹೆಸರಿನ ನಿನ್ನ ರೂಪ ಹದಿನಾಲ್ಕು ಲೋಕಗಳಿಗೆ ಆಶ್ರಯ; ಸಾಗರ ನಿವಾಸಿ; ವಿಚಿತ್ರ ಪ್ರಭೇದಗಳನ್ನು ಹೊಂದಿದೆ; ಪೂರ್ಣವಾದ ಈ ರೂಪ ಜಗತ್ತಿನ ಅದ್ವಿತೀಯ ಪ್ರಭು. ಅನೇಕ ರೂಪಗಳ ಈ ನಿನ್ನ ರೂಪಕ್ಕೆ ನಮಸ್ಕಾರ.

ಅಶೇಷವೇದಾತ್ಮಕ ಮೇಕಮಾದ್ಯಂ
ತ್ವತ್ತೇಜಸಾ ಪೂರಿತಲೋಕಭೇದಮ್ ।
ತ್ರಿಕಾಲಹೇತುಂ ಪರಮೇಷ್ಠಿಸಂಜ್ಞಂ
ನಮಾಮಿ ರೂಪಂ ರವಿಮಂಡಲಸ್ಥಮ್ ॥

ಸಮಸ್ತವೇದ ಪ್ರತಿಪಾದ್ಯವೂ, ಅದ್ವಿತೀಯವೂ, ಪ್ರಥಮ ತತ್ವವೂ, ಲೋಕದಲ್ಲೆಲ್ಲ ತುಂಬಿದ ತೇಜಸ್ಸಿನ, ತ್ರಿಕಾಲ ನಿಯಾಮಕವಾದ ಸೂರ್ಯಮಂಡಲದಲ್ಲಿರುವ ಪರಮೇಷ್ಠಿ ಎಂಬ ಹೆಸರಿನ ನಿನ್ನ ರೂಪಕ್ಕೆ ನಮಸ್ಕಾರ.

ಸಹಸ್ರ ಮೂರ್ಧಾನಮನಂತಶಕ್ತಿಂ
ಸಹಸ್ರಬಾಹುಂ ಪುರುಷಂ ಪುರಾಣಮ್ ।
ಶಯಾನಮಂತಃ ಸಲಿಲೇ ತವೈವ
ನಾರಾಯಣಾಖ್ಯಂ ಪ್ರಣತೋಽಸ್ಮಿ ರೂಪಮ್ ॥

ಸಾವಿರ ತಲೆಯ, ಮುಗಿಯದ ಶಕ್ತಿಯ, ಸಾವಿರ ಕೈಯ, ಪೂರ್ಣವೂ, ಸನಾತನವೂ ಆದ, ನೀರಿನಲ್ಲಿ ಮಲಗಿರುವ ನಾರಾಯಣ ಎಂಬ ಹೆಸರಿನ ನಿನ್ನ ರೂಪಕ್ಕೆ ನಮಸ್ಕಾರ.

ದಂಷ್ಟ್ರಾಕರಾಲಂ ತ್ರಿದಶಾಭಿವಂದ್ಯಂ
ಯುಗಾಂತಕಾಲಾನಲಕರ್ತೃರೂಪಮ್ ।
ಅಶೇಷಭೂತಾಂಡವಿನಾಶ ಹೇತುಂ
ನಮಾಮಿ ರೂಪಂ ತವ ಕಾಲ ಸಂಜ್ಞಮ್ ॥

ಕೋರೆ ಹಲ್ಲುಗಳಿಂದ ಕರಾಳವಾದ, ದೇವತೆಗಳಿಂದ ವಂದ್ಯವಾದ ಪ್ರಲಯಾಗ್ನಿಯ ಜನಕವಾದ, ಇಡೀ ಬ್ರಹ್ಮಾಂಡವಿನಾಶ ಕಾರಣನಾದ ನಿನ್ನ ಕಾಲ ಎಂಬ ಹೆಸರಿನ ನಿನ್ನ ರೂಪಕ್ಕೆ ನಮಸ್ಕಾರ.

ಅವ್ಯಾಹತೈಶ್ವರ್ಯಮಯುಗ್ಮನೇತ್ರಂ
ಬ್ರಹ್ಮಾಮೃತಾನಂದ ರಸಜ್ಞಮೇಕಮ್ ।

ಯುಗಾಂತಶೇಷಂ ದಿವಿ ನೃತ್ಯಮಾನಮ್
ನತೋಽಸ್ಮಿ ರೂಪಂ ತವ ರುದ್ರ ಸಂಜ್ಞಮ್ ॥

ಕುಂದದ ಐಶ್ವರ್ಯದ ಮೂರು ಕಣ್ಣಿನ, ಬ್ರಹ್ಮಾಮೃತಾನಂದ ರಸವನ್ನು ತಿಳಿದ, ಅದ್ವಿತೀಯವಾದ, ಪ್ರಲಯದಲ್ಲಿ ಉಳಿದಿರುವ ಅಂತರಿಕ್ಷದಲ್ಲಿ ನೃತ್ಯಮಾಡುವ ನಿನ್ನ ರುದ್ರ ಎಂಬ ಹೆಸರಿನ ರೂಪಕ್ಕೆ ನಮಸ್ಕಾರ.

ಪ್ರಹೀಣಶೋಕಂ ಪ್ರವಿಹೀನ ರೂಪಂ
ಸುರಾಸುರೈರರ್ಚಿತ ಪಾದ ಪದ್ಮಮ್ ।
ಸುಕೋಮಲಂ ದೇವಿ ವಿಭಾಸಿ ಶುಭ್ರಂ
ನಮಾಮಿ ತೇ ರೂಪಮಿದಂ ಭವಾನಿ ॥

ದೇವಿ ಭವಾನಿ! ಶೋಕ ದೂರವಾದ, ಪ್ರಾಕೃತರೂಪವಿಲ್ಲದ ಸುರ-ಅಸುರರಿಂದ ಅರ್ಚಿತವಾದ ಪಾದಕಮಲದ, ಅತ್ಯಂತ ಕೋಮಲವೂ, ಶುಭ್ರವೂ ಆದ ನಿನ್ನ ರೂಪಕ್ಕೆ ನಮಸ್ಕಾರ.

ನಮಸ್ತೇಸ್ತು ಮಹಾದೇವಿ ನಮಸ್ತೇ ಪರಮೇಶ್ವರಿ ।
ನಮೋ ಭಗವತೀಶಾನಿ ಶಿವಾಯೈ ತೇ ನಮೋ ನಮಃ ॥

ಮಹಾದೇವಿ! ಪರಮೇಶ್ವರಿ! ನಿನಗೆ ನಮಸ್ಕಾರ. ಪೂಜ್ಯ ಈಶಾನಿ! ನಿನಗೆ ನಮಸ್ಕಾರ. ಶಿವಪತ್ನಿಯಾದ ನಿನಗೆ ಮತ್ತೆ ಮತ್ತೆ ನಮಸ್ಕಾರ.

ತ್ವನ್ಮಯೋಽಹಂ ತ್ವದಾಧಾರಸ್ತ್ವಮೇವ ಚ ಗತಿರ್ಮಮ ।
ತ್ವಾಮೇವ ಶರಣಂ ಯಾಸ್ಯೇ ಪ್ರಸೀದ ಪರಮೇಶ್ವರಿ ॥

ನಾನು ಪೂರ್ಣವಾಗಿ ನಿನ್ನನ್ನೇ ಅವಲಂಬಿಸಿರುವೆನು. ನೀನೇ ನನಗೆ ಗತಿ. ಪರಮೇಶ್ವರಿ! ನಿನ್ನನ್ನೇ ಶರಣು ಹೊಂದುವೆನು ದಯವಿಟ್ಟು ಪ್ರಸನ್ನಳಾಗು.

ಮಯಾ ನಾಸ್ತಿ ಸಮೋ ಲೋಕೇ ದೇವೋ ವಾ ದಾನವೋಽಪಿವಾ ।
ಜಗನ್ಮಾತೈವ ಮತ್ಪುತ್ರೀ ಸಂಭೂತಾ ತಪಸಾ ಯತಃ ॥

ಜಗದ ತಾಯಿಯೇ ನನ್ನ ಮಗಳಾಗಿ ಹುಟ್ಟಿರುವುದರಿಂದ ಲೋಕದಲ್ಲಿ ನನಗೆ ಸಮನಾದ (ಭಾಗ್ಯವಂತ) ಯಾರೂ - ದೇವತೆಗಳು ಅಥವಾ ದಾನವರು ಇಲ್ಲ.

ಏಷಾ ತವಾಂಬಿಕೇ ದೇವಿ ಕಿಲಾಭೂತ್ ಪಿತೃಕನ್ಯಕಾ ।
ಮೇನಾಶೇಷ ಜಗನ್ಮಾತುರಹೋ ಮೇ ಪುಣ್ಯಗೌರವಮ್ ॥

ಅಂಬಿಕೆ! ದೇವಿ! ಈ ಮೇನಾದೇವಿಯು ಸರ್ವಜಗನ್ಮಾತೆಯಾದ ನಿನ್ನ ತಾಯಿಯಾಗಿದ್ದಾಳೆ. ನಾನು ಎಷ್ಟು ಪುಣ್ಯವಂತ!

**ಪಾಹಿ ಮಾಮಮರೇಶಾನಿ ಮೇನಯಾ ಸಹ ಸರ್ವದಾ ।**
**ನಮಾಮಿ ತವ ಪಾದಾಬ್ಜಂ ವ್ರಜಾಮಿ ಶರಣಂ ಶಿವಮ್ ॥**

**ಅಹೋ ಮೇ ಸುಮಹದ್ಭಾಗ್ಯಂ ಮಹಾದೇವೀಸಮಾಗಮಾತ್ ।**
**ಆಜ್ಞಾಪಯ ಮಹಾದೇವಿ ಕಿಂ ಕರಿಷ್ಯಾಮಿ ಶಂಕರಿ ॥**

ದೇವನಿಯಾಮಕಳೆ! ನಿನ್ನ ಪಾದಕಮಲವನ್ನು ಆಶ್ರಯಿಸುವೆನು. ನನ್ನನ್ನೂ ಮೇನಾದೇವಿಯನ್ನೂ ರಕ್ಷಿಸು. ಮಹಾದೇವಿಯ ಸಮಾಗಮವನ್ನು ಪಡೆದ ನನ್ನ ಭಾಗ್ಯ ಎಷ್ಟು ದೊಡ್ಡದು! ಮಹಾದೇವಿ! ಶಂಕರಿ! ಯಾವ ಕೆಲಸವನ್ನು ಮಾಡಲಿ? ದಯವಿಟ್ಟು ಆಜ್ಞಾಪಿಸು.

ಹಿಮವಂತನು ಇಷ್ಟು ಸ್ತೋತ್ರವನ್ನು ಮಾಡಿ ಪಾರ್ವತಿಯನ್ನು ನೋಡುತ್ತಾ ಕೈ ಮುಗಿದುಕೊಂಡು ಪಕ್ಕದಲ್ಲಿ ನಿಂತನು. ಅನಂತರ ಜಗತ್ಕಾರಣಳಾದ ಪಾರ್ವತಿಯು ತನ್ನ ಪತಿ ಪಶುಪತಿಯನ್ನು ಸ್ಮರಿಸಿ ಹಿಮವಂತನನ್ನು ಕುರಿತು ಮಾತನಾಡಿದಳು.

**ಹಿಮವಂತನಿಗೆ ಪಾರ್ವತಿಯ ಉಪದೇಶ :**

**ಶ್ರುಣುಷ್ವ ಚೈತತ್ ಪ್ರಥಮಂ ಗುಹ್ಯಮೀಶ್ವರಗೋಚರಮ್ ।**
**ಉಪದೇಶಂ ಗಿರಿಶ್ರೇಷ್ಠ ಸೇವಿತಂ ಬ್ರಹ್ಮವಾದಿಭಿಃ ॥**

ಪರ್ವತರಾಜ ಹಿಮವಂತನೆ! ಬ್ರಹ್ಮವಾದಿಗಳು ಅಧ್ಯಯನ-ಅನುಷ್ಠಾನಗಳಿಂದ ಗೌರವಿಸಿರುವ ಸಮರ್ಥರಿಗೆ ಮಾತ್ರ ತಿಳಿಯುವ ಈ ಉಪದೇಶವನ್ನು ಕೇಳು.

**ಯನ್ಮೇ ಸಾಕ್ಷಾತ್ ಪರಂ ರೂಪಮೈಶ್ವರಂ ದೃಷ್ಟಮದ್ಭುತಮ್ ।**
**ಸರ್ವಶಕ್ತಿಸಮಾಯುಕ್ತಮನಂತಂ ಪ್ರೇರಕಂ ಪರಮ್ ॥**

**ಶಾಂತಃ ಸಮಾಹಿತಮನಾ ಮಾನಾಹಂಕಾರವರ್ಜಿತಃ ।**
**ತನ್ನಿಷ್ಠಸ್ತತ್ಪರೋ ಭೂತ್ವಾ ತದೇವ ಶರಣಂ ವ್ರಜ ॥**

ಸರ್ವಶಕ್ತಿ ಸಂಪನ್ನವಾದ, ಕೊನೆಯಿಲ್ಲದ, ಒಳ್ಳೆಯ ಸ್ಫೂರ್ತಿಯನ್ನು ನೀಡುವ ನನ್ನ ಅದ್ಭುತ ರೂಪವನ್ನು ನೀನು ನೋಡಿರುವಿ. ಶಾಂತನೂ, ಏಕಾಗ್ರಚಿತ್ತನೂ, ಅಭಿಮಾನ-ಅಹಂಕಾರ ರಹಿತನೂ ಆಗಿ, ಶ್ರದ್ಧೆ-ಭಕ್ತಿಗಳಿಂದ ಆ ರೂಪವನ್ನೇ ಆಶ್ರಯಿಸು.

**ಭಕ್ತ್ಯಾ ತ್ವನನ್ಯಯಾ ತಾತ ಮದ್ಭಾವಂ ಪರಮಾಶ್ರಿತಃ ।**
**ಸರ್ವಯಜ್ಞ ತಪೋದಾನೈಸ್ತದೇವಾರ್ಚಯ ಸರ್ವದಾ ॥**

ತದೇವ ಮನಸಾ ಪಶ್ಯ ತದ್ಧ್ಯಾಯಸ್ವ ಯಜಸ್ವ ತತ್ ।
ಮಮೋಪದೇಶಾತ್ಸಂಸಾರಂ ನಾಶಯಾಮಿ ತವಾನಘ ॥

ಅಹಂ ತ್ವಾ ಪರಯಾ ಭಕ್ತ್ಯಾ ಐಶ್ವರಂ ಯೋಗಮಾಸ್ಥಿತಮ್ ।
ಸಂಸಾರಸಾಗರಾದಸ್ಮಾದುದ್ಧರಾಮ್ಯಚಿರೇಣ ತು ॥

ಅನನ್ಯಭಕ್ತಿಯಿಂದ ನನ್ನನ್ನೇ ಚಿಂತಿಸುತ್ತಾ, ಎಲ್ಲ ವಿಧವಾದ ಯಜ್ಞದಾನ, ತಪಸ್ಸುಗಳಿಂದ ಆ ನನ್ನ ರೂಪವನ್ನೇ ಸದಾ ಪೂಜಿಸು. ಆ ರೂಪವನ್ನೇ ಮನಸ್ಸಿನಿಂದ ನೋಡು, ಅದನ್ನೇ ಧ್ಯಾನಿಸು. ಪೂಜಿಸು. ಉಪದೇಶದಿಂದ ನಿನ್ನ ಸಂಸಾರಬಂಧವನ್ನು ನಾಶಮಾಡುವೆ. ಪರಮಭಕ್ತಿಯಿಂದ ನನ್ನ ಐಶ್ವರರೂಪವನ್ನು ಆಶ್ರಯಿಸಿದ ನಿನ್ನನ್ನು ನಾನು ಸಂಸಾರ ಸಾಗರದಿಂದ ಬೇಗನೆ ಮೇಲೆತ್ತುತ್ತೇನೆ.

ಧ್ಯಾನೇನ ಕರ್ಮ ಯೋಗೇನ ಭಕ್ತ್ಯಾ ಜ್ಞಾನೇನ ಚೈವ ಹಿ ।
ಪ್ರಾಪ್ಯಾಹಂ ತೇ ಗಿರಿಶ್ರೇಷ್ಠ ನಾನ್ಯಥಾ ಕರ್ಮ ಕೋಟಿಭಿಃ ॥

ಶ್ರುತಿಸ್ಮೃತ್ಯುದಿತಂ ಸಮ್ಯಕ್ಕರ್ಮ ವರ್ಣಾಶ್ರಮಾತ್ಮಕಮ್ ।
ಅಧ್ಯಾತ್ಮಜ್ಞಾನಸಹಿತಂ ಮುಕ್ತಯೇ ಸತತಂ ಕುರು ॥

ಪರ್ವತರಾಜನೆ! ಧ್ಯಾನ, ಕರ್ಮ, ಯೋಗ, ಭಕ್ತಿ ಮತ್ತು ಜ್ಞಾನಗಳಿಂದ ನನ್ನನ್ನು ತಲುಪಬಹುದು. ಇವುಗಳಿಲ್ಲದ ಕೋಟಿ ಕರ್ಮಗಳಿಂದಲೂ ನನ್ನನ್ನು ತಲುಪಲು ಸಾಧ್ಯವಿಲ್ಲ. ಶ್ರುತಿ-ಸ್ಮೃತಿಗಳಲ್ಲಿ ಉಕ್ತವಾದ, ವರ್ಣಾಶ್ರಮಗಳಲ್ಲಿ ವ್ಯವಸ್ಥಿತವಾಗಿರುವ ಉತ್ತಮ ಕರ್ಮ ಗಳನ್ನು ಅಧ್ಯಾತ್ಮಜ್ಞಾನ ನಿರಂತರವಾಗಿ ಸಹಿತವಾಗಿ ಮಾಡು. ಇದರಿಂದ ಮುಕ್ತಿಯಾಗುತ್ತದೆ.

## ಭಕ್ತಿಯ ಮೂಲ :

ಧರ್ಮಾಚರಣೆಯಿಂದ ಭಕ್ತಿಯು ಹುಟ್ಟುತ್ತದೆ. ಭಕ್ತಿಯಿಂದ ಪರತತ್ತ್ವದ ಸಾಕ್ಷಾತ್ಕಾರವಾಗುತ್ತದೆ. ಶ್ರುತಿ-ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ಯಜ್ಞ ಮೊದಲಾದವುಗಳೇ ಧರ್ಮ. ವೇದೋಕ್ತವಾದ ಈ ಯಜ್ಞ ಮೊದಲಾದವುಗಳನ್ನು ಬಿಟ್ಟು ಬೇರೆ ವಿಧಾನಗಳಿಂದ ಧರ್ಮವು ಹುಟ್ಟುವುದಿಲ್ಲ. ಆದ್ದರಿಂದ ಮೋಕ್ಷದ ಅಪೇಕ್ಷೆವುಳ್ಳವನು ನನ್ನ ಸ್ವರೂಪವೇ ಆಗಿರುವ *(ನನ್ನನ್ನು ಪ್ರತಿಪಾದಿಸುವ)* ವೇದವನ್ನು ಆಶ್ರಯಿಸಬೇಕು. ನನ್ನ ಪರಶಕ್ತಿಯೇ ಸೃಷ್ಟಿಯ ಆದಿಯಲ್ಲಿ ಋಕ್, ಯಜುಸ್, ಸಾಮ ರೂಪಗಳಿಂದ ಪ್ರವರ್ತಿಸುತ್ತದೆ. ಆ ವೇದಗಳ ರಕ್ಷಣೆಗಾಗಿಯೇ *(ಆಚರಣೆಯಿಂದಲೇ ರಕ್ಷಣೆ)* ಬ್ರಾಹ್ಮಣ ಮೊದಲಾದ ವರ್ಣಗಳನ್ನು ಸೃಷ್ಟಿಸಿ ಅವರವರ ಕರ್ಮದಲ್ಲಿ ತೊಡಗಿಸಿದೆನು. ವೇದರಕ್ಷಣೆಗಾಗಿ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ, ಆದರೆ, ವೇದೋಕ್ತ ಧರ್ಮವನ್ನು ಆಚರಿಸದ ಬ್ರಾಹ್ಮಣಾದಿಗಳಿಗೆ ತಾಮಿಸ್ರ ಮೊದಲಾದ ನರಕಗಳನ್ನು ಕೆಳಭಾಗದಲ್ಲಿ ಕಲ್ಪಿಸಿರುವೆನು. ವೇದವೊಂದೇ ಧರ್ಮವನ್ನು

ತಿಳಿಸುವ ಶಾಸ್ತ್ರ. ಬೇರೆ ಯಾವ ಶಾಸ್ತ್ರವೂ ಅಲ್ಲ. ವೇದವನ್ನು ಬಿಟ್ಟು ಬೇರೆ ಶಾಸ್ತ್ರಗಳಲ್ಲಿ ಆಸಕ್ತರಾದವರ ಜೊತೆ ದ್ವಿಜರು ಮಾತನಾಡಬಾರದು. ಶ್ರುತಿ-ಸ್ಮೃತಿ ವಿರುದ್ಧವಾದ ಶಾಸ್ತ್ರಗಳಲ್ಲಿ ನಿಷ್ಠೆ ಇರುವವರು ತಾಮಸ ಸ್ವಭಾವದವರು. ಕಾಪಾಲ-ಭೈರವ-ಯಾಮಲ-ವಾಮ-ಆರ್ಹತ -ಇವು ಮತ್ತು ಇಂತಹ ವಿಚಾರ-ಆಚಾರಗಳು ಮೋಹಕಗಳು. ಯಾರು ಅಪ್ರಾಮಾಣಿಕ, ಆದ್ದರಿಂದಲೇ ದುಷ್ಟ ಶಾಸ್ತ್ರಗಳ ಮೇಲೆ ಆಗ್ರಹದಿಂದ ಜನರಿಗೆ ಮೋಹವನ್ನುಂಟು-ಮಾಡುತ್ತಾರೋ ಅವರು ಜನ್ಮಾಂತರಗಳಲ್ಲೂ ನನ್ನಿಂದ ರಚಿಸಲ್ಪಟ್ಟ ದುಷ್ಟ ಶಾಸ್ತ್ರಗಳಿಂದ ಮೋಹವನ್ನೇ ಹೊಂದುತ್ತಾರೆ. ವೇದಾರ್ಥವನ್ನು ಚೆನ್ನಾಗಿ ತಿಳಿದವರು ಸ್ಮೃತಿಗಳಲ್ಲಿ ಹೇಳಿದ ವೈದಿಕ ಕರ್ಮಗಳನ್ನು ಆಚರಿಸಲೇಬೇಕು. ಯಾರು ಆ ಕರ್ಮಗಳನ್ನು ಪ್ರಯತ್ನದಿಂದ ಮಾಡುತ್ತಾರೋ ಅವರ ಮೇಲೆ ನನಗೆ ಬಹಳ ಪ್ರೀತಿ. ಬ್ರಾಹ್ಮಣ ಮೊದಲಾದ ವರ್ಣಗಳ ಮೇಲೆ ಕೃಪೆಯಿಂದ ನಾನು ಸ್ವಾಯಂಭುವಮನುವಿಗೆ ಧರ್ಮಗಳನ್ನು ಉಪದೇಶಿಸಲು ಆಜ್ಞೆ ಮಾಡಿದೆನು. ಅವನು ಮುನಿಗಳಿಗೆ ಉಪದೇಶ ಮಾಡಿದನು. ಅವನಿಂದ ಉತ್ತಮವಾದ ಧರ್ಮವನ್ನು ತಿಳಿದ ಮುನಿಗಳು, ಧರ್ಮ ಪ್ರತಿಷ್ಠಾಪನೆಗಾಗಿ ಧರ್ಮಶಾಸ್ತ್ರಗಳನ್ನು ಮಾಡಿದರು. ಯುಗಗಳ ಅವಸಾನವಾಗುತ್ತಾ ಆ ಧರ್ಮಸಂಹಿತೆಗಳೂ ಅಡಗಿ ಹೋಗುತ್ತವೆ. ಬ್ರಹ್ಮನ ಮಾತಿನಂತೆ ಮಹರ್ಷಿಗಳು ಪ್ರತಿಯುಗದಲ್ಲೂ ಅವುಗಳನ್ನು ರಚಿಸುತ್ತಾರೆ. ಬ್ರಹ್ಮನ ಆದೇಶದಂತೆ ವ್ಯಾಸ ಮೊದಲಾದವರಿಂದ ಹದಿನೆಂಟು ಪುರಾಣಗಳು ರಚಿತವಾಗಿವೆ. ಅವುಗಳಲ್ಲಿ ಧರ್ಮದ ಬಗ್ಗೆ ವಿವರಣೆಗಳಿವೆ. ಬೇರೆ ಉಪಪುರಾಣಗಳು ವ್ಯಾಸಶಿಷ್ಯರಿಂದ ರಚಿತವಾಗಿವೆ. ಶಿಕ್ಷಾ, ವ್ಯಾಕರಣ, ಕಲ್ಪ, ನಿರುಕ್ತ, ಛಂದಸ್ಸು, ಜ್ಯೋತಿಃಶಾಸ್ತ್ರ, ನ್ಯಾಯವಿದ್ಯೆ ಇವುಗಳು ವೇದ-ಪುರಾಣಗಳ ವಿವರಣೆಯನ್ನು ನೀಡುವ ಅರ್ಥವನ್ನು ಸ್ಪಷ್ಟೀಕರಿಸುವ ಶಾಸ್ತ್ರಗಳು. ಹೀಗೆ ನಾಲ್ಕು ವೇದ, ಆರು ವೇದಾಂಗ, ನ್ಯಾಯವಿದ್ಯೆ, ಪುರಾಣ, ಉಪಪುರಾಣ, ಧರ್ಮಶಾಸ್ತ್ರ - ಈ ಹದಿನಾಲ್ಕು ವಿದ್ಯಾಸ್ಥಾನಗಳು ಧರ್ಮಬೋಧಕಗಳು. ಬೇರೆ ಶಾಸ್ತ್ರಗಳು ಅಲ್ಲ. ಹೀಗೆ ಬ್ರಹ್ಮದೇವರಿಂದ ಉಗಮವಾದ ಧರ್ಮವನ್ನು ಮನು, ವ್ಯಾಸ ಮೊದಲಾದವರು ನನ್ನ ಆದೇಶದಂತೆ ಪ್ರಲಯದವರೆಗೆ ಸ್ಥಾಪಿಸುತ್ತಾ ಇರುತ್ತಾರೆ. ಪ್ರಲಯವಾದಾಗ ಅವರೆಲ್ಲರೂ ಬ್ರಹ್ಮದೇವರ ಜೊತೆ ಮುಕ್ತಿಯನ್ನು ಪಡೆಯುತ್ತಾರೆ. ಆದ್ದರಿಂದ ಧರ್ಮಜ್ಞಾನ-ಅನುಷ್ಠಾನಕ್ಕಾಗಿ ಎಲ್ಲ ವಿಧವಾದ ಪ್ರಯತ್ನದಿಂದ ವೇದವನ್ನು ಅವಲಂಬಿಸಬೇಕು. ಧರ್ಮ ಸಹಿತವಾದ ಜ್ಞಾನದಿಂದ ಪರಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ.

## ಧರ್ಮಾಚರಣೆಯನ್ನು ಮಾಡುವವರಿಗೆ ಭರವಸೆ :

ಯಾರು ವಿಷಯ ಪದಾರ್ಥಗಳ ಸಂಗವನ್ನು ಪರಿತ್ಯಜಿಸಿ, ನನ್ನನ್ನೇ ರಕ್ಷಕನೆಂದು ಆಶ್ರಯಿಸಿ, ಐಶ್ವರಯೋಗ *(ಈಶ್ವರನನ್ನು ತಲುಪುವ ಸಾಧನ)* ವನ್ನು ಅವಲಂಬಿಸಿ ಭಕ್ತಿಯಿಂದ ಉಪಾಸನೆಯನ್ನು ಮಾಡುತ್ತಾರೋ, ಸರ್ವಭೂತ ದಯೆ, ಶಾಂತಿ, ಇಂದ್ರಿಯನಿಗ್ರಹಗಳನ್ನು ಹೊಂದಿ, ಮಾತ್ಸರ್ಯ, ಅಹಂಕಾರರಹಿತರಾಗಿ ಬುದ್ಧಿವಂತರೂ, ತಪಸ್ವಿಗಳೂ, ವ್ರತನಿಷ್ಠರೂ

ಆಗಿರುತ್ತಾರೋ, ನನ್ನಲ್ಲೇ (ಪಾರ್ವತಿಯಲ್ಲೇ) ಮನಸ್ಸು, ಪ್ರಾಣಗಳನ್ನು ಇಟ್ಟಿರುತ್ತಾರೋ, ನನ್ನ ವಿಷಯವನ್ನು ಹೇಳುವುದರಲ್ಲಿ ನಿರತರಾಗಿರುತ್ತಾರೋ ಅಂತಹ ಸನ್ನ್ಯಾಸಿಗಳ, ಗೃಹಸ್ಥಾಶ್ರಮಿಗಳ, ವಾನಪ್ರಸ್ಥಾಶ್ರಮಿಗಳ, ಬ್ರಹ್ಮಚಾರಿಗಳ ಅಜ್ಞಾನವನ್ನೂ ಮತ್ತು ಅದರ ಎಲ್ಲ ಪರಿಣಾಮವನ್ನೂ ಜ್ಞಾನದೀಪದಿಂದ ಪರಿಹರಿಸುವೆನು. ಜ್ಞಾನದಿಂದ ಅಜ್ಞಾನವನ್ನು ಕಳೆದುಕೊಂಡ ಅವರು ನಿರಂತರವಾಗಿ ಉತ್ತಮ ಆನಂದವುಳ್ಳವರಾಗುವರು. ಅವರು ಮತ್ತೆ ಹುಟ್ಟುವುದಿಲ್ಲ. ಆದ್ದರಿಂದ ಎಲ್ಲ ರೀತಿಗಳಿಂದ ನನ್ನಲ್ಲಿ ಆಸಕ್ತನಾಗಿ, ಭಕ್ತನಾಗಿ, ಮನಸಾ ನನ್ನನ್ನು ಆಶ್ರಯಿಸಿ ಎಲ್ಲೆಡೆ ನನ್ನನ್ನೇ ಪೂಜಿಸು. ನನ್ನ ವಿಶ್ವರೂಪ (ಐಶ್ವರ ರೂಪ) ವನ್ನು ಧ್ಯಾನಿಸಲಾಗದಿದ್ದರೆ ನನ್ನ ಕಾಲ ಮೊದಲಾದ ರೂಪಗಳನ್ನು ಧ್ಯಾನಿಸು. ನನ್ನ ಯಾವ ರೂಪವು ಮನಸ್ಸಿನಲ್ಲಿ ನಿಲ್ಲುವುದೋ ಅದನ್ನು ಧ್ಯಾನಿಸು.

ನನ್ನ ದೋಷರಹಿತವೂ, ಚಿನ್ಮಯವೂ, ಮಂಗಳಮಯವೂ, ಎಲ್ಲ ವಿಧವಾದ ಬಾಧಕಗಳಿಂದ ಮುಕ್ತವೂ, ಅನಂತವೂ, ಅಮೃತವೂ ಆದ ರೂಪವನ್ನು ಕಷ್ಟದಿಂದ ಸಂಪಾದಿಸಿದ ಜ್ಞಾನದಿಂದ ಮಾತ್ರ ನೋಡಲು ಸಾಧ್ಯ. ಜ್ಞಾನವನ್ನು ಸಂಪಾದಿಸಿದವರು ನನ್ನನ್ನು ನಿಃಸಂಶಯವಾಗಿ ಹೊಂದುತ್ತಾರೆ. ಆ ನನ್ನ ರೂಪದಲ್ಲೇ ಬುದ್ಧಿ, ಮನಸ್ಸುಗಳನ್ನು ನೆಲೆಗೊಳಿಸಿದ, ಸಾಧಕರೂ ಜ್ಞಾನದಿಂದ ಎಲ್ಲ ಪಾಪಗಳನ್ನೂ, ದೋಷಗಳನ್ನು ತೊಳೆದುಕೊಂಡು ಮುಕ್ತಿಯನ್ನು ಪಡೆಯುತ್ತಾರೆ.

ನನ್ನನ್ನು ಆಶ್ರಯಿಸದಿದ್ದರೆ ಮುಕ್ತಿಯು ದೊರಕುವುದಿಲ್ಲ. ಆದ್ದರಿಂದ ನನ್ನನ್ನೇ ಆಶ್ರಯಿಸು. ನನ್ನ ನಿತ್ಯವೂ, ನಾಶ ರಹಿತವೂ ಆದ ಐಶ್ವರರೂಪವನ್ನು ಪ್ರಯತ್ನದಿಂದ ಆರಾಧಿಸಿ ಅಜ್ಞಾನವನ್ನು ತೊಡೆದುಹಾಕು. ಕರ್ಮಾಚರಣೆಯಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ಯಾವಾಗಲೂ ಎಲ್ಲೆಡೆ ನನ್ನ ಶಿವರೂಪವನ್ನು ಆರಾಧಿಸು. ಅದರಿಂದ ಮುಕ್ತಿಯನ್ನು ಪಡೆಯುವಿ.

## ಮಾಯಾ ಮೋಹಿತರಿಗೆ ಪರಮೇಶ್ವರ ಪ್ರಾಪ್ತಿ ಇಲ್ಲ :

ನನ್ನ ಮಾಯೆಯಿಂದ ಮೋಹಕ್ಕೊಳಗಾದವರು ಅನಾದಿ, ಅನಂತನಾದ ಜನ್ಮ ರಹಿತನೂ, ಮಂಗಳಮಯನೂ ಆದ, ಸರ್ವಾಂತರ್ಯಾಮಿಯಾದ ಸರ್ವಾಧಾರನೂ, ನಿರಂಜನನೂ, ನಿತ್ಯಾನಂದನೂ ಆದ ತೋರಿಕೆಗಳಿಲ್ಲದ, ಸತ್ವ, ರಜಸ್ತಮೋಗುಣ ರಹಿತನಾದ, ಅದ್ವಿತೀಯನೂ ಅಚಲನೂ, ಪೂರ್ಣನೂ, ಪ್ರಪಂಚ (ಬಂಧನ) ರಹಿತನೂ, ಸ್ವಪ್ರಕಾಶನೂ, ಪೂರ್ಣವಾಗಿ ತಿಳಿಯಲಾಗದವನೂ ಆದ ಆ ಪರಮಾತ್ಮನನ್ನು ತಿಳಿಯುವುದಿಲ್ಲ. ಮುಕ್ತಿಯನ್ನೂ ಹೊಂದುವುದಿಲ್ಲ. ಸೂಕ್ಷ್ಮವಾದ ಮಾಯೆಯಿಂದ ಆವರಿಸಲ್ಪಟ್ಟ ಜನರು ಘೋರವಾದ ಸಂಸಾರಸಾಗರದಲ್ಲಿ ಪುನಃ ಪುನಃ ಹುಟ್ಟುತ್ತಾರೆ.

## ಮುಕ್ತಿಗೆ ಭಕ್ತಿ ಅತಿಮುಖ್ಯ :

ಹುಟ್ಟು-ಸಾವುಗಳ ಬಂಧ ನಿವೃತ್ತಿಗೆ ಯಥಾರ್ಥಜ್ಞಾನದಿಂದ ಹುಟ್ಟಿದ ಅನನ್ಯ ಭಕ್ತಿಯಿಂದ ಬ್ರಹ್ಮನನ್ನು ಕಾಣಲು ಪ್ರಯತ್ನಿಸಬೇಕು. ಅಹಂಕಾರ, ಮಾತ್ಸರ್ಯ, ಕಾಮ, ಕ್ರೋಧ, ಪರಿಗ್ರಹ, ಅಧರ್ಮ ಇವುಗಳನ್ನು ಬಿಟ್ಟು, ವಿರಕ್ತನಾಗಿ ಬ್ರಹ್ಮನ ಸರ್ವಾಂತರ್ಯಾಮಿತ್ವವನ್ನೂ, ಸಕಲ ಚರಾಚರವಸ್ತುಗಳು ಅವನನ್ನು ಆಶ್ರಯಿಸಿರುವುದನ್ನು ಕಂಡರೆ *(ಚೆನ್ನಾಗಿ ತಿಳಿದು)* ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆದು ಅವನ ಸಮೀಪದಲ್ಲೇ ಇರಲು ಸಾಧ್ಯವಾಗುತ್ತದೆ. ಬ್ರಹ್ಮ ನಿಷ್ಠನಾದ ಅವನು ಪ್ರಸನ್ನನಾಗಿ ಸರ್ವಭೂತಗಳಿಗೂ ಅಭಯಪ್ರದನಾಗಲು ಸಮರ್ಥನಾಗುತ್ತಾನೆ. ಬೇರೆಯವರಿಗೆ ಸಾಧ್ಯವಾಗದ ಐಶ್ವರ್ಯವನ್ನೂ ಪರಮಭಕ್ತಿಯನ್ನೂ ಹೊಂದಲು ಸಮರ್ಥನಾಗುತ್ತಾನೆ. ಇಂತಹ ಭಕ್ತನು ಪರತತ್ವವಾದ ಬ್ರಹ್ಮನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಸಂಸಾರದಿಂದ ಪೂರ್ಣವಾಗಿ ಮುಕ್ತನಾಗುತ್ತಾನೆ.

## ಶಿವನ ಮೂಲಕವೇ ಪರಬ್ರಹ್ಮನ ಪ್ರಾಪ್ತಿ :

ಇಂತಹ ಪರಬ್ರಹ್ಮನ ಪ್ರಾಪ್ತಿ ಶಿವನ ಮೂಲಕವೇ ಆಗುತ್ತದೆ. ಆದ್ದರಿಂದ ಸಂಸಾರದಿಂದ ಬಿಡುಗಡೆಗಾಗಿ ಜ್ಞಾನ-ಕರ್ಮ-ಭಕ್ತಿಯೋಗದಿಂದ ಶಿವನಿಗೆ ಶರಣಾಗತನಾಗಬೇಕು.

## ಪಾರ್ವತಿಯ ಉಪದೇಶದ ಉಪಸಂಹಾರ ಮತ್ತು ಅವಳಿಂದಲೇ ಅವಳ ಜನ್ಮ ಕಥನ :

ಪರ್ವತರಾಜನೆ! ಬಹಳ ರಹಸ್ಯವಾದ ವಿಷಯಗಳ ಉಪದೇಶವನ್ನು ನಿನಗೆ ಮಾಡಿದ್ದೇನೆ. ಇದೆಲ್ಲವನ್ನು ಚೆನ್ನಾಗಿ ತಿಳಿದು ನಿನ್ನ ಇಚ್ಛೆಯಂತೆ ಮಾಡಬಹುದು. ಹಿಂದೆ ನನ್ನ ತಂದೆಯಾಗಿದ್ದ ದಕ್ಷನು ಶಿವನಿಂದೆಯನ್ನು ಮಾಡಿದ ಕಾರಣದಿಂದ ನಾನು ಆ ದೇಹವನ್ನೇ ತೊರೆದು, ಅನಂತರ ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ, ನೀನು ಆರಾಧಿಸಿದ್ದರಿಂದ ಧರ್ಮಸಂಸ್ಥಾಪನೆಗಾಗಿ, ನಿನ್ನನ್ನೇ ತಂದೆಯಾಗಿ ಆಶ್ರಯಿಸಿ ಮೇನಾದೇವಿಯಲ್ಲಿ ಹುಟ್ಟಿದ್ದೇನೆ. ನೀನು ಪರಬ್ರಹ್ಮನ ಆದೇಶದಂತೆ ಸ್ವಯಂವರದಲ್ಲಿ ನನ್ನನ್ನು ರುದ್ರನಿಗೆ ಕೊಡುವೆ. ಈ ಸಂಬಂಧದಿಂದ ಇಂದ್ರಾದಿ ಸಕಲ ದೇವತೆಗಳೂ ನಿನ್ನನ್ನು ಗೌರವಿಸುತ್ತಾರೆ. ಶಂಕರನೂ ನಿನ್ನ ಮೇಲೆ ಪ್ರಸನ್ನನಾಗುತ್ತಾನೆ. ನೀನು ಎಲ್ಲ ಪ್ರಯತ್ನಗಳಿಂದ ದೇವ ಶಿವನನ್ನು ಪೂಜಿಸಿ ಅವನನ್ನು ಆಶ್ರಯಿಸು.

## ಹಿಮವಂತನ ಪ್ರಾರ್ಥನೆ :

ಹಿಮವಂತನು ಪಾರ್ವತಿಯನ್ನು ಶಿರಸಾ ನಮಸ್ಕರಿಸಿ, ಕೈಮುಗಿದುಕೊಂಡು ಪುನಃ ಪ್ರಾರ್ಥಿಸಿದನು. ''ದೇವಿ! ಮಹೇಶ್ವರನ ದರ್ಶನವನ್ನು ಪಡೆಯಲು ಸಾಧನವಾದ ಯೋಗವನ್ನು ಮತ್ತು ಆತ್ಮಯೋಗವನ್ನೂ ಮತ್ತು ಅದರ ದಾರಿಗಳನ್ನೂ ದಯವಿಟ್ಟು ಉಪದೇಶಿಸು.''

**ಉಪದೇಶ :**

ಪಾರ್ವತಿಯು ಹಿಮವಂತನು ಅಪೇಕ್ಷಿಸಿದಂತೆ ಎಲ್ಲವನ್ನೂ ವಿಸ್ತರವಾಗಿ ಉಪದೇಶಿಸಿದಳು. ಲೋಕಮಾತೆಯ ಉಪದೇಶದಿಂದ ಉತ್ತಮವಾದ ಜ್ಞಾನವನ್ನು ಪಡೆದ ಹಿಮವಂತ ಯೋಗಾನುಷ್ಠಾನದಲ್ಲಿ ನಿರತನಾದನು. ಪರಬ್ರಹ್ಮನ ಆಜ್ಞೆಯಂತೆ, ಎಲ್ಲ ದೇವತೆಗಳ ಸಮಕ್ಷಮದಲ್ಲಿ ಪಾರ್ವತಿಯನ್ನು ಶಿವನಿಗೆ ಕೊಟ್ಟು ಮದುವೆ ಮಾಡಿದನು.

**ಫಲಸ್ತುತಿ :**

ಪಾರ್ವತಿಯ ಮಹಿಮೆಯನ್ನು ಹೇಳುವ ಈ ಅಧ್ಯಾಯವನ್ನು ಯಾರು ಶುಚಿಯಾಗಿ, ಪಾರ್ವತಿಯನ್ನು ಧ್ಯಾನಿಸುತ್ತಾ, ಶಿವಸನ್ನಿಧಿಯಲ್ಲಿ ಪಠಿಸುತ್ತಾರೋ ಅವರು ದಿವ್ಯಯೋಗ ಗಳನ್ನು ಪಡೆದು, ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು ದೇವಿಯ ಲೋಕವನ್ನು ಪಡೆಯುತ್ತಾರೆ. ಯಾರು ಏಕಾಗ್ರಮನಸ್ಸಿನಿಂದ, ಬ್ರಾಹ್ಮಣರ ಸನ್ನಿಧಿಯಲ್ಲಿ ಈ ಸ್ತೋತ್ರವನ್ನು ಪಠಿಸುವರೋ ಅವರು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆಯುತ್ತಾರೆ. ಈ ಅಧ್ಯಾಯದಲ್ಲಿ ಹೇಳಿದ ದೇವಿಯ ಅಷ್ಟೋತ್ತರ ಸಹಸ್ರ ನಾಮಗಳನ್ನು ತಿಳಿದುಕೊಂಡು, ಸೂರ್ಯಮಂಡಲದಲ್ಲಿರುವ ದೇವಿಯನ್ನು ಆವಾಹನೆ ಮಾಡಿ, ಗಂಧ ಪುಷ್ಪಾದಿಗಳಿಂದ ಭಕ್ತಿಯಿಂದ ಪೂಜಿಸಿ, ಆ ದೇವಿಯ ಮಹಾಮಹಿಮೆಯನ್ನು ಸ್ಮರಿಸುತ್ತಾ, ಏಕಾಗ್ರ ಮನಸ್ಸಿನಿಂದ, ಮರಣದವರೆಗೆ ನಿತ್ಯವೂ ಜಪಿಸುವ ದ್ವಿಜನು ಅಂತಕಾಲದಲ್ಲಿ ದೇವಿಯ ಸ್ಮೃತಿಯನ್ನು ಪಡೆದು ಪರಬ್ರಹ್ಮನನ್ನು ಹೊಂದುತ್ತಾನೆ. ಅಥವಾ ಶುಚಿಯಾದ ಬ್ರಾಹ್ಮಣ ಕುಲದಲ್ಲಿ ಹುಟ್ಟಿ, ಹಿಂದಿನ ಸಂಸ್ಕಾರದ ಮಹಿಮೆಯಿಂದ ಬ್ರಹ್ಮವಿದ್ಯೆಯನ್ನು ಹೊಂದುವನು. ಬಹಳ ಶ್ರೇಷ್ಠವಾದ ಪರಮೇಶ್ವರ ಯೋಗವನ್ನು ಪಡೆದು, ಶಾಂತನೂ, ಸಂಯಮಿಯೂ ಆಗಿ ಶಿವಸಾಯುಜ್ಯವನ್ನು ಹೊಂದುವನು. ಮೂರು ಸಂಧ್ಯಾಕಾಲಗಳಲ್ಲಿ ಪ್ರತಿಯೊಂದು ನಾಮದ ಹೋಮವನ್ನು ಮಾಡುವದರಿಂದ ಮಹಾಮಾರಿಯಿಂದ ಉಂಟಾದ ದೋಷಗಳಿಂದ ಮತ್ತು ಗ್ರಹದೋಷಗಳಿಂದ ಬಿಡುಗಡೆಯನ್ನು ಪಡೆಯುತ್ತಾನೆ. ಸಂಪತ್ತನ್ನು ಬಯಸುವವನು ಒಂದು ವರ್ಷ ಕಾಲ ಆಲಸ್ಯವಿಲ್ಲದೆ ಈ ನಾಮಗಳನ್ನು ಜಪಿಸಿ, ಪಾರ್ವತಿಯನ್ನು ಆಕೆಯ ಪಕ್ಕದಲ್ಲಿ ಶಿವನನ್ನೂ ಭಕ್ತಿಯಿಂದ ಪೂಜಿಸಿದರೆ ಶಿವನ ಅನುಗ್ರಹದಿಂದ ಭಾರಿ ಸಂಪತ್ತನ್ನು ಪಡೆಯುವನು. ಆದ್ದರಿಂದ ದ್ವಿಜರು ಸಕಲಪಾಪ ಪರಿಹಾರಕ್ಕಾಗಿ ಎಲ್ಲ ಪ್ರಯತ್ನದಿಂದ ದೇವಿಯ ಸಾವಿರದೆಂಟು ನಾಮಗಳನ್ನು ಜಪಿಸಬೇಕು.

ಚತುರ್ಮುಖ ಬ್ರಹ್ಮದೇವರು ಮಾಡಿದ ಸೃಷ್ಟಿಯನ್ನು ವಿವರಿಸುತ್ತಾ ಅವರ *(ಬ್ರಹ್ಮದೇವರ)* ಬಾಯಿಂದ ರುದ್ರಸೃಷ್ಟಿಯನ್ನು ವರ್ಣಿಸಿದ ಸಂದರ್ಭದಲ್ಲಿ *(ಅಧ್ಯಾಯ 11)* ಅವನ ಸ್ತ್ರೀರೂಪಗಳ ವರ್ಣನೆಯನ್ನು ಮಾಡುತ್ತಾ ಶಿವನ ಶಾಂಕರೀ ರೂಪವು ದಕ್ಷ ಮತ್ತು ಮೇನೆಯರ ಮಗಳಾಗಿ ಅವತರಿಸಿದ ವಿಚಾರವನ್ನು ಹೇಳಿದಾಗ, ಪಾರ್ವತಿಯ ಮಹಿಮೆಯನ್ನು ವಿವರವಾಗಿ ಹೇಳಬೇಕೆಂದು ನಾರದಾದಿ ಮುನಿಗಳು ಕೂರ್ಮರೂಪಿ

ವಿಷ್ಣುವನ್ನು ಕೇಳಿದರು. ಆಗ ಪಾರ್ವತಿಯ ಮಹಿಮೆಯನ್ನು ವಿವರವಾಗಿ ಕೂರ್ಮರೂಪಿ ವಿಷ್ಣುವು ಹೇಳಿದನು. ಇನ್ನು ಮುಂದೆ ಭೃಗು ಮೊದಲಾದವರಿಂದ ನಡೆದ ಪ್ರಜಾಸೃಷ್ಟಿಯ ವಿವರಣೆ. ಹನ್ನೆರಡನೆಯ ಅಧ್ಯಾಯ ಮುಗಿಯಿತು.

* * *

## ಅಧ್ಯಾಯ-೧೩

**ಸೂತ ಉವಾಚ :**

ಭೃಗುಮಹರ್ಷಿಯ ಪತ್ನಿ ಖ್ಯಾತಿದೇವಿಯಲ್ಲಿ ನಾರಾಯಣನ ಪ್ರಿಯೆಯಾದ ಲಕ್ಷ್ಮಿ ಮತ್ತು ಧಾತೃ ಮತ್ತು ವಿಧಾತೃ ಎಂಬ ಇಬ್ಬರು ಪುತ್ರರು ಜನಿಸಿದರು. ಆಯತಿ ಮತ್ತು ನಿಯತಿ ಇವರು ಮಹಾತ್ಮ ಮೇರುವಿನ ಪುತ್ರಿಯರು. ಇವರಿಬ್ಬರನ್ನು ಧಾತೃ ಮತ್ತು ವಿಧಾತೃಗಳಿಗೆ ಕೊಟ್ಟು ಮದುವೆ ಮಾಡಿದ್ದರು. ಈ ಇಬ್ಬರು ದಂಪತಿಗಳಿಂದ ಕ್ರಮವಾಗಿ ಪ್ರಾಣ ಮತ್ತು ಮೃಕಂಡುಗಳು ಹುಟ್ಟಿದರು. ಮೃಕಂಡುವಿನ ಮಗನೇ ಮಾರ್ಕಂಡೇಯ. ಪ್ರಾಣನ ಮಗ ವೇದಶಿರಸ್. ಮರೀಚಿಯ ಪತ್ನಿ ಸಂಭೂತಿ. ಇವರ ಮಗ ಪೂರ್ಣಮಾಸ ತುಷ್ಟಿ ವೃಷ್ಟಿ, ಕೃಷ್ಟಿ, ಅಪಚಿತಿ - ಇವರು ಹೆಣ್ಣು ಮಕ್ಕಳು. ವಿರಜಸ್ ಮತ್ತು ಪರ್ವತ ಪೂರ್ಣಮಾಸನ ಪುತ್ರನು. ಪುಲಹ ಪ್ರಜಾಪತಿ ಕ್ಷಮಾದಂಪತಿಗಳ ಹಿರಿಯ ಮಗ ಕರ್ದಮ. ಅವನು ಸಹಿಷ್ಣು, ಮುನಿಶ್ರೇಷ್ಠ. ತಪಸ್ಸಿನಿಂದ ಪಾಪವನ್ನು ತೊಳೆದುಕೊಂಡ ಕಿರಿಯ ಮಗನೊಬ್ಬ ಅವರಿಗಿದ್ದ.

ಚಂದ್ರ, ದುರ್ವಾಸ ಮುನಿ ಮತ್ತು ದತ್ತಾತ್ರೇಯ ಇವರು ಅತ್ರಿ - ಅನಸೂಯಾ ದಂಪತಿಗಳ ಮಕ್ಕಳು. ಸ್ಮೃತಿ ಅಂಗಿರಸರ ಮಗಳು. ಸಿನೀವಾಲೀ, ಕುಹೂ, ರಾಕಾ, ಅನುಮತಿ- ಇವರು ಸ್ಮೃತಿಯ ಮಕ್ಕಳು.

ಪುಲಸ್ತ್ಯ- ಪ್ರೀತಿದಂಪತಿಗಳ ಮಗ ದಂಭೋಜ. ಇವನು ಹಿಂದಿನ ಸ್ವಾಯಂಭುವ ಮನ್ವಂತರದಲ್ಲಿ ಅಗಸ್ತ್ಯನಾಗಿದ್ದನಂತೆ. ಕ್ರತು-ದ್ವಿತೀಯಾ ದಂಪತಿಗಳು ಅರವತ್ತು ಸಾವಿರ ಮಕ್ಕಳನ್ನು ಪಡೆದರು. ಇವರೆಲ್ಲರೂ ಊರ್ಧ್ವರೇತಸ್ಕರಾದ ಮುನಿಗಳು. ವಾಲಖಿಲ್ಯರು ಎಂದು ಪ್ರಸಿದ್ಧರು. ವಸಿಷ್ಠ-ಊರ್ಜಾ ದಂಪತಿಗಳ ಏಳು ಜನ ಗಂಡುಮಕ್ಕಳು ರಜಸ್, ಮಾತ್ರ ಊರ್ಧ್ವಬಾಹು, ಸವನ, ಅನಘ, ಸುತಪಸ್, ಶುಕ್ರ. ಪುಂಡರೀಕಾಕ್ಷಾ ಎಂಬಾಕೆ ಆ ದಂಪತಿಗಳ ಹೆಣ್ಣುಮಗಳು. ಬ್ರಹ್ಮದೇವರ ಮಗ ರುದ್ರರೂಪನಾದ ವಹ್ನಿ. ಇವನ ಪತ್ನಿ ಸ್ವಾಹಾ. ಪಾವಕ, ಪವಮಾನ, ಶುಚಿ -ಈ ಮೂವರು ಇವರ ಮಕ್ಕಳು. ಅಗ್ನಿಸ್ವರೂಪರು.

ಮಥನದಿಂದ ಪ್ರಕಟವಾಗುವ ವಹ್ನಿ ಪವಮಾನ. ಮಿಂಚಿನಲ್ಲಿ ಪ್ರಕಟವಾಗುವ ವಹ್ನಿ ಪಾವಕ. ಸೂರ್ಯನಲ್ಲಿ ಇರುವ ಅಗ್ನಿ ಶುಚಿ. ಈ ಮೂವರಿಗೆ ಒಟ್ಟು ನಲವತ್ತೈದು ಜನ ಮಕ್ಕಳು. ಎಲ್ಲರೂ ಅಗ್ನಿರೂಪರು. ಪಾವಕ ಮೊದಲಾದ ಮೂರು ಜನ ಮತ್ತು ಇವರ ಜನಕ - ಹೀಗೆ ಒಟ್ಟು ನಲವತ್ತೊಂಭತ್ತು ಅಗ್ನಿಗಳು. ಇವರೆಲ್ಲರೂ ತಪಸ್ವಿಗಳು. ಎಲ್ಲರೂ ಯಜ್ಞದಲ್ಲಿ ಹವಿರ್ಭಾಗವುಳ್ಳವರು. ರುದ್ರಸ್ವರೂಪರು ತ್ರಿಪುಂಡ್ರವನ್ನು ಧರಿಸಿದವರು.

ಬ್ರಹ್ಮದೇವರ ಪುತ್ರರಾದ ಪಿತೃದೇವತೆಗಳು ಯಜ್ಞ ಮಾಡುವವರು ಮತ್ತು ಮಾಡದವರು ಎಂದು ಎರಡು ವಿಧ. ಇವರೇ ಅಗ್ನಿಷ್ವಾತ್ತರು ಮತ್ತು ಬರ್ಹಿಷದರು ಎಂದು ಎರಡು ವಿಧ ವ್ಯವಸ್ಥಿತರಾಗಿದ್ದಾರೆ. ಈ ಪಿತೃದೇವತೆಗಳಿಂದ ಸ್ವಧಾ ದೇವಿಯು ಮೇನಾ ಮತ್ತು ಧಾರಿಣಿ ಎಂಬ ಹೆಣ್ಣು ಮಕ್ಕಳನ್ನು ಪಡೆದಳು. ಇವರಿಬ್ಬರೂ ಬ್ರಹ್ಮವಾದಿನಿಯರು ಮತ್ತು ಯೋಗಿನಿಯರು.

ಮೈನಾಕ ಮತ್ತು ಕ್ರೌಂಚ ಗಿರಿಗಳು ಹಿಮವಂತ ಮೇನೆಯರ ಮಕ್ಕಳು ಸರ್ವಲೋಕಪಾವನಿಯಾದ ಗಂಗೆ ಇವರ ಮಗಳು. ಹಿಮವಂತನು ಯೋಗಸಾಮರ್ಥ್ಯದಿಂದ ಮಹೇಶ್ವರನ ಪತ್ನಿಯನ್ನು ಮಗಳನ್ನಾಗಿ ಪಡೆದನು. ಧಾರಿಣಿ ಮೇರು ರಾಜನ ಪತ್ನಿ. ಧಾತೃ-ವಿಧಾತೃಗಳು ಮೇರು ರಾಜನ ಅಳಿಯಂದಿರು. ಹೀಗೆ ದಕ್ಷನ ಹೆಣ್ಣುಮಕ್ಕಳ ಸಂತತಿಯು ನಿಮಗೆ ವರ್ಣಿಸಲ್ಪಟ್ಟಿದೆ. ಇನ್ನು ಮುಂದೆ ಸ್ವಾಯಂಭುವಮನುವಿನ ಸಂತತಿಯನ್ನು ತಿಳಿಸುವೆನು. ಹದಿಮೂರನೆ ಅಧ್ಯಾಯ ಮುಗಿಯಿತು.

* * *

## ಅಧ್ಯಾಯ-೧೪

**ಸೂತ ಉವಾಚ :**

ಸ್ವಾಯಂಭುವ ಮನು-ಶತರೂಪಾದೇವಿಯರ ಮಕ್ಕಳು ಪ್ರಿಯವ್ರತ-ಉತ್ತಾನಪಾದರು. ಇಬ್ಬರೂ ಧರ್ಮಜ್ಞರು. ಮಹಾಬಲಶಾಲಿಗಳು. ಉತ್ತಾನಪಾದನ ಮಗ ಧ್ರುವ. ಅವನು ಭಗವಾನ್ ನಾರಾಯಣನ ಪರಮ ಭಕ್ತ. ಇದರ ಫಲವಾಗಿಯೇ ಉತ್ತಮಸ್ಥಾನವನ್ನು ಹೊಂದಿದನು. ಭಾವ್ಯ ಮತ್ತು ಶಿಷ್ಟಿ ಧ್ರುವನ ಮಕ್ಕಳು. ಭಾವ್ಯನ ಮಗ ಶಂಭು. ಶಿಷ್ಟಿಯ ಹೆಂಡತಿ ಸುಚ್ಛಾಯೆ. ಇವಳು ವಸಿಷ್ಠರ ಸಲಹೆಯಂತೆ ಕಠಿಣತಪಸ್ಸನ್ನು ಮಾಡಿ, ಶಾಲಗ್ರಾಮ ಶಿಲೆಯಲ್ಲಿ ಪರಮಪುರುಷ ವಿಷ್ಣುವನ್ನು ಆರಾಧಿಸಿ ರಿಪು, ರಿಪುಂಜಯ, ವಿಪ್ರ, ಕಪಿಲ ಮತ್ತು

ವೃಷತೇಜಸ್ ಎಂಬ ಐದು ಮಕ್ಕಳನ್ನು ಪಡೆದಳು. ಎಲ್ಲರೂ ಶುದ್ಧರೂ, ಸ್ವಧರ್ಮ ಪರಿಪಾಲಕರೂ ಭಗವದ್ಭಕ್ತರೂ ಆಗಿದ್ದರು. ರಿಪುವಿನ ಮಗ ಚಾಕ್ಷುಷ. ಇವನು ಮಹಾತೇಜಸ್ವೀ. ಮನ್ವಂತರಕ್ಕೆ ಅಧಿಪತಿಯಾದವನು.

ಬ್ರಹ್ಮದೇವರ ಒಬ್ಬಳು ಮಗಳು ವೀರಣ ಎಂಬ ಮನುವಿನ ಹೆಂಡತಿ. ಈ ದಂಪತಿಗಳಿಗೆ ಮಹಾಶಕ್ತಿಶಾಲಿಗಳಾದ ಹತ್ತು ಜನ ಮಕ್ಕಳು. ವೈರಾಜ ಎಂಬ ಪ್ರಜಾಪತಿಗೆ ಊರು, ಪೂರು, ಶತದ್ಯುಮ್ನ, ತಪಸ್ವಿ, ಸತ್ಯವಾಕ್, ಶುಚಿ, ಅಗ್ನಿಷ್ಟುತ್, ಅತಿರಾತ್ರ, ಸುದ್ಯುಮ್ನ, ಅಭಿಮನ್ಯು ಎಂಬ ಹತ್ತು ಜನ ಮಕ್ಕಳು. ಇವರಲ್ಲಿ ಊರುವಿನ ಹೆಂಡತಿ ಆಗ್ನೇಯೀ. ಇವರಿಗೆ ಮಹಾ-ಬಲಶಾಲಿಗಳಾದ ಅಂಗ, ಸುಮನಸ, ಖ್ಯಾತಿ, ಕ್ರತು, ಆಂಗೀರಸ, ಶಿವ ಎಂಬ ಆರು ಜನ ಮಕ್ಕಳು. ಅಂಗನ ಮಗ ವೇನ. ವೇನನ ಮಗ ಪೃಥು. ಇವನು ವೈನ್ಯ ಎಂದೂ ಪ್ರಸಿದ್ಧ. ಇವನು ಮಹಾಬಲಶಾಲಿ. ಪ್ರಜಾಪಾಲಕ. ಇವನು ಪ್ರಜೆಗಳ ಹಿತಕ್ಕಾಗಿ ಹಸುವಿನ ರೂಪವನ್ನು ಧರಿಸಿದ ಭೂದೇವಿಯಿಂದ ಪ್ರಜೆಗಳಿಗೆ ಬೇಕಾದ ಎಲ್ಲ ಪದಾರ್ಥಗಳನ್ನು ಸಮೃದ್ಧವಾಗಿ ಪಡೆದು-ಕೊಂಡನು. ಅರ್ಥಾತ್ ಇವನ ಪ್ರಯತ್ನದಿಂದ ಭೂಮಿಯಲ್ಲಿ ಎಲ್ಲ ವಿಧದ ಸಮೃದ್ಧಿಯು ಉಂಟಾಯಿತು. ಪೃಥುಚಕ್ರವರ್ತಿಯು ಬ್ರಹ್ಮದೇವರ ಆದೇಶದಂತೆ ದೇವೇಂದ್ರನ ಜೊತೆ ಸೇರಿ ಬ್ರಹ್ಮನು ದೇವತೆಯಾಗಿರುವ ಭಾರಿಯಜ್ಞವನ್ನು ಮಾಡಿದನು. ಮಾಯಾವಿಯಾದ ಶ್ರೀಹರಿಯೇ ಈ ಯಜ್ಞ ಸಂದರ್ಭದಲ್ಲಿ ಪುರಾಣಿಕ ಸೂತನಾಗಿ ಅವತರಿಸಿದನು. ಈ ಸೂತ ಸರ್ವಶಾಸ್ತ್ರಗಳ ಉಪದೇಶಕ. ಧರ್ಮವನ್ನು ತಿಳಿದವನು. ಗುರುಪ್ರಿಯ. ಸೂತನಾಗಿ ಅವತರಿಸಿದ ಮಹಾವಿಷ್ಣುವೇ ನಾನು. *(ರೋಮಹರ್ಷಣ, ಈ ಪುರಾಣವನ್ನು ಪ್ರವಚನ ಮಾಡುತ್ತಿರುವವನು)*.

ಈ ಮನ್ವಂತರದಲ್ಲಿ ವ್ಯಾಸರಾದ ಕೃಷ್ಣದ್ವೈಪಾಯನರೇ ಪ್ರೀತಿಯಿಂದ ನನಗೆ ಪುರಾಣವನ್ನು ಉಪದೇಶಿಸಿದ್ದಾರೆ. ನನ್ನ ಕುಲದಲ್ಲಿ ಹುಟ್ಟಿದ, ವೇದಾಧಿಕಾರವಿಲ್ಲದ ಸೂತರೆಲ್ಲರಿಗೂ ಪುರಾಣಪ್ರವಚನವು ವೃತ್ತಿಯೆಂದು ಬ್ರಹ್ಮದೇವರ ಆಜ್ಞೆಯಿದೆ.

ವೇನಪುತ್ರ ಪೃಥು ಧೀಮಂತನೂ, ಸತ್ಯಸಂಧನೂ, ಜಿತೇಂದ್ರಿಯನೂ ಆಗಿದ್ದ ಸಾರ್ವಭೌಮ. ಮಹಾತೇಜಸ್ವೀ. ಸ್ವಧರ್ಮ ಪರಿಪಾಲಕ. ಬಾಲ್ಯದಿಂದಲೇ ಅವನಿಗೆ ನಾರಾಯಣನಲ್ಲಿ ಭಕ್ತಿ ಇತ್ತು. ಒಮ್ಮೆ ಗೋವರ್ಧನಪರ್ವತಕ್ಕೆ ಹೋಗಿ, ಜಿತೇಂದ್ರಿಯನಾಗಿ ಭಾರೀ ತಪಸ್ಸನ್ನು ಮಾಡಿದನು. ತಪಸ್ಸಿನಿಂದ ಪ್ರೀತನಾದ ಶಂಖಚಕ್ರಗಧಾಧಾರಿಯಾದ ಶ್ರೀ ಹರಿಯು ಅವನಿಗೆ ದರ್ಶನವನ್ನು ಕೊಟ್ಟು ಧಾರ್ಮಿಕರೂ, ರೂಪಸಂಪನ್ನರೂ, ಶಾಸ್ತ್ರಜ್ಞರಲ್ಲಿ ಶ್ರೇಷ್ಠರೂ ಸಂದೇಹರಹಿತರೂ ಆದ ಇಬ್ಬರು ಮಕ್ಕಳು ನಿನಗೆ ಹುಟ್ಟುತ್ತಾರೆ. ಎಂದು ಹೇಳಿ ಅಂತರ್ಧಾನನಾದನು. ಅನಂತರ ವೈನ್ಯನು ವೇದೋಕ್ತವಿಧಿಯಿಂದ ಭಗವಂತನಲ್ಲಿ ಭಕ್ತಿಯನ್ನು ಹೊಂದಿ ಅವನನ್ನೇ ಧ್ಯಾನಿಸುತ್ತಾ ತನ್ನ ರಾಜ್ಯವನ್ನು ಪಾಲಿಸಿದನು. ಸ್ವಲ್ಪ

ಸಮಯದಲ್ಲೇ ಭಗವಚ್ಚಿಂತನದಲ್ಲಿ ನಿರತಳಾದ ಅವನ ಹೆಂಡತಿಯು ಶಿಖಂಡಿ ಮತ್ತು ಹವಿರ್ಧಾನ ಎಂಬ ಇಬ್ಬರು ಮಕ್ಕಳನ್ನು ಹಡೆದಳು.

ಶಿಖಂಡಿಯ ಮಗ ಸುಶೀಲ. ಇವನು ಧಾರ್ಮಿಕ, ರೂಪಸಂಪನ್ನ, ವೇದವೇದಾಂಗ ಪಾರಗ. ವಿಧಿಗನುಗುಣವಾಗಿ ವೇದಗಳನ್ನು ಅಧ್ಯಯನ ಮಾಡಿ ಧರ್ಮ ಸಮ್ಮತವಾದ ತಪಸ್ಸನ್ನು ಮಾಡಿದನು. ಹೀಗೆಯೇ ಮುಂದುವರಿದ ಅವನಿಗೆ ಸನ್ನ್ಯಾಸಿಯಾಗುವ ಇಚ್ಛೆ ಉಂಟಾಯಿತು. ವೇದಾಧ್ಯಯನ, ತಪಸ್ಸುಗಳಲ್ಲಿ ನಿರತನಾದ ಅವನು ತೀರ್ಥಯಾತ್ರೆಯನ್ನು ಮಾಡುತ್ತಾ ಸಿದ್ಧಪುರುಷರು ಆಶ್ರಯಿಸಿದ ಹಿಮಾಲಯದ ಪ್ರದೇಶವೊಂದಕ್ಕೆ ಹೋದನು. ಅಲ್ಲಿ ಧರ್ಮವನ ಎಂಬ ವನ. ಯೋಗಿಗಳು ಮಾತ್ರ ಈ ಸ್ಥಳಕ್ಕೆ ಹೋಗಬಲ್ಲರು. ಬ್ರಹ್ಮದ್ವೇಷಿಗಳು ಅಲ್ಲಿಗೆ ಹೋಗಲಾರರು. ಅಲ್ಲಿ ಅತ್ಯಂತ ಪುಣ್ಯಕರವಾದ, ವಿಮಲವಾದ ಮಂದಾಕಿನೀ ಎಂಬ ನದಿ. ತಾವರೆ, ನೈದಿಲೆಗಳ ವನ. ಸಿದ್ಧರ ಆಶ್ರಮಗಳು ಅದರ ತೀರವನ್ನು ಅಲಂಕರಿಸಿದ್ದವು. ಆ ಪರಿಸರಕ್ಕೆ ಮನಸೋತ ಸುಶೀಲನು ಇಂತಹ ಮಂದಾಕಿನಿಯ ದಕ್ಷಿಣ ತೀರದಲ್ಲಿ ಮುನೀಂದ್ರರೂ, ಯೋಗಿಗಳೂ ವಾಸಿಸುತ್ತಿದ್ದ ಬಹಳ ಪುಣ್ಯಕರವಾದ ಆಶ್ರಮವನ್ನು ಕಂಡನು. ಮಂದಾಕಿನಿಯಲ್ಲಿ ಮಿಂದು ಪಿತೃಗಳಿಗೆ, ದೇವತೆಗಳಿಗೆ ತರ್ಪಣವನ್ನು ಕೊಟ್ಟು, ಪದ್ಮ, ಉತ್ಪಲ ಮೊದಲಾದ ಹೂಗಳಿಂದ ಶಿವನನ್ನು ಪೂಜಿಸಿ, ಸೂರ್ಯಮಂಡಲ ದಲ್ಲಿರುವ ಶಿವನನ್ನು ಧ್ಯಾನ ಮಾಡಿ, ತಲೆಯ ಮೇಲೆ ಕೈ ಜೋಡಿಸಿ ಸೂರ್ಯನನ್ನೇ ನೋಡುತ್ತಾ ರುದ್ರಾಧ್ಯಾಯ, ರುದ್ರಚರಿತ್ರೆ ಮತ್ತು ವೇದದಲ್ಲಿರುವ ಬೇರೆ ಬೇರೆ ರುದ್ರ ಸ್ತೋತ್ರ - ಇವುಗಳಿಂದ ರುದ್ರನನ್ನು ಸ್ತುತಿಸಿದನು. ಹೀಗೆ ಸ್ತೋತ್ರ ಮಾಡುತ್ತಿದ್ದಾಗ ಮಹಾಶಿವಭಕ್ತನಾದ ಶ್ವೇತಾಶ್ವತರ ಎಂಬ ಮುನಿಯು ಅಲ್ಲಿಗೆ ಬಂದನು. ಕೇವಲ ಕೌಪೀನವನ್ನು ಧರಿಸಿದ್ದ ಆ ಮುನಿಯು ತನ್ನ ಎಲ್ಲ ಅಂಗಗಳಲ್ಲೂ ಭಸ್ಮವನ್ನು ಧರಿಸಿದ್ದನು. ಬಿಳಿಯ ಯಜ್ಞೋಪವೀತವನ್ನು ಧರಿಸಿದ ಅವನು ತಪಸ್ಸಿನಿಂದ ಬಹಳ ಕೃಶನಾಗಿದ್ದನು. ಈ ಮುನಿಯನ್ನು ನೋಡಿ ಆನಂದಬಾಷ್ಪ ತುಂಬಿದ ಸುಶೀಲನು ಸ್ತೋತ್ರವನ್ನು ಮುಗಿಸಿ ಅವನ ಪಾದಗಳಿಗೆ ಶಿರಸಾ ನಮಸ್ಕರಿಸಿ ಕೈ ಮುಗಿದು ಮಾತನಾಡಿದನು.

''ಮುನೀಶ್ವರ! ಯೋಗವನ್ನು ತಿಳಿದವರಲ್ಲಿ ಶ್ರೇಷ್ಠನಾದ ಯೋಗೀಶ್ವರನ ದರ್ಶನದಿಂದ ನಾನು ಧನ್ಯ; ಅನುಗೃಹೀತ. ನಾನೆಂತಹ ಭಾಗ್ಯಶಾಲಿ! ಇಂದು ನನ್ನ ತಪಸ್ಸುಗಳೆಲ್ಲವೂ ಸಫಲವಾದವು. ನಾನು ನಿಮಗೆ ಯಾವ ಸೇವೆಯನ್ನು ಮಾಡಲಿ?''

ಆ ಮುನಿಯು ಸುಶೀಲನನ್ನು ಅನುಗ್ರಹಿಸಿ ತನ್ನ ಶಿಷ್ಯನನ್ನಾಗಿ ಸ್ವೀಕರಿಸಿದನು. ಅವನಿಗೆ ವಿಧಿಪೂರ್ವಕವಾಗಿ ಸನ್ಯಾಸವನ್ನು ಕೊಟ್ಟು ಈಶ್ವರತತ್ತ್ವವನ್ನು ಉಪದೇಶಿಸಿದನು.

ಅನಂತರ ಆ ಆಶ್ರಮದಲ್ಲಿ ವಾಸಿಸುತ್ತಿದ್ದ, ಬ್ರಹ್ಮಜ್ಞಾನ ಸಂಪಾದನೆಯಲ್ಲಿ ನಿರತರಾದ, ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರನ್ನು ಕುರಿತು ಹೇಳಿದನು. ''ಇಲ್ಲಿ ಯೋಗಿಗಳು ನನ್ನಿಂದ

ಪ್ರವರ್ತಿತವಾದ ವೇದಶಾಖೆಗಳನ್ನು ಅಧ್ಯಯನ ಮಾಡಿ, ಈಶ್ವರನ ವಿಶ್ವರೂಪವನ್ನು ಧ್ಯಾನಮಾಡುತ್ತಾ ಇದ್ದಾರೆ. ಈ ಆಶ್ರಮದಲ್ಲಿ ಭಕ್ತರ ಮೇಲೆ ದಯೆಯಿಂದ ಶಿವನು ಉಮೆಯ ಜೊತೆ ವಿಹರಿಸುತ್ತಾ ಇದ್ದಾನೆ. ಹಿಂದೆ ಭಗವಾನ್ ನಾರಾಯಣನು ಲೋಕಹಿತ ವನ್ನು ಬಯಸಿ ಈ ಆಶ್ರಮದಲ್ಲಿ ಶಿವನ ಆರಾಧನೆಯನ್ನು ಮಾಡಿದನು. ಇಲ್ಲಿ ದೇವದೇವ ನಾದ ಶಿವನನ್ನು ಆರಾಧಿಸಿ ದೇವತೆಗಳು, ದಾನವರು ಮಹಾಸಿದ್ಧಿಗಳನ್ನು ಪಡೆದರು. ಇಲ್ಲೇ ಮರೀಚಿ ಮೊದಲಾದ ಮುನಿಗಳು ಮಹೇಶ್ವರನನ್ನು ಆರಾಧಿಸಿ ಶಾಶ್ವತವಾದ ಜ್ಞಾನವನ್ನು ಪಡೆದರು. ಆದ್ದರಿಂದ, ರಾಜಶ್ರೇಷ್ಠನೆ! ನೀನು ಕೂಡ ತಪೋನಿರತನಾಗಿ ಈ ಆಶ್ರಮದಲ್ಲಿ ನಿಲ್ಲು. ಮಹಾಸಿದ್ಧಿಯನ್ನು ಪಡೆಯುವಿ'' ಹೀಗೆ ಹೇಳಿ ಆ ಮುನಿಯು ಶಿವನನ್ನು ಧ್ಯಾನಿಸಿ ಸರ್ವಸಿದ್ಧಿಕರವಾದ, ಸರ್ವಪಾಪವನ್ನೂ ಪರಿಹರಿಸುವ, ವೇದಸಾರವಾದ, ಮುಕ್ತಿಯನ್ನು ಕೊಡುವ 'ಅಗ್ನಿ' ಎಂದು ಆರಂಭವಾಗುವ ಮಹಾಮಂತ್ರವನ್ನು ಉಪದೇಶಿಸಿದನು. ಆ ಮುನಿಯ ಮಾತಿನಂತೆ ರಾಜಾ ಸುಶೀಲನು ಶ್ರದ್ಧೆಯಿಂದ ಪಾಶುಪತವ್ರತಧಾರಿಯಾಗಿ ವೇದಾಭ್ಯಾಸನಿರತನಾದನು. ಎಲ್ಲ ಅಂಗಗಳಿಗೂ ಭಸ್ಮವನ್ನು ಧರಿಸಿ ಕಂದ, ಮೂಲ, ಫಲಗಳನ್ನು ತಿನ್ನುತ್ತಾ ಶಾಂತನೂ, ದಾಂತನೂ, ಕ್ರೋಧರಹಿತನೂ ಆಗಿ ಸನ್ಯಾಸ ವಿಧಿಗಳನ್ನು ಚೆನ್ನಾಗಿ ಅನುಸರಿಸಿದನು.

ಹವಿರ್ಧಾನ-ಆಗ್ನೇಯೀ ದಂಪತಿಗಳ ಮಗ ಪ್ರಾಚೀನಬರ್ಹಿಷ್. ಇವನು ಧನುರ್ವಿದ್ಯೆ-ಯಲ್ಲಿ ಪಾರಂಗತ. ವರುಣನ ಮಗಳು ಇವನ ಹೆಂಡತಿ. ಇವರಿಗೆ ಹತ್ತು ಜನ ಮಕ್ಕಳು. ಎಲ್ಲರಿಗೂ ಪ್ರಚೇತಸ್ ಎಂದು ಹೆಸರು. ಪ್ರಸಿದ್ಧಪರಾಕ್ರಮದ ರಾಜರಾಗಿದ್ದರು. ಎಲ್ಲರೂ ಭಗವದ್ಭಕ್ತರು. ತಮ್ಮ ವೇದಶಾಖೆಯನ್ನು ಅಧ್ಯಯನ ಮಾಡಿದ್ದರು. ಇವರ ಹೆಂಡತಿ ಮಾರಿಷಾ. ಹಿಂದೆ ಬ್ರಹ್ಮನ ಮಗನಾಗಿದ್ದ ದಕ್ಷ ಪ್ರಜಾಪತಿಯು ಇವರ ಮಗನಾಗಿ ಹುಟ್ಟಿದನು. ರುದ್ರದೇವರ ಜೊತೆ ಜಗಳವಾಗಿ ಅವರಿಂದ ಬಂದ ಶಾಪವೇ ಈ ಜನ್ಮಕ್ಕೆ ಕಾರಣ.

ತನ್ನ ಪತ್ನಿಯ ಮನೆಗೆ ಬಂದಿದ್ದ ದಕ್ಷನನ್ನು ಶಿವನು ಔಚಿತ್ಯಕ್ಕನುಗುಣವಾಗಿ ಸತ್ಕರಿಸಿದ್ದನು. ಆದರೆ ತಮೋಗುಣದ ಆವೇಶ ಹೊಂದಿದ್ದ ದಕ್ಷನು ತಾನು ಇನ್ನೂ ಹೆಚ್ಚು ಸತ್ಕಾರಕ್ಕೆ ಅರ್ಹ ಎಂದು ಸಾಧಿಸುತ್ತಾ ಕೋಪದಿಂದ ಹೊರಟು ಹೋದನು. ಕಾಲಾಂತರದಲ್ಲಿ ಒಮ್ಮೆ ತವರು ಮನೆಗೆ ಬಂದಿದ್ದ ಸತಿಯನ್ನು ದಕ್ಷನು ತೆಗಳಿದನು. ಅವಳ ಪತಿಯನ್ನೂ ಬೈದನು. ''ನಿನ್ನ ಗಂಡನಿಗಿಂತ ಬೇರೆ ಅಳಿಯಂದಿರು ಶ್ರೇಷ್ಠರು; ನೀನೂ ಕೂಡ ದುಷ್ಟ ಮಗಳು; ಹೊರಟು ಹೋಗು'' ಎಂದು. ತಂದೆಯ ಮಾತಿನಿಂದ ಕುಪಿತಳಾದ ಸತಿಯು ತಂದೆಯನ್ನು ತೆಗಳಿ ತನ್ನ ಪತಿಯನ್ನು ನಮಸ್ಕರಿಸಿ ಯೋಗಾಗ್ನಿಯಿಂದ ತನ್ನ ದೇಹವನ್ನು ಸುಟ್ಟು ಬಿಟ್ಟಳು. ಅನಂತರ ಹಿಮವಂತನ ಮಗಳಾಗಿ ಹುಟ್ಟಿದಳು. ಈ ಘಟನೆಯನ್ನು ತಿಳಿದು ಕುಪಿತನಾದ ಶಿವನು ದಕ್ಷನ ಮನೆಗೆ ಹೋಗಿ ''ಈ ಬ್ರಾಹ್ಮಣ ಜನ್ಮ ಹೋಗಿ ಕ್ಷತ್ರಿಯ ಜನ್ಮ ಬರಲಿ; ನಿನ್ನ ಮಗಳಲ್ಲೇ ನೀನು ಮಗನನ್ನು ಪಡೆಯುವಿ'' ಎಂದು ಶಾಪಕೊಟ್ಟನು. ಕಾಲಕ್ರಮದಲ್ಲಿ ದಕ್ಷನು

ಪ್ರಚೇತಸರ ಮಗನಾದನು. ಇದು ದಕ್ಷನವರೆಗೆ ಸ್ವಾಯಂಭುವ ಮನುವಿನ ವಂಶದ ವಿವರಣೆ. ಇದನ್ನು ಕೇಳಿದವರ ಪಾಪವು ನಾಶವಾಗುತ್ತದೆ.

* * *

## ಅಧ್ಯಾಯ-೧೫

ಶಿವಶಾಪದಿಂದ ಪ್ರಚೇತಸರ ಮಗನಾಗಿ ಹುಟ್ಟಿದ ದಕ್ಷನ ವೃತ್ತಾಂತವನ್ನು ಹೇಳಬೇಕೆಂದು ನೈಮಿಷಾರಣ್ಯವಾಸಿಗಳಾದ ಮುನಿಗಳು ಸೂತರನ್ನು ಕೇಳಿದರು.

**ಸೂತ ಉವಾಚ :**

ಶಿವಶಾಪದಿಂದ ಪ್ರಾಚೇತಸನಾಗಿದ್ದ ದಕ್ಷನಿಗೆ ಹಿಂದಿನ ಜನ್ಮದ ವೃತ್ತಾಂತಗಳ ನೆನಪಿತ್ತು. ಮನಸ್ಸಿನಲ್ಲಿ ಶಿವವೈರವನ್ನು ಹೊತ್ತು ಯಜ್ಞವೊಂದನ್ನು ಮಾಡಿದನು. ಹವಿರ್ಭಾಗವನ್ನು ಸ್ವೀಕರಿಸಲು ವಿಷ್ಣುವನ್ನೂ, ಬೇರೆ ಎಲ್ಲ ದೇವತೆಗಳನ್ನೂ ಆಹ್ವಾನಿಸಿದಾಗ ಅವರೆಲ್ಲರೂ ಎಲ್ಲ ಮುನಿಗಳೊಂದಿಗೆ ಬಂದರು. ಶಿವನೊಬ್ಬನು ಬಂದಿಲ್ಲದಿರುವುದನ್ನು ಗಮನಿಸಿದ ದಧೀಚ ಮಹರ್ಷಿಗಳು ಪ್ರಾಚೇತಸನನ್ನು ಕೇಳಿದರು. ''ಬ್ರಹ್ಮನಿಂದ ಆರಂಭಿಸಿ ಪಿಶಾಚಿಗಳವರೆಗೆ ಎಲ್ಲರೂ ಯಾವ ಆಜ್ಞೆಯನ್ನು ಪಾಲಿಸುವರೋ, ಆ ಸರ್ವೋತ್ತಮ ದೇವತೆ ಶಿವನನ್ನು ಏಕೆ ನೀನು ಪೂಜಿಸುತ್ತಿಲ್ಲ.''

''ಶಿವನಿಗೆ ಯಜ್ಞಭಾಗವು ಶಾಸ್ತ್ರವಿಹಿತವಲ್ಲ. ಸಪತ್ನೀಕನಾದ ಶಿವನನ್ನು ಸಂಬೋಧಿಸುವ ಮಂತ್ರಗಳೂ ಇಲ್ಲ.'' ಎಂದು ದಕ್ಷನು ಉತ್ತರವನ್ನು ಹೇಳಿದನು. ಈ ಉತ್ತರದಿಂದ ಕುಪಿತನಾದ ದಧೀಚಮುನಿ ''ಶಿವ ಜಗತ್ತಿನ ಚಾಲನಶಕ್ತಿ, ಸರ್ವಾಂತರ್ಯಾಮಿ, ಪರಮೇಶ್ವರ, ಹೀಗೆಂದು ಅವನನ್ನು ತಿಳಿದು ಎಲ್ಲ ಯಜ್ಞಗಳಿಂದ ಪ್ರಾಜ್ಞರು ಅವನನ್ನೇ ಪೂಜಿಸುತ್ತಿಲ್ಲವೆ?'' ಎಂದು ಎಲ್ಲ ದೇವತೆಗಳಿಗೂ ಕೇಳುವಂತೆ ಹೇಳಿದನು.

''ಜಗತ್ತನ್ನು ಸಂಹಾರ ಮಾಡುವ, ತಾಮಸ ಸ್ವಭಾವದ ರುದ್ರನು ಶಂಕರ *(ಸುಖಕರ)*ನಲ್ಲ; ನಗ್ನನೂ, ಕಪಾಲಧಾರಿಯೂ ಆದ ಅವನು ಸರ್ವಾಂತರ್ಯಾಗಿರಲು ಸಾಧ್ಯವೇ ಇಲ್ಲ; ಸರ್ವಸೃಷ್ಟಿಕರ್ತೃವಾದ ಭಗವಾನ್ ನಾರಾಯಣನೇ ಈಶ್ವರ. ಸಮರ್ಥ ಸತ್ವಗುಣಪೂರ್ಣನಾದ ನಾರಾಯಣನೇ ಎಲ್ಲ ಕರ್ಮಗಳಲ್ಲೂ ಪೂಜಿಸಲ್ಪಡುತ್ತಾನೆ'' ಎಂದು ದಕ್ಷನು ಮರು ಉತ್ತರವನ್ನು ಹೇಳಿದನು.

"ಈ ಭಗವಾನ್ ಸೂರ್ಯನು ನಿನಗೆ ಕಾಣಿಸುವುದಿಲ್ಲವೆ? ಇವನೇ ಲೋಕ ಸಂಹಾರಕನೂ, ಕಾಲ ಸ್ವರೂಪನೂ ಆದ ಪರಮೇಶ್ವರ. ಇವನನ್ನೇ ವಿದ್ವಾಂಸರೂ, ಧಾರ್ಮಿಕರೂ, ಬ್ರಹ್ಮವಾದಿಗಳೂ ಸ್ತುತಿಸುತ್ತಾರೆ. ಈ ಎಲ್ಲವನ್ನೂ ನೋಡುವ ಈ ಸೂರ್ಯ ಉಗ್ರಕಾಂತಿಯ, ಕಾಲ ಸ್ವರೂಪನಾದ ಶಂಕರನ ಒಂದು ರೂಪ. ಈ ದೇವನೇ ಸಾಮಗ, ಅಧ್ವರ್ಯು ಮತ್ತು ಹೋತೃಗಳಿಂದ ರುದ್ರ, ಮಹಾದೇವ, ಕಪಾಲಿ, ಘೃಣೀ, ಹರ, ಆದಿತ್ಯ ಭಗವಾನ್, ಸೂರ್ಯ, ನೀಲಕಂಠ, ವಿಲೋಹಿತ ಎಂದು ಸ್ತುತಿಸಲ್ಪಡುತ್ತಾನೆ. ಇವನೇ ಜಗತ್ಸೃಷ್ಟಿಯನ್ನು ಮಾಡುವ, ವೇದಪ್ರತಿಪಾದ್ಯನಾದ ರುದ್ರ, ಸರಿಯಾಗಿ ನೋಡು" ಎಂದು ದಧೀಚನು ಮತ್ತೆ ಹೇಳಿದನು.

"ಇಲ್ಲಿಗೆ ಬಂದಿರುವ, ಯಜ್ಞದ ಆಹುತಿಗೆ ಅರ್ಹರಾದ ಹನ್ನೆರಡು ಮಂದಿ ಆದಿತ್ಯರೇ ಸೂರ್ಯ. ಇನ್ನಾವ ಸೂರ್ಯನೂ ಇಲ್ಲ." ದಕ್ಷನು ಮತ್ತೆ ಉತ್ತರ ಹೇಳಿದನು.

ದಕ್ಷನ ಈ ಮಾತನ್ನು ಯಜ್ಞವನ್ನು ನೋಡಲು ಬಂದಿದ್ದ ಎಲ್ಲ ಮುನಿಗಳೂ ಅನುಮೋದಿಸಿ ಅವನಿಗೆ ಸಹಾಯವನ್ನು ಮಾಡಿದರು. ಆ ಮುನಿಗಳೆಲ್ಲರೂ ತಮೋಗುಣದ ಆವೇಶಕ್ಕೊಳಗಾಗಿದ್ದರು. ಆದ್ದರಿಂದ ಅವರಿಗೆ ವೃಷಭಧ್ವಜನಾದ ಶಿವನ ಜ್ಞಾನವೇ ಉಂಟಾಗಲಿಲ್ಲ. ವಿಷ್ಣು ಮಾಯೆಯಿಂದ ಅವರು ಶಿವನನ್ನು ಪ್ರತಿಪಾದಿಸುವ ವೈದಿಕ ಮಂತ್ರಗಳನ್ನೂ; ಸರ್ವಭೂತಪತಿಯಾದ ಶಿವನನ್ನು ನಿಂದಿಸುತ್ತಾ ದಕ್ಷನ ಮಾತನ್ನೇ ಎತ್ತಿಹಿಡಿದರು. ಯಜ್ಞಭಾಗವನ್ನು ಸ್ವೀಕರಿಸಲು ಬಂದಿದ್ದ ದೇವತೆಗಳೆಲ್ಲರೂ ಕೂಡ ನಾರಾಯಣನನ್ನೇ ಸರ್ವೋತ್ತಮ ಎಂದು ಪ್ರತಿಪಾದಿಸಿದರು. ಈ ಸಂದರ್ಭದಲ್ಲಿ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಹಿರಣ್ಯಗರ್ಭನು ಎಲ್ಲರೂ ನೋಡುತ್ತಿರುವಂತೆಯೇ ಅಂತರ್ಧಾನನಾದನು. ಚತುರ್ಮುಖ ಬ್ರಹ್ಮನು ಅಂತರ್ಧಾನನಾಗಲು ದಕ್ಷನು ನಾರಾಯಣನನ್ನೇ ರಕ್ಷಕ ಎಂದು ಆಶ್ರಯಿಸಿದನು. ಭಗವಾನ್ ನಾರಾಯಣನು ರಕ್ಷಕನಾಗಿರಲು ದಕ್ಷನು ನಿರ್ಭಯವಾಗಿ ಯಜ್ಞವನ್ನು ನಡೆಸಿದನು.

ಋಷಿಗಳು, ದೇವತೆಗಳು ರುದ್ರದ್ವೇಷಿಗಳಾದದ್ದನ್ನು ಕಂಡು ಧದೀಚಿ ಮಹರ್ಷಿಗಳು ಹೇಳಿದರು.

"ಪೂಜ್ಯರಲ್ಲದವರನ್ನು ಪೂಜಿಸುವ, ಪೂಜಾರ್ಹರನ್ನು ಪೂಜಿಸದ ಮನುಷ್ಯ ಭಾರೀ ಪಾಪವನ್ನು ಹೊಂದುತ್ತಾನೆ. ಕೆಟ್ಟವರಿಗೆ ಸತ್ಕಾರ, ಒಳ್ಳೆಯವರಿಗೆ ತಿರಸ್ಕಾರ ಎಲ್ಲಿ ಯಾರಿಂದ ನಡೆಯುವುದೋ ಅಲ್ಲಿ ಅವರಿಗೆ ದೈವವೇ ದಾರುಣವಾದ ಶಿಕ್ಷೆಯನ್ನು ವಿಧಿಸುತ್ತದೆ." ಹೀಗೆ ಹೇಳಿ ದಧೀಚ ಮುನಿಯು ದಕ್ಷನನ್ನು ಅನುಮೋದಿಸಿದ ಬ್ರಾಹ್ಮಣರನ್ನು "ಲೋಕವಂದಿತ-ನಾದ ಶಿವನನ್ನು ವೇದ ಪ್ರತಿಪಾದ್ಯನಲ್ಲ ಎಂದು ಹೇಳಿದ ನೀವು ಕಲಿಯುಗದಲ್ಲಿ ಅವೈದಿಕರೂ, ಈಶ್ವರದ್ವೇಷಿಗಳೂ, ಕೆಟ್ಟ ಶಾಸ್ತ್ರದಲ್ಲಿ ಆಸಕ್ತಿಯುಳ್ಳವರೂ ಆಗುತ್ತೀರಿ. ಘೋರವಾದ

ಕಲಿಯುಗದಲ್ಲಿ ಹುಟ್ಟಿ ಕಲಿದೋಷಗಳಿಂದ ಪೀಡಿತರಾಗುತ್ತೀರಿ. ತಪ್ಪು ಆಚರಣೆಗಳನ್ನು ಮಾಡುತ್ತಾ ಮಿಥ್ಯಜ್ಞಾನವನ್ನು ಪಡೆದು ಪ್ರಲಾಪ ಮಾಡುತ್ತೀರಿ. ನಿಮ್ಮ ಎಲ್ಲ ತಪೋಬಲ ವನ್ನು ಕಳೆದುಕೊಂಡು ನರಕಕ್ಕೆ ಹೋಗುತ್ತೀರಿ. ನಿಮ್ಮಿಂದ ಆಶ್ರಯಿಸಲ್ಪಟ್ಟ ಹರಿಯೂ ಕೂಡ ನಿಮಗೆ ವಿಮುಖನಾಗುವನು'' ಎಂದು ಶಪಿಸಿ ಶಿವನಧ್ಯಾನವನ್ನು ಮಾಡಿದನು.

ಈ ಸಂದರ್ಭದಲ್ಲಿ ಸರ್ವಜ್ಞಳಾದ ಪಾರ್ವತಿಯು ತನ್ನ ಪತಿಯನ್ನು ಹೀಗೆ ಪ್ರಾರ್ಥಿಸಿದಳು. ''ಹಿಂದಿನ ಜನ್ಮದಲ್ಲಿ ನನ್ನ ತಂದೆಯಾಗಿದ್ದ ದಕ್ಷನು ನಿನ್ನನ್ನು ನಿಂದಿಸಿ ಯಜ್ಞವನ್ನು ಮಾಡುತ್ತಿದ್ದಾನೆ. ದೇವತೆಗಳು ಮತ್ತು ಮಹರ್ಷಿಗಳು ಅವನಿಗೆ ಸಹಾಯ ಮಾಡುತ್ತಿದ್ದಾರೆ. ಆ ಯಜ್ಞವನ್ನು ದಯವಿಟ್ಟು ನಾಶಮಾಡು'' ಹೀಗೆ ಪ್ರಾರ್ಥಿತನಾದ ದೇವದೇವನೂ, ಸರ್ವೋತ್ತಮನೂ ಆದ ಶಿವನು ದಕ್ಷಯಜ್ಞವನ್ನು ನಾಶಮಾಡುವುದಕ್ಕಾಗಿ ವೀರಭದ್ರನನ್ನು ಸೃಷ್ಟಿಸಿದನು. ಅವನಿಗೆ ಸಾವಿರ ತಲೆ, ಸಾವಿರ ಕಣ್ಣು ಸಾವಿರ ಕೈಗಳು, ಬಲಿಷ್ಠ ಭುಜಗಳು ಇದ್ದವು. ಪ್ರಲಯಾಗ್ನಿಯಂತೆ ಇದ್ದ ಅವನನ್ನು ಯಾರೂ ಮುಟ್ಟಲಾರರು. ತನ್ನ ಕೋರೆ ಹಲ್ಲುಗಳಿಂದ ಕರಾಳನಾದ ಅವನನ್ನು ಯಾರೂ ನೋಡಲಾರರು. ಶಂಖ, ಚಕ್ರಗಳನ್ನು ಧರಿಸಿದ ಅವನು ದಂಡವನ್ನೂ, ಶಾರ್ಙ್ಗಧನುಸ್ಸನ್ನು ಹಿಡಿದಿದ್ದನು. ಭಸ್ಮ ಭೂಷಿತನಾಗಿದ್ದನು. ಅವನು ಹುಟ್ಟಿದ ಕೂಡಲೆ ಕೈ ಮುಗಿದುಕೊಂಡು ಶಿವನ ಬಳಿ ನಿಂತನು. ಅವನಿಗೆ ಶಿವನು ಹೇಳಿದನು ''ಗಂಗಾದ್ವಾರದಲ್ಲಿ ದಕ್ಷನು ನನ್ನನ್ನು ತಿರಸ್ಕರಿಸಿ ಯಜ್ಞವನ್ನು ಮಾಡುತ್ತಿದ್ದಾನೆ. ಆ ಯಜ್ಞವನ್ನು ನಾಶಪಡಿಸು'' ಈ ಸಮಯಕ್ಕೆ ಸರಿಯಾಗಿ ಪಾರ್ವತಿಯೂ ಕೂಡ ದಕ್ಷನ ಮೇಲೆ ಕೋಪದಿಂದ ಭದ್ರಕಾಳಿ ಎಂಬ ವಿಧ್ವಂಸಕ ಶಕ್ತಿಯನ್ನು ಸೃಷ್ಟಿಸಿದಳು. ವೀರಭದ್ರನು ಅವಳೊಡನೆ ವೃಷಭವನ್ನು ಏರಿ ಹೊರಟನು. ಶಿವನು ವೀರಭದ್ರನಿಗೆ ಸಹಾಯ ಮಾಡುವುದಕ್ಕಾಗಿ ರುದ್ರ ಎಂಬ ಹೆಸರಿನ ಸಾವಿರಾರು ವ್ಯಕ್ತಿಗಳನ್ನು ತನ್ನ ರೋಮದಿಂದ ಸೃಷ್ಟಿಸಿದನು. ಪ್ರಲಯಾಗ್ನಿಯಂತೆ ಭೀಕರರಾಗಿದ್ದ ಈ ವ್ಯಕ್ತಿಗಳು ಕೈಗಳಲ್ಲಿ ಶೂಲ, ಶಕ್ತಿ, ಗದೆಗಳನ್ನೂ, ದಂಡ, ಬಂಡೆಗಳನ್ನೂ ಹಿಡಿದು ಹತ್ತೂ ದಿಕ್ಕುಗಳಲ್ಲಿ ತಮ್ಮ ಧ್ವನಿಯನ್ನು ಹರಡುತ್ತಾ, ವೃಷಭಗಳನ್ನೇರಿ, ತಮ್ಮ ಗಣನಾಯಕ ವೀರಭದ್ರನನ್ನು ಸುತ್ತುವರಿದು ದಕ್ಷ-ಯಜ್ಞಕ್ಕೆ ಹೋದರು. ಗಂಗಾದ್ವಾರವನ್ನು ತಲುಪಿ ದಕ್ಷಯಜ್ಞವನ್ನು ನೋಡಿದರು. ಸಾವಿರಾರು ದೇವಸ್ತ್ರೀಯರು ಅಲ್ಲಿದ್ದರು. ಅಪ್ಸರೆಯರ ಗಾನ, ವೇಣು, ವೀಣಾನಿನಾದ, ವೇದ ಘೋಷಗಳಿಂದ ಆ ಸ್ಥಳವು ಶೋಭಿಸುತ್ತಿತ್ತು. ಋಷಿಗಳೊಂದಿಗೆ ಮತ್ತು ದೇವತೆಗಳೊಂದಿಗೆ ಕುಳಿತಿದ್ದ ದಕ್ಷನನ್ನು ನೋಡಿ ವೀರಭದ್ರನು ಮುಗುಳ್ನಗುತ್ತಾ ಹೇಳಿದನು.

''ನಾವೆಲ್ಲರೂ ಮಹಾತೇಜಸ್ವಿಯಾದ ಶಿವನ ಅನುಯಾಯಿಗಳು. ಹವಿರ್ಭಾಗವನ್ನು ಬಯಸಿ ಬಂದಿದ್ದೇವೆ. ಕೊಡು. ನೀವು ನಮಗೆ ಯಜ್ಞಭಾಗವನ್ನು ಕೊಡಬೇಕಿಲ್ಲವೆಂದು ಯಾರಾದರೂ ಆಜ್ಞೆ ಮಾಡಿದ್ದರೆ, ಆಜ್ಞೆ ಮಾಡಿದ ಆ ವ್ಯಕ್ತಿ ಯಾರು? ನಮಗೆ ತಿಳಿಸಿರಿ. ನಾವು ಅವನಿಂದಲೇ ಈ ವಿಷಯವನ್ನು ತಿಳಿದುಕೊಳ್ಳುತ್ತೇವೆ''.

ದೇವತೆಗಳು ಹೇಳಿದರು: "ನಿಮಗೆ ಹವಿರ್ಭಾಗವನ್ನು ಕೊಡಲು ಆಧಾರವಾಗಿ ಯಾವ ಮಂತ್ರಗಳೂ ಇಲ್ಲ."

ಮಂತ್ರಾಭಿಮಾನಿಗಳು ಹೇಳಿದರು : "ದೇವತೆಗಳೇ! ನೀವು ತಮೋಗುಣದಿಂದ ಪ್ರಜ್ಞೆಯನ್ನು ಕಳೆದುಕೊಂಡಿದ್ದೀರಿ. ಆದ್ದರಿಂದ ಯಜ್ಞಪತಿಯಾದ ಮಹೇಶ್ವರನನ್ನು ನೀವು ಪೂಜಿಸುತ್ತಿಲ್ಲ. ಸರ್ವೇಶ್ವರನಾದ ಹರ ಸರ್ವದೇವತೆಗಳ ಮೂರ್ತಿಯಾಗಿದ್ದಾನೆ. ಎಲ್ಲ ಅಭ್ಯುದಯ, ಸಿದ್ಧಿಗಳನ್ನು ಕೊಡುವ ಅವನನ್ನು ಎಲ್ಲ ಯಜ್ಞಗಳಲ್ಲೂ ಪೂಜಿಸುತ್ತಾರೆ."

ಶಿವಮಾಯೆಯಿಂದ ಜ್ಞಾನವನ್ನು ಕಳೆದುಕೊಂಡಿದ್ದ ದೇವತೆಗಳಿಗೆ ಈ ಮಾತುಗಳಿಂದಲೂ ಜ್ಞಾನೋದಯವಾಗಲಿಲ್ಲ. ಆಗ ಮಂತ್ರಾಭಿಮಾನಿಗಳು ದೇವತೆಗಳನ್ನು ಬಿಟ್ಟು ಹೊರಟುಹೋದರು. ಅನಂತರ ವೀರಭದ್ರನು "ಬಲದರ್ಪಿತರಾದ ನೀವು ಮಂತ್ರಗಳನ್ನೇ ನಂಬುತ್ತಿಲ್ಲ. ಆದ್ದರಿಂದ ಗರ್ವಿತರಾದ ನಿಮ್ಮನ್ನು ನಾಶಮಾಡುತ್ತೇವೆ" ಎಂದು ಹೇಳುತ್ತಾ ಯಜ್ಞಶಾಲೆಯನ್ನು ಸುಟ್ಟು ಬಿಟ್ಟನು. ಅವನ ಅನುಚರರು ಕೋಪಾವೇಶದಿಂದ ಯೂಪಸ್ತಂಭಗಳನ್ನು ಕಿತ್ತು ಎಸೆದರು. ಪ್ರಸ್ತೋತೃವನ್ನು ಹೋತೃವನ್ನು, ಯಜ್ಞಾಶ್ವವನ್ನು ಗಂಗೆಯಲ್ಲಿ ಎಸೆದರು. ಇವರನ್ನು ತಡೆಯಲು ಇಂದ್ರನು ಎತ್ತಿದ್ದ ಕೈಯನ್ನು ವೀರಭದ್ರನು ಸ್ತಬ್ಧಗೊಳಿಸಿದನು. ಹಾಗೆಯೇ ಬೇರೆ ದೇವತೆಗಳ ಕೈಗಳನ್ನು ನಿಶ್ಚಲವಾಗಿಸಿದನು. ಭಗ ಎಂಬ ದೇವತೆಯ ಕಣ್ಣುಗಳನ್ನು ಕೈತುದಿಯಿಂದ ಆಟದಂತೆ ಕಿತ್ತುಬಿಟ್ಟರು. ಪೂಷನ್ ದೇವತೆಯ ದಂತಗಳನ್ನು ಮುಷ್ಟಿಯಿಂದ ಕಿತ್ತರು. ಚಂದ್ರನನ್ನು ಕಾಲಿನ ಅಂಗುಷ್ಠದಿಂದ ವೀರಭದ್ರನು ಥಳಿಸಿದನು. ಅಗ್ನಿಯ ಎರಡು ಕೈಗಳನ್ನು ನಾಲಿಗೆಯನ್ನು ಕಿತ್ತು ಮುನಿಗಳ ತಲೆಯನ್ನು ಕಾಲುಗಳಿಂದ ಹೊಡೆದರು. ಗರುಡಾರೂಢನಾಗಿ ಬಂದ ವಿಷ್ಣುವನ್ನು ಮಹಾಬಲಶಾಲಿಯಾದ ವೀರಭದ್ರನು, ಅವನ ಸುದರ್ಶನವನ್ನು ನಿಶ್ಚಲಗೊಳಿಸಿ, ಹೊಡೆದನು. ಆಗ ಮಹಾ ಬಲಶಾಲಿಯಾದ ಗರುಡನು ತನ್ನ ರೆಕ್ಕೆಗಳಿಂದ ವೀರಭದ್ರಗಣವನ್ನು ಥಳಿಸಿದನು. ಆಗ ರುದ್ರನು *(ವೀರಭದ್ರನು)* ವೈನತೇಯನಿಗಿಂತ ಹೆಚ್ಚು ಸಮರ್ಥರಾದ ಸಾವಿರಾರು ಗರುಡಗಳನ್ನು ಸೃಷ್ಟಿಸಿದನು. ಅವುಗಳನ್ನು ನೋಡಿ ವೈನತೇಯನು *(ವಿಷ್ಣುವಾಹನನಾದ ಗರುಡ)* ಹೆದರಿ ವಿಷ್ಣುವನ್ನು ಬಿಟ್ಟು ಓಡಿಹೋದನು. ಈ ಘಟನೆ ಅದ್ಭುತವಾಗಿತ್ತು. ಅನಂತರ ಚತುರ್ಮುಖಬ್ರಹ್ಮನು ಅಲ್ಲಿಗೆ ಬಂದು ವೀರಭದ್ರನನ್ನು ವಿಷ್ಣುವನ್ನು ತಡೆದನು. ವಿಷ್ಣುವು ಚತುರ್ಮುಖಬ್ರಹ್ಮನ ಮೇಲೆ ಗೌರವದಿಂದ ಶಿವನನ್ನು ಸ್ತುತಿಸಿ ಸಂತೋಷಪಡಿಸಿದನು. ಶಿವನು ಪಾರ್ವತಿಯೊಂದಿಗೆ ಅಲ್ಲಿಗೆ ಬಂದನು. ಚತುರ್ಮುಖ ಬ್ರಹ್ಮ, ದಕ್ಷ ಮತ್ತು ಎಲ್ಲ ದೇವತೆಗಳೂ ಶಿವ-ಪಾರ್ವತಿಯರನ್ನು ಸ್ತುತಿಸಿದರು. ದಕ್ಷನು ಪಾರ್ವತಿಗೆ ಕೈ ಮುಗಿದು ನಮಸ್ಕರಿಸಿ ಅವಳನ್ನು ನಾನಾ ವಿಧವಾದ ಸ್ತೋತ್ರಗಳಿಂದ ವಿಶೇಷವಾಗಿ ಸ್ತುತಿಸಿದನು. ಅನಂತರ ಕರುಣಾನಿಧಿಯಾದ ಪಾರ್ವತಿಯು ಮುಗುಳ್ನಗುತ್ತಾ, ಪ್ರಸನ್ನ ಮನಸ್ಸಿನಿಂದ ಶಿವನಿಗೆ ಹೇಳಿದಳು. "ನೀನೇ ಜಗಜ್ಜನ್ಮಾದಿಕಾರಣ. ದಕ್ಷನನ್ನೂ, ದೇವತೆಗಳನ್ನೂ ದಯವಿಟ್ಟು ಅನುಗ್ರಹಿಸು"

ಅನಂತರ ಶಿವನು ದೇವತೆಗಳನ್ನೂ ಮತ್ತು ಪ್ರಾಚೇತಸ(ದಕ್ಷ)ನನ್ನೂ ಕುರಿತು ಹೇಳಿದನು. ''ದೇವತೆಗಳೆ! ನಾನು ಪ್ರಸನ್ನನಾಗಿದ್ದೇನೆ. ಎಲ್ಲ ಯಜ್ಞಗಳಲ್ಲೂ ನನ್ನನ್ನು ಪೂಜಿಸಬೇಕು; ನಿಂದಿಸಬಾರ್ದು ದಕ್ಷನೆ! ಎಲ್ಲರನ್ನು ರಕ್ಷಿಸುವ ನನ್ನ ಈ ಮಾತುಗಳನ್ನು ಕೇಳು ''ಲೋಕೈಷಣ-ವನ್ನು, ಅಂದರೆ, ಭೌತವಸ್ತುಗಳ ಮೇಲೆ ಆಸೆ-ಅಭಿಮಾನವನ್ನು ಮಹಾಪ್ರಯತ್ನದಿಂದ ಬಿಡು. ಮಹಾಪ್ರಯತ್ನದಿಂದ ನನ್ನ ಭಕ್ತನಾಗು. ಈ ಕಲ್ಪವು ಮುಗಿದನಂತರ ನನ್ನ ಅನುಗ್ರಹದಿಂದ ನನ್ನ ಗಣದ ಅಧಿಪತಿಯಾಗುವಿ. ಅಲ್ಲಿಯವರೆಗೆ ನಿನ್ನ ರಾಜಪದವಿಯಲ್ಲಿ ಸುಖವಾಗಿರು''. ಹೀಗೆ ಹೇಳಿ ಶಿವನು ಪಾರ್ವತಿಯೊಂದಿಗೆ ಅಂತರ್ಧಾನನಾದನು. ಅನಂತರ ಚತುರ್ಮುಖನು ದಕ್ಷನನ್ನು ಕುರಿತು ಲೋಕಹಿತಕರವಾದ ಮಾತನ್ನು ಹೇಳಿದನು.

ವೃಷಭಧ್ವಜನಾದ ಶಿವನು ಪ್ರಸನ್ನನಾಗಿರುವ, ಅವನೇ ನಿನ್ನನ್ನು ರಕ್ಷಿಸುತ್ತಿರುವಾಗ ಇನ್ನೆಲ್ಲಿ ಮೋಹ! *(ಅಂದರೆ ನಿನ್ನಲ್ಲಿ ಮೋಹವೇ ಇಲ್ಲ)* ಈ ಪರಮೇಶ್ವರನು ಸರ್ವವಸ್ತುಗಳ ಒಳಗೆ ಇದ್ದಾನೆ. ವೇದವನ್ನು ತಿಳಿದವರು ಮಾತ್ರ ಅವನ ಸಾಕ್ಷಾತ್ಕಾರವನ್ನು ಪಡೆಯಲು ಸಾಧ್ಯ. ಅವನು ಸರ್ವನಿಯಾಮಕ. ಮೂಲಕಾರಣ. ಪರಮಗತಿ. ವೇದಮಂತ್ರಗಳಿಂದ ಪ್ರತಿಪಾದ್ಯ. ಈ ಪರಮೇಶ್ವರನನ್ನು ಭಕ್ತಿಯಿಂದ ಯಾರು ಪೂಜಿಸುತ್ತಾರೋ ಅವರು ಮುಕ್ತಿಯನ್ನು ಪಡೆಯುತ್ತಾರೆ. ಆದ್ದರಿಂದ ಆದಿ, ಮಧ್ಯ, ಅಂತಗಳಿಲ್ಲದ ಪರಮೇಶ್ವರನನ್ನು ತಿಳಿದು, ಅನುಷ್ಠಾನದಿಂದ, ಮನಸ್ಸಿನಿಂದ ಮತ್ತು ವಾಗಿಂದ್ರಿಯದಿಂದ ಪ್ರಯತ್ನಪಟ್ಟು ಆರಾಧಿಸು. ಆತ್ಮಘಾತುಕವಾದ ಈಶನಿಂದೆಯನ್ನು ಮಹಾಪ್ರಯತ್ನದಿಂದ ಬಿಟ್ಟು ಬಿಡು. ನಿಂದಕನ ಎಲ್ಲ ಅನುಷ್ಠಾನಗಳೂ ಅನರ್ಥದಲ್ಲಿ ಪರ್ಯವಸಾನವನ್ನು ಹೊಂದುತ್ತವೆ. ಜಗದ್ರಕ್ಷಕನೂ, ಮಹಾಯೋಗಿಯೂ ಆದ ವಿಷ್ಣು ಶಿವನೇ. ಬೇರೆಯಲ್ಲ. ಜಗತ್ತಿನ ಮೂಲಕಾರಣನಾದ ವಿಷ್ಣುವನ್ನು ಶಿವನಿಂದ ಭಿನ್ನ ಎಂದು ಯಾರು ತಿಳಿಯುತ್ತಾರೆ. ಅವರು ಅವೈದಿಕರು; ನರಕಕ್ಕೆ ಹೋಗುತ್ತಾರೆ. ವೇದಾನುವರ್ತಿಗಳು ರುದ್ರ-ನಾರಾಯಣರನ್ನು ಒಂದೇ ಎಂದು ತಿಳಿದು ಮುಕ್ತಿಯನ್ನು ಪಡೆಯುತ್ತಾರೆ. ವಿಷ್ಣುವೇ ರುದ್ರ; ರುದ್ರನೇ ವಿಷ್ಣು ಎಂದು ತಿಳಿದು ಉಪಾಸನೆಯನ್ನು ಮಾಡುವವರು ಮುಕ್ತಿಯನ್ನು ಪಡೆಯುತ್ತಾರೆ. ಆದ್ದರಿಂದ ಹರಿ-ಹರರ ನಿಂದೆಯನ್ನು ತ್ಯಜಿಸಿ ಬ್ರಹ್ಮಜ್ಞಾನಿಗಳಿಗೆ ಆಶ್ರಯನಾದ ಶಿವನನ್ನು ಆಶ್ರಯಿಸು.''

**ಸೂತ ಉವಾಚ :**

ಚತುರ್ಮುಖಬ್ರಹ್ಮನ ಈ ಉಪದೇಶವನ್ನು ಕೇಳಿದ ಪ್ರಾಚೇತಸನು *(ದಕ್ಷನು)* ನಂದೀಶ್ವರನೂ, ಗಜಚರ್ಮಧಾರಿಯೂ ಆದ ಶಿವನಿಗೆ ಶರಣು ಹೊಂದಿದನು.

ದಧೀಚನ ಶಾಪಕ್ಕೊಳಗಾಗಿದ್ದ ಮಹರ್ಷಿಗಳು ಕಲಿಯುಗದಲ್ಲಿ ತಪೋ ಬಲಹೀನರಾಗಿ ಬ್ರಾಹ್ಮಣಕುಲದಲ್ಲಿ ಹುಟ್ಟಿದರು. ಕಲ್ಪಾಂತದವರೆಗೆ ರೌರವ ಮೊದಲಾದ ನರಕಗಳನ್ನು ಅನುಭವಿಸುವ ಇವರು ಹಿಂದಿನ ಸಾಧನೆಯ ಸಂಸ್ಕಾರದಿಂದಲೂ, ಬ್ರಹ್ಮನ ಮಾತಿನ

ಬಲದಿಂದಲೂ ಶಾಪಮುಕ್ತರಾಗುವರು. ಅನಂತರ ಬ್ರಹ್ಮದೇವರ ಅನುಮತಿಯಿಂದ ತಪಸ್ಸಿನಿಂದ ಶಿವನನ್ನು ಆರಾಧಿಸಿ, ಅವನ ಅನುಗ್ರಹದಿಂದ ಹಿಂದಿನಂತೆ ಆಗುತ್ತಾರೆ.

ದಕ್ಷಯಜ್ಞ ಭಂಗದ ಕಥೆ ಇಲ್ಲಿಗೆ ಮುಗಿಯಿತು. ಇನ್ನು ಮುಂದೆ ದಕ್ಷಪುತ್ರಿಯರ ಸಂತತಿಯನ್ನು ಕೇಳಿರಿ.

* * *

## ಅಧ್ಯಾಯ-೧೬

**ಸೂತ ಉವಾಚ :**

'ಪ್ರಜೆಗಳನ್ನು ಸೃಷ್ಟಿಸು' ಎಂಬ ಬ್ರಹ್ಮದೇವರ ಆದೇಶವನ್ನನುಸರಿಸಿ ದಕ್ಷ ಪ್ರಜಾಪತಿಯು ದೇವ, ಗಂಧರ್ವ, ಋಷಿ, ಅಸುರ ಮತ್ತು ಸರ್ಪ ಎಂದು ಪ್ರಸಿದ್ಧವಾದ ವಿವಿಧ ಜೀವ ಸಮುದಾಯವನ್ನು ಸೃಷ್ಟಿಸಿದನು. ಆದರೆ ಇವರಿಂದ ಸಂತತಿ ಮುಂದುವರಿಯಲಿಲ್ಲ. ಆದ್ದರಿಂದ ದಕ್ಷಪ್ರಜಾಪತಿಯು ಮೈಥುನದಿಂದ ಸೃಷ್ಟಿಯನ್ನು ಮಾಡಿದನು.

ವೀರಣ ಎಂಬ ಪ್ರಜಾಪತಿಯ ಮಗಳಾದ, ಧರ್ಮಿಷ್ಠಳಾದ ಅಶಿಕ್ನಿಯಲ್ಲಿ ಒಂದು ಸಾವಿರ ಪುತ್ರರನ್ನು ದಕ್ಷ ಪ್ರಜಾಪತಿಯು ಪಡೆದನು. ಇವರೆಲ್ಲರೂ ನಾರದರ ಮಾಯೆಯಿಂದ *(ಉಪದೇಶದಿಂದ)* ಸಂಸಾರವನ್ನು ತ್ಯಜಿಸಿದರು. ಅನಂತರ ದಕ್ಷ ಪ್ರಜಾಪತಿಯು ಅಶಿಕ್ನಿಯಲ್ಲಿ ಅರವತ್ತು ಹೆಣ್ಣುಮಕ್ಕಳನ್ನು ಪಡೆದನು. ಅವರಲ್ಲಿ ಹತ್ತು ಜನರನ್ನು ಧರ್ಮರಾಜನಿಗೂ *(ಯಮನಿಗೂ)* ಹದಿಮೂರು ಜನರನ್ನು ಕಶ್ಯಪರಿಗೂ, ಇಪ್ಪತ್ತೇಳು ಜನರನ್ನು ಚಂದ್ರನಿಗೂ, ನಾಲ್ಕು ಜನರನ್ನು ಅರಿಷ್ಟನೇಮಿಗೂ, ಇಬ್ಬರನ್ನು ಬಹುಪುತ್ರ ಎಂಬುವನಿಗೂ, ಮತ್ತಿಬ್ಬರನ್ನು ಕೃಶಾಶ್ವನಿಗೂ ಉಳಿದ ಇಬ್ಬರನ್ನು ಅಂಗಿರಸ್ ಮುನಿಗೂ ಕೊಟ್ಟನು. ಇನ್ನು ಮುಂದೆ ಅವರ ವಂಶವಿಸ್ತಾರದ ವರ್ಣನೆ :

ಮರುತ್ವತೀ, ವಸು, ಯಾಮೀ, ಲಂಬಾ, ಭಾನು, ಅರುಂಧತಿ, ಸಂಕಲ್ಪಾ, ಮುಹೂರ್ತಾ, ಸಾಧ್ಯಾ-ವಿಶ್ವಾ ಇವರು ಧರ್ಮಪ್ರಜಾಪತಿಯ ಹತ್ತು ಪತ್ನಿಯರು. ವಿಶ್ವೆಯ ಮಕ್ಕಳು ವಿಶ್ವೇದೇವತೆಗಳು. ಸಾಧ್ಯೆಯ ಮಕ್ಕಳು ಸಾಧ್ಯರು. ಮರುತ್ವತ್ ಎಂಬ ದೇವತೆಗಳು ಮರುತ್ವತಿಯ ಮಕ್ಕಳು. ವಸುಗಳು ವಸು ಎಂಬ ಪತ್ನಿಯ ಮಕ್ಕಳು. ಭಾನವ ಎಂಬ ದೇವತೆಗಳು ಭಾನುವಿನ ಮಕ್ಕಳು. ಮುಹೂರ್ತ ಎಂಬುವವರು ಮುಹೂರ್ತೆಯ ಮಕ್ಕಳು. ಘೋಷ ಲಂಬೆಯ ಮಗ,

ನಾಗವೀಥಿ ಯಾಮಿಯ ಮಗ. ಪೃಥಿವಿಯಲ್ಲಿ ಕಾಣಸುವ ಎಲ್ಲವೂ ಅರುಂಧತಿಯ ಸಂತಾನ. ಸಂಕಲ್ಪೆಯ ಮಗ ಸಂಕಲ್ಪ. ಇವರಲ್ಲದೆ ಜ್ಯೋತಿಸ್ ಮೊದಲಾದ ಹತ್ತು ಜನರು ಧರ್ಮ ಪ್ರಜಾಪತಿಯ ಮಕ್ಕಳು. ಇವರಿಗೆ ವಿವಿಧ ಐಶ್ವರ್ಯ ಮತ್ತು ಬಲಗಳು ಇದ್ದವು. ಆಪ, ಧ್ರುವ, ಸೋಮ, ಧರ, ಅನಲ, ಅನಿಲ, ಪ್ರತ್ಯೂಷ ಮತ್ತು ಪ್ರಭಾಸ - ಇವರು ಎಂಟು ಜನ ವಸುಗಳು ವೈತಂಡ್ಯ, ಶ್ರಮ, ಶಾಂತ, ಧ್ವನಿ - ಇವರು ಆಪನ ಮಕ್ಕಳು. ಲೋಕಾಧಾರನಾದ ಕಾಲ ಧ್ರುವನ ಮಗ. ವರ್ಚಾ ಎಂಬುವವನು ಸೋಮನ ಮಗ. ಧರನ ಮಗ ದ್ರವಿಣ. ಮನೋಜವ ಮತ್ತು ಅವಿಜ್ಞಾತಗತಿ ಎಂಬುವವರು ಅನಲನ ಮಕ್ಕಳು. ಅನಿಲನ ಮಗ ಸೇನಾಪತಿ. ಪ್ರತ್ಯೂಷನ ಮಗ ದೇವಲ. ಇವನು ಮಹಾಯೋಗಿಯಾಗಿದ್ದನು. ಪ್ರಭಾಸನ ಮಗ ವಿಶ್ವಕರ್ಮ. ಇವನು ಶ್ರೇಷ್ಠನಾದ ಶಿಲ್ಪಿ ಮತ್ತು ಪ್ರಜಾಪತಿ.

**ಕಶ್ಯಪ ಸಂತತಿ :**

ಅದಿತಿ, ದಿತಿ, ದನು, ಅರಿಷ್ಟಾ, ಸುರಸಾ, ಸುರಭಿ, ವಿನತಾ, ತಾಮ್ರ, ಕ್ರೋಧಾ, ವಶಾ, ಇರಾ, ಕದ್ರು, ಮುನಿ - ಇವರು ಕಶ್ಯಪರ ಪತ್ನಿಯರು.

ಅಂಶ, ಧಾತೃ, ಭಗ, ತ್ವಷ್ಟ್ರ, ಮಿತ್ರ, ವರುಣ, ಅರ್ಯಮಾ, ವಿವಸ್ವಾನ್, ಸವಿತೃ ಪೂಷನ್, ಅಂಶುಮಾನ್, ವಿಷ್ಣು - ಈ ಹನ್ನೆರಡು ಜನ ಅದಿತಿಯ ಮಕ್ಕಳು. ಹಿಂದೆ ಚಾಕ್ಷುಷ ಮನ್ವಂತರದಲ್ಲಿ ತುಷಿತ ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದರು. ಇವರೇ ವೈವಸ್ವತ ಮನ್ವಂತರದಲ್ಲಿ ಆದಿತ್ಯರು. ಕಶ್ಯಪರಿಗೆ ದಿತಿಯಿಂದ ಇಬ್ಬರು ಮಕ್ಕಳು. ಹಿರಣ್ಯಕಶಿಪು ಹಿರಿಯ, ಹಿರಣ್ಯಾಕ್ಷ ಕಿರಿಯ. ಹಿರಣ್ಯಕಶಿಪು ಮಹಾಬಲಶಾಲಿ. ಬ್ರಹ್ಮದೇವರನ್ನು ತಪಸ್ಸಿನಿಂದ ಆರಾಧಿಸಿ, ಸಾಕ್ಷಾತ್ಕಾರವಾದಾಗ ವಿವಿಧ ಸ್ತೋತ್ರಗಳಿಂದ ಸ್ತುತಿಸಿ ದಿವ್ಯ ವರಗಳನ್ನು ಪಡೆದನು. ಈ ವರಬಲದಿಂದ ದೇವತೆಗಳನ್ನು ಮಹರ್ಷಿಗಳನ್ನೂ ಪೀಡಿಸಿದನು. ಪೀಡಿತರಾದವರೆಲ್ಲರೂ ಸುಖಕರರೂ, ಸರ್ವ ಜಗತ್ತಿನ ಪ್ರಧಾನ ಪುರುಷರೂ, ಸೃಷ್ಟಿ ರಕ್ಷೆಗಳ ಕಾರಣರೂ, ನಿರ್ವಿಕಾರರೂ ಆದ ಚತುರ್ಮುಖ ಬ್ರಹ್ಮದೇವರ ಬಳಿ ಹೋಗಿ ತಮ್ಮನ್ನು ರಕ್ಷಿಸಲು ಬೇಡಿದರು. ಬ್ರಹ್ಮದೇವರು ಎಲ್ಲ ದೇವ-ಮುನಿಗಳೊಡನೆ ಕ್ಷೀರಸಾಗರ ವಾಸಿಯಾದ ಶ್ರೀಹರಿಯ ಬಳಿ ಹೋಗಿ ಜಗಜ್ಜನ್ಮಾದಿಕಾರಣನಾದ ಆ ದೇವನ ಪಾದಗಳನ್ನು ಶಿರಸಾ ನಮಸ್ಕರಿಸಿ ಕೈಮುಗಿದು ಬಿನ್ನವಿಸಿದರು.

**ಬ್ರಹ್ಮದೇವರು ಮಾಡಿದ ವಿಷ್ಣುಸ್ತೋತ್ರ :**

"ನೀನು ಎಲ್ಲರಿಗೂ ಆಶ್ರಯ; ಅನಂತ; ಸರ್ವಾಂತರ್ಯಾಮಿ; ಸರ್ವವ್ಯಾಪಿ, ಎಲ್ಲ ದೇವತೆಗಳ ಸ್ವರೂಪ; ಮಹಾಯೋಗಿ; ಸನಾತನ; ಮಹಾವಿರಕ್ತ; ಮಹೈಶ್ವರ್ಯವುಳ್ಳವನು; ವರ್ಣನೆಗೆ ನಿಲುಕದವನು; ಸೃಷ್ಟಿ-ಸ್ಥಿತಿ-ಸಂಹಾರಗಳ ಕರ್ತೃ; ಅಸುರ ನಿಗ್ರಹವನ್ನು ಮಾಡುವವನು; ಓ ಅನಂತ! ಈಶ! ಪರಮೇಶ್ವರ! ದಯವಿಟ್ಟು ಅಸುರರ ಪೀಡೆಯಿಂದ ರಕ್ಷಿಸು."

ಹೀಗೆ ಸ್ತುತಿಸಲ್ಪಟ್ಟ ಪೀತಾಂಬರಧರನೂ, ಅರಳಿದ ತಾವರೆಯಂತಹ ಕಣ್ಣಿನವನೂ ಆದ ಶ್ರೀ ಹರಿಯು ''ಬ್ರಹ್ಮದೇವನೆ! ದೇವತೆಗಳೇ! ಏತಕ್ಕಾಗಿ ಇಲ್ಲಿಯವರೆಗೆ ಬಂದಿರುವಿರಿ? ನಿಮಗಾಗಿ ನಾನು ಏನು ಮಾಡಲಿ?'' ಎಂದು ಕೇಳಿದನು.

ದೇವತೆಗಳು ಹೇಳಿದರು ''ಬ್ರಹ್ಮದೇವರ ವರದಿಂದ ದರ್ಪವನ್ನು ಬೆಳೆಸಿಕೊಂಡ ಹಿರಣ್ಯಕಶಿಪು ಎಂಬ ದೈತ್ಯನು ಎಲ್ಲ ದೇವತೆಗಳನ್ನು, ಋಷಿಗಳನ್ನು ಬಾಧಿಸುತ್ತಿದ್ದಾನೆ. ನಿನ್ನನ್ನು ಬಿಟ್ಟು ಬೇರೆ ಯಾರೂ ಅವನನ್ನು ಕೊಲ್ಲಲಾರರು. ದಯವಿಟ್ಟು ಅವನನ್ನು ಕೊಂದು ಎಲ್ಲರನ್ನು ರಕ್ಷಿಸು''

ದೇವತೆಗಳ ಈ ಮಾತನ್ನು ಕೇಳಿ ಲೋಕಸ್ಥಿತಿಕಾರಣನಾದ ವಿಷ್ಣುವು ದೈತ್ಯನಾಯಕನ ವಧೆಗಾಗಿ ಮೇರುಪರ್ವತದಷ್ಟು ಗಟ್ಟಿಯಾದ ದೇಹವನ್ನು ಹೊಂದಿದ್ದ ಘೋರರೂಪನೂ, ಭಯಾನಕನೂ ಆಗಿದ್ದ ಒಬ್ಬ ಪುರುಷನನ್ನು ಸೃಷ್ಟಿಸಿದನು. ಅವನು ಕೈಯಲ್ಲಿ ಶಂಖ,ಚಕ್ರ, ಗದೆಗಳನ್ನು ಹಿಡಿದಿದ್ದನು. ಶ್ರೀ ಹರಿಯು ಅವನಿಗೆ ಹೇಳಿದನು ''ದೈತ್ಯರಾಜನಾದ ಹಿರಣ್ಯಕಶಿಪುವನ್ನು ಕೊಂದು ಪುನಃ ಇಲ್ಲಿಗೆ ಹಿಂದಿರುಗು''. ಆ ಪುರುಷನು ಮಹಾ-ಪುರುಷನಾದ ವಿಷ್ಣುವನ್ನು ನಮಸ್ಕರಿಸಿ ಗರುಡನನ್ನು ಏರಿ ಭೈರವನಾದವನ್ನು ಮಾಡುತ್ತಾ, ಹಿರಣ್ಯಕಶಿಪುವಿನ ಊರಿಗೆ ಹೋದನು. ಅವನ ಗುಡುಗಿನಂತಹ ಆರ್ಭಟವನ್ನು ಕೇಳಿ ದೈತ್ಯರೂ ಪ್ರತಿ ಆರ್ಭಟವನ್ನು ಮಾಡಿದರು. ''ದೇವತೆಗಳಿಂದ ಪ್ರಚೋದಿತನಾಗಿ ಮಹಾಪುರುಷನೊಬ್ಬನು ಭೈರವನಾದವನ್ನು ಮಾಡುತ್ತಾ ಬರುತ್ತಿದ್ದಾನೆ. ಅವನು ಜನಾರ್ದನನೇ ಆಗಿರಬೇಕು'' ಎಂದು ಹೇಳಿದರು. ಅನಂತರ ಆಯುಧಗಳಿಂದ ಸನ್ನದ್ಧರಾದ ಪ್ರಹ್ಲಾದ ಮೊದಲಾದ ಪುತ್ರರ ಮತ್ತು ಅಸುರಶ್ರೇಷ್ಠರ ಜೊತೆ ಆ ಪುರುಷನ ಮೇಲೆ ಯುದ್ಧಕ್ಕೆ ಹೋದರು. ಗರುಡನ ಮೇಲೆ ಕುಳಿತಿದ್ದ, ಕೋಟಿಸೂರ್ಯರಷ್ಟು ಪ್ರಖರವಾಗಿದ್ದ, ಪರ್ವತದಂತಿದ್ದ, ಬೇರೊಬ್ಬ ನಾರಾಯಣನಂತೆ ಇದ್ದ ಆ ಪುರುಷನನ್ನು ನೋಡಿ ಕೆಲವರು ಓಡಿಹೋದರು. ಕೆಲವರು ಕಂಗೆಟ್ಟ ಕಣ್ಣುಗಳುಳ್ಳವರಾಗಿ ಮಾತನಾಡಿಕೊಂಡರು. ''ಇವನು ದೇವತೆಗಳ ರಕ್ಷಕನೂ, ನಮ್ಮ ನಿತ್ಯ ಶತ್ರುವೂ ಆದ ನಾರಾಯಣ ಅಥವಾ ಅವನ ಮಗ'' ಹೀಗೆ ಹೇಳಿಕೊಳ್ಳುತ್ತಾ ಆ ಪುರುಷನ ಮೇಲೆ ಶಸ್ತ್ರಗಳ ಮಳೆಯನ್ನೇ ಸುರಿಸಿದರು. ಅವುಗಳಿಂದ ಯಾವ ಬಾಧೆಯನ್ನೂ ಹೊಂದದ ಆ ಪುರುಷನು ಅವುಗಳನ್ನು ಅನಾಯಾಸದಿಂದ ನಾಶ ಮಾಡಿದನು. ಮಹಾಪರಾಕ್ರಮಿಗಳಾದ ಹಿರಣ್ಯಕಶಿಪುವಿನ ನಾಲ್ಕು ಜನ ಮಕ್ಕಳು ನಾರಾಯಣ ಸಂಜಾತನಾದ ಆ ಪುರುಷನ ಜೊತೆ ಕಾದಾಡಿದರು. ಪ್ರಹ್ಲಾದನು ಬ್ರಹ್ಮಾಸ್ತ್ರವನ್ನು ಅನುಹ್ಲಾದನು ವೈಷ್ಣವಾಸ್ತ್ರವನ್ನು ಪ್ರಯೋಗಿಸಿದರು. ಸಂಹ್ಲಾದನು ಕೌಮಾರಾಸ್ತ್ರವನ್ನು ಪ್ರಯೋಗಿಸಿದರೆ ಹ್ಲಾದನು ಆಗ್ನೇಯಾಸ್ತ್ರವನ್ನು ಕಳಿಸಿದನು. ಈ ಅಸ್ತ್ರಗಳು ನಾರಾಯಣ ಸಂಜಾತನಾದ ಆ ಪುರುಷನಿಗೆ ಯಾವ ಹಾನಿಯನ್ನೂ ಮಾಡಲಿಲ್ಲ. ಪ್ರತಿಯಾಗಿ ಆ ಪುರುಷನು ಪ್ರಹ್ಲಾದ ಮೊದಲಾದ ನಾಲ್ಕು ಜನರನ್ನು ಕೈಯಿಂದ ಎತ್ತಿ ಎಸೆದು,

ಸಿಂಹನಾದವನ್ನು ಮಾಡಿದನು. ಅನಂತರ ಹಿರಣ್ಯಕಶಿಪು ತಾನೇ ಆ ಪುರುಷನ ಮೇಲೆರಗಿ ಎದೆಯ ಮೇಲೆ ಕಾಲಿನಿಂದ ಒದ್ದನು. ಆ ಏಟಿನಿಂದ ಪೀಡಿತನಾಗಿ ಆ ಪುರುಷನು ಅದೃಶ್ಯನಾಗಿ ನಾರಾಯಣನಿದ್ದ ಸ್ಥಳಕ್ಕೆ ಹಿಂತಿರುಗಿದನು. ನಡೆದದ್ದೆಲ್ಲವನ್ನೂ ವಿವರಿಸಿದನು.

ಆಗ ಭಗವನ್ ನಾರಾಯಣನು ಆಲೋಚಿಸಿ ನರಸಿಂಹರೂಪವನ್ನು ತೆಗೆದುಕೊಂಡು ಹಿರಣ್ಯಕಶಿಪುವಿನ ಮುಂದೆ ಬಂದನು. ಯೋಗಸ್ವರೂಪಿಯಾದ ನಾರಾಯಣನು ಆಗ ಕೋರೆಹಲ್ಲುಗಳಿಂದ ಕರಾಳವಾಗಿದ್ದು, ತನ್ನ ಸರ್ವಸಂಹಾರಶಕ್ತಿಯನ್ನು ಪ್ರಕಟಪಡಿಸುತ್ತಾ ಪ್ರಳಯಾಗ್ನಿಯಂತೆ ಕಾಣುತ್ತಿದ್ದನು. ತನ್ನ ಜ್ಯೇಷ್ಠಪುತ್ರ ಪ್ರಹ್ಲಾದನನ್ನು ನರಸಿಂಹನ ವಧೆಗಾಗಿ ಹಿರಣ್ಯಕಶಿಪು ಕಳಿಸಿದನು. ಜೊತೆಗೆ ಅವನ ಸೋದರರನ್ನೂ ಕಳಿಸಿದನು. ಇದಕ್ಕೆ ಮೊದಲು ತನ್ನ ಮೇಲೆ ಯುದ್ಧಕ್ಕೆ ಬಂದಿದ್ದ ಪುರುಷನ ಶಕ್ತಿಗಿಂತ ಈ ನರಸಿಂಹನ ಶಕ್ತಿ ಕಡಿಮೆ ಎಂದು ಹಿರಣ್ಯಕಶಿಪು ತನ್ನ ಮಕ್ಕಳಿಗೆ ಹೇಳಿದನು. ತಂದೆಯ ಆಜ್ಞೆಯಂತೆ ಪ್ರಹ್ಲಾದನು ಎಲ್ಲ ವಿಧವಾದ ಪ್ರಯತ್ನಗಳಿಂದ ಯುದ್ಧ ಮಾಡಿದನು. ಆದರೆ ಸೋತನು. ಅನಂತರ ಮೋಹಕ್ಕೊಳಗಾದ ಹಿರಣ್ಯಾಕ್ಷನು ಪಶುಪತಿಯನ್ನು ಧ್ಯಾನಿಸಿ ಪಾಶುಪತಾಸ್ತ್ರವನ್ನು ನರಸಿಂಹನ ಮೇಲೆ ಪ್ರಯೋಗಿಸಿದನು. ದೇವಾಧಿದೇವ ನರಸಿಂಹನಿಗೆ ಅದರಿಂದ ಏನೂ ಹಾನಿಯಾಗಲಿಲ್ಲ. ಅಸ್ತ್ರವು ವಿಫಲವಾದದ್ದನ್ನು ನೋಡಿದ ಪ್ರಹ್ಲಾದನು ನರಸಿಂಹನನ್ನು ಸರ್ವಾಂತರ್ಯಾಮಿಯೂ ಸನಾತನನೂ ಆದ ಭಗವಾನ್ ವಾಸುದೇವ ಎಂದು ತಿಳಿದನು. ಈ ಜ್ಞಾನ ಅವನ ಭಾಗ್ಯ. ಅವನು ಅಸ್ತ್ರಗಳನ್ನೆಲ್ಲ ತ್ಯಜಿಸಿ ಸತ್ವಗುಣ ಸಂಪನ್ನವಾದ ಮನಸ್ಸಿನಿಂದ ಆ ನರಸಿಂಹನಿಗೆ ನಮಸ್ಕರಿಸಿದನು. ಯೋಗಿಗಳ ಹೃದಯೇಶನಾದ ಸ್ತೋತ್ರಾರ್ಹನಾದ ನಾರಾಯಣನನ್ನು ಋಗ್ ಯಜುಸ್ಸಾಮವೇದಗಳಲ್ಲಿ ಉಕ್ತವಾದ ಸ್ತೋತ್ರಗಳಿಂದ ಸ್ತುತಿಸಿ, ತಂದೆಯನ್ನೂ ಸೋದರರನ್ನೂ ತಡೆದು ಹಿರಣ್ಯಾಕ್ಷನಿಗೆ ಹೇಳಿದನು.

''ಈ ನರಸಿಂಹ ಭಗವಾನ್ ನಾರಾಯಣ. ಇವನ ಗುಣಗಳನ್ನು ಅಳೆಯಲಾಗದು. ಸರ್ವ ಕಾಲ, ದೇಶಗಳಲ್ಲಿ ಇರುವವನು. ಇವನು ಪುರಾಣ ಪುರುಷ. ಮಹಾಯೋಗಿ. ಸೃಷ್ಟಿ-ಸ್ಥಿತಿ ಕರ್ತೃ. ಸ್ವಯಂ ಜ್ಯೋತಿ. ನಿರಂಜನ, ಇಂತಹ ಮಹಾಪುರುಷನಾದ ವಿಷ್ಣುವಿಗೆ ಶರಣಾಗತರಾಗಿರಿ.'' ಇದನ್ನು ಕೇಳಿ ವಿಷ್ಣುಮಾಯೆಯಿಂದ ಮೋಹಿತನಾದ, ಮಹಾನೀಚ ಹಿರಣ್ಯಕಶಿಪು ಹೇಳಿದನು. ''ಈ ನರಸಿಂಹನ ಪರಾಕ್ರಮ ಅತ್ಯಲ್ಪ. ಯಮನ ಪ್ರೇರಣೆಯಿಂದಲೇ ಈಗ ನಮ್ಮ ಮನೆಗೆ ಬಂದಿದ್ದಾನೆ. ಇವನು ಸರ್ವಾತ್ಮನಾ ವಧ್ಯ''. ಶುದ್ಧಮತಿಯಾದ ಪ್ರಹ್ಲಾದನು ನಕ್ಕು ತಂದೆಗೆ ಹೇಳಿದನು. ''ಸರ್ವರ ನಿಯಾಮಕನಾದ ಈ ದೇವನನ್ನು ನಿಂದಿಸುವುದು ಸರಿಯಲ್ಲ; ಶಾಶ್ವತನೂ, ಕಾಲನಿಯಾಮಕನೂ ಆದ, ಕಾಲದ ಪ್ರಭಾವಕ್ಕೆ ಒಳಗಾಗದವನೂ ಆದ ಇವನನ್ನು ಕಾಲನಾಮಕನಾದ ಯಮನು ಕೊಲ್ಲುವುದಾದರೂ ಹೇಗೆ?'' ಹೀಗೆ ಪುತ್ರ ಪ್ರಹ್ಲಾದನಿಂದ ತಡೆಯಲ್ಪಟ್ಟರೂ ಹಿರಣ್ಯಕಶಿಪು ಶ್ರೀಹರಿಯ ಜೊತೆ ಯುದ್ಧಮಾಡಿದನು. ಕೋಪದಿಂದ ಉಗ್ರವಾದ ಕಣ್ಣಿನ ಶ್ರೀಹರಿಯು ಉಗುರುಗಳಿಂದ ಹಿರಣ್ಯಕಶಿಪುವನ್ನು

ಪ್ರಹ್ಲಾದನು ನೋಡುತ್ತಿದ್ದಂತೆಯೇ ಸೀಳಿದನು. ಇದನ್ನು ನೋಡಿ ಹಿರಣ್ಯಾಕ್ಷ ಭಯದಿಂದ ಪ್ರಹ್ಲಾದನನ್ನು ಬಿಟ್ಟು ಓಡಿಹೋದನು. ಆ ಕ್ಷಣದಲ್ಲಿ ನರಸಿಂಹನ ಶರೀರದಿಂದ ನೂರಾರು ಸಿಂಹಗಳು ಉದ್ಭವಿಸಿದವು. ಅವುಗಳು ಪ್ರಹ್ಲಾದನ ಸೋದರರಾದ ಅನುಹ್ರಾದ ಮೊದಲಾದವರನ್ನೂ, ಬೇರೆ ಅಸುರರನ್ನೂ ಸಂಹರಿಸಿದವು. ಅನಂತರ ಶ್ರೀ ಹರಿಯು ತನ್ನ ನರಸಿಂಹ ರೂಪವನ್ನು ಹಿಂತೆಗೆದುಕೊಂಡು ನಾರಾಯಣ ರೂಪದಿಂದ ಅಂತರ್ಧಾನ ನಾದನು. ಅನಂತರ ಪ್ರಹ್ಲಾದನು ಹಿರಣ್ಯಾಕ್ಷನಿಗೆ ಅಭಿಷೇಕವನ್ನು ಮಾಡಿಸಿದನು. ಅವನು ದೇವತೆಗಳನ್ನು ಯುದ್ಧದಲ್ಲಿ ಜಯಿಸಿ ಪೀಡಿಸಿದನು. ಮುನಿಗಳನ್ನೂ ಪೀಡಿಸಿದನು. ಶಿವನನ್ನು ತಪಸ್ಸಿನಿಂದ ಆರಾಧಿಸಿ ಅಂಧಕ ಎಂಬ ಮಹಾಪರಾಕ್ರಮಿಯಾದ ಮಗನನ್ನು ಪಡೆದು ದೇವತೆಗಳನ್ನೂ, ಮುನಿಗಳನ್ನೂ ಹಿಂಸಿಸಿದನು. ವೇದಗಳನ್ನು ಅಪಹರಿಸಿದನು. *(ವೇದಾಪಹಾರ ಎಂದರೆ ವೇದಾಭಿಮಾನಿ ದೇವತೆಗಳನ್ನು ನಿಷ್ಕ್ರಿಯಗೊಳಿಸುವುದು.)* ಆಗ ಬ್ರಹ್ಮ ಮೊದಲಾದ ದೇವತೆಗಳೆಲ್ಲರೂ ಕಾಂತಿಹೀನರಾಗಿ ಹರಿಯನ್ನು ಸಮೀಪಿಸಿ ಪ್ರಾರ್ಥಿಸಿದರು. ಶ್ರೀ ಹರಿಯು ಹಿರಣ್ಯಾಕ್ಷನ ವಧೋಪಾಯವನ್ನು ಆಲೋಚಿಸಿ ಶ್ವೇತವರಾಹ ರೂಪವನ್ನು ಧರಿಸಿದನು. ಹಿರಣ್ಯಾಕ್ಷನಿದ್ದಲ್ಲಿಗೆ ಹೋಗಿ ಅವನನ್ನು ಕೊಂದು ಕೋರೆಹಲ್ಲಿನಿಂದ ಭೂಮಿಯನ್ನು ಮೇಲೆತ್ತಿದನು. ಈ ಘಟನೆ ಈಗ ನಡೆಯುತ್ತಿರುವ ಕಲ್ಪದ ಆದಿಯಲ್ಲಿ ನಡೆಯಿತು. ವರಾಹ ರೂಪವನ್ನು ಹಿಂತೆಗೆದುಕೊಂಡು ಸ್ವಸ್ಥಾನಕ್ಕೆ ಹಿಂತಿರುಗಿದನು. ಹಿರಣ್ಯಾಕ್ಷವಧೆಯ ನಂತರ ವಿಷ್ಣು ಭಕ್ತನಾದ ಪ್ರಹ್ಲಾದನು ತನ್ನ ರಾಜ್ಯವನ್ನು ಆಳಿದನು. ಶಾಸ್ತ್ರೋಕ್ತವಿಧಿಯಂತೆ ದೇವತೆಗಳನ್ನೂ ವಿಷ್ಣುವನ್ನೂ ಆರಾಧಿಸಿದನು. ವಿಷ್ಣು ಮಹಿಮೆಯ ಪ್ರಭಾವದಿಂದ ಅವನ ರಾಜ್ಯಕ್ಕೆ ಶತ್ರುಗಳೇ ಇರಲಿಲ್ಲ.

ಒಮ್ಮೆ ಪ್ರಹ್ಲಾದನ ಮನೆಗೆ ಒಬ್ಬ ಬ್ರಾಹ್ಮಣನು ಬಂದನು. ಏನು ದೇವತೆಗಳ ಮಾಯೆಯೋ! ಪ್ರಹ್ಲಾದನು ಅವನನ್ನು ಮಾತನಾಡಿಸಲೇ ಇಲ್ಲ. ಅವಮಾನಿತನಾದ ತಾಪಸನು ಕೋಪದಿಂದ ಕೆಂಗಣ್ಣನಾಗಿ ರಾಜನನ್ನು "ಯಾವ ವೈಷ್ಣವ ಶಕ್ತಿಯ ಬಲದಿಂದ ಬ್ರಾಹ್ಮಣರನ್ನು ಅವಮಾನಿಸುತ್ತಿರುವಿಯೋ ಆ ಶಕ್ತಿಯು ನಿನ್ನಿಂದ ದೂರವಾಗಲಿ" ಎಂದು ಶಪಿಸಿ ದಾಪುಗಾಲಿನಿಂದ ನಿರ್ಗಮಿಸಿದನು. ಶಾಪದಿಂದಾಗಿ ಪ್ರಹ್ಲಾದನು ಮೋಹಕ್ಕೊಳಗಾಗಿ ಬ್ರಾಹ್ಮಣರನ್ನು ಬಾಧಿಸಿದನು. ಶ್ರೀಹರಿಯ ಬಗ್ಗೆ ಜ್ಞಾನವಿಲ್ಲದವನಾದನು. ತಂದೆಯ ವಧೆಯು ನೆನಪಿಗೆ ಬಂದು ಹರಿಯ ಮೇಲೆ ಕೋಪ ಮಾಡಿಕೊಂಡನು. ಅವರಿಬ್ಬರಿಗೂ ಬಹಳ ಘೋರವಾದ, ರೋಮಾಂಚನಕಾರಿಯಾದ ಯುದ್ಧವೇ ನಡೆಯಿತು. ಭಾರೀ ಯುದ್ಧಾನಂತರ ವಿಷ್ಣುವಿನಿಂದ ಪರಾಜಿತನಾದ ಪ್ರಹ್ಲಾದನಿಗೆ, ಹಿಂದಿನ ಸಂಸ್ಕಾರದಿಂದ ಪರಮಪುರುಷನಾದ ಹರಿಯ ಬಗ್ಗೆ ತತ್ವಜ್ಞಾನವು ಉಂಟಾಯಿತು. ಅವನಿಗೆ ಶರಣಾಗತನಾದನು. ಆಗಿನಿಂದ ದೈತ್ಯೇಂದ್ರ ಪ್ರಹ್ಲಾದನು ಪುರುಷೋತ್ತಮನಾದ ನಾರಾಯಣನಲ್ಲಿ ಪರಮಭಕ್ತಿಯಿಂದ ಮಹಾಯೋಗಸ್ಥಿತಿಯನ್ನೇ ತಲುಪಿದನು.

ಹೀಗೆ ಪ್ರಹ್ಲಾದನು ಹರಿಧ್ಯಾನ ನಿರತನಾದಾಗ ಹಿರಣ್ಯಾಕ್ಷನ ಮಗ ಅಂಧಕನು ರಾಜ್ಯಭಾರವನ್ನು ವಹಿಸಿಕೊಂಡನು. ಶಿವದೇಹದಿಂದ ಉದ್ಭವಿಸಿದ ಅಂಧಕನು ಒಮ್ಮೆ ಮಂದರಪರ್ವತದಲ್ಲಿ ನೆಲೆಸಿದ್ದ ಹಿಮಾಲಯನ ಮಗಳಾದ ಉಮೆಯನ್ನು ಕಾಮಿಸಿದನು.

## ಅಂಧಕನು ಉಮೆಯನ್ನು ಕಾಮಿಸಿದ ಸಂದರ್ಭ :

ಹಿಂದೆ ಗೃಹಸ್ಥಾಶ್ರಮಿಗಳಾದ ಸಾವಿರಾರು ಮುನಿಗಳು ಪವಿತ್ರವಾದ ದಾರುವನದಲ್ಲಿ ಶಿವನನ್ನು ಸಂತೋಷಪಡಿಸುವುದಕ್ಕಾಗಿ ತಪಸ್ಸನ್ನು ಮಾಡಿದರು. ಹೀಗೆ ಮಾಡುತ್ತಿರುವಾಗ ಒಮ್ಮೆ ಕಾಲಕ್ರಮದಿಂದ ಸರ್ವನಾಶಕರವಾದ ಭಾರಿ ಅನಾವೃಷ್ಟಿಯು ಉಂಟಾಯಿತು. ಮುನಿಗಳೆಲ್ಲರೂ ತಪೋನಿಧಿಯಾದ ಗೌತಮರ ಬಳಿ ಹೋಗಿ ಆಹಾರವನ್ನು ಬೇಡಿದರು. ಜ್ಞಾನಿಗಳಾದ ಗೌತಮರು ಅವರೆಲ್ಲರಿಗೂ ಮೃಷ್ಟಾನ್ನಭೋಜನವನ್ನೇ ಮಾಡಿಸಿದರು. ಎಲ್ಲರೂ ಸಂಕೋಚವಿಲ್ಲದೆ ಊಟ ಮಾಡಿದರು. ಹನ್ನೆರಡು ವರ್ಷಗಳ ನಂತರ ಚೆನ್ನಾಗಿ ಮಳೆಯಾಯಿತು. ಜಗತ್ತು ಹಿಂದಿನ ಸ್ಥಿತಿಯನ್ನು ಪಡೆಯಿತು. ಅನಂತರ ಮುನಿಗಳೆಲ್ಲರೂ ಸಮಾಲೋಚಿಸಿ ತಾವು ತಮ್ಮ ಸ್ಥಾನಗಳಿಗೆ ಹಿಂದಿರುಗಲು ಅನುಮತಿ ಕೊಡಬೇಕೆಂದು ಗೌತಮರನ್ನು ಪ್ರಾರ್ಥಿಸಿದರು. ''ಸ್ವಲ್ಪ ಕಾಲ ತಮ್ಮ ಆಶ್ರಮದಲ್ಲಿಯೇ ಸುಖವಾಗಿದ್ದು ಅನಂತರ ಹೋಗಬೇಕು'' ಎಂದು ಗೌತಮರು ಹೇಳಿದರು. ಆಗ ಆ ಮುನಿಗಳೆಲ್ಲರೂ ಕಪ್ಪುಬಣ್ಣದ ಮಾಯಾಹಸುವನ್ನು ಸೃಷ್ಟಿಸಿ ಮಹಾತ್ಮರಾದ ಗೌತಮರ ಬಳಿ ಕರೆದುಕೊಂಡು ಹೋದರು. ಗೌತಮರು ಬಡಕಲಾಗಿದ್ದ ಆ ಹಸುವನ್ನು ನೋಡಿ ದಯೆತುಂಬಿದವರಾಗಿ ಅದನ್ನು ರಕ್ಷಿಸುವುದಕ್ಕೋಸ್ಕರ ತಮ್ಮ ಕೊಟ್ಟಿಗೆಗೆ ಕರೆದೊಯ್ದರು. ಗೌತಮರು ಮುಟ್ಟುತ್ತಿದ್ದಂತೆಯೇ ಆ ಹಸು ಸತ್ತು ಹೋಯಿತು. ಶೋಕ ಮೂಢರಾದ ಗೌತಮರಿಗೆ ಏನು ಮಾಡಬೇಕೆಂದು ತೋಚದಂತಾಯಿತು. ಮುನಿಗಳೆಲ್ಲರೂ ಹೇಳಿದರು ''ನಿಮ್ಮ ಶರೀರದಲ್ಲಿ ಗೋವಧೆಯ ಪಾಪ ಇರುವವರೆಗೆ ನಿಮ್ಮ ಅನ್ನವನ್ನು ಊಟ ಮಾಡಬಾರದು. ಆದ್ದರಿಂದ ನಾವೇ ಸ್ವ-ಇಚ್ಛೆಯಿಂದ ಇಲ್ಲಿಂದ ಹೋಗುತ್ತೇವೆ'' ಎಂದರು. ಗೌತಮರನ್ನು ಪಾಪಕ್ಕೆ ಗುರಿ ಮಾಡಿದ ಅವರೆಲ್ಲರೂ, ಅವರ ಅನುಮತಿಯಿಂದ ದಾರುವನಕ್ಕೆ ಹೋದರು. ಅನಂತರ ತಮ್ಮಲ್ಲಿದ್ದ ಮುನಿಗಳ ಕಪಟದಿಂದಲೇ ತಾವು ಗೋವಧೆಯ ಪಾಪಕ್ಕೆ ಗುರಿಯಾದದ್ದು ಎಂದು ಹೇಗೋ ತಿಳಿದ ಗೌತಮರು ಕೋಪಾವಿಷ್ಟರಾಗಿ ಅವರನ್ನು ''ವೇದಾಧ್ಯಯನರಹಿತರಾಗಿ, ಮಹಾಪಾತಕಿಗಳಾಗುತ್ತಾರೆ'' ಎಂದು ಶಪಿಸಿದರು. ಈ ಶಾಪದಿಂದಾಗಿ ಬ್ರಾಹ್ಮಣರೆಲ್ಲರೂ ವೇದಾಭ್ಯಾಸವಿಲ್ಲದ ಬಹುಜನ್ಮಗಳನ್ನು ಕಳೆದರು. ಒಮ್ಮೆ ತಮ್ಮ ದುಃಸ್ಥಿತಿಯಿಂದ ನೊಂದು ಬೆಂದು ದೇವೇಶನಾದ ಶಂಕರನನ್ನೂ, ಶಾಶ್ವತನಾದ ವಿಷ್ಣುವನ್ನೂ ಸಮೀಪಿಸಿ ಲೌಕಿಕಸ್ತೋತ್ರಗಳಿಂದ ಭಕ್ತರ ಕಷ್ಟವನ್ನು ಪರಿಹಾರ ಮಾಡುವ ದೇವತೆಗಳಿಬ್ಬರನ್ನೂ ಸ್ತೋತ್ರಮಾಡಿದರು.

ಆಗ ಶಂಕರನು ಪಕ್ಕದಲ್ಲಿದ್ದ ವಿಷ್ಣುವನ್ನು ''ಸದ್ಗತಿಯನ್ನು ಬಯಸುತ್ತಿರುವ ಈ ಬ್ರಾಹ್ಮಣರಿಗಾಗಿ ಏನು ಮಾಡಬೇಕು'' ಎಂದು ಕೇಳಿದನು. ಅನಂತರ ಭಕ್ತವತ್ಸಲನೂ

ಶರಣ್ಯನೂ ಆದ ಭಗವಾನ್ ವಿಷ್ಣುವು ಶರಣಾಗತರಾದ ಬ್ರಾಹ್ಮಣರನ್ನು ನೋಡಿ ನಂದೀಶ್ವರನಾದ ಶಿವನಿಗೆ ಹೇಳಿದನು. "ವೇದಾಧ್ಯಯನ ಮಾಡದವರಿಗೆ ಸದ್ಗತಿ ಖಂಡಿತ ಆಗುವುದಿಲ್ಲ. ವೇದವೇ ಧರ್ಮದ ಮೂಲ. ಆದರೂ ಭಕ್ತಪ್ರಿಯರಾದ ನಾವು ಇವರನ್ನು ರಕ್ಷಿಸಬೇಕು. ಇಲ್ಲದಿದ್ದರೆ ನರಕಕ್ಕೆ ಹೋಗಿಬಿಡುತ್ತಾರೆ. ಆದ್ದರಿಂದ ವೇದಾಧ್ಯಯನ ಮಾಡದ ಸಜ್ಜನರ ರಕ್ಷಣೆಗಾಗಿ ಮತ್ತು ಪಾಪಿಗಳಿಗೆ ಮೋಹವುಂಟುಮಾಡುವುದಕ್ಕಾಗಿ ಶಾಸ್ತ್ರಗಳನ್ನು ರಚಿಸೋಣ."

ಹೀಗೆ ಮುರಾರಿಯಾದ ಮಾಧವ (ವಿಷ್ಣು) ನಿಂದ ಪ್ರೇರಿತನಾದ ಶಿವ ಮತ್ತು ಅವನಿಂದ ಪ್ರೇರಿತನಾದ ಹರಿ ಕಾಪಾಲ, ನಾಕುಲ, ವಾಮ, ಭೈರವ, ಪಾಶುಪತ ಶಾಸ್ತ್ರಗಳನ್ನು ಮತ್ತು ಪೂರ್ವಪಶ್ಚಿಮ ಪಾಂಚರಾತ್ರ ಎಂಬ ಶಾಸ್ತ್ರಗಳನ್ನು ಅನುಕ್ರಮವಾಗಿ ರಚಿಸಿದರು. ರಚಿಸಿ ಆ ಬ್ರಾಹ್ಮಣರಿಗೆ ಹೇಳಿದರು. "ನೀವು ವೇದಬಾಹ್ಯರಾಗಿ ಮೋಹಕಶಾಸ್ತ್ರಗಳಲ್ಲಿ ಹೇಳಿದ್ದನ್ನು ಮಾಡುತ್ತಾ ದೀರ್ಘಕಾಲ ನರಕದಲ್ಲಿ ಬಿದ್ದು ಮತ್ತೆ ಮನುಷ್ಯಲೋಕದಲ್ಲಿ ಹುಟ್ಟುತ್ತೀರಿ. ಹೀಗೆ ಮತ್ತೆ ಮತ್ತೆ ಆಗುತ್ತದೆ. ಕೊನೆಗೊಮ್ಮೆ ಶ್ರೀಹರಿಯ ಆರಾಧನೆಯ ಬಲದಿಂದ ಸದ್ಗತಿಯನ್ನು ಪಡೆಯುವಿರಿ. ನಿಮಗೆ ಬೇರೆ ಪ್ರಾಯಶ್ಚಿತ್ತವೇ ಇಲ್ಲ." ಹೀಗೆ ಶಿವ-ವಿಷ್ಣುಗಳಿಂದ ಪ್ರೇರಿತ ರಾದ ಆ ಬ್ರಾಹ್ಮಣರು ಆ ಶಾಸ್ತ್ರಗಳನ್ನು ಕಲಿತು ಅವುಗಳಲ್ಲೇ ನಿರತರಾಗಿ ಬೇರೆ ಶಾಸ್ತ್ರಗಳನ್ನು ರಚಿಸಿದರು. ಶಿಷ್ಯರಿಗೆ ಕಲಿಸಿದರು. ಅವುಗಳಲ್ಲಿ ಹೇಳಿದ ಫಲವನ್ನು ತೋರಿಸಿದರು.

ಈ ಸಮಯದಲ್ಲೇ ಲೋಕವನ್ನು ಮೋಹಗೊಳಿಸುವುದಕ್ಕಾಗಿ ಶಿವನು ಭೂಮಿಯಲ್ಲಿ ಅವತರಿಸಿದನು. ಕಪಾಲ ಮಾಲೆಯನ್ನು ಧರಿಸಿ ಸತ್ತವರ ಬೂದಿಯನ್ನು ಬಳಿದುಕೊಂಡು, ಜಟೆಯನ್ನು ಕಟ್ಟಿಕೊಂಡು ಬ್ರಾಹ್ಮಣರ ಜೊತೆ ಭಿಕ್ಷೆ ಬೇಡಿದನು. ಹೀಗೆ ಅವತರಿಸುವಾಗ ತನ್ನ ಪತ್ನಿ ಪಾರ್ವತಿಯನ್ನು, ಮಗನನ್ನೂ ಅಮಿತ ಪರಾಕ್ರಮಿಯಾದ ವಿಷ್ಣುವಿನ ಬಳಿ ರಕ್ಷಣೆಗಾಗಿ ಬಿಟ್ಟು ಬಂದನು. ಇಂದ್ರ ಮೊದಲಾದ ದೇವತೆಗಳನ್ನು ತನ್ನ ಪ್ರಮಥಗಣವನ್ನೂ ಮಹಾವಿಷ್ಣುವಿನ ಬಳಿಯೇ ಬಿಟ್ಟಿದ್ದನು.

ಹೀಗೆ ಶಿವನು ಭೂಲೋಕಕ್ಕೆ ಹೋಗಿದ್ದಾಗ ವಿಷ್ಣುವು ಸ್ತ್ರೀರೂಪಧಾರಿಯಾಗಿ ಪಾರ್ವತಿಯ ಸೇವೆಯನ್ನು ತಪ್ಪದೆ ಮಾಡಿದನು. ಚತುರ್ಮುಖ ಬ್ರಹ್ಮ, ಅಗ್ನಿ, ಇಂದ್ರ, ಯಮ, ಮೊದಲಾದ ಎಲ್ಲ ದೇವತೆಗಳೂ ಸ್ತ್ರೀರೂಪಗಳನ್ನು ಧರಿಸಿ ಪಾರ್ವತಿಯ ಸೇವೆಯನ್ನು ಮಾಡಿದರು. ಶಿವನಿಗೆ ಅತ್ಯಂತ ಪ್ರಿಯನಾದ ನಂದೀಶ್ವರನು ಎಂದಿನಂತೆ ಪಾರ್ವತಿಯ ಮನೆಯ ಬಾಗಿಲು ಕಾಯ್ದನು.

## ಅಂಧಕನ ಉಮಾಪಹಾರ ಪ್ರಯತ್ನ :

ಈ ಸಂದರ್ಭದಲ್ಲಿ ದುರ್ಮತಿಯ ದೈತ್ಯ ಅಂಧಕನು ಉಮೆಯನ್ನು ಅಪಹರಿಸುವುದಕ್ಕಾಗಿ ಮಂದರ ಪರ್ವತಕ್ಕೆ ಬಂದನು.

## ಅಂಧಕ - ಭೈರವ ಯುದ್ಧ :

ಯಮ ಭಯಂಕರನೂ, ಕಾಲ ರೂಪಧರನೂ ಆದ ಶಂಕರ ಕಿಂಕರನಾದ ಕಾಲಭೈರವ ಅಂಧಕನನ್ನು ತಡೆದನು. ಅವರಿಬ್ಬರಿಗೂ ಬಹಳ ಘೋರವಾದ, ರೋಮಾಂಚನಕಾರಿಯಾದ ಯುದ್ಧವು ನಡೆಯಿತು. ಶಿವಶಕ್ತಿಯುತನಾದ ಭೈರವನು ತನ್ನ ಶೂಲದಿಂದ ಅಂಧಕನ ಎದೆಗೆ ಹೊಡೆದನು. ಆಗ ಅಂಧಕ ಎಂಬ ಹೆಸರಿನ ಸಾವಿರ ದೈತ್ಯರು ಆವಿರ್ಭವಿಸಿದರು. ನಂದೀಶ್ವರ ಮೊದಲಾದವರು ಈ ದೈತ್ಯರಿಂದ ಪರಾಜಿತರಾದರು. ಘಂಟಾಕರ್ಣ, ಮೇಘನಾದ, ಚಂಡೇಶ, ಚಂಡತಾಪನ, ವಿನಾಯಕ, ಮೇಘವಾಹ, ಸೋಮನಂದೀ ವೈದ್ಯುತ ಮೊದಲಾದ ಮಹಾಬಲಶಾಲಿಗಳು ಶೂಲ, ಶಕ್ತಿ, ಋಷ್ಟಿ, ಪರ್ವತಶಿಖರ, ಕೊಡಲಿ - ಈ ಆಯುಧಗಳಿಂದ ಅಂಧಕನ ಮೇಲೆರಗಿ ಯುದ್ಧ ಮಾಡಿದರು. ಅಂಧಕನು ಇವರ ಕಾಲುಗಳನ್ನು ತನ್ನ ಎರಡು ಕೈಗಳಿಂದ ಹಿಡಿದು ಗಿರಗಿರ ತಿರುಗಿಸಿ ಎಸೆದನು. ಎಸೆಯಲ್ಪಟ್ಟವರು ನೂರು ಯೋಜನ ದೂರ ಬಿದ್ದರು. ಅನಂತರ ಪ್ರಲಯಕಾಲದ ಸೂರ್ಯರಂತೆ ಉಗ್ರರಾಗಿದ್ದ ಸಾವಿರಾರು ಅಂಧಕರು ಭೈರವನನ್ನು ಆಕ್ರಮಿಸಿದರು. ಹಾ! ಹಾ! ಎಂಬ ಭಯಂಕರವಾದ ಶಬ್ದವು ಎಲ್ಲ ಕಡೆ ಎದ್ದಿತು. ಭೈರವನು ಶೂಲವನ್ನು ಹಿಡಿದು ಭಯಂಕರವಾಗಿ ಯುದ್ಧ ಮಾಡಿದನು. ಆದರೆ ಭೈರವನು ಪರಾಜಿತನಾದನು. ಪರಾಜಿತನಾಗಿ ಸರ್ವಸಮರ್ಥನಾದ ವಿಷ್ಣುವಿಗೆ ಶರಣಾಗತನಾದನು. ಭಗವಾನ್ ವಿಷ್ಣುವು ಉತ್ತಮರಾದ ನೂರಾರು ದೇವಿಯರನ್ನು ಸೃಷ್ಟಿಸಿದನು. ದೇವಿಯರ ಪಕ್ಕದಲ್ಲಿ ದೇವನು ನಿಂತನು. ದೇವಿಯರು ಆ ಸಾವಿರಾರು ಅಂಧಕರನ್ನು ಸಂಹರಿಸಿದರು. ಶ್ರೀಹರಿಯ ಮಹಿಮೆಯಿಂದ ಅನಾಯಾಸವಾಗಿ ತನ್ನ ಸೈನ್ಯವು ನಾಶಮಾಡಲ್ಪಟ್ಟದ್ದನ್ನು ನೋಡಿದ ಅಂಧಕನು ಮಹಾವೇಗದಿಂದ ಪಲಾಯನ ಮಾಡಿದನು.

ಹನ್ನೆರಡು ವರ್ಷಗಳ ಅನಂತರ ಶಿವನು ಭೂಲೋಕದಿಂದ ಮಂದರ ಪರ್ವತಕ್ಕೆ ಹಿಂತಿರುಗಿದನು. ಶಿವನು ಬಂದಿರುವುದನ್ನು ತಿಳಿದ ಎಲ್ಲ ಗಣೇಶ್ವರರೂ, ಸೂರ್ಯೋಪಸ್ಥಾನವನ್ನು ಮಾಡುವ ದ್ವಿಜರಂತೆ, ಶಿವನನ್ನು ಸಮೀಪಿಸಿ ನಮಸ್ಕರಿಸಿದರು. ಶಿವನು ಯೋಗಿಗಳಲ್ಲದವರು ಸಮೀಪಿಸಲಾಗದ ಪವಿತ್ರವಾದ ಹರಿಭವನವನ್ನು ಪ್ರವೇಶಿಸಿ ನಂದೀಶ್ವರನನ್ನು, ಭೈರವನನ್ನು, ವಿಷ್ಣುವನ್ನು ನೋಡಿದನು. ನಮಸ್ಕಾರ ನಿರತನಾದ ನಂದೀಶ್ವರನನ್ನು ಮೊದಲು ನಮಸ್ಕರಿಸಿ ಅನಂತರ ಪ್ರೀತಿಯಿಂದ ಶ್ರೀಹರಿಯನ್ನು ಆಲಿಂಗಿಸಿದನು. ಅನಂತರ ಸಂತೋಷದಿಂದ ಅರಳಿದ ಕಣ್ಣುಗಳುಳ್ಳ ಮಹಾದೇವಿ ಉಮೆಯನ್ನು ನೋಡಿದನು. ಅನಂತರ ಭೈರವನು ಶಿವ-ಪಾರ್ವತಿಯರ ಪಾದಗಳಿಗೆ ನಮಸ್ಕರಿಸಿ ವಿಷ್ಣು ಮಹಿಮಾರೂಪದ ಜಯವನ್ನು ನಿವೇದಿಸಿ ಪಕ್ಕದಲ್ಲಿ ನಿಂತನು.

ಅಂಧಕರ ಮೇಲೆ ಸಾಧಿಸಿದ ಆ ವಿಜಯವನ್ನೂ, ಶ್ರೀಹರಿಯ ಮಹಿಮೆಯನ್ನೂ ಕೇಳಿದ ಶಿವನು ದೇವಿಯ ಜೊತೆ ಕುಳಿತಿದ್ದನು. ಆಗಲೇ, ಎಲ್ಲ ದೇವತೆಗಳೂ ಮರೀಚಿ ಮೊದಲಾದ ದ್ವಿಜರೂ ತ್ರಿಲೋಚನನ ದರ್ಶನಕ್ಕಾಗಿ ಅಲ್ಲಿಗೆ ಬಂದರು. ದೈತ್ಯಸೈನ್ಯವನ್ನು ಸೋಲಿಸಿದ ಆ

ದೇವಿಯರು ಶಿವದರ್ಶನಕ್ಕಾಗಿ ಅಲ್ಲಿಗೆ ಬಂದರು. ಉಮೆಯ ಜೊತೆ ಕುಳಿತಿದ್ದ ಆ ಚಂದ್ರಶೇಖರನನ್ನು ನೋಡಿ ಆದರದಿಂದ ನಮಸ್ಕರಿಸಿ, ಭಾವುಕರಾಗಿ ಹಾಡಿದರು. ಶಿವನ ಎಡಪಾರ್ಶ್ವದಲ್ಲಿದ್ದ ಉಮೆಯನ್ನೂ ನಮಸ್ಕರಿಸಿದರು.

ಶಿವನ ಜೊತೆ ಕುಳಿತಿದ್ದ ನಾರಾಯಣನ ಮನಸ್ಸಂಜಾತಳಾದ ಉಮೆಯನ್ನೂ *(ಬೇರೆ)* ಸಿಂಹಾಸನದಲ್ಲಿ ಕುಳಿತಿರುವ ನಾರಾಯಣನನ್ನೂ ನೋಡಿ ದೇವಿಯರು ಶಿವನನ್ನು ನಮಸ್ಕರಿಸಿ ಕೇಳಿದರು.

ಕಾಂತಿಯಿಂದ ಶೋಭಿಸುತ್ತಿರುವ ನೀನು ಯಾರು? ಈ ಸೂರ್ಯಪ್ರಭೆಯಿದ ಕೂಡಿದ ಈ ಬಾಲೆ ಯಾರು? ಕಮಲದಂತೆ ವಿಶಾಲಾಕ್ಷದಿಂದ ಶೋಭಿಸುವ ಶರೀರದ ಈ ಪುರುಷ ಯಾರು?

ವೃಷಭವಾಹನನೂ, ಮಹಾಯೋಗಿಯೂ, ಭೂತಾಧಿಪತಿಯೂ ನಿರ್ವಿಕಾರನೂ ಆದ ಶಿವನು ಹೇಳಿದನು :

**ಶಿವನ ಉಪದೇಶ :**

''ಇವನು ನಾರಾಯಣ, ಇವಳು ಜಗನ್ಮಾತೆಯಾದ ಗೌರಿ. ಸನಾತನದೇವನಾದ ಈಶ್ವರನು ಬಹುರೂಪಗಳನ್ನು ಹೊಂದಿದ್ದಾನೆ. ನನ್ನ ಪರತತ್ತ್ವವನ್ನು ದೇವತೆಗಳೂ ತಿಳಿದಿಲ್ಲ, ಮಹರ್ಷಿಗಳೂ ತಿಳಿದಿಲ್ಲ. ವಿಶ್ವರೂಪಿಯಾದ ನಾನೊಬ್ಬನು ತಿಳಿದಿದ್ದೇನೆ. ಭವಾನಿಯು ತಿಳಿದಿದ್ದಾಳೆ. ವಿಷ್ಣುವೂ ತಿಳಿದಿದ್ದಾನೆ. ನಾನು ನಿಃಸ್ಪೃಹ, ಶಾಂತ, ಅದ್ವಿತೀಯ ಅಥವಾ ಸ್ವತಂತ್ರ, ಪರಿಗ್ರಹ ರಹಿತ ಅಥವಾ ಪರಾವಲಂಬಿಯಲ್ಲ. ನನ್ನನ್ನೇ ಕೇಶವ ಎಂದು ಉಮೆಯನ್ನೇ ಲಕ್ಷ್ಮೀ ಎಂದೂ ಹೇಳುತ್ತಾರೆ ಈ ನಾನೇ ಜಗನ್ನಿರ್ಮಾತೃವೂ, ಪಾಲಕನೂ ಆಗಿದ್ದೇನೆ. ಕಾರಣವೂ - ಕಾರ್ಯವೂ ಆಗಿದ್ದೇನೆ. ವಿಷ್ಣುವೇ ಎಲ್ಲ ಕೆಲಸಗಳನ್ನೂ ಮಾಡುವವನು. ಮಾಡಿಸುವವನೂ, ಭೋಗ-ಮುಕ್ತಿಗಳನ್ನು ಕೊಡುವವನೂ ಆಗಿದ್ದಾನೆ. ಇವನೇ ಭೋಕ್ತೃಪುರುಷನೂ, ಅಪ್ರಮೇಯನೂ, ಕಾಲರೂಪಧಾರಿಯಾಗಿ ಸಂಹಾರಕನೂ ಆಗಿದ್ದಾನೆ. ವಿಶ್ವತೋಮುಖನೂ, ವಿಶ್ವಾಂತರ್ಯಾಮಿಯೂ ಆದ ವಾಸುದೇವನೇ ಸೃಷ್ಟಿಕರ್ತನೂ, ಪಾಲಕನೂ ಆಗಿದ್ದಾನೆ. ಇವನೇ ಈ ನಾರಾಯಣ. ಇವನೇ ಆಕಾಶದಂತೆ ನಿರ್ವಿಕಾರ, ಅಕ್ಷರ, ವ್ಯಾಪಿ, ಯೋಗಿ ಮತ್ತು ಅವ್ಯಯ. ಇವನೇ ತಾರಕಪುರುಷ ನಿಯಾಮಕ. ಸರ್ವೋತ್ತಮ ಸ್ಥಾನ.

ಮಾಹೇಶ್ವರಿಯಾದ ಈ ಗೌರಿ ನನ್ನ ಶಕ್ತಿ. ದೋಷರಹಿತಳೂ, ಶಾಂತಳೂ, ಸತ್ಯಸ್ವರೂಪಳೂ, ಸದಾನಂದಸ್ವರೂಪಳೂ, ಸರ್ವೋತ್ತಮಸ್ಥಾನವುಳ್ಳವಳೂ ಆಗಿದ್ದಾಳೆ. ಹೀಗೆಂದು ಶ್ರುತಿಗಳು ಹೇಳುತ್ತವೆ. ಇವಳಿಂದಲೇ ಈ ಜಗತ್ತು ಹುಟ್ಟುತ್ತದೆ. ಇವಳಲ್ಲೇ ಲಯವನ್ನು ಹೊಂದುತ್ತದೆ. ಇವಳೇ ಎಲ್ಲರಿಗೂ ಶ್ರೇಷ್ಠ ಆಶ್ರಯ. ಸ್ವತಂತ್ರನೂ, ನಿರ್ದೋಷನೂ, ಸರ್ವೋತ್ತಮನೂ ಆದ ನಾನು ಇವಳಿಂದ ಅವಿಭಕ್ತನಾಗಿದ್ದೇನೆ. ನಾನು ಅವ್ಯಯನಾದ

ಪರಮಾತ್ಮನನ್ನು ಪೂರ್ಣವಾಗಿ ತಿಳಿದಿದ್ದೇನೆ. ಆದ್ದರಿಂದ ಅನಾದಿಯೂ, ಅದ್ವಿತೀಯವೂ, ಅಂತರ್ಯಾಮಿಯೂ ಆದ ವಿಷ್ಣುವನ್ನೂ, ಈಶ್ವರನನ್ನೂ ಒಂದೇ ಎಂದು ತಿಳಿಯಿರಿ. ಅದರಿಂದ ಮುಕ್ತಿಯನ್ನು ಹೊಂದುವಿರಿ. ಶ್ರದ್ಧಾವಂತರು ನನ್ನನ್ನೇ ವಿಷ್ಣು ಎಂದು ತಿಳಿಯುತ್ತಾರೆ. ಯಾರು ಭಿನ್ನದೃಷ್ಟಿಯಿಂದ ಪೂಜಿಸುತ್ತಾರೋ ಅವರು ನನಗೆ ಪ್ರಿಯರಲ್ಲ. ಜಗಜ್ಜನ್ಮಾದಿ ಕಾರಣನಾದ ಪರಮಾತ್ಮನನ್ನು ಯಾರು ದ್ವೇಷಿಸುತ್ತಾರೋ ಅವರು ರೌರವಾದಿನರಕಗಳಲ್ಲಿ ಬೇಯುತ್ತಾ ಕೋಟಿ ಕೋಟಿ ವರ್ಷಗಳಾದರೂ ಬಿಡುಗಡೆಯನ್ನು ಪಡೆಯುವುದಿಲ್ಲ. ಆದ್ದರಿಂದ ವಿಷ್ಣು ಎಲ್ಲ ಚರಾಚರಗಳ ರಕ್ಷಕ, ಅವ್ಯಯ ಎಂದು ಸರಿಯಾಗಿ ತಿಳಿದು ಎಲ್ಲ ಆಪತ್ತುಗಳಲ್ಲಿ ಕೂಡ ಅವನನ್ನು ಚಿಂತಿಸಬೇಕು.''

ಶಿವನ ಮಾತನ್ನು ಕೇಳಿ ಎಲ್ಲ ದೇವತೆಗಳೂ, ಗಣೇಶ್ವರರೂ, ದೇವ ನಾರಾಯಣನನ್ನೂ, ದೇವಿ ಪಾರ್ವತಿಯನ್ನೂ ನಮಸ್ಕರಿಸಿದರು. ಭಕ್ತಜನಪ್ರಿಯನಾದ ಶಿವನಲ್ಲೂ, ಉಮೆಯ ಪಾದಗಳಲ್ಲೂ ನಾರಾಯಣನ ಪಾದಕಮಲಗಳಲ್ಲೂ ಭಕ್ತಿಯನ್ನು ಪ್ರಾರ್ಥಿಸಿದರು. ಅನಂತರ ಜಗಜ್ಜನ್ಮಾದಿಕಾರಣನಾದ ನಾರಾಯಣನು ಅದೃಶ್ಯನಾದನು. ಅದು ಅದ್ಭುತವಾಗಿತ್ತು.

ಈ ಮಧ್ಯೆ ಕಾಮದಿಂದ ಕುರುಡಾದ ಮಹಾದೈತ್ಯ ಅಂಧಕನು ಮೋಹವಶನಾಗಿ ಪಾರ್ವತಿಯನ್ನು ಅಪಹರಿಸಲು ಮಂದರ ಪರ್ವತಕ್ಕೆ ಬಂದನು. ಆಗಲೇ ಅನಂತರೂಪನಾದ ನಿರ್ಮಲನೂ, ಯೋಗಿಯೂ ಪುರುಷೋತ್ತಮನೂ ಆದ ನಾರಾಯಣನು ದೈತ್ಯರ ಜೊತೆ ಯುದ್ಧಕ್ಕಾಗಿ ಅಲ್ಲಿಗೆ ಬಂದನು.

ಭಗವಾನ್ ವಿಷ್ಣುವನ್ನು ಪಕ್ಕದಲ್ಲಿಟ್ಟುಕೊಂಡು ಗಣಪ್ರಮುಖರು ದೇವ ಪ್ರಮುಖರು, ನಂದಿಕೇಶ್ವರ ಮತ್ತು ಮಾತೃಕಾದೇವತೆಗಳು ಇವರೊಂದಿಗೆ ಕಾಲರುದ್ರನು *(ಭೈರವನು)* ಅಂತಕ ಸ್ವರೂಪದಿಂದ ಯುದ್ಧಕ್ಕೆ ಹೋದನು. ದೇವದೇವನಾದ ಭೈರವರೂಪಿ ಶಿವನು ಅಗ್ನಿಯಂತಹ ತ್ರಿಶೂಲವನ್ನು ಹಿಡಿದುಕೊಂಡು ಮುಂದೆ ಹೊರಟನು. ಗಣರಾಜರೂ, ಸಹಸ್ರಬಾಹುವಾದ ವಿಷ್ಣುವು ಅವನನ್ನು ಹಿಂಬಾಲಿಸಿ ಹೋದರು. ವಾಹನರಹಿತನಾಗಿ ದೇವತೆಗಳ ಮಧ್ಯೆ ಹೋಗುತ್ತಿರುವ ಕಮಲದ ಎಲೆಯಂತಹ ವರ್ಣದ ಭಗವಾನ್ ಶಿವನು ಮೇರು ಪರ್ವತದ ಶಿಖರವನ್ನು ಏರಿರುವ ಮೂರುಲೋಕವನ್ನೂ ನೋಡುತ್ತಿರುವ ಸೂರ್ಯನಂತೆ ಶೋಭಿಸಿದನು. ಅನಾದಿಯಾದ ಭಗವಾನ್ ಶಿವನು ಸಾವಿರಾರು ರೂಪ ಗಳನ್ನು ಪಡೆದು ಕೈಯಲ್ಲಿ ತ್ರಿಶೂಲವನ್ನು ಹಿಡಿದು ಕಾಣಿಸಿಕೊಂಡನು. ಆಗ ಅವನ ಮೇಲೆ ಪುಷ್ಪವೃಷ್ಟಿಯಾಯಿತು. ಗಣನಾಯಕರಿಂದ ಆವೃತನಾಗಿ ಬಂದಿರುವ ಗಣನಾಯಕರ ರಾಜನಾದ, ದೈತ್ಯಶತ್ರು ಶಿವನನ್ನು ನೋಡಿ ಅಂಧಕನು ಇಂದ್ರ, ಮಾತೃಕಾಗಣ, ಎಲ್ಲ ಗಣಗಳು ಮತ್ತು ದೇವಪ್ರಮುಖರು - ಇವರೊಂದಿಗೆ ಯುದ್ಧ ಮಾಡಿದನು. ಸರ್ವಪೀಡಕನಾದ, ಅಮಿತ ಪರಾಕ್ರಮಿಯಾದ ಅಂಧಕನು ಬಾಹು ಬಲದಿಂದ ಎಲ್ಲರನ್ನೂ ಗೆದ್ದು ವಿಮಾನವೇರಿ ಸತ್ವಹೀನನಾದ ಭೈರವನಿದ್ದಲ್ಲಿಗೆ ಹೋದನು. ಬರುತ್ತಿರುವ ಅಂಧಕನನ್ನು ನೋಡಿ ಭಗವಾನ್

ವಿಷ್ಣುವು ವಿಭೂತಿಯಿಂದ ಅಲಂಕೃತನಾದ ಭಯಂಕರನಾದ ಮಹಾರುದ್ರ ದೇವರಿಗೆ ''ಲೋಕಕಂಟಕನಾದ ದೈತ್ಯೇಶ ಅಂಧಕನನ್ನು ಕೊಲ್ಲು; ನೀನಲ್ಲದೆ ಇನ್ಯಾರು ಇವನನ್ನು ಕೊಲ್ಲಲಾರರು. ನೀನು ಇಡೀ ಲೋಕವನ್ನೇ ವಿನಾಶ ಮಾಡುವ ಕಾಲ ಸ್ವರೂಪ; ಮಹಾ ಸಮರ್ಥ; ಜ್ಞಾನಿಗಳೂ ವೇದಮಂತ್ರಗಳಿಂದ ನಿನ್ನನ್ನು ಸ್ತುತಿಸುತ್ತಾರೆ'' ಎಂದು ಹೇಳಿದನು. ಹರನು ಹರಿಯ ಮಾತನ್ನು ಕೇಳಿ, ಅವನನ್ನು ನೋಡಿ ದೈತ್ಯೇಂದ್ರನ ಸಂಹಾರವನ್ನು ಮಾಡಲು ನಿರ್ಧರಿಸಿದನು. ಗಣಗಳಿಗೆ ಸಂತೋಷವನ್ನುಂಟು ಮಾಡುವ ದೇವಸೈನ್ಯವನ್ನು ಪ್ರವೇಶಿಸಿದನು. ಆಗ ಆಕಾಶಸಂಚಾರಿಗಳೆಲ್ಲರೂ ಭಯಂಕರ ರೂಪದಲ್ಲಿದ್ದ ರುದ್ರನನ್ನು ಸ್ತುತಿಸಿದರು. ''ಅನಂತ! ಮಹಾದೇವ! ಕಾಲಮೂರ್ತಿ! ಸನಾತನ! ನೀನು ಅಗ್ನಿ. ಎಲ್ಲ ಪದಾರ್ಥಗಳ ಒಳಗೆ ಇರುವಿ. ನೀನು ಅಂತಕ. ಸೃಷ್ಟಿಕರ್ತೃ. ಪಾಲಕ. ನೀನೇ ಹರಿ. ನೀನೇ ಬ್ರಹ್ಮ. ನೀನೇ ಮಹಾದೇವ. ನೀನೇ ಪರಮಪದ. ಓಂಕಾರಮೂರ್ತಿ. ತ್ರಿಲೋಚನ. ವೇದಗಮ್ಯ , ಮಹಾ-ವಿಭೂತಿ, ವಿಶ್ವೇಶ, ಜಗತ್ಪತಿಯೇ! ನಿನಗೆ ಜಯವಾಗಲಿ ಅನಂತರ ಪ್ರಲಯಾಗ್ನಿಯಂತೆ ಭಯಂಕರನಾಗಿದ್ದ ಶಿವನು ಅಂಧಕನನ್ನು ಹಿಡಿದು ತ್ರಿಶೂಲದ ತುದಿಯಲ್ಲಿ ಇಟ್ಟು ನರ್ತನ ಮಾಡಿದನು. ಶೂಲದ ತುದಿಗೆ ಸಿಕ್ಕಿದ್ದ ಅಂಧಕನನ್ನು ನೋಡಿ ಸಮಸ್ತ ದೇವತೆಗಳೂ ಸಂಸಾರ ಸಮೇತನಾದ ಶಿವನಿಗೆ ನಮಸ್ಕರಿಸಿದರು. ಮುನಿಗಳೂ, ಸಿದ್ಧರೂ ಸ್ತೋತ್ರಮಾಡಿದರು. ಗಂಧರ್ವರು ಕಿನ್ನರರು ಹಾಡಿದರು. ಅಂತರಿಕ್ಷದಲ್ಲಿ ಅಪ್ಸರೆಯರ ಸಮುದಾಯವು ನರ್ತನ ಮಾಡುತ್ತಿತ್ತು. ಶೂಲದ ತುದಿಗೆ ಏರಿಸಲ್ಪಟ್ಟ ಕಾರಣದಿಂದಲೇ ಅಂಧಕನ ಪಾಪಗಳೆಲ್ಲವೂ ಸುಟ್ಟು ಹೋಗಿ ಅವನಿಗೆ ಜ್ಞಾನೋದಯವಾಯಿತು. ಅವನು ಶಿವನನ್ನು ಸ್ತುತಿಸಿದನು.

### ಅಂಧಕನು ಮಾಡಿದ ಶಿವಸ್ತುತಿ :

ಪ್ರಾಜ್ಞರು ಯಾರನ್ನು ಪುರಾತನ ತತ್ವ , ಪವಿತ್ರ, ಅನಂತರೂಪವುಳ್ಳವನು, ಕಾಲಸ್ವರೂಪ, ಸರ್ವಜ್ಞ, ಯೋಗ-ವಿಯೋಗಗಳ ಕಾರಣ ಎಂದು ತಿಳಿದಿದ್ದಾರೋ ಅಂತಹ ಭಗವಂತನನ್ನು ಸ್ವಸ್ಥ ಮನಸ್ಸಿನಿಂದ ತಲೆಬಾಗಿಸಿ ನಮಸ್ಕರಿಸುತ್ತೇನೆ. ಕೋರೆಹಲ್ಲಿನಿಂದ ಕರಾಳನಾದ, ಆಕಾಶ ದಲ್ಲಿ ನರ್ತನ ಮಾಡುವ ಬಾಯಲ್ಲಿ ಅಗ್ನಿವುಳ್ಳ, ಜ್ವಲಿಸುತ್ತಿರುವ ಸೂರ್ಯನಂತಿರುವ ಸಾವಿರ ಪಾದ, ತಲೆಗಳನ್ನು ಹೊಂದಿರುವ ಸ್ವತಂತ್ರನಾದ ನಿನ್ನನ್ನು ನಮಸ್ಕರಿಸುತ್ತೇನೆ.

ದೇವಪೂಜಿತ ಪಾದ! ಪೂರ್ಣ! ನಿರ್ಮಲ ತತ್ವ ಸ್ವರೂಪ! ಆದಿದೇವ! ನೀನು ಉತ್ಕೃಷ್ಟನಾಗಿರುವಿ. ನೀನು ಅಗ್ನಿ, ಸ್ವತಂತ್ರ. ಬಾಹ್ಯಾಂತರ ರೂಪ ಪ್ರಭೇದಗಳಿಂದ ಬಹುವಿಧವಾಗಿ ಪೂಜ್ಯ. ಸರ್ವಾಂತರ್ಯಾಮಿ.

ನಿನ್ನನ್ನು ಪುರಾಣ ಪುರುಷ, ಆದಿತ್ಯವರ್ಣ, ತಮೋಗುಣವಿಲ್ಲದವನು, ಸ್ವತಂತ್ರ ಎಂದು ಜ್ಞಾನಿಗಳು ಹೇಳುತ್ತಾರೆ. ನೀನು ಈ ಜಗತ್ತನ್ನು ಸಮಗ್ರವಾಗಿ ನೋಡುವಿ. ಯಾವಾಗಲೂ ರಕ್ಷಿಸುವಿ. ಸಂಹಾರ ಮಾಡುವಿ. ಯೋಗಿಗಳೆಲ್ಲರು ನಿನ್ನ ಸೇವೆಯನ್ನು ಮಾಡುತ್ತಾರೆ.

ಸ್ವತಂತ್ರನಾದ, ದೇಹ ಮೊದಲಾದ ವಿಕೃತಿಗಳಿಲ್ಲದ, ದೇಹಧಾರಿಗಳಲ್ಲಿ ನಾನಾ ರೂಪಗಳಿಂದ ಅಂತರ್ಯಾಮಿಯಾಗಿರುವ ನಿನ್ನನ್ನು ಪರಮಾತ್ಮ ಎಂಬ ಹೆಸರಿನ ಆತ್ಮ ತತ್ತ್ವ ಎಂದು ತಿಳಿದವರು ಹೇಳುತ್ತಾರೆ. ಕೆಲವರು ನಿನ್ನನ್ನೇ ಶಿವ ಎನ್ನುತ್ತಾರೆ. ನೀನು ಅಕ್ಷರ (ನಾಶರಹಿತ) ಪರಬ್ರಹ್ಮ; ಪವಿತ್ರ, ಆನಂದರೂಪ, ನಿನಗೆ ಓಂ ಎಂದು ಹೆಸರು; ನೀನು ಈಶ್ವರ; ನಿರ್ವಿಕಾರ ಎಂದು ವೇದವನ್ನು ತಿಳಿದವರಲ್ಲಿ ಪ್ರಸಿದ್ಧನಾಗಿರುವಿ. ನಿನ್ನನ್ನು ಇಂದ್ರ, ವರುಣ, ಅಗ್ನಿ, ಹಂಸ, ಪ್ರಾಣ, ಮೃತ್ಯು, ಯಜ್ಞ, ಪ್ರಜಾಪತಿ - ಹೀಗೆ ಅನೇಕ ರೂಪಗಳುಳ್ಳ ನೀಲಕಂಠ ಎಂದು ವೇದವನ್ನು ತಿಳಿದವರು ಸ್ತುತಿಸುತ್ತಾರೆ.

ನೀನು ನಾರಾಯಣ, ಆದಿಯಿಲ್ಲದವನು, ನೀನು ಪಿತಾಮಹ, ಪ್ರಪಿತಾಮಹನೂ ಆಗಿರುವಿ. ನೀನು ವೇದಾಂತದ ರಹಸ್ಯ ಪ್ರಮೇಯ. ಉಪನಿಷತ್ತುಗಳಲ್ಲಿ ಹಾಡಲ್ಪಟ್ಟಿರುವವನು. ನೀನು ಸದಾಶಿವ. ನೀನು ಪರಮೇಶ್ವರ. ಸತ್ತ್ವ-ರಜಸ್-ತಮೋ ಗುಣಗಳ ಸ್ಪರ್ಶವಿಲ್ಲದ, ಪೂರ್ಣನಾದ, ಹದಿನಾಲ್ಕು ಲೋಕಗಳ ಅಂತರ್ಯಾಮಿಯಾದ, ನಿರ್ದೋಷನಾದ, ಸಹಸ್ರ ಶಕ್ತಿ ಎಂಬ ಆಸನದಲ್ಲಿ ಕುಳಿತಿರುವ ನಿನಗೆ ನಮಸ್ಕಾರ. ತ್ರಿಮೂರ್ತಿಯಾದ (ಬ್ರಹ್ಮಾ-ವಿಷ್ಣು-ಮಹೇಶ್ವರ), ಅನಂತಸ್ಥಾನಗಳ ಅಂತರ್ಯಾಮಿಯಾದ, ಜಗನ್ನಿವಾಸನಾದ, ಜನಗಳ ಹೃದಯದಲ್ಲಿರುವ, ಸರ್ಪಗಳನ್ನು ಹಾರವಾಗಿ ಧರಿಸಿರುವ ನಿನಗೆ ನಮಸ್ಕಾರ. ಮುನೀಂದ್ರರಿಂದಲೂ, ಸಿದ್ಧರಿಂದಲೂ ಅರ್ಚಿತ ಪಾದಕಮಲವುಳ್ಳ ಸಾವಿರ ಚಂದ್ರ-ಸೂರ್ಯರಂತಹ ಸಾವಿರ ರೂಪಗಳುಳ್ಳ ಓ ಶಿವನೇ! ಐಶ್ವರ್ಯ-ಧರ್ಮಗಳ ಆಸನದಲ್ಲಿ ಕುಳಿತಿರುವ, ಉತ್ಕೃಷ್ಟ ವಸ್ತುಗಳ ಪರಾಕಾಷ್ಠೆಯಾಗಿರುವ, ಜಗಜ್ಜನ್ಮಾದಿಕಾರಣನಾದ ನಿನಗೆ ನಮಸ್ಕಾರ. ಉಮಾಸಹಿತನಾದ, ಸುಂದರನಾದ ನಿನಗೆ ನಮಸ್ಕಾರ. ಬಂಗಾರದ ಕೈಯ ದೇವನಾದ ನಿನಗೆ ನಮಸ್ಕಾರ. ಅಗ್ನಿ, ಚಂದ್ರ, ಸೂರ್ಯರಂತಹ ಕಣ್ಣುಗಳುಳ್ಳ ನಿನಗೆ ನಮಸ್ಕಾರ. ಅಂಬಿಕಾಪತಿಯಾದ ನಿನಗೆ ನಮಸ್ಕಾರ.

ಪೂರ್ಣವಾಗಿ ತಿಳಿಯಲಾಗದ, ಸರ್ವರ ಹೃದಯದಲ್ಲಿರುವ, ವೇದಾಂತ ಪ್ರತಿಪಾದ್ಯನಾದ ನಿನಗೆ ನಮಸ್ಕಾರ. ತ್ರಿಕಾಲಾತೀತನಾದ, ನಿರ್ಮಲ ಪ್ರಭಾನಿಧಿಯಾದ, ಮಂಗಳ ಸ್ವರೂಪನಾದ ಮಹೇಶ ನಿನಗೆ ನಮಸ್ಕಾರ.

### ಅಂಧಕನಿಗೆ ಹರಾನುಗ್ರಹ :

ಹೀಗೆ ಸ್ತುತಿಸಲ್ಪಟ್ಟ ಭಗವಾನ್ ಪರಮೇಶ್ವರನು ಅಂಧಕನನ್ನು ಶೂಲದ ತುದಿಯಿಂದ ಇಳಿಸಿ ಸಂತೋಷಗೊಂಡು ಕೈಗಳಿಂದ ಮುಟ್ಟಿ ಹೇಳಿದನು. ''ದೈತ್ಯ! ನಿನ್ನ ಈ ಸ್ತೋತ್ರದಿಂದ ನಾನು ಪ್ರೀತನಾಗಿದ್ದೇನೆ. ನನ್ನ ಗಣಗಳ ಅಧಿಪತಿಸ್ಥಾನವನ್ನು ಪಡೆದು ಸದಾ ನನ್ನ ಬಳಿ ಇರು. ಇನ್ನು ಮುಂದೆ ನೀನು ರೋಗರಹಿತನೂ, ಸಂಶಯರಹಿತನೂ ಆಗುವಿ. ದೇವತೆಗಳೂ ಕೂಡ ನಿನ್ನನ್ನು ಪೂಜಿಸುವರು. ಸರ್ವದುಃಖಗಳಿಂದ ಬಿಡುಗಡೆಯನ್ನು ಪಡೆದು ನಂದೀಶ್ವರನ ಅನುಚರನಾಗಿರು.''

ಶಿವನು ಹೀಗೆ ಹೇಳಿದ ಕೂಡಲೇ ಮಹಾದೈತ್ಯ ಅಂಧಕನು ಗಣನಾಯಕನಾಗಿ ಶಿವಸನ್ನಿಧಿಯಲ್ಲಿ ನಿಂತನು. ಆಗ ಅವನು ಸಾವಿರ ಸೂರ್ಯರ ಕಾಂತಿಯನ್ನು, ಮೂರು ಕಣ್ಣುಗಳನ್ನೂ ಚಂದ್ರಾಲಂಕಾರವನ್ನೂ ಪಡೆದನು. ಅವನ ಕಂಠ ನೀಲವಾಯಿತು. ತಲೆಯಲ್ಲಿ ಜಟೆ ಮೂಡಿತು. ಕೈಯಲ್ಲಿ ಶೂಲವೂ ಬಂದಿತು. ಈ ಆಶ್ಚರ್ಯವನ್ನು ನೋಡಿ ಆಶ್ಚರ್ಯ ಚಕಿತರಾದ ದೇವತೆಗಳೆಲ್ಲರೂ ಆ ದೈತ್ಯನನ್ನು ಸ್ತುತಿಸಿದರು. ಭಗವಾನ್ ವಿಷ್ಣು ಮುಗುಳ್ನಗುತ್ತಾ ಶಿವನಿಗೆ ಹೇಳಿದನು.

''ಭೈರವ! ನಿನ್ನ ಪ್ರಭಾವ ಯುಕ್ತವೇ ಆಗಿದೆ. ನೀನು ಮಹಾಪುರುಷ. ಜನ್ಮದಿಂದ ಬಂದ ದೋಷಗಳನ್ನು ಪರಿಗಣಿಸದೆ ಗುಣಗಳನ್ನು ಮಾತ್ರ ಗ್ರಹಿಸುವಿ.''

ಹೀಗೆ ಹೇಳಲ್ಪಟ್ಟ ಗಣಾಧಿಪತಿ ಶ್ರೇಷ್ಠನಾದ ಭೈರವನು ವಿಷ್ಣು ಮತ್ತುಅಂಧಕರೊಂದಿಗೆ ಶಂಕರನ ಬಳಿ ಹೋದನು. ಸಂಹಾರಕನಾದ ಶಂಕರನು ಮಾಧವ, ಅಂಧಕ ಮತ್ತು ಮಾತೃದೇವತೆಗಳು - ಇವರೊಡನೆ ಬಂದಿರುವ ಭೈರವದೇವನನ್ನು ನೋಡಿ ಸಂತೋಷವನ್ನು ಹೊಂದಿದನು. ಆಗ ಹಿರಣ್ಯಾಕ್ಷಸುತನಾದ ಅಂಧಕನನ್ನು ಕೈಯಲ್ಲಿ ಹಿಡಿದುಕೊಂಡು ಶಂಕರನು ಪಾರ್ವತಿಯಿದ್ದಲ್ಲಿಗೆ ಹೋದನು. ಪಾರ್ವತಿಯು ಸಂಸಾರದುಃಖವನ್ನು ಪರಿಹರಿಸುವ ತನ್ನ ಪತಿಯು ಅಂಧಕನೊಡನೆ ಬಂದಿರುವುದನ್ನು ನೋಡಿ ಪತಿಯ ಸುಖವನ್ನು ವಿಚಾರಿಸಿದಳು. ಅಂಧಕನನ್ನು ಅವನಿಗೆ ಲಭಿಸಿದ ಶಂಕರಾನುಗ್ರಹವನ್ನು ಕುರಿತು ವಿಚಾರಿಸಿದಳು.

ಅಂಧಕನು ಪಾರ್ವತಿಗೆ ಸಾಷ್ಟಾಂಗ ನಮಸ್ಕರಿಸಿದನು. ಹೀಗೆ ಸ್ತುತಿಸಿದನು : ''ಯಾರಿಂದ ಪ್ರಕೃತಿ-ಪುರುಷರ ಸೃಷ್ಟಿಯಾಗುವುದೋ, ಯಾರು ಎಲ್ಲವನ್ನೂ ಸಂಹರಿಸುವಳೋ ಅಂತಹ ದೇವವಲ್ಲಭೆ ಪಾರ್ವತಿಗೆ ನಮಸ್ಕಾರ. ಶಿವನ ಜೊತೆ ಅತಿನಿರ್ಮಲವಾದ ಮಂಗಳಮಯವಾದ ಬಂಗಾರದ ಆಸನದಲ್ಲಿ ಶೋಭಿಸುವ ಪಾರ್ವತಿಗೆ ನಮಸ್ಕಾರ. ಯಾರ ಒಳಗೆ ಇಡೀ ಜಗತ್ತೂ ಇದೆಯೋ ಯಾರಲ್ಲಿ ಲಯ ಹೊಂದುವುದೋ ಅಂತಹ ಸಮಸ್ತ ದೋಷಹೀನಳಾದ ಪಾರ್ವತಿಗೆ ನಮಸ್ಕಾರ. ಹುಟ್ಟು - ಸಾವು, ವೃದ್ಧಿ - ಹ್ರಾಸ ಮೊದಲಾದ ವಿಕಾರಗಳಿಲ್ಲದ, ತ್ರಿಗುಣಾತೀತಳಾದ ಗಿರಿಜೆಗೆ ನಮಸ್ಕಾರ. ದೇವಿ ! ನನ್ನ ಅಪರಾಧಗಳನ್ನು ಕ್ಷಮಿಸು. ಸುರಾಸುರರಿಂದ ನಮಸ್ಕೃತವಾದ ನಿನ್ನ ಪಾದಕಮಲಗಳನ್ನು ನಮಿಸುವೆ''

ಹೀಗೆ ಭಕ್ತಿನಮ್ರನಾಗಿ ಸ್ತುತಿಸಿದ ದೈತ್ಯನಾಯಕ ಅಂಧಕನನ್ನು ಪಾರ್ವತಿಯು ತನ್ನ ಪುತ್ರನೆಂದು ಪರಿಗಣಿಸಿದಳು. ಅನಂತರ ರುದ್ರ ಸಂಜಾತನಾದ ಆ ಭೈರವನು ಶಿವನ ಆಜ್ಞೆಯಂತೆ ಮಾತೃದೇವತೆಗಳೊಂದಿಗೆ ಪಾತಾಳ ಲೋಕಕ್ಕೆ ಹೋದನು. ಅಲ್ಲಿ ಸರ್ವ ಸಂಹಾರಕಾರಣವಾದ ತಮೋಗುಣಕ್ಕೆ ಪ್ರಚೋದನೆಯನ್ನು ಕೊಡುವ ಶ್ರೀಹರಿಯ ನರಸಿಂಹ ರೂಪವು ವ್ಯಕ್ತವಾಗಿದೆ. ಅಲ್ಲಿ ಕಾಲಭೈರವನು ಮನಸ್ಸನ್ನು ಭಗವಂತನಲ್ಲಿಟ್ಟು ಧ್ಯಾನನಿರತನಾದನು. ಆಗ ಹಸಿವೆಯಿಂದ ಪೀಡಿತರಾದ ಮಾತೃದೇವತೆಗಳು ಮುಕ್ಕಣ್ಣ ಮಹಾದೇವನಿಗೆ ಹೇಳಿದನು.

"ಮಹಾದೇವ! ನಮಗೆ ಬಹಳ ಹಸಿವು, ಮೂರು ಲೋಕಗಳನ್ನೇ ನಾವು ತಿನ್ನಬೇಕು. ಇಲ್ಲದಿದ್ದರೆ ತೃಪ್ತಿಯಾಗುವುದಿಲ್ಲ. ದಯವಿಟ್ಟು ಅನುಮತಿ ಕೊಡಬೇಕು." ಇಷ್ಟು ಹೇಳಿ ಮೂರು ಲೋಕಗಳನ್ನೇ ಆ ವಿಷ್ಣುಸಂಜಾತರಾದ ಮಾತೃದೇವತೆಗಳು ತಿನ್ನಲು ತೊಡಗಿದರು. ಆಗ ಭೈರವದೇವನು ನೃಸಿಂಹರೂಪಿ ಹರಿಯನ್ನು ಸ್ತುತಿಸಿದನು. ಕೂಡಲೇ ಹರಿಯು ಆವಿರ್ಭವಿಸಿದನು. ಭೈರವದೇವನು *(ಶಿವನ ಒಂದು ರೂಪ)* "ಈ ಮಾತೃದೇವತೆಗಳು ಮೂರು ಲೋಕವನ್ನೇ ತಿನ್ನುತ್ತಿದ್ದಾರೆ. ಅವರನ್ನು ದಯವಿಟ್ಟು ತಡೆಯಬೇಕು" ಎಂದು ಪ್ರಾರ್ಥಿಸಿದನು. ನರಸಿಂಹನು ಆ ದೇವಿಯರೆಲ್ಲರೂ ತನ್ನ ಬಳಿ ಬರಬೇಕೆಂದು ಹೇಳಿದನು. ಕೂಡಲೇ ಅವರೆಲ್ಲರೂ ಅಲ್ಲಿಗೆ ಬಂದರು. ನರಸಿಂಹನ ಆದೇಶದಂತೆ ತಮ್ಮ ಶಕ್ತಿಯೆಲ್ಲವನ್ನೂ ಭೈರವದೇವನಿಗೆ ಅರ್ಪಿಸಿದರು. ಆಗ ಭಗವಾನ್ ಹೃಷಿಕೇಶನು ಹೇಳಿದನು.

"ಯಾರು ಶಿವಭಕ್ತರೋ ಮತ್ತು ನನ್ನ ಭಕ್ತರೋ ಅವರಿಗೆ ಏನೂ ಹಾನಿಯಾಗುವುದಿಲ್ಲ. ಮಹೇಶ್ವರಾಂಗ ಸಂಜಾತವಾದ ನನ್ನ ಒಂದು ಮೂರ್ತಿಯೇ ಸರ್ವಸಂಹಾರಕರ್ತೃ. ಭುಕ್ತಿ-ಮುಕ್ತಿಗಳನ್ನು ಕೊಡುತ್ತದೆ. ಕಾಲ ಮತ್ತು ಚತುರ್ಮುಖ ನನ್ನ ಎರಡು ರೂಪಗಳು. ಮೊದಲನೆಯದು ತಮೋ ಗುಣ ಪ್ರಚೋದಕವಾದ ಸಂಹಾರಕರೂಪ. ಎರಡನೆಯದು ರಜೋಗುಣ ಪ್ರಚೋದಕವಾದ ಸೃಷ್ಟಿಕರ್ತೃರೂಪ. ನಾನು ಕಾಲ ರೂಪದಿಂದ ಕಲ್ಪಾಂತದಲ್ಲಿ ಇಡೀ ಜಗತ್ತನ್ನು ಸಂಹಾರ ಮಾಡುವೆನು. ನನ್ನ ನಾರಾಯಣರೂಪವು ಸತ್ವಗುಣ ಪ್ರಚೋದಕವಾಗಿ ಜಗತ್ತಿನ ಪಾಲನೆಯನ್ನು ಮಾಡುವುದು. ಹೀಗೆ ಮೂರು ರೂಪಗಳನ್ನು ಪಡೆಯುವ ವಿಷ್ಣುವೇ ಪರಬ್ರಹ್ಮ ಪರಮಗತಿ."

ಹೀಗೆ ವಿಷ್ಣುವಿನಿಂದ ಬೋಧಿತರಾದ ವಿಷ್ಣು ಸಂಜಾತರಾದ ಆ ದೇವಿಯರು ಆ ವಿಷ್ಣುವಿಗೆ ಶರಣಾಗತರಾದರು. ಹೀಗೆ ಅಂಧಕಾಸುರ ನಿಗ್ರಹ ಮತ್ತು ಭೈರವ ದೇವನ ಮಹಿಮೆಯನ್ನು ನಾನು ನಿಮಗೆ ಉಪದೇಶಿಸಿದ್ದೇನೆ.

* * *

## ವಾಮನ ಚರಿತೆ

## ಅಧ್ಯಾಯ-೧೭

**ಸೂತ ಉವಾಚ :**

ಅಂಧಕನಿಗ್ರಹಾನಂತರ ಪ್ರಹ್ಲಾದನ ಮಗ ವಿರೋಚನ ರಾಜನಾದನು. ಇವನು ದೇವೇಂದ್ರ ಮೊದಲಾದ ಎಲ್ಲ ದೇವತೆಗಳನ್ನೂ ಸೋಲಿಸಿ ದೀರ್ಘಕಾಲ ಚರಾಚರ ಸಹಿತವಾದ ಇಡೀ ಮೂರು ಲೋಕವನ್ನು ಧರ್ಮದಿಂದ ಪಾಲಿಸಿದನು. ಹೀಗಿರುವಾಗ ಒಮ್ಮೆ ಮಹಾವಿಷ್ಣುವಿನಿಂದ ಪ್ರೇರಿತರಾಗಿ ಮಹಾಮುನಿ ಭಗವಾನ್ ಸನತ್ಕುಮಾರರು ಇವನ ರಾಜಧಾನಿಗೆ ಬಂದರು. ಸಿಂಹಾಸನದಲ್ಲಿ ಕುಳಿತಿದ್ದ ಮಹಾಸುರ ವಿರೋಚನನು ಎದ್ದು ಹೋಗಿ ಶಿರಸಾ ನಮಸ್ಕರಿಸಿ ಬ್ರಹ್ಮಪುತ್ರರಾದ ಸನತ್ಕುಮಾರರನ್ನು ಸ್ವಾಗತಿಸಿ ಮಾತನಾಡಿದನು. "ಯೋಗೀಶ್ವರರೂ ಬ್ರಹ್ಮಜ್ಞಾನಿಗಳೂ ಆದ ತಾವು ನಮ್ಮ ಈ ಊರಿಗೆ ಬಂದದ್ದರಿಂದ ನಾನು ಧನ್ಯ. ಅನುಗೃಹೀತ. ಪೂಜ್ಯರೇ! ತಾವು ಇಲ್ಲಿಗೆ ಬರಲು ಏನು ಕಾರಣ? ನಾನು ನಿಮಗಾಗಿ ಏನು ಮಾಡಲಿ? ದಯವಿಟ್ಟು ಹೇಳಿರಿ."

ಮಹಾಮುನಿಯು ಧರ್ಮಿಷ್ಠನಾದ ಮಹಾಸುರ ವಿರೋಚನನಿಗೆ ಹೇಳಿದರು. "ನೀನು ಭಾಗ್ಯಶಾಲಿ. ನಿನ್ನಲ್ಲಿ ಕಂಡುಬರುತ್ತಿರುವ ಧರ್ಮನಿಷ್ಠೆ ದೈತ್ಯರಲ್ಲಿ ಸಾಮಾನ್ಯವಾಗಿ ಇರುವುದಿಲ್ಲ. ನಿನ್ನಂತಹ ಧಾರ್ಮಿಕ ಮೂರು ಲೋಕದಲ್ಲಿ ಇನ್ನೊಬ್ಬ ಇಲ್ಲ." ಅನ್ನಲು, ಅನಂತರ ವಿರೋಚನನು ಮುನೀಶ್ವರನಿಗೆ ಹೇಳಿದನು "ಬ್ರಹ್ಮಜ್ಞಾನಿಗಳೇ! ಧರ್ಮಗಳಲ್ಲಿ ಅತ್ಯಂತ ಶ್ರೇಷ್ಠವಾದದ್ದನ್ನು ದಯವಿಟ್ಟು ಹೇಳಿರಿ." ಅನಂತರ ಪೂಜ್ಯರಾದ ಯೋಗೀಶ್ವರರು ಮಹಾತ್ಮನಾದ ದೈತ್ಯೇಂದ್ರನಿಗೆ ಆತ್ಮಜ್ಞಾನ ಸಾಧನವಾದ, ಅತ್ಯುತ್ತಮವಾದ, ಅತ್ಯಂತ ರಹಸ್ಯವಾದ ಧರ್ಮವನ್ನು ಉಪದೇಶಿಸಿದರು. ವಿರೋಚನನು ಶ್ರೇಷ್ಠಜ್ಞಾನವನ್ನು ಪಡೆದು ಗುರುದಕ್ಷಿಣೆಯನ್ನು ಕೊಟ್ಟು ರಾಜ್ಯವನ್ನು ಮಗನಿಗೊಪ್ಪಿಸಿ ಯೋಗಾಭ್ಯಾಸದಲ್ಲಿ ನಿರತನಾದನು.

ಅವನ ಮಗ ಬಲಿ ಮತಿವಂತ, ಅಸುರಶ್ರೇಷ್ಠ. ಬ್ರಾಹ್ಮಣರ ಮತ್ತು ವೇದಗಳ ಬಗ್ಗೆ ಪರಮಶ್ರದ್ಧಾಳುವಾದ, ಅತ್ಯಂತ ಧಾರ್ಮಿಕನಾದ ಇವನು ದೇವೇಂದ್ರನ ಮೇಲೆ ಭಾರೀ ಯುದ್ಧವನ್ನು ಮಾಡಿ ಗೆದ್ದನು. ಸೋತ ದೇವೇಂದ್ರನು ವಿಷ್ಣುವಿಗೆ ಶರಣಾಗತನಾದನು. ಈ ಮಧ್ಯೆ ಬಹಳ ದುಃಖಿತಳಾದ ದೇವಮಾತೆ ಅದಿತಿಯು ದೈತ್ಯನಾಯಕರ ವಧೆಗಾಗಿ ವಿಷ್ಣುವೇ ತನಗೆ ಮಗನಾಗಬೇಕೆಂದು ಬೇಡಿ ಘೋರ ತಪಸ್ಸನ್ನು ಮಾಡಿದಳು. ಹೃದಯ ಕಮಲದಲ್ಲಿ ಪರಮಗತಿಯಾದ ವಿಷ್ಣುವನ್ನೇ ಧ್ಯಾನಿಸಿದಳು. ಅವನನ್ನು ವಾಸುದೇವ, ಆದ್ಯಂತರಹಿತ, ಆನಂದರೂಪ, ನಿರ್ವಿಕಾರ ಎಂದು ಸ್ತುತಿಸಿದಳು. ಭಗವಾನ್ ವಿಷ್ಣುವು ಪ್ರಸನ್ನನಾಗಿ ಶಂಖ ಚಕ್ರಗದಾಧರನಾಗಿ ದೇವಮಾತೆಯ ಎದುರು ಆವಿರ್ಭವಿಸಿದನು. ತನ್ನೆದುರು ಕಾಣಿಸುತ್ತಿರುವ ವಿಷ್ಣುವನ್ನು ನೋಡಿ, ತನ್ನನ್ನು ಕೃತಾರ್ಥಳೆಂದು ಭಾವಿಸಿ ಭಕ್ತಿಯಿಂದ ಅವನನ್ನು ಸ್ತುತಿಸಿದಳು.

## ಅದಿತಿಕೃತ ಸ್ತೋತ್ರ :

ಎಲ್ಲ ದುಃಖರಾಶಿಯನ್ನು ಒಬ್ಬನೇ ನಾಶಮಾಡುವ ಪರಮ ದಯಾಲುವೇ! ನೀನು ಉತ್ಕೃಷ್ಟನಾಗಿರುವಿ. ಅಪರಿಮಿತ ಮಹಿಮನೇ! ನೀನು ಉತ್ಕೃಷ್ಟ. ಆದಿ, ಮಧ್ಯ, ಅಂತಗಳಿಲ್ಲದ ವಿಜ್ಞಾನ ಮೂರ್ತಿಯೇ. ಆಕಾಶದಂತೆ ನಿರ್ವಿಕಾರನೆ! ನಿರ್ಮಲಾನಂದ ಸ್ವರೂಪನೆ! ನೀನು ಉತ್ಕೃಷ್ಟ

ವ್ಯಾಪ್ತನೂ, ಕಾಲರೂಪನೂ ಆದ ನಿನಗೆ ನಮಸ್ಕಾರ. ನಾರಸಿಂಹನೂ ಶೇಷನೂ ಆದ ನಿನಗೆ ನಮಸ್ಕಾರ. ಕಾಲ ರುದ್ರಸ್ವರೂಪನಾಗಿ ಸಂಹಾರಕರ್ತೃವಾದ ನಿನಗೆ ನಮಸ್ಕಾರ. ವಾಸುದೇವ! ನಿನಗೆ ನಮಸ್ಕಾರ! ನಮಸ್ಕಾರ. ಪ್ರಪಂಚಮಾಯೆಯನ್ನು ರಚಿಸುವ ನಿನಗೆ ನಮಸ್ಕಾರ. ಯೋಗಗಮ್ಯನಾದ ಸತ್ಯಸ್ವರೂಪನಾದ ನಿನಗೆ ನಮಸ್ಕಾರ. ಧರ್ಮವಿಜ್ಞಾನ ನಿಷ್ಠನಾದ ನಿನಗೆ ನಮಸ್ಕಾರ. ವರಾಹ ರೂಪನಾದ ನಿನಗೆ ಮತ್ತೆ ಮತ್ತೆ ನಮಸ್ಕಾರ. ಸಾವಿರ ಸೂರ್ಯ-ಚಂದ್ರರಿಗೆ ಸಮಾನವಾದ ಶರೀರವುಳ್ಳವನೇ ನಿನಗೆ ನಮಸ್ಕಾರ. ವೇದ-ವಿಜ್ಞಾನ-ಧರ್ಮಗಳಿಂದ ಗಮ್ಯನೇ ನಿನಗೆ ನಮಸ್ಕಾರ. ಬೋಧಕನೂ, ಅಪ್ರಮೇಯನೂ ಆದ ನಿನಗೆ ನಮಸ್ಕಾರ. ಜಗಜ್ಜನ್ಮಾದಿಕಾರಣನಾದ ಪ್ರಭುವೇ! ನಿನಗೆ ನಮಸ್ಕಾರ. ಸುಖ ಕಾರಣನೂ ಸತ್ಯನಿಷ್ಠನೂ ಆದ ನಿನಗೆ ನಮಸ್ಕಾರ. ವಿಶ್ವರೂಪನಾದ ನಿನಗೆ ನಮಸ್ಕಾರ. ನಮಸ್ಕಾರ. ಯೋಗಾಸನದಲ್ಲಿ ಕುಳಿತುಕೊಳ್ಳುವ ನಿನಗೆ ನಮಸ್ಕಾರ. ಮಂಗಳಮಯನೂ ಏಕರೂಪನೂ ಆದ ನಿನಗೆ ನಮಸ್ಕಾರ.

ಹೀಗೆ ದೇವಮಾತೆಯಿಂದ ಸ್ತುತಿಸಲ್ಪಟ್ಟ ಭಗವಾನ್ ವಿಷ್ಣುವು ಮುಗುಳ್ನಗುತ್ತಾ ವರಕೊಡಲು ಮುಂದಾದನು. ಅದಿತಿಯು ನಮಸ್ಕರಿಸಿ "ದೇವತೆಗಳ ಹಿತಕ್ಕಾಗಿ ನೀನು ನನ್ನ ಮಗನಾಗಬೇಕು" ಎಂದು ಬೇಡಿದಳು. ಶರಣಾಗತ ಜನವತ್ಸಲನಾದ ವಿಷ್ಣುವು ಹಾಗೆಯೇ ಆಗಲಿ ಎಂದು ಹೇಳಿ ಅಂತರ್ಧಾನನಾದನು. ಬಹುಕಾಲಾನಂತರ ಭಗವಾನ್ ನಾರಾಯಣ ನನ್ನು ದೇವಮಾತೆಯು ಗರ್ಭದಲ್ಲಿ ಧರಿಸಿದಳು. ಭಗವಂತನು ಅದಿತಿಯ ಗರ್ಭದಲ್ಲಿ ಪ್ರವೇಶಮಾಡಿದಾಗ ಬಲಿಚಕ್ರವರ್ತಿಯ ಪಟ್ಟಣದಲ್ಲಿ ಘೋರ ಉತ್ಪಾತಗಳು ಉಂಟಾದವು. ಅವುಗಳನ್ನು ನೋಡಿ ಭಯಪೀಡಿತನಾದ ಬಲಿಚಕ್ರವರ್ತಿಯು ತನ್ನ ವೃದ್ಧ ಪಿತಾಮಹ ಪ್ರಹ್ಲಾದನನ್ನು ನಮಸ್ಕರಿಸಿ ಹೀಗೆ ಹೇಳಿದನು :

"ಮಹಾಪ್ರಾಜ್ಞ! ತಾತ! ಈ ಪುರದಲ್ಲಿ ಏಕೆ ಉತ್ಪಾತಗಳು ಆಗುತ್ತಿವೆ? ನಾವೇನು ಮಾಡಬೇಕು?" ಪ್ರಹ್ಲಾದನು ಬಹಳಹೊತ್ತು ಚಿಂತಿಸಿ, ಪರಮಾತ್ಮನಿಗೆ ನಮಸ್ಕರಿಸಿ ಹೀಗೆ ಹೇಳಿದನು.

"ಜ್ಞಾನಿಗಳು ಯಜ್ಞಗಳಿಂದ ಯಾರನ್ನು ಆರಾಧಿಸುತ್ತಾರೋ, ಈ ಇಡೀ ಜಗತ್ತು ಯಾರ ಅಧೀನವಾಗಿದೆಯೋ ಆ ವಿಷ್ಣುವನ್ನು ದೇವಮಾತೆ ಅದಿತಿಯು ಅಸುರನಾಶಕ್ಕಾಗಿ ತನ್ನ

ಗರ್ಭದಲ್ಲಿ ಧರಿಸಿದ್ದಾಳೆ. ಜಗತ್ತು ಯಾರಿಂದ ಬೇರೆಯಾಗಿ ಸ್ವತಂತ್ರವಾಗಿಲ್ಲವೋ, ಯಾರು ಎಲ್ಲ ಚರಾಚರಗಳಿಂದ ಬೇರೆಯಾಗಿ ಸ್ವತಂತ್ರನಾಗಿದ್ದಾನೋ ಆ ವಾಸುದೇವನು ದೇವ ಮಾತೆಯ ಗರ್ಭವನ್ನು ಪ್ರವೇಶಿಸಿದ್ದಾನೆ. ಯಾರ ಸ್ವರೂಪವನ್ನು ದೇವತೆಗಳೂ ಪೂರ್ಣವಾಗಿ ತಿಳಿಯಲಾರರೋ ಆ ವಿಷ್ಣುವು ಸ್ವ-ಇಚ್ಛೆಯಿಂದ ಅದಿತಿ ಗರ್ಭವನ್ನು ಪ್ರವೇಶಿಸಿದ್ದಾನೆ.

ಎಲ್ಲ ಚರಾಚರಗಳು ಯಾರಿಂದ ಹುಟ್ಟಿ ಯಾರಲ್ಲಿ ಲಯವನ್ನು ಹೊಂದುತ್ತವೆಯೋ ಆ ಮಹಾಯೋಗಿ, ಪುರಾಣ ಪುರುಷ ಹರಿ ಅದಿತಿಯಲ್ಲಿ ಅವತರಿಸಿದ್ದಾನೆ. ಯಾರಲ್ಲಿ ನಾಮ, ಜಾತಿ ಮೊದಲಾದ ಪರಿಕಲ್ಪನೆಗಳು ಇಲ್ಲವೋ, ಯಾರು ನಿರ್ದುಷ್ಟ ಸ್ವರೂಪನೋ ಆ ವಿಷ್ಣುವು ಅಂಶದಿಂದ ಹುಟ್ಟುತ್ತಾನೆ. ಜಗನ್ಮಾತೆಯಾದ ಮಹಾಲಕ್ಷ್ಮಿ ಯಾರ ಶಕ್ತಿ ಸ್ವರೂಪ-ಳಾಗಿದ್ದಾಳೋ ಆ ಜನಾರ್ದನನು ಅವತರಿಸುತ್ತಿದ್ದಾನೆ. ಶಂಕರನು ಯಾರ ತಾಮಸ ಮೂರ್ತಿಯೋ, ಚತುರ್ಮುಖ ಬ್ರಹ್ಮನು ಯಾರ ರಾಜಸ ಮೂರ್ತಿಯೋ ಆ ಸತ್ವ ಪ್ರಚೋದಕನಾದ ವಿಷ್ಣುವು ಒಂದು ಅಂಶದಿಂದ ಅವತರಿಸುತ್ತಿದ್ದಾನೆ. ಹೀಗೆ ಚಿಂತಿಸಿ ಭಕ್ತಿನಮ್ರವಾದ ಮನಸ್ಸಿನಿಂದ ಅವನಿಗೇ ಶರಣಾಗತನಾಗು. ನೀನು ಸುಖಿಯಾಗುವಿ.''

ಪ್ರಹ್ಲಾದನ ಮಾತಿನಂತೆ ವಿರೋಚನ ಪುತ್ರ ಬಲಿಯು ಶ್ರೀಹರಿಗೆ ಶರಣಾಗತನಾಗಿ, ಧರ್ಮಜ್ಞನಾಗಿ ಜಗತ್ತನ್ನು ಪಾಲಿಸಿದನು.

**ವಾಮನಾವತಾರ :**

ಕಾಲಕ್ರಮದಲ್ಲಿ ದೇವಮಾತೆ ಅದಿತಿಯು ದೇವತೆಗಳ ಹರ್ಷವರ್ಧನನಾದ ಮಹಾವಿಷ್ಣು ವನ್ನು ಪ್ರಸವಿಸಿದಳು. ಚತುರ್ಭುಜನೂ, ವಿಶಾಲಾಕ್ಷನೂ, ಎದೆಯಲ್ಲಿ ಶ್ರೀವತ್ಸಾಂಕವುಳ್ಳವನೂ ನೀಲಮೇಘದ ಕಾಂತಿವುಳ್ಳವನೂ, ವರ್ಚಸ್ವಿಯೂ ಆಗಿದ್ದ ಮಹಾವಿಷ್ಣುವಿನ ಬಳಿ ಎಲ್ಲ ದೇವತೆಗಳೂ, ಸಿದ್ಧರೂ, ಸಾಧ್ಯರೂ, ಚಾರಣರೂ, ದೇವೇಂದ್ರನೂ, ಚತುರ್ಮುಖ ಬ್ರಹ್ಮನೂ, ಎಲ್ಲ ಋಷಿಗಳೊಂದಿಗೆ ಬಂದು ಸ್ತೋತ್ರಮಾಡಿದರು.

ಭಗವಾನ್ ಹರಿಯು ಉಪನಯನಾನಂತರ, ಲೋಕಕ್ಕೆ ಸದಾಚಾರವನ್ನು ತಿಳಿಸುವುದಕ್ಕಾಗಿ ಭರದ್ವಾಜ ಮುನಿಗಳಿಂದ ವೇದಾಧ್ಯಯನವನ್ನು ಮಾಡಿದನು. ಲೋಕಪ್ರಭುವಾದ ಹರಿಯು ಲೋಕವು ಅನುಸರಿಸಬೇಕಾದ ಮಾರ್ಗವನ್ನು ಹೀಗೆ ತೋರಿಸುತ್ತಾನೆ. ಶ್ರೇಷ್ಠರು ಯಾವುದನ್ನು ಪ್ರಮಾಣ ಎಂದು ಪರಿಗ್ರಹಿಸಿ ಆಚರಿಸುತ್ತಾರೋ ಜನರೂ ಅದನ್ನೇ ಅನುಸರಿಸುತ್ತಾರಷ್ಟೆ!

ಅನಂತರ ಕಾಲಕ್ರಮದಲ್ಲಿ ಪ್ರಾಜ್ಞನಾದ ಬಲಿಚಕ್ರವರ್ತಿಯು ಸರ್ವತ್ರ ಇರುವ ಯಜ್ಞೇಶ್ವರನಾದ ವಿಷ್ಣುವಿನ ಆರಾಧನೆಯೆಂಬ ಅನುಸಂಧಾನದಿಂದ ಯಜ್ಞಗಳನ್ನು ಮಾಡಿದನು. ಆ ಮಹಾತ್ಮನ ಯಾಗಭೂಮಿಗೆ ಬ್ರಹ್ಮರ್ಷಿಗಳೂ, ಬ್ರಾಹ್ಮಣರೂ ಬಂದರು. ಅವರೆಲ್ಲರಿಗೂ ಭಾರೀ ಸಂಪತ್ತನ್ನು ಕೊಟ್ಟು ಪೂಜಿಸಿದನು. ಮಹರ್ಷಿ ಭರದ್ವಾಜರ

ಪ್ರೇರಣೆಯಂತೆ ಭಗವಾನ್ ವಿಷ್ಣುವು ವಾಮನನಾಗಿ ಯಾಗಸ್ಥಳಕ್ಕೆ ಬಂದನು. ಕೃಷ್ಣಾಜಿನ, ಉಪವೀತ, ಆಷಾಢದಂಡಗಳಿಂದಲೂ, ಜಟೆಯಿಂದಲೂ ಶೋಭಿಸುತ್ತಿದ್ದ, ಬಹಳ ವರ್ಚಸ್ವಿಯಾಗಿದ್ದ ಆ ಹುಡುಗನು ವೇದಗಳನ್ನು ಹೇಳುತ್ತಾ ಬಲಿಚಕ್ರವರ್ತಿಯ ಬಳಿ ಬಂದನು. ತನ್ನ ಮೂರು ಹೆಜ್ಜೆಗಳಿಂದ ಅಳೆಯಬಹುದಾದಷ್ಟು ಭೂಮಿಯನ್ನು ಬೇಡಿದನು.

ಬಲಿಚಕ್ರವರ್ತಿಯು ಭಕ್ತಿಯಿಂದ ವಾಮನನ ಪಾದಗಳನ್ನು ತೊಳೆದು, ಬಂಗಾರದ ಕಲಶದಲ್ಲಿ ಆಚಮನೀಯವನ್ನು ಕೊಟ್ಟು ''ನಿನಗೆ ಮೂರು ಹಜ್ಜೆ ಭೂಮಿಯನ್ನು ಕೊಡುತ್ತೇನೆ. ಇದರಿಂದ ಪೂರ್ಣಾತ್ಮನಾದ ಹರಿಯು ಪ್ರೀತನಾಗಲಿ'' ಹೀಗೆಂದು ಹೇಳಿ ಶ್ರೀಹರಿಯನ್ನೇ ಧ್ಯಾನಿಸುತ್ತಾ ವಾಮನನ ಎಳೆಯಾದ ಕೈತುದಿಗೆ ನೀರನ್ನು ಹಾಕಿದನು.

ವಾಮನನು ಶರಣಾಗತನಾಗಿರುವ ದೈತ್ಯಪತಿ ಬಲಿಯ ರಾಗ-ದ್ವೇಷಗಳನ್ನು ಪರಿಹರಿಸುವುದಕ್ಕಾಗಿ ಒಂದು ಹೆಜ್ಜೆಯಿಂದ ಭೂಮಿಯನ್ನಳೆದು ಮತ್ತೊಂದು ಹೆಜ್ಜೆಯನ್ನು ಆಕಾಶದಲ್ಲಿ ಬೆಳೆಸಿದನು. ಈ ಹೆಜ್ಜೆಯು ಮೂರು ಲೋಕವನ್ನು ಆಕ್ರಮಿಸಿ ಪ್ರಾಜಾಪತ್ಯಲೋಕದಿಂದ ಬ್ರಹ್ಮಲೋಕದವರೆಗೆ ಬೆಳೆಯಿತು.

ಆದಿತ್ಯ ಮೊದಲಾದ ದೇವತೆಗಳೆಲ್ಲರೂ ಆ ಪಾದವನ್ನು ನಮಸ್ಕರಿಸಿದರು. ಚತುರ್ಮುಖ ಬ್ರಹ್ಮದೇವನೂ ಕೂಡ ಆ ಪಾದವನ್ನು ಗೌರವಿಸಿದನು. ಅನಂತರ ಆ ಪಾದವು ಮೇಲೆ ಬೆಳೆದು ಬ್ರಹ್ಮಾಂಡಕಪಾಲವನ್ನು ಭೇದಿಸಿತು. ಈ ಭೇದನದಿಂದ ತಂಪಾದ ಮಹಾಜಲವು ಒಳಗೆ ಧುಮುಕಿತು. ಆಕಾಶದಲ್ಲಿ ಹರಿದ ಆ ಜಲರಾಶಿಯು ಗಂಗೆಯೆಂದು ಬ್ರಹ್ಮದೇವರಿಂದ ಕರೆಯಲ್ಪಟ್ಟಿತು. ನಿರ್ವಿಕಾರವಾದ ಆ ಪಾದವು ತನ್ನ ಮೂಲ ರೂಪದ ಸ್ಥಾನದವರೆಗೆ ಬೆಳೆದು ನಿಂತಿತು.

ಬಲಿಚಕ್ರವರ್ತಿಯು ಆ ವಿರಾಡ್ರೂಪವನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿದನು. ವೇದಗಳೆಲ್ಲವೂ ಈ ಭಗವಂತನನ್ನೇ ಪ್ರತಿಪಾದಿಸುತ್ತವೆ. ಭಗವಾನ್ ವಾಸುದೇವನು ಆ ವಿರಾಡ್ರೂಪವನ್ನು ಉಪಸಂಹರಿಸಿ ವಾಮನನಾಗಿ ''ದೈತ್ಯರಾಜನೆ! ನನ್ನದೇ ಆದ ಈ ಮೂರು ಲೋಕವು ನಿನ್ನಿಂದ ನನಗೆ ಭಕ್ತಿಯಿಂದ ಕೊಡಲ್ಪಟ್ಟಿದೆ.'' ಬಲಿಚಕ್ರವರ್ತಿಯು ಮತ್ತೊಮ್ಮೆ ಶಿರಸಾ ನಮಸ್ಕರಿಸಿ ''ಅನಂತಧಾಮನಾದ, ಅಮಿತ ವಿಕ್ರಮನಾದ ಆದರೂ ತ್ರಿವಿಕ್ರಮನಾದ ನಿನಗೆ ನನ್ನನ್ನೇ ಕೊಟ್ಟುಕೊಳ್ಳುತ್ತೇನೆ'' ಎಂದು ವಾಮನನ ಕೈಗೆ ನೀರನ್ನು ಹಾಕಿದನು.

ಜಗದಂತರ್ಯಾಮಿಯಾದ ಶ್ರೀಹರಿಯು ಪ್ರಹ್ಲಾದನ ಮಗನ ಮಗನು ಕೊಟ್ಟ ದಾನವನ್ನು ಸ್ವೀಕರಿಸಿ ''ಪಾತಾಲ ಮೂಲಕ್ಕೆ ಹೋಗು'' ಎಂದು ಬಲಿಚಕ್ರವರ್ತಿಗೆ ಹೇಳಿದನು. ''ಅಲ್ಲಿ ದೇವತೆಗಳಿಗೂ ದೊರೆಯದ ಭೋಗಸಾಮಗ್ರಿಗಳಿವೆ. ಅವುಗಳನ್ನು ಅನುಭವಿಸುತ್ತಾ ಅಲ್ಲಿರು. ನನ್ನನ್ನು ಭಕ್ತಿಯಿಂದ ಧ್ಯಾನಿಸು. ಕಲ್ಪಾಂತದಲ್ಲಿ ಪುನಃ ನನ್ನನ್ನು ಸೇರುವಿ'' ಎಂದು ಆ

ದೈತ್ಯಸಿಂಹನಿಗೆ ಹೇಳಿ, ಸತ್ಯಪರಾಕ್ರಮನಾದ ವಿಷ್ಣುವು ದೇವೇಂದ್ರನಿಗೆ ತ್ರೈಲೋಕ್ಯ ರಾಜ್ಯವನ್ನು ಕೊಟ್ಟನು.

ಚತುರ್ಮುಖಬ್ರಹ್ಮ, ದೇವೇಂದ್ರ, ಸಿದ್ಧರು, ಕಿನ್ನರರು, ದೇವರ್ಷಿಗಳು, ರುದ್ರ-ಆದಿತ್ಯ-ಮರುತ್ ಗಣಗಳು ಶ್ರೀಹರಿಯ ಈ ಮಹಾಉಪಾಯವನ್ನು ಪ್ರಶಂಸಿಸಿದರು. ವಾಮನ ರೂಪಧಾರಿಯಾದ ವಿಷ್ಣುವು ಈ ಅದ್ಭುತ ಕರ್ಮವನ್ನು ಮಾಡಿ ಎಲ್ಲರೂ ನೋಡುತ್ತಿದ್ದಂತೆ ಅಂತರ್ಧಾನನಾದನು. ವಿಷ್ಣುಭಕ್ತನಾದ ಆ ದೈತ್ಯಶ್ರೇಷ್ಠನು ಪ್ರಹ್ಲಾದನ ಒಪ್ಪಿಗೆಯಿಂದ ಅಸುರ ಶ್ರೇಷ್ಠರೊಂದಿಗೆ ಪಾತಾಲಕ್ಕೆ ಹೋದನು. ವಿಷ್ಣು ಮಾಹಾತ್ಮ್ಯವನ್ನೂ, ಶ್ರೇಷ್ಠವಾದ ಭಕ್ತಿಯೋಗವನ್ನು ಪೂಜಾವಿಧಾನವನ್ನೂ ಪ್ರಹ್ಲಾದನಿಂದ ಕೇಳಿ ತಿಳಿದುಕೊಂಡಿದ್ದ ಬಲಿ ಚಕ್ರವರ್ತಿಯು ಭಕ್ತಿಯಿಂದ ಭಗವಂತನನ್ನು ಪೂಜಿಸಿದನು. ಚಕ್ರ-ಶಂಖಧಾರಿಯಾದ, ಕಮಲಾಕ್ಷನಾದ, ಅಪ್ರಮೇಯನಾದ ಶ್ರೀಹರಿಯಲ್ಲಿ ಬಲಿಚಕ್ರವರ್ತಿಯು ಭಕ್ತಿಯಿಂದ ಮನಸ್ಸನ್ನು ಇಟ್ಟು ಕರ್ಮಯೋಗದಿಂದ ಅವನಿಗೆ ಶರಣಾಗತನಾದನು.

**ಸೂತ ಉವಾಚ :**

ಬ್ರಾಹ್ಮಣರೇ! ಇದು ವಾಮನನ ಪರಾಕ್ರಮದ ಕಥೆ. ಆ ಪುರುಷೋತ್ತಮನು ಯಾವಾಗಲೂ ದೇವಕಾರ್ಯಗಳನ್ನು ಮಾಡುತ್ತಾನೆ.

* * *

## ಬಾಣಾಸುರನ ಕಥೆ

**ಅಧ್ಯಾಯ-೧೮**

**ಸೂತ ಉವಾಚ :**

ಬಲಿಚಕ್ರವರ್ತಿಗೆ ನೂರು ಜನ ಮಕ್ಕಳು. ಎಲ್ಲರೂ ಮಹಾಪರಾಕ್ರಮಿಗಳು. ಅವರಲ್ಲಿ ಬಾಣ ಎನ್ನುವವನು ಪ್ರಧಾನ. ಅವನು ಮಹಾ ಬಲಶಾಲಿ, ಕಾಂತಿವಂತ, ಮಹಾಶಿವಭಕ್ತ. ಅವನು ಬಲಿಯನಂತರ ರಾಜನಾದನು. ಮೂರು ಲೋಕಗಳನ್ನು ವಶಮಾಡಿಕೊಂಡು ಇಂದ್ರನನ್ನು ಪೀಡಿಸಿದನು. ಇಂದ್ರಾದಿದೇವತೆಗಳು ಶಿವನಲ್ಲಿಗೆ ಹೋಗಿ ಬಾಣನ ಮೇಲೆ ದೂರಿತ್ತರು. ಶಿವನು ದೂರನ್ನು ಕೇಳಿ ಒಂದೇ ಬಾಣದಿಂದ ಅನಾಯಾಸವಾಗಿ ಬಾಣಾಸುರನ ಪುರವನ್ನು ಸುಟ್ಟುಬಿಟ್ಟನು. ಹೀಗಾದಾಗ ಬಾಣಾಸುರನು ತ್ರಿಶೂಲಧಾರಿಯೂ ಆದ, ವೃಷಭಗಳ ಪತಿಯೂ ಶಿವನಿಗೆ ಶರಣಾಗತನಾದನು. ತನ್ನ ಊರಿನಿಂದ ನಿರ್ಗಮಿಸಿ ಶಿವಲಿಂಗವನ್ನು ತಲೆಯ ಮೇಲೆ ಇಟ್ಟುಕೊಂಡು, ವಿರಕ್ತನಾಗಿ, ಪರಮೇಶ್ವರನನ್ನು

ಸ್ತುತಿಸಿದನು. ನೀಲಲೋಹಿತ ವರ್ಣದ ಶಿವನು ಅವನ ಸ್ತೋತ್ರದಿಂದ ಪ್ರೀತನಾಗಿ ಅವನನ್ನು ಗಣಗಳ ಅಧಿಪತಿಯನ್ನಾಗಿ ನೇಮಕ ಮಾಡಿದನು.

**ವಂಶಕೀರ್ತನೆ :**

ಕಶ್ಯಪರ ಹೆಂಡತಿ ಧನುವಿಗೆ ತಾರ ಮೊದಲಾದ ಭಯಂಕರರಾದ ಮಕ್ಕಳು ಇದ್ದರು. ಇವರಲ್ಲಿ ತಾರ, ಶಂಬರ, ಕಪಿಲ, ಶಂಕರ, ಸ್ವರ್ಭಾನು, ವೃಷಪರ್ವಾ - ಇವರು ಪ್ರಸಿದ್ಧರು.

ಬಹುಶಿರಸ್ಸಿನ ಸಾವಿರಾರು ಸರ್ಪಗಳು, ಮಹಾತ್ಮರಾದ ಪಕ್ಷಿಗಳು ಸುರಸೆಯ ಮಕ್ಕಳು. ಸಾವಿರಾರು ಗಂಧರ್ವರು ಅರಿಷ್ಟಾ ಎನ್ನುವವರ ಮಕ್ಕಳು. ಅನಂತ ಮೊದಲಾದ ಮಹಾನಾಗರು ಕದ್ರುವಿನ ಮಕ್ಕಳು.

ಶುಕೀ, ಶ್ಯೇನೀ, ಭಾಸೀ, ಸುಗ್ರೀವಾ, ಗ್ರಂಥಿಕಾ, ಶುಚಿ - ಇವರು ಕಶ್ಯಪರ ಹೆಂಡತಿ ತಾಮ್ರಾ ಎನ್ನುವವಳ ಹೆಣ್ಣುಮಕ್ಕಳು. ಕಶ್ಯಪರ ಹೆಂಡತಿ ಸುರಭಿಯು ಹಸುಗಳನ್ನೂ, ಎಮ್ಮೆಗಳನ್ನೂ ಹಡೆದಳು. ಇರಾ ಎನ್ನುವವಳು ಮರಗಳನ್ನೂ, ಬಳ್ಳಿಗಳನ್ನೂ, ನಾನಾ ಜಾತಿಯ ಹುಲ್ಲುಗಳನ್ನೂ ಸಂತತಿಯನ್ನಾಗಿ ಪಡೆದಳು. ಮುನಿ ಎನ್ನುವವಳು ಯಕ್ಷರನ್ನೂ, ರಾಕ್ಷಸರನ್ನೂ, ಅಪ್ಸರೆಯರನ್ನೂ ಕ್ರೋಧಭಾವದಿಂದ ಒಂದು ರಾಕ್ಷಸರ ಗುಂಪನ್ನೂ ಹಡೆದಳು. ಗರುಡ ಮತ್ತು ಅರುಣರು ವಿನತೆಯ ಮಕ್ಕಳು. ಧೀಮಂತನಾದ ಗರುಡನು ಕಠಿಣವಾದ ತಪಸ್ಸನ್ನು ಮಾಡಿ ಶಿವನ ಅನುಗ್ರಹದಿಂದ ಹರಿಯ ವಾಹನನಾದನು. ಅರುಣನು ಕಠಿಣತಪಸ್ಸಿನಿಂದ ಶಿವನನ್ನು ಮೆಚ್ಚಿಸಿ ಅವನ ವರದಿಂದ ಸೂರ್ಯನ ಸಾರಥಿಯಾದನು. ಮೇಲೆ ಹೇಳಲ್ಪಟ್ಟ ಸ್ಥಾವರ-ಜಂಗಮಗಳೆಲ್ಲವೂ ವೈವಸ್ವತ ಮನ್ವಂತರದ ಕಶ್ಯಪಸಂತತಿ. ಈ ವಿಚಾರಗಳನ್ನು ಶ್ರವಣ ಮಾಡಿದವರ ತಾಪಗಳು ಪರಿಹಾರವಾಗುತ್ತವೆ.

ಚಂದ್ರನ ಪತ್ನಿಯಲ್ಲಿ ಇಪ್ಪತ್ತೇಳು ಮಕ್ಕಳು ಜನಿಸಿದರು. ಅವರಲ್ಲಿ ಒಬ್ಬ ಅರಿಷ್ಟನೇಮಿ. ಅವನಿಗೆ ಅನೇಕ ಮಕ್ಕಳು. ಅವರಲ್ಲಿ ಒಬ್ಬ ಬಹುಪುತ್ರ, ಒಳ್ಳೆಯ ಜ್ಞಾನಿ. ಅವನಿಗೆ ವಿದ್ಯುತ್ ಎಂಬ ಹೆಸರಿನ ನಾಲ್ಕು ಜನ ಹೆಣ್ಣುಮಕ್ಕಳು. ಅಂತೆಯೇ ಆಂಗೀರಸರಿಗೆ ಅನೇಕ ಮಕ್ಕಳು. ಇವರು ಶ್ರೇಷ್ಠ ಋಷಿಗಳು. ಧರ್ಮದೇವತೆಯಿಂದ ಸತ್ಕೃತರಾದರು. ಕೃಶಾಶ್ವ ಎಂಬ ದೇವರ್ಷಿಗೆ ಪ್ರಹರಣ (*ದೇವತೆಗಳ ಆಯುಧಗಳು ಎಂದು ಕೆಲವರು ವ್ಯಾಖ್ಯಾನಿಸುತ್ತಾರೆ*) ಎಂಬ ಮಗ ಇವರೆಲ್ಲರೂ ಮನ್ವಂತರಗಳಲ್ಲಿ ಅದೇ ನಾಮಗಳಿಂದ ಅದೇ ಕೆಲಸವುಳ್ಳವರಾಗಿ ಹುಟ್ಟುತ್ತಾರೆ.

* * *

## ಅಧ್ಯಾಯ-೧೯

**ಸೂತ ಉವಾಚ :**

ಇಷ್ಟು ಸಂತತಿಯನ್ನು ಪಡೆದ ಕಶ್ಯಪರು ಮತ್ತಷ್ಟು ಸಂತತಿಯನ್ನು ಬಯಸಿ ತೀವ್ರವಾದ ತಪಸ್ಸನ್ನು ಮಾಡಿದರು. ತಪಸ್ಸು ಮಾಡುತ್ತಿದ್ದ ಕಾಶ್ಯಪರಿಗೆ ವತ್ಸರ ಮತ್ತು ಅಸಿತ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಇವರಿಬ್ಬರೂ ಬ್ರಹ್ಮವಾದಿಗಳು. ನೈಧ್ರುವ ಮತ್ತು ರೈಭ್ಯರು ವತ್ಸರನ ಮಕ್ಕಳು. ರೈಭ್ಯ ಬಹಳ ಯಶಸ್ಸನ್ನು ಸಂಪಾದಿಸಿದ್ದನು. 'ಶೂದ್ರ'ರು ರೈಭ್ಯನ ಮಕ್ಕಳು. ಇವರೆಲ್ಲ ಪರಮ ವೈದಿಕರು. ಚ್ಯವನನ ಮಗಳು ಸುಮೇಧಾ ನೈಧ್ರುವನ ಹೆಂಡತಿ. ಕುಂಡಪಾಯಿ ಎಂಬ ಸತ್ರವನ್ನು ಮಾಡಿ ಕುಂಡಪಾಯಿಗಳು ಎಂದು ಇವರ ಮಕ್ಕಳು ಪ್ರಸಿದ್ಧರಾಗಿದ್ದರು.

ಕಶ್ಯಪರ ಮಗ ಅಸಿತನ ಹೆಂಡತಿ ಏಕಪರ್ಣಾ. ಇವರ ಮಗ ದೇವಲ. ಇವನು ವೇದಾಭ್ಯಾಸನಿರತ, ಮಹಾತಪಸ್ವಿ, ಯೋಗಾಚಾರ್ಯ. ಶಾಂಡಿಲ್ಯ ಕಾಶ್ಯಪರ ಮತ್ತೊಬ್ಬ ಮಗ. ಇವನು ತತ್ವಜ್ಞಾನಿ; ಶುಚಿ. ಶಿವನ ಅನುಗ್ರಹದಿಂದ ಯೋಗಮಾರ್ಗದಲ್ಲಿ ಸಿದ್ಧಿಯನ್ನು ಪಡೆದವನು. ಶಾಂಡಿಲ್ಯ, ನೈಧ್ರುವ, ರೈಭ್ಯ -ಈ ಮೂವರು ಕಾಶ್ಯಪಪುತ್ರರು ಸ್ವಭಾವತಃ ಮಾನವರು.

ಇನ್ನು ಮುಂದೆ ಪುಲಸ್ತ್ಯನ ಸಂತತಿಯ ವಿವರಣೆ: ತೃಣಬಿಂದು ಎಂಬ ರಾಜರ್ಷಿ. ಇವನಿಗೆ ಇಲನಲಾ ಎಂಬ ಮಗಳು. ಪುಲಸ್ತ್ಯ ಇವಳ ಪತಿ. ವಿಶ್ರವ ಇವರ ಮಗ. ಇವನಿಗೆ ಪುಷ್ಪೋತ್ಕಟಾವಾಕಾ, ಕೈಕಸೀ, ದೇವವರ್ಣಿನೀ ಎಂಬ ಬಹಳ ಸುಂದರಿಯರಾದ ನಾಲ್ಕು ಜನ ಪತ್ನಿಯರು. ಇವರಿಂದ ಪೌಲಸ್ತ್ಯಕುಲ ಬೆಳೆಯಿತು. ದೇವವರ್ಣಿನಿಯಲ್ಲಿ ಹುಟ್ಟಿದವನು ಕುಬೇರ. ಇವನೇ ಜ್ಯೇಷ್ಠಪುತ್ರ. ರಾಕ್ಷಸಾಧಿಪನಾದ ರಾವಣ ಕೈಕಸಿಯ ಮಗ. ಕುಂಭಕರ್ಣ, ಶೂರ್ಪಣಖಾ, ವಿಭೀಷಣ ಇವರು ಪುಷ್ಪೋತ್ಕಟಿಯ ಮಕ್ಕಳು. ಮಹೋದರ, ಪ್ರಹಸ್ತ, ಮಹಾಪಾರ್ಶ್ವ ಮತ್ತು ಖರ ಎಂಬ ಗಂಡುಮಕ್ಕಳು, ಕುಂಭೀನಸೀ ಎಂಬ ಹುಡುಗಿ ವಾಕೆಯ ಮಕ್ಕಳು. ತ್ರಿಶಿರ, ದೂಷಣ, ವಿದ್ಯುಜ್ಜಿಹ್ವ, ಮಹಾಬಲ ಈ ನಾಲ್ವರೂ ವಾಕಯ ಮಕ್ಕಳು. ರಾವಣ ಮೊದಲಾದ ಹತ್ತು ಜನ (ವಿಭೀಷಣನನ್ನು ಬಿಟ್ಟು) ಪುಲಸ್ತ್ಯನ ಕುಲದಲ್ಲಿ ಹುಟ್ಟಿದ ಅತ್ಯಂತ ಕ್ರೂರಕರ್ಮವನ್ನು ಮಾಡುವ ರಾಕ್ಷಸರು. ಎಲ್ಲರೂ ಶಿವಭಕ್ತರು, ತಪೋಬಲದಿಂದ ಉತ್ಕೃಷ್ಟರು, ಮಹಾಭಯಂಕರರು.

ಜಿಂಕೆಗಳು, ಸರ್ಪಗಳು, ಕೋರೆಹಲ್ಲಿನ ಪ್ರಾಣಿಗಳು, ಭೂತಗಳು, ಪಿಶಾಚಿಗಳು, ಕರಡಿಗಳು, ಹಂದಿಗಳು ಮತ್ತು ಆನೆಗಳು ಪುಲಹಪ್ರಜಾಪತಿಯ ಸಂತತಿ.

ಕ್ರತುಪ್ರಜಾಪತಿಗೆ ವೈವಸ್ವತ ಮನ್ವಂತರದಲ್ಲಿ ಸಂತತಿ ಇಲ್ಲ. ಮರೀಚಿ ಪ್ರಜಾಪತಿಯ ಮಗ ಕಶ್ಯಪ. ಇವನೂ ಒಬ್ಬ ಪ್ರಜಾಪತಿ. ಭೃಗುವಿನ ಮಗ ಶುಕ್ರಾಚಾರ್ಯ. ಇವನು ಮಹಾತಪಸ್ವಿ ದೈತ್ಯಗುರು, ವೇದಾಧ್ಯಯನ ಮತ್ತು ಯೋಗಾಭ್ಯಾಸಗಳಲ್ಲಿ ನಿರತ, ಶಿವಭಕ್ತ, ಮಹಾತೇಜಸ್ವಿ

ಅತ್ರಿಯ ಮಗ ವಹ್ನಿ. ಕೃಶಾಶ್ವ ಎಂಬ ಬ್ರಹ್ಮರ್ಷಿಯ ಹೆಂಡತಿ ಘೃತಾಚೀ. ಇವರ ಮಗ ನೈಧ್ರುವ. ಇವನು ವಹ್ನಿಯ ಸೋದರ ಎಂದು ಪ್ರಸಿದ್ಧಿ. ಕೃಶಾಶ್ವ ಮುನಿಯು ಘೃತಾಚಿಯಲ್ಲಿ ಸ್ವಸ್ತ್ಯಾತ್ರೇಯರು ಎಂಬ ಮಕ್ಕಳನ್ನು ಪಡೆದನು. ಇವರೆಲ್ಲರೂ ಮಹಾವರ್ಚಸ್ವಿಗಳು, ವೇದವೇದಾಂಗ ನಿರತರು, ತಪಸ್ಸಿನಿಂದ ಪಾಪವನ್ನು ನಾಶಮಾಡಿಕೊಂಡವರು.

ನಾರದರು ಅರುಂಧತಿಯನ್ನು ವಸಿಷ್ಠನಿಗೆ ಕೊಟ್ಟಿದ್ದರು. ದಕ್ಷ ಪ್ರಜಾಪತಿಯ ಮಕ್ಕಳಾದ ಹರ್ಯಶ್ವರು ನಾರದರ ಮಾಯೆಯಿಂದ (ಸಂಸಾರ ಅಸಾರವೆಂಬ ಉಪದೇಶದಿಂದ ಭಾಗವತ) ವಿರಕ್ತರಾದರು. ಸಂತತಿಯನ್ನು ಬೆಳೆಸಲು ಬಯಸಿದ್ದ ದಕ್ಷಪ್ರಜಾಪತಿ ಕೋಪ ಗೊಂಡು ಸಂತತಿಹೀನನಾಗಬೇಕೆಂದು ನಾರದರನ್ನು ಶಪಿಸಿದರು.

ವಸಿಷ್ಠ-ಅರುಂಧತಿಯರ ಮಗ ಶಕ್ತಿಮುನಿ. ಇವನ ಮಗ ಪರಾಶರ. ಇವನು ಸರ್ವಜ್ಞ, ತಪಸ್ವಿಗಳಲ್ಲಿ ಶ್ರೇಷ್ಠ. ಇವನು ತ್ರಿಪುರಾಂತಕನಾದ ಶಿವನನ್ನು ಆರಾಧಿಸಿ ಅಪ್ರತಿಮರಾದ ಕೃಷ್ಣದ್ವೈಪಾಯನರನ್ನು ಪುತ್ರನನ್ನಾಗಿ ಪಡೆದನು. ಭಗವಾನ್ ಶಂಕರನೇ ಕೃಷ್ಣದ್ವೈಪಾಯನರ ಮಗ ಶುಕ. ಈ ಅವತಾರದಲ್ಲಿ ಉತ್ತಮ ಸಾಧನೆಯನ್ನು ಮಾಡಿ ಪರಮಪದವನ್ನು ಪಡೆದನು. ಶುಕ್ರಾಚಾರ್ಯರಿಗೆ ಭೂರಿಶ್ರವಸ್, ಪ್ರಭು, ಶಂಭು, ಕೃಷ್ಣ ಮತ್ತು ಗೌರ ಎಂಬ ಐದುಜನ ಮಕ್ಕಳು. ಇವರು ಮಹಾತಪಸ್ವಿಗಳು. ಕೀರ್ತಿ ಶುಕ್ರಾಚಾರ್ಯರ ಹೆಣ್ಣುಮಗಳು. ಇವಳು ಯೋಗಿಗಳ ತಾಯಿ ಮಹಾವ್ರತನಿಷ್ಠಳು.

ಇಲ್ಲಿಗೆ ಅತ್ರಿವಂಶದ ವಿವರಣೆ ಮುಗಿಯಿತು. ಇನ್ನು ಮುಂದೆ ಕಶ್ಯಪರಿಂದ ಉಗಮವಾದ ರಾಜಸಂತತಿಯ ವಿವರಣೆ.

* * *

## ಅಧ್ಯಾಯ-೨೦

**ಸೂತ ಉವಾಚ :**

ಕಶ್ಯಪ - ಅದಿತಿಯರ ಮಗ ಆದಿತ್ಯ. ಆದಿತ್ಯನಿಗೆ ಸಂಜ್ಞಾ, ರಾಜ್ಞೀ, ಪ್ರಭಾ, ಛಾಯಾ ಎಂಬ ನಾಲ್ಕು ಜನ ಹೆಂಡತಿಯರು. ಆದಿತ್ಯ-ಸಂಜ್ಞೆಯರ ಮಗ ಮನು. ಯಮ-ರೇವಂತರು ರಾಜ್ಞಿಯ ಗಂಡು ಮಕ್ಕಳು. ಯಮುನಾ ಅವಳ ಮಗಳು. ಪ್ರಭಾತ ಪ್ರಭಾಳ ಮಗ. ಸಾವರ್ಣಿ, ಶನಿ, ವಿಷ್ಟಿ ಛಾಯಾಳ ಪುತ್ರರು, ತಪತೀ ಅವಳ ಪುತ್ರಿ.

ಆದಿತ್ಯ-ಸಂಜ್ಞೆಯರ ಮಗನಾದ ಮನು(ವೈವಸ್ವತ ಮನು)ವಿಗೆ ಇಕ್ಷ್ವಾಕು, ನೃಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ಅರಿಷ್ಟಕ ರೂಷ ಮತ್ತು ಪೃಷಧ್ರ ಎಂಬ ಒಂಭತ್ತು ಜನ ಇಂದ್ರಸಮಾನರಾದ ಗಂಡುಮಕ್ಕಳು. ಇಲಾ ಜ್ಯೇಷ್ಠಪುತ್ರಿ. ಇವಳು ಚಂದ್ರನ ಮಗ ಬುಧನ ಆಶ್ರಮಕ್ಕೆ ಹೋಗಿ ಅವನಿಂದ ಪುರೂರವಸ್ ಎಂಬ ಮಗನನ್ನು ಪಡೆದಳು. ಕೆಲವು ಕಾಲಾನಂತರ ಸುದ್ಯುಮ್ನ ಎಂಬ ಪುರುಷನಾಗಿ ಪರಿವರ್ತನೆ ಹೊಂದಿದಳು.★ ಈ ಸುದ್ಯುಮ್ನನಿಗೆ ಉತ್ಕಲ, ಗಯ ಮತ್ತು ವಿನತ ಎಂಬ ಮೂರು ಜನ ಪುತ್ರರು. ಅಪ್ರತಿಮಕೀರ್ತಿವಂತರಾದ ಇವರು ಚತುರ್ಮುಖನನ್ನು ಕುರಿತು ತಪಸ್ಸು ಮಾಡಿದರು.

ವಿಕುಕ್ಷಿ ಇಕ್ಷ್ವಾಕುವಿನ ಜ್ಯೇಷ್ಠಪುತ್ರ. ಮಹಾಪರಾಕ್ರಮಿ. ಇವನಿಗೆ ಹದಿನೈದು ಜನ ಮಕ್ಕಳು. ಕಕುತ್ಸ್ಥ ಇವರಲ್ಲಿ ಜ್ಯೇಷ್ಠ ಇವನ ಮಗ ಸುಯೋಧನ. ಸುಯೋಧನನ ಮಗ ಪೃಥು. ಪೃಥುವಿನ ಮಗ ವಿಶ್ವಕ. ಇವನ ಮಗ ಧೀಮಂತನಾದ ಆರ್ದ್ರಕ. ಇವನ ಮಗ ಯುವನಾಶ್ವ ಮಹಾಪ್ರತಾಪಶಾಲಿಯಾಗಿದ್ದ ಇವನು ಒಮ್ಮೆ ಗೋಕರ್ಣಕ್ಷೇತ್ರಕ್ಕೆ ಹೋಗಿದ್ದನು. ಅಲ್ಲಿ ತಪಸ್ಸು ಮಾಡುತ್ತಿದ್ದ, ಸೂರ್ಯನಂತಹ ವರ್ಚಸ್ಸನ್ನು ಹೊಂದಿದ ಗೌತಮರನ್ನು ಕಂಡು ಅವರಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಪುತ್ರಾಕಾಂಕ್ಷಿಯಾಗಿದ್ದ ಯುವನಾಶ್ವ ''ಯಾವ ಪುಣ್ಯಕರ್ಮದಿಂದ ಧರ್ಮನಿಷ್ಠನಾದ ಪುತ್ರನನ್ನು ಪಡೆಯಲು ಸಾಧ್ಯ?'' ಎಂದು ಗೌತಮರನ್ನು ಕೇಳಿದನು.

''ನಿರ್ದೋಷನಾದ, ಆದಿ-ಅಂತ್ಯಗಳಿಲ್ಲದ ಪುರಾಣಪುರುಷ ನಾರಾಯಣನ ಆರಾಧನೆಯಿಂದ ಧಾರ್ಮಿಕ ಪುತ್ರನನ್ನು ಪಡೆಯಬಹುದು. ಚತುರ್ಮುಖಬ್ರಹ್ಮ ಮತ್ತು ಶಂಕರರು ಕ್ರಮವಾಗಿ ಯಾರ ಮಗ ಮತ್ತು ಮೊಮ್ಮಗರಾಗಿರುವರೋ ಆ ಸರ್ವನಿಯಾಮಕನಾದ ವಿಷ್ಣುವನ್ನು ಆರಾಧಿಸಿ ಒಳ್ಳೆಯ ಮಗನನ್ನು ಪಡೆಯಬಹುದು. ಯಾರ ಪ್ರಭಾವವನ್ನು ಚತುರ್ಮುಖಬ್ರಹ್ಮನೂ ಕೂಡ ಪೂರ್ಣವಾಗಿ ತಿಳಿದಿಲ್ಲವೋ ಅಂತಹ ನಾರಾಯಣನ ಆರಾಧನೆಯಿಂದ ಧಾರ್ಮಿಕನಾದ ಮಗನನ್ನು ಪಡೆಯಬಹುದು.''

ಯುವನಾಶ್ವನು ಗೌತಮರ ಮಾತಿನಂತೆ ಸನಾತನನೂ ಹೃಷೀಕೇಶನೂ, ವಾಸುದೇವನೂ ಆದ ವಿಷ್ಣುವನ್ನು ಆರಾಧಿಸಿದನು. ಈ ಯುವನಾಶ್ವನಿಗೆ ಶ್ರಾವಸ್ತಿ ಎಂಬ ಮಗನು ಹುಟ್ಟಿದನು. ಇವನು ಮಹಾಪರಾಕ್ರಮಿ. ಇವನು ಗೌಡದೇಶದಲ್ಲಿ ಶ್ರಾವಸ್ತಿ ಎಂಬ ಪಟ್ಟಣವನ್ನು ನಿರ್ಮಿಸಿದನು.

★ ಮನು ಪುತ್ರಕಾಮನಾಗಿ ಯಜ್ಞವೊಂದನ್ನು ಮಾಡಿದ್ದನು. ಆ ಯಜ್ಞದಲ್ಲಿ ಮಂತ್ರವನ್ನು ಹೇಳುವವರ ಅಪಚಾರದಿಂದ ಮನುವಿಗೆ ಮಗಳು ಹುಟ್ಟಿದಳು. ಆದರೆ ಮನು ಮಿತ್ರಾ-ವರುಣರನ್ನು ತನಗೆ ಪುತ್ರನೇ ಬೇಕೆಂದು ಒತ್ತಾಯಿಸಿದನು. ಅವರು ತಮ್ಮ ಮಂತ್ರಬಲದಿಂದ ಮಗಳನ್ನು ಮಗನಾಗಿ ಪರಿವರ್ತಿಸಿದರು. ಆದರೆ ''ಈ ಸ್ಥಳಕ್ಕೆ ಬಂದವರು ಹೆಣ್ಣಾಗುತ್ತಾರೆ'' ಎಂದು ಶಿವನು ಪರಿಗಣಿಸಿದ ಸ್ಥಳಕ್ಕೆ ಆಕಸ್ಮಾತ್ ಆಗಿಹೋದ ಸುದ್ಯುಮ್ನನು ಪುನಃ ಹೆಣ್ಣಾದನು. ಆ ಸ್ಥಿತಿಯಲ್ಲಿದ್ದಾಗಲೇ ಬುಧನಿಂದ ಪುರೂರವಸ್‌ನನ್ನು ಪಡೆದಳು. ಮನುವಿನ ಅಪೇಕ್ಷೆಯಂತೆ ಮಿತ್ರಾವರುಣರ ಮಂತ್ರಬಲದಿಂದ ಪುನಃ ಸುದ್ಯುಮ್ನನಾದನು. -ವಿಷ್ಣುಪುರಾಣ ಮೊದಲಾದವುಗಳು.

ಇವನ ಮಗ ಬೃಹದಶ್ವ, ಇವನ ಮಗ ಕುವಲಯಾಶ್ವಕ. ಇವನು ಧುಂಧು ಎಂಬ ಮಹಾ ಅಸುರನನ್ನು ಕೊಂದು ಧುಂಧುಮಾರ ಎಂಬ ಪ್ರಸಿದ್ಧಿಯನ್ನು ಪಡೆದನು. ದೃಢಾಶ್ವ, ದಂಡಾಶ್ವ ಮತ್ತು ಕಪಿಲಾಶ್ವ - ಇವರು ಧುಂಧುಮಾರನ ಮಕ್ಕಳು. ದೃಢಾಶ್ವನ ಮಗ ಪ್ರಮೋದ. ಪ್ರಮೋದನ ಮಗ ಹರ್ಯಶ್ವ, ಹರ್ಯಶ್ವನ ಮಗ ನಿಕುಂಭ. ನಿಕುಂಭನ ಮಗ ಸಂಹತಾಶ್ವಕ. ಕೃತಾಶ್ವ ಮತ್ತು ರಣಾಶ್ವರು ಸಂಹತಾಶ್ವಕನ ಮಕ್ಕಳು. ರಣಾಶ್ವನ ಮಗ ಯುವನಾಶ್ವ. ಇವನು ಇಂದ್ರನಿಗೆ ಸಮಾನವಾದ ಬಲವನ್ನು ಹೊಂದಿದವನು. ಋಷಿಗಳ ಅನುಗ್ರಹದಿಂದ ವರುಣನನ್ನು ಕುರಿತು ಯಜ್ಞವನ್ನು ಮಾಡಿ ಮಹಾವಿಷ್ಣುಭಕ್ತನಾದ ಪುತ್ರನನ್ನು ಪಡೆದನು. ಇವನೇ ಮಾಂಧಾತೃ. ಇವನು ಅಪ್ರತಿಮ, ಮಹಾಪ್ರಾಜ್ಞ, ಧನುರ್ಧಾರಿಗಳಲ್ಲಿ ಉತ್ತಮೋತ್ತಮ. ಮಾಂಧಾತೃವಿಗೆ ಪುರುಕುತ್ಸ, ಅಂಬರೀಷ ಮತ್ತು ಮುಚುಕುಂದ ಎಂಬ ಮೂರು ಜನ ಮಕ್ಕಳು. ಎಲ್ಲರೂ ಇಂದ್ರಸಮಾನರು. ಮುಚುಕುಂದ ಮಹಾಪುಣ್ಯಾತ್ಮ. ಅಂಬರೀಷನ ದಾಯಾದಿ* ಮತ್ತೊಬ್ಬ ಯುವನಾಶ್ವ. ಇವನ ಮಗ ಹರಿತ. ಹರಿತನ ಮಗ ಹಾರೀತ. ಪುರುಕುತ್ಸನ ದಾಯಾದಿ ತ್ರಸದ್ದಸ್ಯು. ಇವನು ಮಹಾಯಶಸ್ವೀ. ಇವನ ಹೆಂಡತಿ ನರ್ಮದಾ. ಇವರ ಮಗ ಸಂಭೂತಿ. ಇವನ ಮಗ ವಿಷ್ಣುವೃದ್ಧ. ಇವನ ಮಗ ಅನರಣ್ಯ. ಅನರಣ್ಯನ ಮಗ ಬೃಹದಶ್ವ, ಇವನ ಮಗ ಹರ್ಯಶ್ವ. ಇವನು ಪರಮಧಾರ್ಮಿಕ. ಕರ್ದಮಪ್ರಜಾಪತಿಯ ಅನುಗ್ರಹದಿಂದ ಧರ್ಮನಿಷ್ಠನೂ, ಸೂರ್ಯಭಕ್ತನೂ ಆದ ಮಗನನ್ನು ಪಡೆದನು. ಅವನ ಹೆಸರು ವಸುಮನಸ್. ಅವನು ಸೂರ್ಯೋಪಾಸನೆಯನ್ನು ಮಾಡಿ ಶತ್ರುಗಳನ್ನು ನಿಗ್ರಹಿಸಿದ, ಅಪ್ರತಿಮನಾದ ತ್ರಿಧನ್ವನ್ ಎಂಬ ಮಗನನ್ನು ಪಡೆದನು. ಈ ವಸುಮನಸ್ ವೇದಾಧ್ಯಯನ ಸಂಪನ್ನ, ದಾನಶೀಲ, ಸಂಸಾರಸಾಗರವನ್ನು ದಾಟಲು ಬಯಸಿದವನು, ಧರ್ಮನಿಷ್ಠ. ಶತ್ರುಗಳನ್ನು ನಿಗ್ರಹಿಸಿ ಅಶ್ವಮೇಧವನ್ನು ಮಾಡಿದನು. ಈ ಮಹಾತ್ಮನ ಯಾಗಸ್ಥಳಕ್ಕೆ ವಸಿಷ್ಠ, ಕಶ್ಯಪ ಮೊದಲಾದ ಋಷಿಗಳು ದೇವೇಂದ್ರ ಮೊದಲಾದ ದೇವತೆಗಳು ಬಂದಿದ್ದರು. ವಸುಮನಸ್ ವಿನಯದಿಂದ ಇವರುಗಳನ್ನು ನಮಸ್ಕರಿಸಿ, ವಿಧಿಗನುಗುಣವಾಗಿ ಯಜ್ಞವನ್ನು ಮುಗಿಸಿ ವಸಿಷ್ಠ ಮೊದಲಾದ ದ್ವಿಜಶ್ರೇಷ್ಠರನ್ನು ಕೇಳಿದನು.

**ವಸುಮನಸ್** : ಸರ್ವಜ್ಞರಾದ ಬ್ರಾಹ್ಮಣಶ್ರೇಷ್ಠರೇ! ಈ ಲೋಕದಲ್ಲಿ ಯಾವುದು ಹೆಚ್ಚು ಶ್ರೇಯಸ್ಕರ? ಯಜ್ಞ? ತಪಸ್ಸು? ಅಥವಾ ಸಂನ್ಯಾಸ?

**ವಸಿಷ್ಠ** : ವಿಧಿಗನುಗುಣವಾಗಿ ವೇದಗಳ ಅಧ್ಯಯನವನ್ನು ಮಾಡಿ, ಸಂತತಿಯನ್ನು ಪಡೆದು, ಯಜ್ಞಗಳಿಂದ ಯಜ್ಞೇಶ್ವರನ ಪೂಜೆಯನ್ನು ಮಾಡಿ ಅನಂತರ ಜಿತೇಂದ್ರಿಯನಾಗಿ ವನಕ್ಕೆ ಹೋಗಬೇಕು.

**ಪುಲಸ್ತ್ಯ** : ತಪಸ್ಸಿನಿಂದ ಯೋಗಿಯಾದ ಪರಮೇಶ್ವರನನ್ನು ಆರಾಧಿಸಿ, ಯಜ್ಞಗಳಿಂದ ದೇವಶ್ರೇಷ್ಠರನ್ನು ಪೂಜಿಸಿ ಅನಂತರ ವಿಧಿಗನುಗುಣವಾಗಿ ಸಂನ್ಯಾಸಿಯಾಗಬೇಕು.

★ ದಾಯಾದಿ ಎಂದರೆ ಆಸ್ತಿಯ ಮೇಲೆ ಹಕ್ಕು ಇರುವವರು ಎಂದರೆ ಸೋದರರು ಮತ್ತು ಸೋದರರ ಮಕ್ಕಳು.

ಪುಲಹ : ಪುರಾಣಪುರುಷನೂ, ಪರಮೇಶ್ವರನೂ ಆದ ಸೂರ್ಯನನ್ನು ತಪಸ್ಸಿನಿಂದ ಆರಾಧಿಸಿ ಮೋಕ್ಷವನ್ನು ಪಡೆಯಬೇಕು.

ಜಮದಗ್ನಿ : ಜನ್ಮರಹಿತನೂ, ಜಗಜ್ಜನ್ಮಾದಿಕಾರಣನೂ, ಸನಾತನನೂ, ಸರ್ವಾಂತರ್ಯಾಮಿಯೂ ಆದ ದೇವನನ್ನು ತಪಸ್ಸಿನಿಂದ ಪೂಜಿಸಬೇಕು.

ವಿಶ್ವಾಮಿತ್ರ : ಸರ್ವಪ್ರೇರಕನೂ, ಸರ್ವಾಂತರ್ಯಾಮಿಯೂ, ಸ್ವಯಂ (ಪರಾವಲಂಬನೆ ಇಲ್ಲದ) ಇರುವವನೂ, ವಿಶ್ವತೋಮುಖನೂ ಆದ ರುದ್ರನನ್ನು ಉಗ್ರ ತಪಸ್ಸಿನಿಂದ ಆರಾಧಿಸಬೇಕು. ಬೇರೆ ಯಜ್ಞಗಳಿಂದ ಅಲ್ಲ.

ಭರದ್ವಾಜ : ಸರ್ವದೇವಸ್ವರೂಪನಾದ, ಸನಾತನನಾದ ವಾಸುದೇವನನ್ನು ಪರಮೇಶ್ವರ ಎಂದು ಯಜ್ಞಗಳಿಂದ ಪೂಜಿಸಬೇಕು.

ಅತ್ರಿ : ಜಗಜ್ಜನ್ಮಾದಿಕಾರಣನಾದ, ಬ್ರಹ್ಮನ ತಂದೆಯಾದ ಮಹೇಶ್ವರನನ್ನು ತೀವ್ರ ತಪಸ್ಸಿನಿಂದ ಪೂಜಿಸಬೇಕು.

ಗೌತಮ : ಈ ಜಗತ್ತು ಯಾರ ಶಕ್ತಿಯಿಂದ ನಡೆಯುತ್ತಿದೆಯೋ, ಯಾರು ಪ್ರಕೃತಿ-ಪುರುಷರ ಜನಕನೋ ಆ ದೇವನನ್ನು ತಪಸ್ಸಿನಿಂದ ಪೂಜಿಸಬೇಕು.

ಕಶ್ಯಪ : ಸಹಸ್ರಾಕ್ಷನೂ, ಸರ್ವಸಾಕ್ಷಿಯೂ, ಸುಖಪ್ರದನೂ ಆದ ಪ್ರಜಾಪತಿಯನ್ನು ತಪಸ್ಸಿನಿಂದ ಪೂಜಿಸಬೇಕು.

ಕ್ರತು : ವೇದಾಧ್ಯಯನ ಮತ್ತು ಯಜ್ಞಗಳಿಂದ ಪುತ್ರಸಂತಾನವನ್ನು ಪಡೆದಿರುವ ವ್ಯಕ್ತಿಗೆ ತಪಸ್ಸೇ ಧರ್ಮ. ಬೇರೆ ಯಾವ ಧರ್ಮಗಳನ್ನೂ ಶಾಸ್ತ್ರಗಳು ವಿಧಿಸಿಲ್ಲ.

ರಾಜರ್ಷಿ ವಸುಮನಸ್ ಎಲ್ಲ ಋಷಿಗಳ ಮಾತನ್ನೂ ಕೇಳಿ ಬಹಳ ಸಂತೋಷದಿಂದ ಅವರುಗಳನ್ನು ಕಳಿಸಿ ತ್ರಿಧನ್ವನಿಗೆ ಹೇಳಿದನು.

''ಸೂರ್ಯ ಮಂಡಲಾಂತರ್ಗತನಾದ, ಪರಿಪೂರ್ಣನಾದ ಪ್ರಾಣಪುರುಷನನ್ನು ತಪಸ್ಸಿನಿಂದ ಆರಾಧಿಸುತ್ತೇನೆ. ನೀನು ಧರ್ಮನಿಷ್ಠನಾಗಿ ಚತುರ್ವರ್ಣದ ಜನಗಳಿಂದ ತುಂಬಿರುವ ಇಡೀ ಭೂಮಂಡಲವನ್ನು ಆಲಸ್ಯವಿಲ್ಲದಂತೆ ಪಾಲಿಸು'' ಹೀಗೆ ಹೇಳಿ ತನ್ನ ಮಗನಿಗೆ ರಾಜ್ಯವನ್ನೊಪ್ಪಿಸಿ ತಪಸ್ಸನ್ನಾಚರಿಸಲು ಅರಣ್ಯಕ್ಕೆ ಹೋದನು. ದೇವದಾರು ವನಗಳಿರುವ ರಮ್ಯವಾದ ಹಿಮವತ್‌ಶಿಖರದಲ್ಲಿ ಕಂದ, ಮೂಲ, ಫಲಗಳನ್ನು ತಿನ್ನುತ್ತಾ ದೇವತೆಗಳನ್ನು ಆರಾಧಿಸಿದನು. ತಪಸ್ಸಿನಿಂದ ಪಾಪಗಳನ್ನು ಪರಿಹರಿಸಿಕೊಂಡ ಅವನು ಒಂದು ನೂರು ವರ್ಷಗಳ ಕಾಲ ವೇದಮಾತೆಯಾದ ಗಾಯತ್ರಿಯನ್ನು ಜಪಿಸಿದನು. ಹೀಗೆ ತಪಸ್ಸು

ಮಾಡುತ್ತಿದ್ದಾಗ ವಿಶ್ವನಿಯಾಮಕನಾದ ಬ್ರಹ್ಮದೇವನು ಆ ಸ್ಥಳಕ್ಕೆ ಬಂದನು. ಬ್ರಹ್ಮದೇವನನ್ನು ನೋಡಿ ವಸುಮನಸ್ ಅವನ ಪಾದಗಳಿಗೆ ನಮಸ್ಕರಿಸಿದನು.

"ದೇವಾಧಿದೇವನಾದ, ಹಿರಣ್ಯಮೂರ್ತಿಯಾದ, ಸಹಸ್ರಾಕ್ಷನಾದ ಪರಿಪೂರ್ಣನಾದ ಪರಮಾತ್ಮನಿಗೆ ನಮಸ್ಕಾರ. ಸೃಷ್ಟಿ-ಪಾಲನ ಕರ್ತೃವಾದ, ದೇವಾತ್ಮಮೂರ್ತಿಯಾದ, ಸಾಂಖ್ಯ ಯೋಗಗಳಿಂದ ಅಧಿಗಮ್ಯನಾದ, ಜ್ಞಾನಸ್ವರೂಪನಾದ ನಿನಗೆ ನಮಸ್ಕಾರ. ಸೃಷ್ಟಿಕರ್ತೃವೂ, ಸರ್ವಜ್ಞನೂ, ಪುರಾಣಪುರುಷನೂ, ಯೋಗಿಗುರುವೂ, ತ್ರಿಮೂರ್ತಿಯೂ ಆದ ನಿನಗೆ ನಮಸ್ಕಾರ" ಎಂದು ಪ್ರಾರ್ಥಿಸಿದನು. ಅನಂತರ ಭಗವಾನ್ ಬ್ರಹ್ಮನು "ನಿನಗೆ ಮಂಗಳ ವಾಗಲಿ, ವರವನ್ನು ಕೇಳು" ಎಂದು ಹೇಳಿದನು.

"ದೇವದೇವೇಶ! ಇನ್ನೂ ಒಂದು ನೂರು ವರ್ಷ ಗಾಯತ್ರಿಯನ್ನು ಜಪಿಸುವೆ. ಅಷ್ಟು ಆಯುಷ್ಯವನ್ನು ದಯಪಾಲಿಸು" ಎಂದು ರಾಜನು ಹೇಳಿದನು. "ಹಾಗೆಯೇ ಆಗಲಿ" ಎಂದು ಹೇಳಿ, ರಾಜನನ್ನು ಕೈಯಿಂದ ಮುಟ್ಟಿ ಅಂತರ್ಧಾನನಾದನು.

ಆ ರಾಜನು ಪ್ರತಿದಿನ ಮೂರುಕಾಲಗಳಲ್ಲಿ ಸ್ನಾನಮಾಡುತ್ತಾ, ಕಂದ-ಮೂಲ-ಫಲಗಳನ್ನು ತಿನ್ನುತ್ತಾ, ಬಹಳ ಪ್ರಸನ್ನವಾದ ಮನಸ್ಸಿನಿಂದ ಗಾಯತ್ರಿಯನ್ನು ಜಪಿಸಿದನು. ನೂರು ವರ್ಷಗಳ ನಂತರ ಬ್ರಹ್ಮದೇವನು ಸೂರ್ಯಮಂಡಲ ಮಧ್ಯದಿಂದ ಆವಿರ್ಭವಿಸಿದನು. ರಾಜನು ವೇದಮಂತ್ರಗಳಿಂದಲೂ, ವಿಶೇಷವಾಗಿ ಗಾಯತ್ರೀ ಮಂತ್ರದಿಂದಲೂ ಸ್ತೋತ್ರ ಮಾಡುತ್ತಾ ಬ್ರಹ್ಮನು ಶಿವನಾದದ್ದನ್ನು ನೋಡಿದನು. ನಾಲ್ಕು ಭುಜಗಳು, ತಲೆಯ ಮೇಲೆ ಜಟೆ, ಎಂಟು ಕೈಗಳು, ಮೂರು ಕಣ್ಣುಗಳು ತಲೆಯ ಮೇಲೆ ಅರ್ಧಚಂದ್ರ, ನರ-ನಾರೀ ಶರೀರ, ನೀಲಕಂಠ- ಇವುಗಳನ್ನು ಹೊಂದಿರುವ, ತನ್ನ ಕಾಂತಿಯಿಂದ ಜಗತ್ತನ್ನೇ ಬೆಳಗುತ್ತಿರುವ, ರಕ್ತಾಂಬರವನ್ನೂ, ರಕ್ತಮಾಲೆ-ರಕ್ತಗಂಧವನ್ನೂ ಧರಿಸಿರುವ ಶಿವನನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿದನು. ಗಾಯತ್ರೀ ಮಂತ್ರದಿಂದ ಸ್ತುತಿಸಿದನು. "ನಮಸ್ತೇ ನೀಲಕಂಠಾಯ ಭಾಸ್ವತೇ ಪರಮೇಷ್ಠಿನೇ । ತ್ರಯೀಮಯಾಯ ರುದ್ರಾಯ ಕಾಲರೂಪಾಯ ಹೇತುವೇ" ಎಂದು ಸ್ತುತಿಸಿದನು. ಪರಮಪ್ರೀತನಾದ ಶಿವನು ರಾಜನಿಗೆ ಹೇಳಿದನು. "ಪುಣ್ಯಾತ್ಮನೇ! ನೀಲಕಂಠ, ಪರಮೇಷ್ಠೀ ಇತ್ಯಾದಿಗಳು ನನ್ನ ರಹಸ್ಯನಾಮಗಳು. ಇವುಗಳು ಸರ್ವವೇದಗಳಲ್ಲಿ ಹೇಳಲ್ಪಟ್ಟಿವೆ. ಇವುಗಳು ಸಂಸಾರವನ್ನು ಪರಿಹರಿಸುತ್ತವೆ. ರಾಜನೇ! ಶುಚಿಯಾಗಿದ್ದು ಯಾವಾಗಲೂ ಈ ನಾಮಗಳನ್ನು ಹೇಳು, ನಮಸ್ಕಾರವನ್ನು ಮಾಡು. ಯಜುರ್ವೇದದ ಸಾರವಾದ ಶತರುದ್ರೀಯ ಅಧ್ಯಯನವನ್ನು ಮಾಡು. ನನ್ನಲ್ಲಿ ಮನಸ್ಸಿಟ್ಟು ಬೇರೆ ಕಡೆ ಮನಸ್ಸಿಡದೇ ಜಪಿಸು. ಬ್ರಹ್ಮಚಾರಿಯೂ, ನಿರಾಹಾರನೂ, ಭಸ್ಮನಿಷ್ಠನೂ, ಸಮಾಧಾನಚಿತ್ತನೂ ಆಗಿ ಮರಣಪರ್ಯಂತ ರುದ್ರವನ್ನು ಜಪಿಸಬೇಕು. ಹೀಗೆ ಮಾಡಿದವನು ಮುಕ್ತಿಯನ್ನು ಪಡೆಯುತ್ತಾನೆ." ಹೀಗೆಂದು ಹೇಳಿ

ಮತ್ತು ನೂರು ವರ್ಷ ಆಯುಷ್ಯವನ್ನು ಕೊಟ್ಟನು. ಶ್ರೇಷ್ಠವಾದ ಜ್ಞಾನ-ವೈರಾಗ್ಯಗಳನ್ನು ಕೊಟ್ಟು ಪರಮೇಶ್ವರನು ಕ್ಷಣಾರ್ಧದಲ್ಲಿ ಅಂತರ್ಧಾನ ಹೊಂದಿದನು. ಅದು ಅದ್ಭುತವಾಗಿತ್ತು.

ರಾಜನು ನಿತ್ಯವೂ ಮೂರು ಕಾಲಗಳಲ್ಲಿ ಸ್ನಾನಮಾಡಿ, ಸಮಾಧಾನಚಿತ್ತನಾಗಿ ಬೇರೆ ಕಡೆ ಮನಸ್ಸಿಲ್ಲದೆ ರುದ್ರಾಧ್ಯಾಯವನ್ನು ಜಪಿಸಿದನು. ಹೀಗೆ ನೂರು ವರ್ಷ ಕಳೆದನಂತರ ವೇದೋಕ್ತವಾದ, ಪರಮೇಷ್ಠಿಯ ಸ್ಥಾನವಾಗಿರುವ ಸೂರ್ಯಮಂಡಲವನ್ನು ಪ್ರವೇಶಿಸಿ ಅನಂತರ ಮಹೇಶ್ವರ ಲೋಕವನ್ನು ಸೇರಿದನು.

ರಾಜ ವಸುಮನಸನ ಉತ್ತಮವಾದ ಈ ಚರಿತ್ರೆಯನ್ನು ಕೇಳಿದವನು ಎಲ್ಲ ಪಾಪಗಳಿಂದ ಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

* * *

## ಅಧ್ಯಾಯ-೨೧

**ಸೂತ ಉವಾಚ :**

ವಸುಮನಸನ ಮಗ ತ್ರಿಧನ್ವನು ಧರ್ಮದಿಂದ ರಾಜ್ಯವಾಳಿದನು. ಅವನ ಮಗ ತ್ರಯ್ಯಾರುಣ. ಇವನು ಒಳ್ಳೆಯ ಜ್ಞಾನಿ ಎಂದು ಪ್ರಸಿದ್ಧ. ಇವನ ಮಗ ಸತ್ಯವ್ರತ. ಮಹಾಬಲಶಾಲಿ. ಇವನ ಹೆಂಡತಿ ಸತ್ಯಧನಾ. ಇವರ ಮಗ ಹರಿಶ್ಚಂದ್ರ. ಹರಿಶ್ಚಂದ್ರನ ಮಗ ರೋಹಿತ. ಇವನೂ ಬಹಳ ಬಲಶಾಲಿ. ರೋಹಿತನ ಮಗ ವೃಕ. ವೃಕನ ಮಗ ಬಾಹು. ರೋಹಿತನ ಮತ್ತೊಬ್ಬ ಮಗ ಹರಿತ. ಅವನ ಮಗ ಧುಂಧು. ವಿಜಯ ಮತ್ತು ಸುದೇವ ಧುಂಧುವಿನ ಮಕ್ಕಳು. ವಿಜಯನ ಮಗ ಕಾರುಕ, ಕಾರುಕನ ಮಗ ಸಗರ. ಇವನು ಪರಮ ಧಾರ್ಮಿಕನಾದ ರಾಜ. ಪ್ರಭಾ ಮತ್ತು ಭಾನುಮತೀ ಇವನ ಇಬ್ಬರು ಹೆಂಡತಿಯರು. ಇಬ್ಬರಿಂದಲೂ ಆರಾಧಿತನಾದ ವಹ್ನಿ ಇಬ್ಬರಿಗೂ ಉತ್ತಮವಾದ ವರವನ್ನು ಕೊಟ್ಟನು. ಭಾನುಮತೀ ಅಸಮಂಜಸ ಎಂಬ ಒಬ್ಬನೇ ಮಗನನ್ನು ಪಡೆದಳು. ಪ್ರಭೆಯು ಅರವತ್ತುಸಾವಿರ ಮಕ್ಕಳನ್ನು ಪಡೆದಳು. ಅಸಮಂಜಸನ ಮಗ ಅಂಶುಮಾನ್. ಅವನ ಮಗ ದಿಲೀಪ. ದಿಲೀಪನ ಮಗ ಭಗೀರಥ. ಇವನ ತಪಸ್ಸಿನಿಂದ ಭೂಮಿಗೆ ತರಲ್ಪಟ್ಟ ಗಂಗೆಯೇ ಭಾಗೀರಥೀ. ಭಗೀರಥನ ತಪಸ್ಸಿನಿಂದ ಪ್ರೀತನಾದ ಹರನು ಗಂಗೆಯನ್ನು ತನ್ನ ತಲೆಯಲ್ಲಿ ಚಂದ್ರನ ತುದಿಯಲ್ಲಿ ಧರಿಸಿದನು. ಭಗೀರಥನ ಮಗ ಶ್ರುತ. ನಾಭಾಗ ಶ್ರುತನ ಮಗ. ನಾಭಾಗನ ಮಗ ಸಿಂಧುದ್ವೀಪ. ಇವನ ಮಗ ಅಯುತಾಯು. ಇವನ ಮಗ ಋತುಪರ್ಣ.

ಋತುಪರ್ಣನ ಮಗ ಪರಮಧಾರ್ಮಿಕನಾದ ಸುದಾಸ. ಸುದಾಸನ ಮಗ ಸೌದಾಸ. ಇವನು ಕಲ್ಮಾಷಪಾದ ಎಂದು ಪ್ರಸಿದ್ಧಿ. ಮಹಾತೇಜಸ್ವಿಯಾದ ವಸಿಷ್ಠನಿಂದ ಕಲ್ಮಾಷಪಾದನ ಹೆಂಡತಿಯಲ್ಲಿ ಇಕ್ಷ್ವಾಕುಕುಲಕ್ಕೆ ಧ್ವಜಪ್ರಾಯನಾಗಿದ್ದ ಅಶ್ಮಕನು ಹುಟ್ಟಿದನು. ಇವನ ಹೆಂಡತಿ ಉತ್ಕಲಾ. ಇವರ ಮಗ ನಕುಲ. (*ಮೂಲಕ ಎಂದು ವಿಷ್ಣು ಪುರಾಣ*) ಇವನು ಹುಟ್ಟಿದಾಗ ಪರಶುರಾಮನ ಕ್ಷತ್ರಿಯ ನಿರ್ಮೂಲನ ಕಾರ್ಯ ಯಶಸ್ವಿಯಾಗಿ ಮುಗಿಯುತ್ತಾ ಬಂದಿತ್ತು. ಈ ಕ್ಷತ್ರಿಯ ಶಿಶುವನ್ನು ಪರಶುರಾಮನಿಂದ ರಕ್ಷಿಸಲು ಸ್ತ್ರೀಯರು ವಿವಸ್ತ್ರರಾಗಿ ಅವನನ್ನು ಸುತ್ತುವರಿದಿದ್ದರು. ಆದ್ದರಿಂದ ನಾರೀಕವಚ ಎಂದು ಪ್ರಸಿದ್ಧನಾದನು. ಬೆಳೆದ ಅವನು ಪರಶುರಾಮನ ಭಯದಿಂದ ಕಾಡಿಗೆ ಹೋದನು. ಇವನ ಮಗ ಶತರಥ (*ದಶರಥ ಎಂದು ವಿಷ್ಣುಪುರಾಣ*) ಶತರಥನ ಮಗ ಇಲಿಬಿಲ. ಇವನ ಮಗ ವೃದ್ಧಶರ್ಮಾ. ಇವನ ಮಗ ವಿಶ್ವಸಹ. ಅವನ ಮಗ ಖಟ್ವಾಂಗ. ಖಟ್ವಾಂಗನ ಮಗ ದೀರ್ಘಬಾಹು. ಇವನ ಮಗ ರಘು. ರಘುವಿನ ಮಗ ಅಜ. ಅಜನ ಮಗ ದಶರಥ. ದಶರಥನ ಮಗ ರಾಮ. ಇವನು ವೀರ, ಧರ್ಮಜ್ಞ, ಲೋಕಪ್ರಸಿದ್ಧ. ದಶರಥನ ಮಕ್ಕಳಾದ ಭರತ, ಲಕ್ಷ್ಮಣ, ಶತ್ರುಘ್ನರೂ ಮಹಾ ಬಲಶಾಲಿಗಳು, ದೇವೇಂದ್ರಸಮರು, ವಿಷ್ಣುಶಕ್ತಿಯನ್ನು ಹೊಂದಿದವರು. ವಿಶ್ವರಕ್ಷಕನಾದ ವಿಷ್ಣು ರಾವಣನ ನಾಶಕ್ಕಾಗಿ ಅವತರಿಸಿದನು. ಜನಕನ ಮಗಳು ಸೀತೆ ರಾಮನ ಹೆಂಡತಿ. ಇವಳು ತ್ರಿಲೋಕವಿಖ್ಯಾತೆ, ಶೀಲ, ಔದಾರ್ಯ ಗುಣಸಂಪನ್ನಳು. ಜನಕನು ಹಿಮವಂತನ ಮಗಳಾದ ಪಾರ್ವತಿಯನ್ನು ತಪಸ್ಸಿನಿಂದ ಸಂತೋಷಪಡಿಸಿದ್ದನು. ಪಾರ್ವತಿಯು ರಾಮನನ್ನು ಪತಿಯಾಗಿ ವರಿಸುವ ಸೀತೆಯಾಗಿ ಜನಕನ ಮಗಳಾಗುವಂತೆ ವರ ಕೊಟ್ಟಳು. ಜನಕನ ಮೇಲೆ ಪ್ರೀತನಾದ ನೀಲಲೋಹಿತವರ್ಣದ ಭಗವಾನ್ ತ್ರಿಶೂಲಿಯು (*ಶಿವನು*) ಶತ್ರುನಾಶಕ್ಕಾಗಿ ಅದ್ಭುತವಾದ ಬಿಲ್ಲನ್ನು ಅವನಿಗೆ ಕೊಟ್ಟನು. ಧೀಮಂತನಾದ ಜನಕನು ತನ್ನ ಮಗಳ ಮದುವೆಯನ್ನು ಮಾಡಲು ಬಯಸಿ ''ಈ ಬಿಲ್ಲನ್ನು ಎತ್ತಲು ಸಮರ್ಥನಾದ ವ್ಯಕ್ತಿ, ಅವನು ಮೂರುಲೋಕಗಳಲ್ಲಿ ದೇವನಾಗಲಿ, ದಾನವನಾಗಲಿ, ಸೀತೆಯನ್ನು ಪಡೆಯಲು ಅರ್ಹ'' ಎಂದು ಘೋಷಿಸಿದನು. ಇದನ್ನು ತಿಳಿದ ರಾಮನು ಜನಕನ ಮನೆಗೆ ಬಂದನು. ಶಿವಧನುಸ್ಸನ್ನು ಆಯಾಸವಿಲ್ಲದೆ ಮುರಿದನು. ಶಿವನು ಪಾರ್ವತಿಯನ್ನು ಮದುವೆಯಾದಂತೆ, ಷಣ್ಮುಖನು ಸೇನೆಯನ್ನು ಪರಿಗ್ರಹಿಸಿದಂತೆ ಸೀತೆಯನ್ನು ಪರಿಗ್ರಹಿಸಿದನು. ಬಹುಕಾಲಾನಂತರ ಜ್ಯೇಷ್ಠಪುತ್ರ ರಾಮನನ್ನು ರಾಜನನ್ನಾಗಿ ಮಾಡಲು ದಶರಥನು ಮುಂದಾದನು. ಅವನ ಹೆಂಡತಿಯಾದ ಮುಗುಳ್ನಗೆಯ ಸುಂದರಿ ಕೈಕಯಿಯು ಅದನ್ನು ತಡೆದು ಹಿಂದೆ ಎರಡು ವರಗಳನ್ನು ಕೊಟ್ಟಿರುವುದರಿಂದ, ಅದರಂತೆ ಭರತನನ್ನು ರಾಜನನ್ನಾಗಿ ಮಾಡಬೇಕೆಂದು ಆಗ್ರಹ ಮಾಡಿದಳು. ಅವಳ ಮಾತಿನಿಂದ ದುಃಖಿತನಾದ ದಶರಥನು ''ಹಾಗೆಯೇ ಆಗಲಿ'' ಎಂದನು. ಧರ್ಮಜ್ಞನಾದ ರಾಮನು ತಂದೆಯನ್ನು ನಮಸ್ಕರಿಸಿ ಸೀತಾ-ಲಕ್ಷ್ಮಣರೊಡನೆ ಅರಣ್ಯಕ್ಕೆ ಹೋದನು. ಹದಿನಾಲ್ಕು ವರ್ಷ ವನವಾಸ ಮಾಡುವ ಶಪಥವನ್ನು ಮಾಡಿ ಹೊರಟನು. ವನದಲ್ಲಿದ್ದಾಗ ಒಮ್ಮೆ ರಾವಣನು ಸನ್ಯಾಸಿಯ ವೇಷದಿಂದ ಸೀತೆಯನ್ನು ಅಪಹರಿಸಿ ತನ್ನ

ರಾಜ್ಯಕ್ಕೆ ಒಯ್ದನು. ರಾಮ-ಲಕ್ಷ್ಮಣರು ಸೀತೆಯನ್ನು ಕಾಣದೆ ಬಹಳ ದುಃಖಿತರಾದರು. ಹೀಗಿರುವಾಗ ಸುಲಭವಾಗಿ ಕೆಲಸಗಳನ್ನು ಸಾಧಿಸುವ ರಾಮನಿಗೆ ಸುಗ್ರೀವ ಮತ್ತು ಅವನ ಸೈನ್ಯದೊಂದಿಗೆ ಸಖ್ಯವಾಯಿತು. ಹನುಮಂತ ಸುಗ್ರೀವನ ಅನುಯಾಯಿ. ಇವನು ವಾಯುಪುತ್ರ, ವೀರ, ಮಹಾತೇಜಸ್ವಿ, ರಾಮನಿಗೆ ಯಾವಾಗಲೂ ಬಹಳ ಪ್ರಿಯ. ಇವನು ರಾಮನಿಗಾಗಿ ಪರಮಧೈರ್ಯವನ್ನು ಮಾಡಿ, ಸೀತೆಯನ್ನು "ತಂದೇ ತರುತ್ತೇನೆ" ಎಂದು ದೃಢವಾಗಿ ನಿಶ್ಚಯಿಸಿ ಸಾಗರ ಪರ್ಯಂತವಾದ ಭೂಮಿಯನ್ನು ಸಂಚರಿಸಿದನು. ಸಾಗರದ ಮಧ್ಯದಲ್ಲಿದ್ದ ರಾವಣನ ಪುರ ಲಂಕೆಗೆ ಹೋದನು. ಅಲ್ಲಿ ನಿರ್ಜನ ಪ್ರದೇಶದಲ್ಲಿ ಮರವೊಂದರ ಬುಡದಲ್ಲಿ ಕುಳಿತಿದ್ದ, ರಾಕ್ಷಸಿಯರಿಂದ ಸುತ್ತುವರಿಯಲ್ಪಟ್ಟಿದ್ದ, ಕಣ್ಣಿನಲ್ಲಿ ನೀರು ತುಂಬಿದ್ದ, ರಾಮ-ಲಕ್ಷ್ಮಣರನ್ನು ನೆನೆಯುತ್ತಿದ್ದ, ಅಮಲಳೂ, ಅನಾದ್ಯನಂತಳೂ ಆದ ಸೀತೆಯನ್ನು ಕಂಡನು. ರಹಸ್ಯದಲ್ಲಿ ಅವಳಿಗೆ ತನ್ನ ಬಗ್ಗೆ ತಿಳಿಸಿ ಸಂಶಯ ಪರಿಹಾರಕ್ಕಾಗಿ ರಾಮನ ಉಂಗುರವನ್ನು ಕೊಟ್ಟನು. ಸೀತೆಯು ಉಂಗುರವನ್ನು ನೋಡಿ ರಾಮನೇ ಬಂದಂತೆ ಹಿಗ್ಗಿದಳು.

"ರಾಮನ ಬಳಿ ಕರೆದೊಯ್ಯುವೆ" ಎಂದು ಹೇಳಿ ಸೀತೆಗೆ ಭರವಸೆಯನ್ನು ನೀಡಿ ರಾಮನ ಬಳಿಗೆ ಹಿಂತಿರುಗಿದನು. ಸೀತೆಯನ್ನು ನೋಡಿದ ವಿಷಯವನ್ನು ರಾಮ-ಲಕ್ಷ್ಮಣರಿಗೆ ತಿಳಿಸಿ ಅವರಿಂದ ಸಮ್ಮಾನಿತನಾದನು. ರಾಮನು ಲಕ್ಷ್ಮಣ-ಹನುಮಂತರೊಂದಿಗೆ ಸಮಾಲೋಚಿಸಿ ರಾವಣನೊಡನೆ ಯುದ್ಧ ಮಾಡಲು ನಿರ್ಧರಿಸಿದನು. ನೂರಾರು ಕಪಿಗಳ ಸಹಾಯದಿಂದ ಸಾಗರಕ್ಕೆ ಸೇತುವೆಯನ್ನು ನಿರ್ಮಿಸಿ ಲಂಕೆಗೆ ದಾರಿಯನ್ನು ನಿರ್ಮಿಸಿದರು. ಅನಂತರ ರಾವಣನೊಂದಿಗೆ ಯುದ್ಧ ಮಾಡಿ ರಾವಣನನ್ನು ಅವನ ಪತ್ನಿ, ಪುತ್ರ, ಸೋದರರನ್ನು ಕೊಂದನು. ಸೀತೆಯನ್ನು ಜೊತೆಗೆ ಕರೆತಂದನು. ಸೇತುವೆಯ ಮಧ್ಯದಲ್ಲಿ ಲಿಂಗಸ್ಥನಾದ ಶಿವನನ್ನು (*ಶಿವಲಿಂಗವನ್ನು*) ಪ್ರತಿಷ್ಠೆ ಮಾಡಿದನು. ಪಾರ್ವತೀಸಹಿತ ಶಿವನು "ನೀನು ಸ್ಥಾಪಿಸಿದ ಲಿಂಗವನ್ನು ನೋಡುವ ದ್ವಿಜರ, ಅವರು ಮಹಾಪಾತಕಿಗಳಾಗಿದ್ದರೂ, ಪಾಪಗಳು ನಾಶವಾಗುತ್ತವೆ. ಈ ಸಮುದ್ರದಲ್ಲಿ ಸ್ನಾನ ಮಾಡಿ, ಈ ಲಿಂಗದ ದರ್ಶನ ಮಾಡಿದವರ ಬೇರೆ ಎಲ್ಲ ವಿಧದ ಪಾಪಗಳು ನಾಶವಾಗುತ್ತವೆ. ಗಿರಿಗಳು ಎಷ್ಟು ಕಾಲ ಇರುತ್ತವೆಯೋ, ಭೂಮಿಯು ಎಷ್ಟು ಕಾಲ ಇರುತ್ತದೆಯೋ, ಈ ಸೇತುವೆ ಎಷ್ಟು ಕಾಲ ಇರುತ್ತದೆಯೋ ಅಷ್ಟು ಕಾಲ ನಾನು ಇಲ್ಲಿ ಅದೃಶ್ಯನಾಗಿ ಇರುತ್ತೇನೆ. ಈ ಕ್ಷೇತ್ರದಲ್ಲಿ ಆಚರಿಸಲ್ಪಟ್ಟ ಸ್ನಾನ, ದಾನ, ತಪಸ್ಸು, ಶ್ರಾದ್ಧ ಎಲ್ಲವೂ ಅಕ್ಷಯವಾಗಲಿ. ಈ ಲಿಂಗದ ಸ್ಮರಣೆಯಿಂದಲೇ ಒಂದು ದಿನದ ಪಾಪವು ನಶಿಸುತ್ತದೆ' ಎಂದು ಹೇಳಿ ನಂದೀಶ್ವರ ಮತ್ತು ಗಣಗಳೊಂದಿಗೆ ಅಲ್ಲೇ ಅಂತರ್ಧಾನನಾದನು.

ರಾಮನು ಭರತನಿಂದ ಅಭಿಷಿಕ್ತನಾಗಿ ಧರ್ಮಪರಾಯಣನಾಗಿ ರಾಜ್ಯವನ್ನು ಆಳಿದನು. ಬ್ರಾಹ್ಮಣರನ್ನೂ, ಶಿವನನ್ನೂ ವಿಶೇಷವಾಗಿ ಪೂಜಿಸಿದನು. ದಕ್ಷಯಜ್ಞವನ್ನು ಭಂಗಮಾಡಿದ

ಶಿವನನ್ನು ಅಶ್ವಮೇಧದಿಂದ ಆರಾಧಿಸಿದನು. ಕುಶ-ಲವರು ರಾಮನ ಮಕ್ಕಳು. ಲವ ಒಳ್ಳೆಯ ತತ್ವಜ್ಞಾನಿ. ಕುಶನ ಮಗ ಅತಿಥಿ. ಅತಿಥಿಯ ಮಗ ನಿಷಧ. ನಿಷಧನ ಮಗ ನಲ. ನಲನ ಮಗ ನಭಸ್. ನಭಸನ ಮಗ ಪುಂಡರೀಕಾಕ್ಷ ಇವನ ಮಗ ಕ್ಷೇಮಧನ್ವಾ ಇವನ ಮಗ ದೇವಾನೀಕ. ಇವನು ಮಹಾವೀರ, ಪ್ರತಾಪಶಾಲಿ. ದೇವಾನೀಕನ ಮಗ ಅಹೀನಗು. ಇವನ ಮಗ ಮಹಸ್ವಾನ್. ಇವನ ಮಗ ಚಂದ್ರಾವಲೋಕ. ಇವನ ಮಗ ತಾರಾಧೀಶ. ಇವನ ಮಗ ಚಂದ್ರಗಿರಿ. ಇವನ ಮಗ ಭಾನುವಿತ್ತ. ಭಾನುವಿತ್ತನ ಮಗ ಶ್ರುತಾಯು. ಹೀಗೆ ಇಕ್ಷ್ವಾಕುವಂಶಜರ ಸಂಕ್ಷಿಪ್ತ ವಿವರಣೆ ಮಾಡಲ್ಪಟ್ಟಿದೆ. ಇಕ್ಷ್ವಾಕುವಂಶದ ಈ ವಿವರಣೆಯನ್ನು ಯಾರು ನಿತ್ಯವೂ ಕೇಳುತ್ತಾರೋ ಅವರು ಸರ್ವಪಾಪಗಳಿಂದ ಬಿಡುಗಡೆಯನ್ನು ಹೊಂದಿ ದೇವಲೋಕದಲ್ಲಿ ಪೂಜಿತರಾಗುತ್ತಾರೆ.

* * *

## ಅಧ್ಯಾಯ-೨೨

**ಸೂತ ಉವಾಚ :**

ಮನುಪುತ್ರಿ ಇಲೆಯ ಮಗ ಪುರೂರವಸ್ ಚೆನ್ನಾಗಿ ರಾಜ್ಯವಾಳಿದನು. ಅವನಿಗೆ ಇಂದ್ರನಂತೆ ತೇಜಸ್ವಿಗಳಾಗಿದ್ದ ಆರುಜನ ಮಕ್ಕಳು- ಆಯು, ಮಾಯು, ಅಮಾಯು, ವಿಶ್ವಾಯು, ಶತಾಯು, ಶ್ರುತಾಯು, ಊರ್ವಶಿಯಲ್ಲಿ ಜನಿಸಿದ ಇವರು ಪರಾಕ್ರಮಿಗಳು, ದಿವ್ಯಪುರುಷರು ಆಗಿದ್ದರು. ಆಯುವಿನ ಹೆಂಡತಿ ಪ್ರಭಾ. ಇವರಿಗೆ ಐದು ಜನ ಮಕ್ಕಳು. ಇವರಲ್ಲಿ ನಹುಷ ಜ್ಯೇಷ್ಠ. ಇವನು ಧರ್ಮಜ್ಞ, ಲೋಕಪ್ರಸಿದ್ಧ. ನಹುಷನ ಹೆಂಡತಿ ವಿರಜಾ. ಇವರಿಗೆ ಇಂದ್ರನಂತೆ ತೇಜಸ್ವಿಗಳಾದ ಐದು ಜನ ಮಕ್ಕಳು- ಯತಿ, ಯಯಾತಿ, ಸಂಯಾತಿ, ಆಯಾತಿ ಮತ್ತು ಅಶ್ವಕ. ಇವರಲ್ಲಿ ಯಯಾತಿ ಮಹಾಬಲಶಾಲಿ, ಪರಾಕ್ರಮಿ. ಶುಕ್ರಾಚಾರ್ಯನ ಮಗಳು ದೇವಯಾನಿಯನ್ನು ಇವನು ಮದುವೆಯಾಗಿದ್ದನು. ಅಸುರರಾಜ ವೃಷಪರ್ವನ ಮಗಳು ಶರ್ಮಿಷ್ಠೆಯೂ ಇವನ ಹೆಂಡತಿ. ಯದು ಮತ್ತು ತುರ್ವಸು ದೇವಯಾನಿಯ ಮಕ್ಕಳು. ದ್ರುಹ್ಯು ಅನು ಮತ್ತು ಪೂರು ಶರ್ಮಿಷ್ಠೆಯ ಮಕ್ಕಳು. ಯಯಾತಿ ಗುಣವಂತನೂ, ಜ್ಯೇಷ್ಠನೂ ಆದ ಯದುವನ್ನು ಬಿಟ್ಟು, ಪಿತೃವಚನ ಪಾಲಕನಾದ ಕನಿಷ್ಠಪುತ್ರ ಪೂರುವನ್ನು ರಾಜನನ್ನಾಗಿ ಮಾಡಿದನು. ತುರ್ವಸುವನ್ನು ಆಡಳಿತ ನಡೆಸಲು ನೇಮಕ ಮಾಡಿದನು. ನೈಋತ್ಯ ದಿಕ್ಕಿನಲ್ಲಿ ಯದುವನ್ನೂ, ಪಶ್ಚಿಮ ಮತ್ತು ಉತ್ತರಗಳಲ್ಲಿ ಕ್ರಮವಾಗಿ ದ್ರುಹ್ಯು ಮತ್ತು ಅನುವನ್ನು ನೇಮಕ ಮಾಡಿದನು. ಇವರೆಲ್ಲರೂ ಧರ್ಮದಿಂದ

ರಾಜ್ಯವಾಳಿದರು. ಯಯಾತಿಯು ತನ್ನ ಪತ್ನಿಯೊಡನೆ ಅರಣ್ಯಕ್ಕೆ ಹೋದನು. ಯದುವಿಗೆ ಸಹಸ್ರಜಿತ್, ಕ್ರೋಷ್ಟು, ನೀಲಜನ, ರಘು ಎಂಬ ಐದು ಜನ ಮಕ್ಕಳು. ಸಹಸ್ರಜಿತನ ಮಗ ಶತಜಿತ. ಇವನಿಗೆ ಹೈಹಯ, ಹಯ ಮತ್ತು ವೇಣುಹಯ ಎಂಬ ಮೂರುಜನ ಮಕ್ಕಳು. ಎಲ್ಲರೂ ಪರಮಧಾರ್ಮಿಕರು. ಹೈಹಯನ ಮಗ ಧರ್ಮ. ಇವನ ಮಗ ಧರ್ಮನೇತ್ರ. ಇವನು ಮಹಾಪ್ರತಾಪಶಾಲಿಯಾಗಿದ್ದನು. ಧರ್ಮನೇತ್ರನ ಮಗ ಕೀರ್ತಿ. ಕೀರ್ತಿಯ ಮಗ ಸಂಜಿತ. ಇವನ ಮಗ ಮಹಿಷ್ಠ. ಇವನ ಮಗ ಭದ್ರಶ್ರೇಣ್ಯ. ಭದ್ರಶ್ರೇಣ್ಯನ ಮಗ ದುರ್ದಮ. ಇವನ ಮಗ ಧೀಮಂತನೂ, ವೀರ್ಯವಂತನೂ ಆದ ಅಂಧಕ. ಅಂಧಕನಿಗೆ ಕೃತವೀರ್ಯ, ಕೃತಾಗ್ನಿ ಕೃತವರ್ಮಾ ಮತ್ತು ಕೃತೌಜಸ್ ಎಂಬ ನಾಲ್ಕು ಜನ ಮಕ್ಕಳು, ಕೃತವೀರ್ಯನ ಮಗ ಅರ್ಜುನ. ಇವನಿಗೆ ಸಾವಿರ ಕೈಗಳು, ತೇಜಸ್ವೀ, ಬಿಲ್ಲುವಿದ್ಯೆಯನ್ನು ತಿಳಿದವರಲ್ಲಿ ಶ್ರೇಷ್ಠ. ಇವನು ಜಮದಗ್ನಿಯ ಮಗ ಪರಶುರಾಮನಿಂದ ಹತನಾದನು. ಕಾರ್ತವೀರ್ಯಾರ್ಜುನನಿಗೆ ನೂರು ಜನ ಮಕ್ಕಳು. ಇವರಲ್ಲಿ ಶೂರ, ಶೂರಸೇನ, ಕೃಷ್ಣ, ಧೃಷ್ಣ ಮತ್ತು ಜಯಧ್ವಜ ಎಂಬ ಐದುಜನರು ಮಹಾರಥರು, ಅಸ್ತ್ರಕುಶಲರು, ಬಲಶಾಲಿಗಳು, ಶೂರರು, ಧರ್ಮಾತ್ಮರು ಮತ್ತು ಪ್ರಶಸ್ತಮನಸ್ಸಿನವರು. ಬಲಶಾಲಿಯಾದ ಜಯಧ್ವಜ ನಾರಾಯಣನ ಭಕ್ತ. ಶೂರಸೇನ ಮೊದಲಾದ ನಾಲ್ಕುಜನ ರುದ್ರಭಕ್ತರು. ಧರ್ಮನಿಷ್ಠನೂ, ಪ್ರಾಜ್ಞನೂ ಆದ ಜಯಧ್ವಜನು ಸಾಗರಶಾಯಿಯಾದ ಭಗವಾನ್ ಮಹಾವಿಷ್ಣುವನ್ನು ಪರಮದೈವವೆಂದು ಭಾವಿಸಿ ಅವನನ್ನೇ ಆಶ್ರಯಿಸಿದನು. ''ನಮ್ಮ ತಂದೆ ಶಿವಭಕ್ತರಾಗಿದ್ದರು ಎಂದು ಪ್ರಸಿದ್ಧಿ ಯಾಗಿದೆ. ಆದ್ದರಿಂದ ನಾರಾಯಣನೇ ಪರಮದೈವವೆಂಬ ಆರಾಧನೆ ಸರಿಯಲ್ಲ'' ಎಂದು ಶೂರಸೇನ ಮೊದಲಾದ ನಾಲ್ಕು ಜನರು ಹೇಳಿದರು. ಈ ಮಾತಿನಿಂದ ಜಯಧ್ವಜ ಮತ್ತು ಅವನ ಸೋದರರ ನಡುವೆ ಒಂದು ಚರ್ಚೆ ನಡೆಯಿತು.

ಜಯಧ್ವಜ : ಮಹಾವಿಷ್ಣುವಿನ ಆರಾಧನೆ ನನಗೆ ಪರಮಧರ್ಮ. ಭೂಮಂಡಲದ ರಾಜರುಗಳು ವಿಷ್ಣುವಿನ ಅಂಶದಿಂದ ಹುಟ್ಟಿರುತ್ತಾರೆ. ಪುರುಷೋತ್ತಮನಾದ ಭಗವಾನ್ ವಿಷ್ಣುವೇ ರಾಜ್ಯವನ್ನು ಆಳುವವನು. ಜಗತ್ಪಾಲಕನಾದ ಅವನನ್ನು ಪೂಜಿಸಲೇಬೇಕು. ಪರಮಾತ್ಮನ ಸಾತ್ವಿಕ, ರಾಜಸ, ತಾಮಸ ಮೂರ್ತಿಗಳು ಕ್ರಮವಾಗಿ ಸೃಷ್ಟಿ, ಸ್ಥಿತಿ ಮತ್ತು ಸಂಹಾರಗಳಿಗೆ ಕಾರಣಗಳಾಗಿವೆ. ಇವುಗಳಲ್ಲಿ ಸಾತ್ವಿಕಮೂರ್ತಿಯಾದ ಭಗವಾನ್ ವಿಷ್ಣುವು ಜಗತ್ತಿನ ಪಾಲನೆಯನ್ನು ಮಾಡುತ್ತಾನೆ. ರಾಜಸಮೂರ್ತಿಯಾದ ಬ್ರಹ್ಮನು ಸೃಷ್ಟಿ ಮಾಡುತ್ತಾನೆ. ತಾಮಸಮೂರ್ತಿಯಾದ ಹರನು ಸಂಹಾರ ಮಾಡುತ್ತಾನೆ. ಆದ್ದರಿಂದ ರಾಜ್ಯಪಾಲನೆಯನ್ನು ಮಾಡುವ ರಾಜರುಗಳು ಕೇಶಿಮರ್ದನನಾದ ಭಗವಾನ್ ವಿಷ್ಣುವನ್ನು ಆರಾಧಿಸಲೇಬೇಕು.

ಜಯಧ್ವಜ ಸೋದರರು : ಭಗವಾನ್ ರುದ್ರನು ತಮೋಗುಣವನ್ನು ಆಶ್ರಯಿಸಿ ಕಲ್ಪಾಂತದಲ್ಲಿ ಜಗತ್ತನ್ನು ನಾಶಮಾಡುವನು. ಶೂಲಧಾರಿಯಾದ, ಘೋರತಮವೂ, ತೇಜೋಮಯವೂ ಆದ ಶಿವನ ರೂಪವೇ ಜ್ಞಾನಿಗಳ ಸಂಸಾರವನ್ನು ನಾಶಮಾಡುತ್ತದೆ.

ಜಯಧ್ವಜ : ಸತ್ವಗುಣವೇ ಮುಕ್ತಿಸಂಪಾದಕ, ಭಗವಾನ್ ಹರಿಯೇ ಸತ್ವರೂಪನಾಗಿರುವನು.

ಸೋದರರು : ರುದ್ರನೇ, ಸಾತ್ವಿಕಜನರು ತನ್ನನ್ನು ಸೇವಿಸಿದಾಗ, ಸತ್ವಗುಣವನ್ನು ಪಡೆದು ಮುಕ್ತಿಯನ್ನು ಕೊಡುತ್ತಾನೆ. ಆದ್ದರಿಂದ ಸತತವಾಗಿ ಹರನನ್ನು ಪೂಜಿಸಬೇಕು.

ಜಯಧ್ವಜ : ಸ್ವಧರ್ಮದ ಆಚರಣೆಯಿಂದಲೇ ಮುಕ್ತಿ. ಬೇರೆ ಯಾವ ದಾರಿಯೂ ಇಲ್ಲ. ಹೀಗೆಂದು ಚಿಂತಕರು ಹೇಳುತ್ತಾರೆ. ಆದ್ದರಿಂದ ವೈಷ್ಣವಶಕ್ತಿಯನ್ನು ಹೊಂದಿರುವ ರಾಜರುಗಳು ಯಾವಾಗಲೂ ವಿಷ್ಣುವನ್ನು ಪೂಜಿಸಬೇಕು. ಅದೇ ಅವರ ಪರಮಧರ್ಮ.

ಸೋದರರಲ್ಲಿ ಒಬ್ಬನಾದ ಕೃಷ್ಣ : ನಮ್ಮ ತಂದೆ ಅರ್ಜುನ (ಕಾರ್ತವೀರ್ಯಾರ್ಜುನ) ಧರ್ಮವನ್ನು ಆಚರಿಸಲಿಲ್ಲವೆ ?

ಹೀಗೆ ವಿವಾದವು ಬೆಳೆದಾಗ ಸೋದರರಲ್ಲೊಬ್ಬನಾದ ಶೂರಸೇನನು "ಈ ವಿಷಯದಲ್ಲಿ ಋಷಿಗಳೇ ಪ್ರಮಾಣ, ಅವರು ಹೇಳುವುದೇ ಸರಿ" ಎಂದು ಹೇಳಿದನು. ಅನಂತರ ತಮ್ಮ ತಮ್ಮ ನಂಬಿಕೆಗಳ ಬಗ್ಗೆ ಬಹಳ ಭಾವುಕರಾಗಿದ್ದ ಈ ನಾಲ್ಕೂ ಜನ ಬ್ರಹ್ಮವಾದಿಗಳು ಸಪ್ತರ್ಷಿಗಳ ಆಶ್ರಮಕ್ಕೆ ಹೋದರು.

ವಸಿಷ್ಠಾದಿ ಮಹರ್ಷಿಗಳು ಹೇಳಿದರು : "ಯಾರಿಗೆ ಯಾವ ದೇವತೆಯು ಇಷ್ಟವೋ ಅದೇ ಅವನಿಗೆ ಆರಾಧ್ಯ. ಆದರೆ ಕಾರ್ಯವಿಶೇಷಕ್ಕನುಗುಣವಾಗಿ ಪೂಜಿಸಲ್ಪಟ್ಟ ಬೇರೆ ಬೇರೆ ದೇವತೆಗಳೂ ವಿಶೇಷವಾಗಿ ಫಲವನ್ನೂ ಕೊಡುವರು." "ರಾಜರಿಗೆ ವಿಷ್ಣು, ಶಿವ ಮತ್ತು ಇಂದ್ರರು ದೇವತೆಗಳು. ಬ್ರಾಹ್ಮಣರಿಗೆ ಅಗ್ನಿ, ಆದಿತ್ಯ, ಬ್ರಹ್ಮ ಮತ್ತು ಪಿನಾಕಧಾರೀ ಶಿವನು ದೇವತೆಗಳು. ದೇವತೆಗಳಿಗೆ ವಿಷ್ಣು ದೇವತೆ. ದಾನವರಿಗೆ ತ್ರಿಶೂಲಧಾರಿ ಶಿವ ದೇವತೆ. ಗಂಧರ್ವರಿಗೆ ಮತ್ತು ಯಕ್ಷರಿಗೆ ಸೋಮ ದೇವತೆ. ವಿದ್ಯಾಧರರಿಗೆ ಸರಸ್ವತಿ, ಸಿದ್ಧರಿಗೆ ಹರಿ, ರಾಕ್ಷಸರಿಗೆ ರುದ್ರ, ಕಿನ್ನರರಿಗೆ ಪಾರ್ವತಿ, ಋಷಿಗಳಿಗೆ ಭಗವಾನ್ ಬ್ರಹ್ಮ ಮತ್ತು ತ್ರಿಶೂಲಧಾರಿ ರುದ್ರ, ಸ್ತ್ರೀಯರಿಗೆ ವಿಷ್ಣು, ಶಿವ ಸೂರ್ಯರು ದೇವತೆಗಳು. ಗೃಹಸ್ಥಾಶ್ರಮಿಗಳಿಗೆ ಎಲ್ಲ ದೇವತೆಗಳೂ ಪೂಜ್ಯರು. ಬ್ರಹ್ಮಚಾರಿಗಳಿಗೆ ವೇದವು ದೇವತೆ. ವಾನಪ್ರಸ್ಥಾಶ್ರಮಿಗಳಿಗೆ ಸೂರ್ಯ ಮತ್ತು ಯತಿಗಳಿಗೆ ಮಹೇಶ್ವರ ದೇವತೆ. ಭೂತಗಣಗಳಿಗೆ ರುದ್ರನೂ, ಕೂಷ್ಮಾಂಡಗಣಗಳಿಗೆ ವಿನಾಯಕನೂ ದೇವತೆಗಳು. ದೇವದೇವನೂ, ಪ್ರಜಾಪತಿಯೂ ಆದ ಬ್ರಹ್ಮನು ಎಲ್ಲರಿಗೂ ದೇವತೆ" ಎಂದು ಭಗವಾನ್ ಬ್ರಹ್ಮದೇವನೇ ಉಪದೇಶಿಸಿದನು.

"ಆದ್ದರಿಂದ ರಾಜನಾದ ಜಯಧ್ವಜನು ವಿಷ್ಣುವಿನ ಆರಾಧನೆಯನ್ನು ಮಾಡಲೇಬೇಕು. ಆದರೆ ರುದ್ರನೇ ವಿಷ್ಣು ಎಂದು ತಿಳಿದು ಪೂಜಿಸಬೇಕು. ಹೀಗೆ ಮಾಡದಿದ್ದರೆ ವಿಷ್ಣು ರಾಜನ

ಶತ್ರುಗಳನ್ನು ಸಂಹರಿಸುವುದಿಲ್ಲ'' ಎಂದು ಸಪ್ತರ್ಷಿಗಳು ಹೇಳಿದರು. ಸೋದರರೆಲ್ಲರೂ ಋಷಿಗಳನ್ನು ನಮಸ್ಕರಿಸಿ ತಮ್ಮ ರಾಜ್ಯಕ್ಕೆ ಹಿಂತಿರುಗಿದರು. ಶತ್ರುಗಳನ್ನು ಸೋಲಿಸಿ ರಾಜ್ಯವನ್ನಾಳಿದರು.

ಒಮ್ಮೆ ವಿದೇಹ ಎಂಬ ಸರ್ವಭಯಂಕರನಾದ ದಾನವನು ಜಯಧ್ವಜನ ರಾಜ್ಯಕ್ಕೆ ಬಂದನು. ಕೋರೆಹಲ್ಲುಗಳಿಂದ ಕರಾಲನಾಗಿದ್ದ ದಾನವನು ಪ್ರಲಯಾಗ್ನಿಯಂತೆ ಇದ್ದನು. ಸೂರ್ಯನಂತೆ ಪ್ರಖರವಾದ ಶೂಲವನ್ನು ಹಿಡಿದು ಸರ್ವದಿಕ್ಕುಗಳಿಂದ ಪ್ರತಿಧ್ವನಿಸುವ ಗರ್ಜನೆಯನ್ನು ಮಾಡುತ್ತಾ ಈ ದಾನವನು ಬಂದನು. ಆ ಗರ್ಜನೆಯನ್ನು ಕೇಳಿ ಎಷ್ಟೋ ಜನ ಸತ್ತು ಹೋದರು. ಮತ್ತೆಷ್ಟೋ ಜನ ಭಯಭ್ರಾಂತರಾಗಿ ಓಡಿಹೋದರು. ಶೂರಸೇನ ಮೊದಲಾದ ಕಾರ್ತವೀರ್ಯಾರ್ಜುನನ ಐದೂ ಜನ ಮಕ್ಕಳು ಶಕ್ತಿ, ಗಿರಿಶಿಖರ, ಖಡ್ಗ, ಹಾರೆ ಮೊದಲಾದ ಆಯುಧಗಳಿಂದ ಅವನ ಮೇಲೆ ಯುದ್ಧ ಮಾಡಿದರು. ಅವರೆಲ್ಲರನ್ನೂ ಆ ದಾನವನು ನಗುತ್ತಾ ಎದುರಿಸಿದನು. ಯುದ್ಧನಿರತರಾದ ಶೂರಸೇನ ಮೊದಲಾದವರು ಬಹಳ ಸಂಭ್ರಮದಿಂದ ವಿದೇಹನ ಮೇಲೆ ಎರಗಿದರು. ಶೂರನು ರೌದ್ರಾಸ್ತ್ರವನ್ನೂ, ಶೂರಸೇನನು ವಾರುಣಾಸ್ತ್ರವನ್ನು, ಕೃಷ್ಣನು ಬ್ರಹ್ಮಾಸ್ತ್ರವನ್ನೂ, ಧೃಷ್ಣನು ವಾಯವ್ಯಾಸ್ತ್ರವನ್ನೂ, ಜಯಧ್ವಜನು ಕೌಬೇರ-ಐಂದ್ರ-ಆಗ್ನೇಯಾಸ್ತ್ರಗಳನ್ನೂ ಪ್ರಯೋಗಿಸಿದರು. ವಿದೇಹನು ಆ ಎಲ್ಲ ಅಸ್ತ್ರಗಳನ್ನೂ ಶೂಲದಿಂದ ನಾಶಮಾಡಿದನು. ಮಹಾಬಲಶಾಲಿಯಾದ ಕೃಷ್ಣನು ಭಯಂಕರವಾದ ಗದೆಯನ್ನು ವೇಗದಿಂದ ವಿದೇಹನ ಮೇಲೆ ಎಸೆದನು. ಗದೆಯು ಬಂಡೆಯಂತಹ ಅವನ ಎದೆಗೆ ಬಡಿದರೂ ಯಮನಂತಹ ಆ ದಾನವನಿಗೆ ನಡುಕವುಂಟು ಮಾಡಲೂ ಕೂಡ ಸಮರ್ಥವಾಗಲಿಲ್ಲ. ದಾನವನ ಅತಿಪೌರುಷವನ್ನು ನೋಡಿ ಅವರೆಲ್ಲ ಭಯಗ್ರಸ್ತರಾಗಿ ಓಡಿದರು. ಪ್ರಾಜ್ಞನಾದ ಜಯಧ್ವಜನು ಜಯಿಷ್ಣುವೂ, ಲೋಕದ ಪ್ರಥಮತತ್ತ್ವವೂ, ಅಪ್ರಮೇಯನೂ, ದೋಷರಹಿತನೂ ಆದ ವಿಷ್ಣುವನ್ನು ಸ್ಮರಿಸಿದನು. ವಿಷ್ಣುವನ್ನು ರಕ್ಷಕ, ಪುರಾಣಪುರುಷ, ಶ್ರೀಪತಿ, ಪೀತಾಂಬರಧರ ಎಂದು ಚಿಂತಿಸಿದನು. ಆಗ ಕೋಟಿ ಸೂರ್ಯರ ಪ್ರಭೆಯನ್ನು ಹೊಂದಿದ್ದ ಚಕ್ರವು ಆವಿರ್ಭವಿಸಿತು. ಭಕ್ತಾನುಗ್ರಹಶೀಲನಾದ ವಾಸುದೇವನ ಆಜ್ಞೆಯಿಂದ ಜಯಧ್ವಜನು ಆ ನಾರಾಯಣನನ್ನೇ ಸ್ಮರಿಸಿ ಚಕ್ರಾಯುಧವನ್ನು ತೆಗೆದುಕೊಂಡನು. ಹರಿಯು ದಾನವರ ಮೇಲೆ ಪ್ರಯೋಗಿಸುವಂತೆ ವಿದೇಹನ ಮೇಲೆ ಪ್ರಯೋಗಿಸಿದನು. ಆ ಘೋರ ದಾನವನ ಸ್ಕಂಧದೇಶವನ್ನು ತಲುಪಿದ ಸುದರ್ಶನ ಚಕ್ರವು ಪರ್ವತದ ಶಿಖರದಂತಿದ್ದ ಅವನ ತಲೆಯನ್ನು ನೆಲದ ಮೇಲೆ ಬೀಳಿಸಿತು. ಮಹಾವಿಷ್ಣುವು ಹಿಂದೆ ತಪಸ್ಸಿನಿಂದ ಆರಾಧಿಸಿ ಶಿವನಿಂದ ಸುದರ್ಶನ ಚಕ್ರವನ್ನು ಪಡೆದನು. ಆದ್ದರಿಂದಲೇ ಈ ಚಕ್ರಕ್ಕೆ ಅಸುರರನ್ನು ನಾಶ ಮಾಡುವ ಸಾಮರ್ಥ್ಯವಿದೆ. ವಿದೇಹನ ವಧೆಯಾದ ನಂತರ ಶೂರ ಮೊದಲಾದ ಸೋದರರು ತಮ್ಮ ಊರಿಗೆ ಹಿಂತಿರುಗಿ ತಮ್ಮ ಅಣ್ಣ ಜಯಧ್ವಜನನ್ನು ಸತ್ಕರಿಸಿದರು. ಜಯಧ್ವಜನ ಪರಾಕ್ರಮವನ್ನು ಕೇಳಿದ ವಿಶ್ವಾಮಿತ್ರರು ಅವನನ್ನು ನೋಡಲು ಬಂದರು. ಜಯಧ್ವಜನು ಅವರನ್ನು ಸಂಭ್ರಮದಿಂದ ಸ್ವಾಗತಿಸಿ, ರಮ್ಯವಾದ ಆಸನದಲ್ಲಿ

ಕೂಡಿಸಿ ಭಕ್ತಿಯಿಂದ ಸತ್ಕರಿಸಿದನು. ''ಪೂಜ್ಯರೇ! ನಿಮ್ಮ ಅನುಗ್ರಹದಿಂದ, ಘೋರನಾದ ದಾನವೇಶ್ವರ ವಿದೇಹನನ್ನು ನಾನು ಸಂಹರಿಸಿದ್ದೇನೆ. ನಿಮ್ಮ ಉಪದೇಶದಿಂದ ನಾನು ಸಂದೇಹರಹಿತನಾಗಿ ನಾನು ಸತ್ಯಪರಾಕ್ರಮನಾದ ವಿಷ್ಣುವನ್ನು ರಕ್ಷಿಸಬೇಕೆಂದು ಬೇಡಿದೆನು. ಅವನು ನನಗೆ ಶುಭಾನುಗ್ರಹವನ್ನು ಮಾಡಿದನು. ಪದ್ಮದಲಾಯತಾಕ್ಷನಾದ, ಸರ್ವ ನಿಯಾಮಕನಾದ ವಿಷ್ಣುವನ್ನು ಪೂಜಿಸಲು ಬಯಸಿದ್ದೇನೆ. ಅವನನ್ನು ಯಾವ ವಿಧಾನದಿಂದ ಪೂಜಿಸಬೇಕು? ದಯವಿಟ್ಟು ತಿಳಿಸಿರಿ. ಶ್ರೀ ಹರಿಯ ಮಹಿಮೆಯನ್ನು ದಯವಿಟ್ಟು ತಿಳಿಸಿರಿ'' ಎಂದನು. ಜಯಧ್ವಜನಿಗೆ ಶ್ರೀಹರಿಯಲ್ಲಿರುವ ಪರಮಭಕ್ತಿಯನ್ನು ಗಮನಿಸಿದ ಶಾಂತ ಮುನಿ ವಿಶ್ವಾಮಿತ್ರನು ಹೇಳಿದನು.

''ಯಾರಿಂದ ಜಗತ್ತಿನ ಸೃಷ್ಟಿಯಾಗುವದೋ, ಯಾರಲ್ಲಿ ಆಶ್ರಯ ಪಡೆದಿದೆಯೋ, ಯಾರಿಂದ ಎಲ್ಲರ ಚಟುವಟಿಕೆಗಳು ನಡೆಯುತ್ತವೆಯೋ, ಸರ್ವಭೂತನಿಯಾಮಕನಾದ ಆ ವಿಷ್ಣುವನ್ನು ಆಶ್ರಯಿಸಿದವನು ಮುಕ್ತಿಯನ್ನು ಪಡೆಯುತ್ತಾನೆ. ಅಕ್ಷರಕ್ಕಿಂತ ಉತ್ತಮನಾದ, ಸರ್ವರ ಹೃದಯಗುಹೆಯಲ್ಲಿರುವ, ನಿರ್ವಿಕಾರನೂ, ಪರಮಾನಂದ ಸ್ವರೂಪನೂ ಆದವನೇ ನಾರಾಯಣ. ಅವನು ನಿತ್ಯಪೂರ್ಣನೂ, ವಿಕಲ್ಪರಹಿತನೂ, ನಿತ್ಯಾನಂದನೂ, ನಿರಂಜನನೂ ಆಗಿದ್ದಾನೆ. ನಾಲ್ಕು ರೂಪಗಳ ವ್ಯೂಹವನ್ನು ಧರಿಸಿದ ವಿಷ್ಣು ವ್ಯೂಹರಹಿತ ಎಂದೂ ಹೇಳಲ್ಪಡುತ್ತಾನೆ. ಅವನು ಸರ್ವೋತ್ತಮ, ಶ್ರೇಷ್ಠಆಶ್ರಯ, ಸರ್ವತ್ರ ವ್ಯಾಪ್ತ. ಬ್ರಹ್ಮವಾದಿಗಳು ಇವನನ್ನು ತ್ರಿಪಾದ ಎಂದೂ, ಅಕ್ಷರ ಎಂದೂ ಹೇಳುತ್ತಾರೆ. ಇವನು ವಾಸುದೇವ, ಯೋಗಾತ್ಮ ವಿಶ್ವಾತ್ಮ, ಪುರುಷೋತ್ತಮ, ಬ್ರಹ್ಮ-ರುದ್ರರು ಇವನ ಅಂಶ ಸಂಭೂತರು.

ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳಿಂದ, ನಿಷ್ಕಾಮದಿಂದ ದೀಕ್ಷೆಯಿಂದ ಈ ಪುರುಷೋತ್ತಮನನ್ನು ಆರಾಧಿಸಬೇಕು.'' ವಿಶ್ವಾಮಿತ್ರರು ಇಷ್ಟು ಹೇಳಿ ಶೂರಾದಿ ಸೋದರರಿಂದ ಪೂಜಿತರಾಗಿ ತಮ್ಮ ಆಶ್ರಮಕ್ಕೆ ಹಿಂತಿರುಗಿದರು.

ಅನಂತರ ಶೂರ ಮೊದಲಾದವರು ನಿಷ್ಕಾಮರಾಗಿ ಯಜ್ಞಗಮ್ಯನಾದ ಮಹೇಶ್ವರನನ್ನು ಯಜ್ಞದಿಂದ ಆರಾಧಿಸಿದರು. ರುದ್ರಭಕ್ತರಾದ ವಸಿಷ್ಠ, ಗೌತಮ, ಅಗಸ್ತ್ಯ, ಅತ್ರಿ -ಈ ಮಹರ್ಷಿಗಳು ಯಜ್ಞವನ್ನು ಮಾಡಿಸಿದರು. ಜಯಧ್ವಜನು ಆದಿದೇವನಾದ ಶ್ರೀಹರಿಯನ್ನು ಕುರಿತು ಯಜ್ಞವನ್ನು ಮಾಡಿದನು. ವಿಶ್ವಾಮಿತ್ರರು ಯಜ್ಞವನ್ನು ಮಾಡಿಸಿದರು. ಮಹಾಯೋಗಿಯಾದ ಶ್ರೀ ಹರಿಯು ಆ ಯಜ್ಞದಲ್ಲಿ ಆವಿರ್ಭವಿಸಿದನು. ಅದು ಅದ್ಭುತವಾಗಿತ್ತು. ಜಯಧ್ವಜನು ವಿಷ್ಣುವನ್ನು ರುದ್ರನ ಉತ್ತಮ ಮೂರ್ತಿಯೆಂದು ಭಾವಿಸಿ ಎಚ್ಚರದಿಂದ ವಿಷ್ಣುವನ್ನು ಆರಾಧಿಸಿದನು.

ಈ ಜಯಧ್ವಜನ ಪರಾಕ್ರಮವನ್ನು ನಿತ್ಯವೂ ಕೇಳುವವರು ಸರ್ವಪಾಪವಿನಿರ್ಮುಕ್ತರಾಗಿ ವಿಷ್ಣುಲೋಕಕ್ಕೆ ಹೋಗುತ್ತಾರೆ.

* * *

## ಅಧ್ಯಾಯ-೨೩

**ಸೂತ ಉವಾಚ :**

ಜಯಧ್ವಜನ ಮಗ ತಾಲಜಂಘ. ಇವನಿಗೆ ನೂರು ಜನ ಮಕ್ಕಳು. ತಾಲಜಂಘ ಎಂದೇ ಇವರು ಪ್ರಸಿದ್ಧರು. ಇವರಲ್ಲಿ ಜ್ಯೇಷ್ಠ ಮಹಾಬಲಶಾಲಿಯಾಗಿದ್ದ ವೀತಿಹೋತ್ರ. ಇವನು ರಾಜನಾಗಿದ್ದನು. ವೃಷ ಮೊದಲಾದ ಅವನ ಸೋದರರೂ ಪುಣ್ಯಕರ್ಮಿಗಳು. ಈ ವಂಶಕ್ಕೆ ವೃಷನಿಂದ ಬಹಳ ಕೀರ್ತಿಯು ಬಂದಿತು. ವೃಷನ ಮಗ ಮಧು. ಮಧುವಿಗೆ ನೂರು ಜನ ಮಕ್ಕಳು. ಇವರಲ್ಲಿ ವೃಷಣ ಎನ್ನುವವನು ವಂಶಪ್ರತಿಷ್ಠಾಪಕ. ವೀತಿಹೋತ್ರನಿಗೆ ಅನಂತ ಎಂದು ಪ್ರಸಿದ್ಧನಾದ ಮಗನಿದ್ದನು. ಇವನ ಮಗ ದುರ್ಜಯ. ಇವನು ಸರ್ವಶಾಸ್ತ್ರವಿಶಾರದ. ಇವನ ಹೆಂಡತಿ ರೂಪವಂತಳು, ಗುಣಸಂಪನ್ನಳು, ಸ್ವಧರ್ಮಪರಿಪಾಲಕಳಾದ ಪತಿವ್ರತೆ. ಈ ದುರ್ಜಯ ಒಮ್ಮೆ ಯಮುನಾತೀರದಲ್ಲಿ ಮಧುರ ಶ್ರುತಿಯಿಂದ ಹಾಡುತ್ತಿದ್ದ ಊರ್ವಶಿಯನ್ನು ನೋಡಿದನು. ಆಗ ಕಾಮಪೀಡಿತನಾಗಿ ಅವಳ ಬಳಿ ಹೋಗಿ ತನ್ನ ಜೊತೆ ವಿಹರಿಸಲು ಬೇಡಿದನು. ಎರಡನೆಯ ಕಾಮದೇವನಂತಿದ್ದ ಇವನ ಜೊತೆ ಊರ್ವಶಿಯು ಬಹುಕಾಲ ವಿಹಾರ ಮಾಡಿದಳು. ಬಹುಕಾಲಾನಂತರ ಎಚ್ಚರಗೊಂಡ ರಾಜನು "ನನ್ನ ಊರಿಗೆ ಹೋಗುತ್ತೇನೆ" ಎಂದು ಅವಳಿಗೆ ಹೇಳಿದನು. ಅದಕ್ಕೆ ಅವಳು "ರಾಜ ಸುಂದರ! ಇಷ್ಟು ಉಪಭೋಗದಿಂದ ನನಗೆ ತೃಪ್ತಿಯಾಗಿಲ್ಲ. ಇನ್ನೊಂದು ವರ್ಷ ನನ್ನ ಜೊತೆ ಇರು" ಎಂದು ಬೇಡಿದಳು. ಆಗ "ನನ್ನ ಊರಿಗೆ ಹೋಗಿ ಬೇಗ ಹಿಂತಿರುಗುತ್ತೇನೆ, ದಯವಿಟ್ಟು ಅನುಮತಿ ಕೊಡು" ಎಂದು ರಾಜನು ಹೇಳಿದನು. "ಹಾಗೆಯೇ ಆಗಲಿ. ಬೇರೆ ಯಾವ ಅಪ್ಸರೆಯ ಜೊತೆಯೂ ವಿಹರಿಸಬಾರದು" ಎಂದು ಊರ್ವಶಿಯು ಹೇಳಿದಳು. "ಹಾಗೆಯೇ ಆಗಲಿ" ಎಂದು ಹೇಳಿ ತನ್ನ ಊರಿಗೆ ಹಿಂತಿರುಗಿದ ದುರ್ಜಯನು ತನ್ನ ಪತಿವ್ರತೆಯಾದ ಪತ್ನಿಯನ್ನು ನೋಡಿ ಹೆದರಿದನು. ಅವಳು ಅವನಿಗೆ ಪ್ರಸನ್ನವಾದ ಮಾತುಗಳಿಂದ "ಏಕೆ ಹೆದರಿದ್ದೀರಿ? ಸತ್ಯಸಂಗತಿಯನ್ನು ಹೇಳಿರಿ. ಬೇರೆ ರಾಜಕುಮಾರರಿಗೆ ಹೇಳುವುದಿಲ್ಲ" ಎಂದು ಕೇಳಿದಳು. ಅವಳ ಮಾತನ್ನು ಕೇಳಿ ಲಜ್ಜೆಯಿಂದ ಮುದುರಿದ ಮನಸ್ಸುಳ್ಳವನಾದ ಅವನು ಏನನ್ನೂ ಹೇಳಲಿಲ್ಲ. ಅವಳಿಗೆ ತನ್ನ ಜ್ಞಾನಸಾಮರ್ಥ್ಯದಿಂದ ವಿಷಯಗಳು ತಿಳಿದವು. ಆಗ "ಮಹಾರಾಜ! ಹೆದರಬೇಡಿರಿ, ಪಾಪವನ್ನು ತೊಳೆದುಕೊಳ್ಳಿರಿ. ನೀವು ಹೆದರಿದರೆ ರಾಷ್ಟ್ರವೇ ನಾಶವಾಗುತ್ತದೆ" ಎಂದು ಹೇಳಿದಳು. ದುರ್ಜಯನು ಕಣ್ವಾಶ್ರಮಕ್ಕೆ ಹೋಗಿ ಕಣ್ವರಿಂದ ಪ್ರಾಯಶ್ಚಿತ್ತವಿಧಿಯನ್ನು ತಿಳಿದು ಹಿಮಾಲಯಕ್ಕೆ ಹೋದನು. ದಾರಿಯಲ್ಲಿ ದಿವ್ಯ ಮಾಲೆಯಿಂದ ವಿಭೂಷಿತನಾದ, ಕಾಂತಿಯಿಂದ ಬೆಳಗುತ್ತಿದ್ದ ಗಂಧರ್ವ ಶ್ರೇಷ್ಠನನ್ನು ನೋಡಿದನು. ದಿವ್ಯಮಾಲೆಯನ್ನು ನೋಡಿ ಅವನಿಗೆ ಊರ್ವಶಿಯ ನೆನಪಾಯಿತು. ಮಾಲೆಯೂ ಅವಳದ್ದೇ ಎಂದು ಗೊತ್ತಾಯಿತು. ಬಹಳ ಕಾಮುಕನಾದ ರಾಜನು ಮಾಲೆಗಾಗಿ ಗಂಧರ್ವನ ಜೊತೆ ಯುದ್ಧ ಮಾಡಿ, ಅವನನ್ನು ಸೋಲಿಸಿ ಮಾಲೆಯನ್ನು ತೆಗೆದುಕೊಂಡು ಊರ್ವಶಿಯನ್ನು

ನೋಡಲು ಯಮುನಾತೀರಕ್ಕೆ ಹೋದನು. ಅಲ್ಲಿ ಆ ಅಪ್ಸರೆಯನ್ನು ಕಾಣದೆ ಕಾಮಪೀಡಿತನಾಗಿ ಅವಳಿಗಾಗಿ ಭೂಮಂಡಲದ ಸಪ್ತದ್ವೀಪಗಳನ್ನು ಅಲೆದನು. ಹಿಮಾಲಯದಲ್ಲಿ ಹುಡುಕಿ ಹೇಮಕೂಟಕ್ಕೆ ಹೋದನು. ಅಲ್ಲಿ ಸುಂದರವಾದ ಮಾಲೆಯಿಂದ ಭೂಷಿತನಾಗಿದ್ದ ಈ ದುರ್ಜಯನನ್ನು ನೋಡಿ ಶ್ರೇಷ್ಠರಾದ ಅಪ್ಸರೆಯರು ಇವನನ್ನು ಕಾಮಿಸಿದರು. ಊರ್ವಶಿಯ ಮಾತನ್ನು ನೆನಪಿನಲ್ಲಿಟ್ಟುಕೊಂಡಿದ್ದ ರಾಜನು ಈ ಅಪ್ಸರೆಯರನ್ನು ನೋಡದೆ ಪರ್ವತದ ಶಿಖರಗಳಲ್ಲಿ ಸುತ್ತಿದನು. ಅಲ್ಲಿ ಎಲ್ಲಿಯೂ ಊರ್ವಶಿಯನ್ನು ಕಾಣದೆ ರಾಜನು ದೇವತೆಗಳ ಸ್ಥಾನವಾದ ಮೇರುಪರ್ವತಕ್ಕೆ ಹೋದನು. ಅವನು ಶಿಖರಗಳನ್ನು ದಾಟಿ ತ್ರಿಲೋಕ ವಿಶ್ರುತವಾದ ಮಾನಸ ಸರೋವರಕ್ಕೆ ಹೋದನು. ಅಲ್ಲಿ ತೀರದಲ್ಲಿ ಓಡಾಡುತ್ತಿದ್ದ, ಸುಂದರಿ ಊರ್ವಶಿಯನ್ನು ನೋಡಿ ಅವಳಿಗೆ ಮಾಲೆಯನ್ನು ಕೊಟ್ಟನು. ಮಾಲಾಭೂಷಿತಳಾದ ಅವಳನ್ನು ನೋಡಿ ತಾನು ಕೃತಾರ್ಥ ಎಂದು ಭಾವಿಸಿ ಅವಳ ಜೊತೆ ವಿಹರಿಸಿದನು.

ಅನಂತರ ಊರ್ವಶಿಯು "ರಾಜನೆ! ನಿನ್ನ ಊರಿಗೆ ಹೋಗಿ ಏನು ಮಾಡಿದಿ?" ಎಂದು ಕೇಳಿದಳು. ತನ್ನ ಪತ್ನಿಯ ಸಲಹೆಯನ್ನು ಕಣ್ವ ಋಷಿಗಳ ದರ್ಶನವನ್ನು, ಮಾಲಾಪಹರಣವನ್ನು ರಾಜನು ವಿವರಿಸಿದನು. ಊರ್ವಶಿಯು ಇದನ್ನು ಕೇಳಿ "ಕಣ್ವರು ನಿನಗೆ ಶಾಪವನ್ನು ಕೊಡುತ್ತಾರೆ, ನಿನ್ನ ಹೆಂಡತಿಯು ನನಗೆ ಶಾಪವನ್ನು ಕೊಡುತ್ತಾಳೆ, ಹಿಂತಿರುಗು" ಎಂದು ಹೇಳಿದಳು. ಆದರೆ ಮದಮೋಹಿತನಾದ ರಾಜನು ಹೊರಡಲಿಲ್ಲ. ಆಗ ಕಾಮರೂಪಳಾದ ಊರ್ವಶಿಯು ರೋಮಮಯವಾದ, ಕೆಂಗಣ್ಣಿನ ಭಯಾನಕ ರೂಪವನ್ನು ತೋರಿಸಿದಳು. ಆ ರೂಪವನ್ನು ನೋಡಿ ಅವಳಲ್ಲಿ ವಿರಕ್ತನಾದ ರಾಜನು ಕಣ್ವರ ಮಾತನ್ನು ನೆನೆದು ತನ್ನನ್ನೇ ನಿಂದಿಸಿಕೊಂಡು ತಪಸ್ಸನ್ನು ಆರಂಭಿಸಿದನು. ಕಂದಮೂಲ-ಫಲಗಳನ್ನು ತಿನ್ನುತ್ತಾ ಹನ್ನೆರಡು ವರ್ಷ ತಪಸ್ಸು ಮಾಡಿದನು. ಕೇವಲ ವಾಯುಸೇವನೆಯನ್ನು ಮಾಡುತ್ತಾ ಮತ್ತೆ ಹನ್ನೆರಡು ವರ್ಷ ತಪಸ್ಸನ್ನು ಮಾಡಿದನು. ಅನಂತರ ಕಣ್ವಾಶ್ರಮಕ್ಕೆ ಹೋಗಿ ಊರ್ವಶಿಯ ಸಹವಾಸ ಮಾಡಿದ್ದನ್ನೂ, ಅನಂತರ ಮಾಡಿದ ತಪಸ್ಸನ್ನೂ ಅವರಿಗೆ ತಿಳಿಸಿದನು. ಆ ರಾಜಶ್ರೇಷ್ಠನ ಮೇಲೆ ಪ್ರಸನ್ನರಾದ ಕಣ್ವರು ಅವನ ಪಾಪದ ಮೂಲವೇ ನಾಶವಾಗಲಿ ಎಂದು ಬಯಸಿ ಹೀಗೆ ಹೇಳಿದರು.

"ಈಶ್ವರನು ವಾಸ ಮಾಡಿಕೊಂಡಿರುವ ದಿವ್ಯವಾದ ವಾರಾಣಸಿಗೆ ಹೋಗು. ಅಲ್ಲಿಯ ಶಿವನು ಜನರ ಪಾಪಬಂಧನವನ್ನು ಬಿಚ್ಚುತ್ತಾನೆ. ಅಲ್ಲಿ ಗಂಗೆಯಲ್ಲಿ ಸ್ನಾನ ಮಾಡಿ ವಿಧಿಯಂತೆ ದೇವತೆಗಳಿಗೂ, ಪಿತೃಗಳಿಗೂ ತರ್ಪಣವನ್ನು ಕೊಟ್ಟು, ಶಿವಲಿಂಗದ ದರ್ಶನವನ್ನು ಮಾಡು. ಕೂಡಲೇ ನಿನ್ನ ಪಾಪಗಳೆಲ್ಲವೂ ನಾಶವಾಗುತ್ತವೆ" ಎಂಬ ನುಡಿಯನ್ನು ಕೇಳಿದ ರಾಜನು ಕಣ್ವರನ್ನೇ ಶಿರಸಾ ನಮಸ್ಕರಿಸಿ, ಅವರ ಅನುಮತಿ ಪಡೆದು ವಾರಾಣಸಿಗೆ ಹೋಗಿ ಶಿವಲಿಂಗದ ದರ್ಶನವನ್ನು ಮಾಡಿ ಪಾಪಮುಕ್ತನಾದನು. ಅನಂತರ ತನ್ನ ಊರಿಗೆ ಹಿಂತಿರುಗಿ ರಾಜ್ಯವಾಳಿದನು. ಅವನಿಂದ ಪ್ರಾರ್ಥಿತರಾಗಿ ಕಣ್ವರು ಯಜ್ಞವನ್ನು ಮಾಡಿಸಿದರು.

ಈ ದುರ್ಜಯನ ಮಗ ಸುಪ್ರತೀಕ. ಪ್ರಾಜ್ಞನಾಗಿದ್ದನು. ಅವನು ಹುಟ್ಟಿದ ಸಮಯದಿಂದಲೂ ಪ್ರಜೆಗಳು ಅವನನ್ನು ರಾಜ ಎಂದು ಭಾವಿಸಿ ನಡೆದುಕೊಂಡರು.

* * *

## ಅಧ್ಯಾಯ-೨೪

**ಸೂತ ಉವಾಚ :**

ಕ್ರೋಷ್ಟುವಿನ ಮಗ ವಜ್ರವಾನ್. ಅವನ ಮಗ ಶಾಂತಿ. ಶಾಂತಿಯ ಮಗ ಕುಶಿಕ. ಕುಶಿಕನ ಮಗ ಚಿತ್ರರಥ. ಇವನ ಮಗ ಶಶಬಿಂದು. ಇವನ ಮಗ ಪೃಥುಯಶಸ್ - ಧರ್ಮನಿಷ್ಠನಾದ ರಾಜ. ಇವನ ಮಗ ಪೃಥುಕರ್ಮಾ. ಪೃಥುಕರ್ಮನ ಮಗ ಪೃಥುಜಯ. ಪೃಥುಜಯನ ಮಗ ಪೃಥುಕೀರ್ತಿ. ಇವನ ಮಗ ಪೃಥುದಾನ. ಇವನ ಮಗ ಪೃಥುಶ್ರವಸ್. ಇವನ ಮಗ ಪೃಥುಸತ್ತಮ. ಇವನ ಮಗ ಉಶನಸ್. ಉಶನಸ್‌ನ ಮಗ ಶತೇಷು. ಇವನ ಮಗ ರುಕ್ಮಕವಚ. ರುಕ್ಮಕವಚನ ಮಗ ಪರಾವೃತ್ತ. ಪರಾವೃತ್ತನ ಮಗ ಯಾಮಘ. ಇವನ ಮಗ ವಿದರ್ಭ. ಕ್ರಥ, ಕೈಶಿಕ ಮತ್ತು ಲೋಮಪಾದರು ವಿದರ್ಭನ ಮಕ್ಕಳು. ಲೋಮಪಾದನ ಮಗ ಬಭ್ರು. ಬಭ್ರುವಿನ ಮಗ ಧೃತಿ. ಧೃತಿಯ ಮಗ ಶ್ವೇತ. ಶ್ವೇತನ ಮಗ ವಿಶ್ವಸಹ - ಮಹಾಬಲಶಾಲಿ. ಇವನ ಮಗ ಕೌಶಿಕ. ಕೌಶಿಕನ ಮಗ ಧೀಮಂತನಾದ ಸುಮಂತ್ರ. ಸುಮಂತ್ರನ ಮಗ ಅನಲ. ಅನಲನ ಮಗ ಶ್ವೇನಿ. ಶ್ವೇನಿಗೆ ಬಹಳ ಜನ ಮಕ್ಕಳು. ಅವರಲ್ಲಿ ಪ್ರಧಾನನಾದವನು ದ್ಯುತಿಮಾನ್. ಇವನ ಮಗ ವಪುಷ್ಮಾನ್. ಇವನ ಮಗ ಬೃಹನ್ಮೇಧಸ್. ಇವನ ಮಗ ಶ್ರೀದೇವ. ಶ್ರೀದೇವನ ಮಗ ವೀತರಥ. ಇವನು ರುದ್ರಭಕ್ತ, ಮಹಾ ಬಲಶಾಲಿ.

ವಿದರ್ಭನ ಮತ್ತೊಬ್ಬ ಮಗನಾದ ಕ್ರಥನ ಮಗ ಕುಂತಿ. ಕುಂತಿಯ ಮಗ ವೃಷ್ಣಿ. ಇವನ ಮಗ ನವರಥ. ಇವನು ಮಹಾಬಲಶಾಲಿ. ಒಮ್ಮೆ ಇವನು ಬೇಟೆಗೆ ಹೋಗಿದ್ದಾಗ ಭಾರೀ ರಾಕ್ಷಸನೊಬ್ಬ ಎದುರಾದನು. ನವರಥನು ಭಯದಿಂದ ಓಡಿದನು. ಅಗ್ನಿಯಂತಿದ್ದ ಕೈಯಲ್ಲಿ ಶೂಲವನ್ನು ಹಿಡಿದ ಕ್ರುದ್ಧನಾದ ರಾಕ್ಷಸನು ಬೆನ್ನಟ್ಟಿದನು. ಹೆದರಿ ಓಡುತ್ತಿದ್ದ ನವರಥನು ಹತ್ತಿರದಲ್ಲಿ ಸರಸ್ವತೀ ಮಂದಿರವೊಂದನ್ನು ನೋಡಿದನು. ವೇಗದಿಂದ ಒಳಗೆ ಹೋಗಿ ದೇವಿಗೆ ನಮಸ್ಕಾರ ಮಾಡಿದನು. ಕೈ ಮುಗಿದು ಸ್ತೋತ್ರ ಮಾಡಿದನು. ''ಮಹಾದೇವಿ ಸರಸ್ವತಿಗೆ ನಮಸ್ಕಾರ, ಅನಾದ್ಯನಂತಳೂ, ಬ್ರಹ್ಮಚಾರಿಣಿಯೂ, ಜಗತ್ಕಾರಣಳೂ,

ಯೋಗಿನಿಯೂ ಆದ ವಾಗ್ದೇವತೆಗೆ ನಮಸ್ಕಾರ. ಹಿರಣ್ಯಗರ್ಭ ಸಂಭೂತಳಾದ, ಪರಮಾನಂದ ಸ್ವರೂಪಳೂ ಬ್ರಹ್ಮರೂಪಿಣಿಯೂ ಆದ ದೇವಿಗೆ ನಮಸ್ಕಾರ. ದೇವಿಯೇ! ಶರಣಾಗತನಾದ ನನ್ನನ್ನು ರಕ್ಷಿಸು'' ಎಂದು ಪ್ರಾರ್ಥಿಸುತ್ತಾ ಸಾಷ್ಟಾಂಗ ನಮಸ್ಕಾರ ಮಾಡಿದನು. ಇಷ್ಟು ಹೊತ್ತಿಗೆ ಆ ಮಹಾರಾಕ್ಷಸನು ಶೂಲವನ್ನೆತ್ತಿ ಹಿಡಿದು ಸರಸ್ವತಿಯ ಮಂದಿರಕ್ಕೆ ಬಂದನು. ಆಗ ಪ್ರಲಯಕಾಲದ ಸೂರ್ಯನಂತಿದ್ದ ಯಾವುದೋ ಒಂದು ಭೂತವು ಶೂಲದಿಂದ ಆ ರಾಕ್ಷಸನ ಎದೆಯನ್ನು ಸೀಳಿ ನೆಲದ ಮೇಲೆ ಬೀಳಿಸಿತು. ಸರಸ್ವತಿಯು ''ಮಹಾರಾಜ! ರಾಕ್ಷಸನು ಹತನಾಗಿದ್ದಾನೆ. ಇನ್ನೇನೂ ಭಯವಿಲ್ಲ, ಈ ಜಾಗದಲ್ಲಿ ನಿಲ್ಲಬೇಡ, ಕೂಡಲೇ ಹೊರಟು ಹೋಗು'' ಎಂದು ಹೇಳಿದಳು. ನವರಥನು ಸರಸ್ವತಿಯನ್ನು ನಮಸ್ಕರಿಸಿ ಸಂತುಷ್ಟನಾಗಿ ತನ್ನ ಊರಿಗೆ ಹೋದನು. ತನ್ನ ಊರಿನಲ್ಲಿ ಸರಸ್ವತಿಯ ಪ್ರತಿಷ್ಠಾಪನೆಯನ್ನು ಮಾಡಿಸಿದನು. ವಿವಿಧ ಯಜ್ಞಗಳಿಂದ ಸರಸ್ವತಿಯನ್ನು ಆರಾಧಿಸಿದನು. ಈ ನವರಥನಿಗೆ ದಶರಥ ಎಂಬ ಮಗನಿದ್ದನು. ಇವನೂ ದೇವಿಯ ಭಕ್ತ, ಮಹಾತೇಜಸ್ವೀ. ಇವನ ಮಗ ಶಕುನಿ. ಶಕುನಿಯ ಮಗ ಕರಂಭ. ಇವನ ಮಗ ದೇವರಾತ. ಇವನು ಅಶ್ವಮೇಧವನ್ನು ಮಾಡಿದನು. ದೇವರಾತನ ಮಗ ದೇವಕ್ಷತ್ರ. ಇವನ ಮಗ ಮಧು. ಮಧುವಿನ ಮಗ ಕುರು. ಇವನಿಗೆ ಸುತ್ರಾಮ ಮತ್ತು ಅನು ಎಂಬ ಇಬ್ಬರು ಮಕ್ಕಳು. ಅನುವಿನ ಮಗ ಪ್ರಿಯಗೋತ್ರ. ಇವನ ಮಗ ಅಂಶು. ಅಂಶುವಿನ ಮಗ ಅಂಧಕ. ಇವನು ವಿಷ್ಣುಭಕ್ತ, ಪ್ರತಾಪಶಾಲಿ, ಮಹಾತ್ಮ, ದಾನನಿರತ, ಧನುರ್ವಿದ್ಯಾನಿಪುಣ. ನಾರದರ ಮಾತಿನಂತೆ ವಾಸುದೇವನ ಪೂಜೆಯಲ್ಲಿ ಆಸಕ್ತನಾಗಿದ್ದನು. ಕುಂಡಗೋಲ ಮೊದಲಾದವರು ಶ್ರವಣ ಮಾಡಬಹುದಾದ ಶಾಸ್ತ್ರವನ್ನು ರಚಿಸಿದನು. ಸಾತ್ವತ ವಂಶದವರಿಗೆ ಮಂಗಳಕರವಾದ, ಕುಂಡ ಮೊದಲಾದವರಿಗೆ ಹಿತಕರವಾದ ಈ ಮಹಾಶಾಸ್ತ್ರವು ಅಂಧಕಶಾಸ್ತ್ರ ಎಂದೇ ಪ್ರಸಿದ್ಧವಾಗಿದೆ. ಅಂಧಕನ ಮಗ ಸಾತ್ವತ. ಇವನು ಸರ್ವಶಾಸ್ತ್ರವಿಶಾರದ. ಇವನಿಂದ ಅಂಧಕ ನಿರ್ಮಿತಶಾಸ್ತ್ರವು ಹೆಚ್ಚು ಪ್ರಚಾರವಾಯಿತು. ಸಾತ್ವತನ ಹೆಂಡತಿ ಕೌಶಲ್ಯಾ. ಸತ್ವಗುಣ-ಸಂಪನ್ನರಾದ ಅಂಧಕ, ಮಹಾಭೋಜ, ವೃಷ್ಣಿ, ದೇವಾವೃಧರು ಇವರ ಮಕ್ಕಳು. ಇವರಲ್ಲದೆ ಧನುರ್ವೇದಪಾರಂಗತನಾದ ಭಜಮಾನ ಎಂಬ ಜ್ಯೇಷ್ಠಪುತ್ರ ಇವರಿಗಿದ್ದನು. ದೇವಾವೃಧನು ಸರ್ವಗುಣಸಂಪನ್ನನಾದ ಮಗನನ್ನು ಬಯಸಿ ತೀವ್ರವಾದ ತಪಸ್ಸನ್ನು ಮಾಡಿದನು. ಈ ದೇವಾವೃಧನ ಮಗ ಬಭ್ರು. ಬಹಳ ಕೀರ್ತಿವಂತ, ಧಾರ್ಮಿಕ, ರೂಪಸಂಪನ್ನ, ತತ್ವಜ್ಞಾನ ನಿರತ. ಇವನಿಗೆ ದಿವ್ಯ ಸಂಪತ್ತನ್ನು ಹೊಂದಿದ ಅನೇಕ ಮಕ್ಕಳು. ಇವರಲ್ಲಿ ನಿಮಿ ಮತ್ತು ಕೃಕಣರು ಮುಖ್ಯರು. ಮಹಾಭೋಜನಿಗೆ ಭೋಜ ಮತ್ತು ವೈಮಾತೃಕ ಎಂಬ ಹೆಸರಿನ ಅನೇಕ ಮಕ್ಕಳು. ವೃಷ್ಣಿಗೆ ಸುಮಿತ್ರ, ಬಲವಾನ್, ಅನಮಿತ್ರ ಮತ್ತು ಸ್ತಿಮಿ ಎಂಬ ಮಕ್ಕಳು.

ಅನಮಿತ್ರನ ಮಕ್ಕಳು ನಿಘ್ನ- ಮತ್ತು ಶಿನಿ. ಪ್ರಸೇನ ಮತ್ತು ಸತ್ರಜಿತ್- ಈ ಇಬ್ಬರು ನಿಘ್ನನ ಮಕ್ಕಳು. ಸತ್ಯಸಂಪನ್ನನಾದ ಶಿನಿಯ ಮಗ ಸತ್ಯಕ. ಸತ್ಯಕನ ಮಗ ಯುಯುಧಾನ. ಇವನು ವಿರಕ್ತನಾಗಿದ್ದನು. ಯುಯುಧಾನನ ಮಗ ಕುಣಿ. ಇವನ ಮಗ ಯುಗಂಧರ. ಇವನ ಹೆಂಡತಿ

ಮಾದ್ರಿ. ಇವರ ಮಗ ವೃಷ್ಣಿ. ಶ್ವಫಲ್ಕ ಮತ್ತು ಚಿತ್ರಕ. ಇವರು ವೃಷ್ಣಿಯ ಮಕ್ಕಳು. ಶ್ವಫಲ್ಕ ಕಾಶಿರಾಜನ ಮಗಳನ್ನು ಮದುವೆಯಾಗಿದ್ದನು. ಅಕ್ರೂರ, ಮಂಗು, ಉಪಮಂಗು ಮೊದಲಾದ ಅನೇಕರು ಇವರ ಮಕ್ಕಳು. ಅಕ್ರೂರ ಬಹಳ ಧಾರ್ಮಿಕ. ದೇವವಾನ್ ಮತ್ತು ಉಪದೇವ ಇವನ ಮಕ್ಕಳು. ವಿಶ್ವ ಮತ್ತು ಪ್ರಮಾಥಿಗಳು ಕ್ರಮವಾಗಿ ಇವರಿಬ್ಬರ ಮಕ್ಕಳು.

ವೃಷ್ಣಿಯ ಮಗ ಚಿತ್ರಕನಿಗೆ ಪೃಥು, ವಿಪೃಥು, ಅಶ್ವಗ್ರೀವ, ಸುಬಾಹು, ಸುಧಾಶ್ವಕ ಮತ್ತು ಗವೇಕ್ಷಕ ಎಂಬ ಮಕ್ಕಳಿದ್ದರು.

ಕುಕುರ, ಭಜಮಾನ, ಶಮೀಕ ಮತ್ತು ಬಲಗರ್ವಿತ - ಇವರು ಅಂಧಕನ ಮಕ್ಕಳು. ಕುಕುರನ ಮಗ ವೃಷ್ಣಿ. ವೃಷ್ಣಿಯ ಮಗ ಕಪೋತರೋಮ. ಇವನ ಮಗ ವಿಲೋಮಕ. ತುಂಬುರು ಎಂಬ ಗಂಧರ್ವನ ಮಿತ್ರನಾಗಿದ್ದ ತಮ ವಿಲೋಮಕನ ಮಗ. ತಮನ ಮಗ ಆನಕದುಂದುಭಿ. ಇವನು ಗೋವರ್ಧನ ಪರ್ವತಕ್ಕೆ ಹೋಗಿ ಮಹಾತಪಸ್ಸನ್ನು ಮಾಡಿದನು. ಬ್ರಹ್ಮದೇವರು ಇವನಿಗೆ ಸಂತತಿ, ಅಕ್ಷಯಕೀರ್ತಿ, ಜ್ಞಾನಯೋಗ, ಗುರುಗಳನ್ನು ಮೀರಿಸುವ ಕಾಮರೂಪಿತ್ವ - ಇವುಗಳನ್ನು ವರವಾಗಿ ಕೊಟ್ಟರು. ವರವನ್ನು ಪಡೆದ ಆನಕ ದುಂದುಭಿಯು ದೇವಪೂಜಿತನೂ, ವೃಷಭವಾಹನನೂ ಆದ ಶಿವನನ್ನು ಗಾನದಿಂದ ಪೂಜಿಸಿದನು. ಪ್ರೀತನಾದ ಪಾರ್ವತೀಪತಿಯು ದೇವತೆಗಳಿಗೂ ದುರ್ಲಭಳಾದ ಕನ್ಯಾರತ್ನವನ್ನು ಇವನಿಗೆ ಕೊಟ್ಟನು. ಶತ್ರುನಾಶಕನಾದ ಈ ರಾಜನು ಚಂಚಲನೇತ್ರೆಯಾದ ತನ್ನ ಪ್ರಿಯೆಗೆ ಶ್ರೇಷ್ಠವಾದ ಗಾನವನ್ನು ಕಲಿಸಿದನು. ಈ ದಂಪತಿಗಳಿಗೆ ಸುಭುಜ ಎನ್ನುವ ಮಗ ಮತ್ತು ಹ್ರೀಮತೀ ಎಂಬ ರೂಪಲಾವಣ್ಯ ಸಂಪನ್ನಳಾದ ಮಗಳು ಹುಟ್ಟಿದರು. ತಾಯಿಯು ಇಬ್ಬರು ಮಕ್ಕಳಿಗೂ ಎಳೆ ವಯಸ್ಸಿನಲ್ಲೇ ಗಾನವಿದ್ಯೆಯನ್ನು ಕಲಿಸಿದಳು. ಸುಭುಜನು ಉಪನೀತನಾಗಿ ಗುರುಗಳಿಂದ ವೇದಗಳನ್ನು ಓದಿ ಗಂಧರ್ವರ ಮಾನಸ ಪುತ್ರಿಯೊಬ್ಬಳನ್ನು ಮದುವೆಯಾದನು. ಈ ದಂಪತಿಗಳಿಗೆ ಐದು ಜನ ಮಕ್ಕಳು. ಎಲ್ಲರೂ ಗಾನವಿಶಾರದರು, ವೀಣಾವಾದನ ತತ್ವಜ್ಞರು. ಸುಭುಜನು ಪತ್ನೀ, ಪುತ್ರ, ಪುತ್ರಿಯರೊಡನೆ ತ್ರಿಪುರಾಂತಕನಾದ ಶಿವನನ್ನು ಗಾನದಿಂದ ಸಂತೋಷ ಪಡಿಸಿದನು. ಸುಬಾಹು ಎಂಬ ಗಂಧರ್ವನು ಸುಂದರಸರ್ವಾಂಗಿಯೂ, ಲಕ್ಷ್ಮಿಯ ಕಣ್ಣಿನಂತೆ ವಿಶಾಲವಾದ ಲೋಚನವುಳ್ಳವಳೂ ಆದ ಹ್ರೀಮತಿಯನ್ನು ತೆಗೆದು-ಕೊಂಡು ತನ್ನ ಊರಿಗೆ ಹೋದನು. ಈ ಗಂಧರ್ವನಿಗೆ ಸುಷೇಣ, ಧೀರ, ಸುಗ್ರೀವ, ಸುಭೋಜ, ನರವಾಹನ ಎಂಬ ಮಕ್ಕಳು ಹುಟ್ಟಿದರು.

ಚಂದನೋದಕದುಂದುಭಿಯ ಮಗ ಅಭಿಜಿತ್. ಅಭಿಜಿತ್‌ನ ಮಗ ಪುನರ್ವಸು. ಇವನ ಮಗ ಆಹುಕ. ಆಹುಕನಿಗೆ ಉಗ್ರಸೇನ ಮತ್ತು ದೇವಕ ಎಂಬ ಇಬ್ಬರು ಮಕ್ಕಳು. ದೇವಕನಿಗೆ ದೇವವಾನ್, ಉಪದೇವ, ಸುದೇವ, ದೇವರಕ್ಷಿತ ಎಂಬ ದೇವತೆಗಳಂತಹ ವೀರರಾದ ಮಕ್ಕಳು ಹುಟ್ಟಿದರು. ಇವರಿಗೆ ಏಳು ಜನ ಸೋದರಿಯರು. ದೇವಕನು ಎಲ್ಲರನ್ನೂ ವಸುದೇವನಿಗೆ ಕೊಟ್ಟು ಮದುವೆ ಮಾಡಿದನು. ಧೃತದೇವಾ, ಉಪದೇವಾ, ದೇವರಕ್ಷಿತಾ, ಶ್ರೀದೇವಾ, ಶಾಂತಿದೇವಾ, ಸಹದೇವಾ ಮತ್ತು ದೇವಕೀ, ಇವರಲ್ಲಿ ದೇವಕಿಯು ವರಿಷ್ಠಳು.

ನ್ಯಗ್ರೋಧ, ಕಂಸ, ಸುಭೂಮಿ, ರಾಷ್ಟ್ರಪಾಲ, ತುಷ್ಟಿಮಾನ್, ಶಂಕು - ಇವರೆಲ್ಲರೂ ಉಗ್ರಸೇನನ ಮಕ್ಕಳು.

ಭಜಮಾನ( ಅಭಕನ ಮಗ)ನ ಮಗ ವಿದೂರಥ. ಇವನು ಬಹಳ ಕೀರ್ತಿವಂತನಾಗಿದ್ದನು. ವಿದೂರಥನ ಮಗ ಸೂರಸಮ. ಇವನ ಮಗ ಪ್ರತಿಕ್ಷತ್ರ. ಪ್ರತಿಕ್ಷತ್ರನ ಮಗ ಸ್ವಯಂಭೋಜ. ಇವನ ಮಗ ಧಾತ್ರೀಕ. ಇವನು ಶತ್ರು ನಿಗ್ರಹದಲ್ಲಿ ಸಮರ್ಥನಾಗಿದ್ದನು. ಇವನ ಮಗ ಕೃತವರ್ಮ. ಕೃತವರ್ಮನ ಮಗ ಶೂರಸೇನ. ಶೂರಸೇನನ ಮಗ ವಸುದೇವ. ಇವನು ಸದಾ ಧರ್ಮಪರಾಯಣನಾಗಿದ್ದನು. ದೇವತೆಗಳಿಂದ ಭೂಭಾರನಾಶಕ್ಕಾಗಿ ಪ್ರಾರ್ಥಿಸಲ್ಪಟ್ಟ ಶ್ರೀಹರಿಯು ವಸುದೇವ- ದೇವಕಿಯರ ಮಗನಾಗಿ ಹುಟ್ಟಿದನು. ವಸುದೇವನ ಮತ್ತೊಬ್ಬಳು ಹೆಂಡತಿ ರೋಹಿಣಿಯಲ್ಲಿ ಸಂಕರ್ಷಣ ಮೂರ್ತಿಯು ಅವತರಿಸಿದನು. ಇವನೇ ಬಲರಾಮ, ಹಲಾಯುಧಧಾರಿ. ಶ್ರೀಹರಿಯು ಭೃಗುಶಾಪದ ನೆಪದಿಂದ ದೇವಕಿಯಲ್ಲಿ ಮತ್ತು ರೋಹಿಣಿಯಲ್ಲಿ ಮಾನವನಾಗಿ ಅವತರಿಸಿದ್ದಾನೆ. ಪಾರ್ವತಿಯ ದೇಹದಿಂದ ಹುಟ್ಟಿದ ಕೌಶಿಕೀ ಎಂಬ ಹೆಸರಿನ ಯೋಗನಿದ್ರೆಯು ಶ್ರೀಹರಿಯ ಆಜ್ಞೆಯಿಂದ ಯಶೋದೆಯ ಮಗಳಾಗಿ ಹುಟ್ಟಿದಳು.

ಸುಷೇಣ, ದಾಯೀ, ಮದ್ರಸೇನ, ವಜ್ರದಂಭ, ಭದ್ರಸೇನ, ಕೀರ್ತಿಮಾನ್ - ಈ ಆರು ಜನ ವಸುದೇವನ ಮಕ್ಕಳು. ಕೃಷ್ಣನಿಗಿಂತ ಮೊದಲು ದೇವಕಿಯಲ್ಲಿ ಹುಟ್ಟಿದವರು. ಇವರನ್ನು ಕಂಸನು ಕೊಂದು ಹಾಕಿದನು. ಇವರ ವಧೆಯಾದ ನಂತರ ವಸುದೇವ ರೋಹಿಣಿಯರ ಮಗನಾಗಿ ಬಲರಾಮನು ಹುಟ್ಟಿದನು. ಬಲರಾಮನು ಹುಟ್ಟಿದ ನಂತರ ದೇವೋತ್ತಮನಾದ, ಶ್ರೀವತ್ಸಾಂಕಿತನಾದ ಶ್ರೀಕೃಷ್ಣನು ದೇವಕೀ ಪುತ್ರನಾಗಿ ಅವತರಿಸಿದನು. ಸದ್ಗುಣಸಂಪನ್ನಳಾದ ರೇವತಿಯು ಬಲರಾಮನ ಹೆಂಡತಿ. ನಿಶಿತ ಮತ್ತು ಉಲ್ಮುಕ ಇವರ ಮಕ್ಕಳು. ಎಲ್ಲ ಕಾರ್ಯಗಳನ್ನೂ ಆಯಾಸವಿಲ್ಲದೆ ಸಾಧಿಸುವ ಕೃಷ್ಣನಿಗೆ ಹದಿನಾರು ಸಾವಿರ ಹೆಂಡತಿಯರು. ಅವರಿಗೆ ಸಾವಿರಾರು ಮಕ್ಕಳು. ಚಾರುದೇಷ್ಣ, ಸುಚಾರು, ಚಾರುವೇಷ, ಯಶೋಧರ, ಚಾರುಶ್ರವ, ಚಾರುಯಶ, ಪ್ರದ್ಯುಮ್ನ, ಸಾಂಬ - ಇವರು ಶ್ರೀಕೃಷ್ಣ - ರುಕ್ಮಿಣಿಯರ ಮಕ್ಕಳು. ಮಹಾಬಲಶಾಲಿಗಳು. ಶ್ರೀಕೃಷ್ಣನ ಸಾವಿರಾರು ಮಕ್ಕಳಲ್ಲಿ ಇವರು ವಿಶಿಷ್ಟರು. ರುಕ್ಮಿಣಿಯ ಆ ಮಕ್ಕಳನ್ನು ನೋಡಿ ಜಾಂಬವತಿಯು ಕೃಷ್ಣನಿಗೆ ಹೇಳಿದಳು. ''ಪುಂಡರೀಕಾಕ್ಷ! ದಾನವಾಂತಕ! ವಿಶಿಷ್ಟ ಗುಣಗಳನ್ನು ಹೊಂದಿದ, ದೇವೇಂದ್ರನಂತಹ ಮಗನನ್ನು ನನಗೆ ಕೊಡು'' ಜಾಂಬವತಿಯ ಆಸೆಯನ್ನು ಪೂರೈಸುವುದಕ್ಕಾಗಿ ಶ್ರೀಕೃಷ್ಣನು ಶಿವನನ್ನು ಕುರಿತು ತಪಸ್ಸು ಮಾಡಲು ಆರಂಭಿಸಿದನು. ಮುನಿಶ್ರೇಷ್ಠರೆ! ಶ್ರೀಕೃಷ್ಣನು ರುದ್ರನನ್ನು ಕುರಿತು ತೀವ್ರ ತಪಸ್ಸನ್ನು ಮಾಡಿ, ಶಿವನನ್ನು ಸಾಕ್ಷಾತ್ಕರಿಸಿ ಮಗನನ್ನು ಪಡೆದ ವೃತ್ತಾಂತವನ್ನು ಕೇಳಿರಿ.

* * *

## ಅಧ್ಯಾಯ-೨೫

**ಸೂತ ಉವಾಚ :**

ಇಂದ್ರಿಯಗಳ ನಿಯಾಮಕನಾದ, ಪುರುಷೋತ್ತಮನಾದ ಭಗವಾನ್ ಕೃಷ್ಣನು ಪುತ್ರನನ್ನು ಪಡೆಯುವುದಕ್ಕಾಗಿ ತಪೋನಿಧಿಯಾದ ಶಿವನನ್ನು ಕುರಿತು ಘೋರತಪಸ್ಸನ್ನು ಮಾಡಿದನು. ವಿಶ್ವಸೃಷ್ಟಿಕರ್ತೃವೂ, ಕೃತಕೃತ್ಯನೂ ಕೇವಲ ತನ್ನ ಇಚ್ಛೆಯಿಂದ (*ಯಾರ ಆಜ್ಞೆ, ಒತ್ತಾಯಗಳಿಲ್ಲದೆ*) ಅವತಾರ ಮಾಡಿರುವ ಶ್ರೀಕೃಷ್ಣನು ಪರಮೇಶ್ವರನೇ ತನ್ನ ಮೂಲ ಎಂದು ಬೋಧಿಸುತ್ತಾ ತಪಸ್ಸು ಮಾಡಿದನು.

ಶ್ರೀಕೃಷ್ಣನು ಶಂಖಚಕ್ರಗದಾಪಾಣಿಯೂ, ಶ್ರೀವತ್ಸಾಂಕನೂ ಆಗಿ ಅತಿ ತೇಜಸ್ವಿಯೂ, ಪಕ್ಷಿಗಳ ರಾಜನೂ ಆದ ಗರುಡನನ್ನು ಏರಿ ನಾನಾ ವಿಧವಾದ ಮರ-ಬಳ್ಳಿಗಳಿಂದ ತುಂಬಿದ, ನಾನಾ ಪುಷ್ಪಗಳಿಂದ ಶೋಭಿತವಾದ, ಸುತ್ತಲೂ ಋಷಿಗಳ ಆಶ್ರಮಗಳಿರುವ, ವೇದ ಘೋಷದ ಧ್ವನಿಯಿಂದ ತುಂಬಿದ, ಸಿಂಹ, ಕರಡಿ, ಶರಭ, ಹುಲಿ, ಗಜ -ಮೊದಲಾದ ಪ್ರಾಣಿಸಂಕುಲದಿಂದ ತುಂಬಿರುವ, ನಿರ್ಮಲವೂ, ರುಚಿಯೂ ಆದ ನೀರಿನ ಸರೋವರಗಳಿಂದ ಶೋಭಿಸುವ, ವಿವಿಧವಾದ ಉಪವನ, ದೇವಾಲಯಗಳಿರುವ ವೇದಾಧ್ಯಯನ ಸಂಪನ್ನರಾದ ಋಷಿಗಳು, ಋಷಿಪುತ್ರರು, ಮಹಾಮುನಿಗಳು, ಅಗ್ನಿಹೋತ್ರಿಗಳು. ಧ್ಯಾನನಿರತರಾದ ಯೋಗಿಗಳು, ತತ್ವಜ್ಞಾನಿಗಳು ಇರುವ, ಸುತ್ತಲೂ ಹರಿಯುವ ನದಿಗಳುಳ್ಳ, ಪ್ರಶಾಂತರೂ, ಸತ್ಯಸಂಕಲ್ಪರೂ ಶೋಕ-ಉಪದ್ರವ ರಹಿತರೂ, ಸರ್ವಾಂಗಗಳಿಗೆ ಭಸ್ಮಲೇಪವನ್ನು ಮಾಡಿಕೊಂಡಿರುವವರೂ ಆದ, ರುದ್ರಾಧ್ಯಾಯದ ಜಪ-ಪಾರಾಯಣಗಳನ್ನು ಮಾಡುತ್ತಿರುವ, ಮುಂಡನ ಮಾಡಿಕೊಂಡಿರುವ, ಜಟಾಧಾರಿಗಳಾಗಿರುವ, ಬ್ರಹ್ಮವಾದಿಗಳು ವಾಸ ಮಾಡಿಕೊಂಡಿರುವ, ಮುನಿಶ್ರೇಷ್ಠರಾದ, ಮಹಾತ್ಮರಾದ ಉಪಮನ್ಯು ಮುನಿಗಳ ಆಶ್ರಮಕ್ಕೆ ಹೋದನು. ಈ ಆಶ್ರಮದ ಹತ್ತಿರದಲ್ಲಿ ಪಾಪನಾಶಿನಿಯಾದ ಗಂಗೆಯು ಯಾವಾಗಲೂ ಹರಿಯುತ್ತಿರುತ್ತಾಳೆ. ಶ್ರೀಕೃಷ್ಣನು ಆಶ್ರಮದಲ್ಲಿ ಕಲ್ಮಶರಹಿತರಾದ ತಾಪಸರನ್ನು ನೋಡಿ ಪ್ರಣಾಮದಿಂದಲೂ, ಒಳ್ಳೆಯ ಮಾತುಗಳಿಂದಲೂ ಸತ್ಕರಿಸಿದನು.

ಆ ಮುನಿಗಳೆಲ್ಲರೂ ಶಂಖಚಕ್ರಗದಾಧರನಾದ, ಜಗಜ್ಜನ್ಮಾದಿ ಕಾರಣನೂ, ಯೋಗಿಗಳ ಪರಮಗುರುವೂ ಆದ ಶ್ರೀಕೃಷ್ಣನನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿದರು. ಸನಾತನನಾದ ಅವನನ್ನು ಹೃದಯದಲ್ಲಿ ಚಿಂತಿಸುತ್ತಾ ವೈದಿಕ ಮಂತ್ರಗಳಿಂದ ಸ್ತೋತ್ರ ಮಾಡಿದರು. ಈ ಮಹಾಮುನಿಗಳು ಆದಿದೇವನಾದ ಶ್ರೀಕೃಷ್ಣನ ಬಗ್ಗೆ ಪರಸ್ಪರ ಮಾತನಾಡಿಕೊಂಡರು.

"ಇಲ್ಲಿ ಬಂದಿರುವ ಭಗವಾನ್ ಕೃಷ್ಣನೇ ಸ್ವತಂತ್ರನಾದ ಸರ್ವೋತ್ತಮನಾದ ನಾರಾಯಣ. ಇವನು ಎಲ್ಲವನ್ನೂ ನೇರವಾಗಿ ನೋಡುತ್ತಾನೆ. ಇವನು ಅವ್ಯಯ; ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವವನು; ಅಮೂರ್ತನಾದರೂ ಮೂರ್ತಿವಂತನಾಗಿ ಮುನಿಗಳನ್ನು ನೋಡಲು

ಇಲ್ಲಿ ಬಂದಿದ್ದಾನೆ. ಇವನು ಸರ್ವವ್ಯಾಪಿ; ಅನಾದಿ; ಅನಂತ; ಅಕ್ಷಯ. ಇವನು ಮಹಾಭೂತ; ಮಹೇಶ್ವರ.''

ಈ ಮಾತುಗಳನ್ನು ಕೇಳುತ್ತಾ ಶ್ರೀಕೃಷ್ಣನು ಉಪಮನ್ಯು ಮಹರ್ಷಿಗಳನ್ನು ಭೇಟಿ ಮಾಡಿದನು. ಈ ಯಾದವ ಕೃಷ್ಣನು ಎಲ್ಲ ತೀರ್ಥಗಳಲ್ಲಿ ಸ್ನಾನ-ಆಚಮನಗಳನ್ನು ಮಾಡುತ್ತಾ ದೇವ-ಋಷಿ-ಪಿತೃ ತರ್ಪಣಗಳನ್ನು ಮಾಡಿದನು. ನದೀತೀರದಲ್ಲಿ ಸ್ಥಾಪಿಸಲ್ಪಟ್ಟಿದ್ದ ಶಿವಲಿಂಗಗಳನ್ನು ಪೂಜಿಸಿದನು. ಆಶ್ರಮದ ಬೇರೆ ಬೇರೆ ಸ್ಥಳಗಳಿಗೆ ಬಂದ ಶ್ರೀಕೃಷ್ಣನನ್ನು ಅಲ್ಲಲ್ಲಿ ಇರುವ ನಿವಾಸಿಗಳು ಪುಷ್ಪಗಳಿಂದ, ಅಕ್ಷತೆಗಳಿಂದ ಪೂಜಿಸಿದರು. ಶುಭಾಂಗರೂ, ಮನಸ್ಸನ್ನು ನಿಯಂತ್ರಿಸಿದವರೂ ಆದ ಆ ಮುನಿಗಳು ಶ್ರೀಕೃಷ್ಣನನ್ನು ನೋಡಿ ನಿಶ್ಚಲರಾಗಿ ನಿಂತರು. ಶ್ರೀಕೃಷ್ಣನನ್ನು ಧ್ಯಾನಿಸುವ ಮಟ್ಟಕ್ಕೆ ಏರಲು ಬಯಸುತ್ತಿದ್ದ ಆದರೆ ಜಾರುತ್ತಿದ್ದ ಧ್ಯಾನಿಸುವ ಮನಸ್ಸುಗಳೆಲ್ಲವೂ ಅವನನ್ನು ನೋಡಿ ಸಮಾಧಿಸ್ಥಿತಿಯನ್ನು ಪಡೆದವು.

ಅನಂತರ ಶ್ರೀಕೃಷ್ಣನು ಗಂಗೆಯಲ್ಲಿ ಅವಗಾಹನವನ್ನು ಮಾಡಿ, ದೇವರ್ಷಿತರ್ಪಣವನ್ನು ಮಾಡಿ, ಕೈಯಲ್ಲಿ, ಉತ್ತಮವಾದ ಪುಷ್ಪಗಳನ್ನು ಹಿಡಿದು ಮುನಿಶ್ರೇಷ್ಠನಾದ ಉಪಮನ್ಯುವಿನ ಬಳಿ ಹೋದನು. ಭಸ್ಮಲೇಪನವನ್ನು ಮಾಡಿಕೊಂಡಿದ್ದ, ಜಟಾ-ವಲ್ಕಲವನ್ನು ಧರಿಸಿದ್ದ ಯೋಗಿಶ್ರೇಷ್ಠನನ್ನು ನೋಡಿ ಶಿರಸಾ ನಮಸ್ಕರಿಸಿದನು. ಉಪಮನ್ಯು ಕೂಡ ಯೋಗಿಗಳ ಪ್ರಥಮಮಾನ್ಯ ಅತಿಥಿಯಾದ ಶ್ರೀಕೃಷ್ಣನನ್ನು ಆಸನದಲ್ಲಿ ಕೂಡಿಸಿ ಹೇಳಿದನು.

''ನಿನ್ನನ್ನು ಯೋಗಿಗಳೆಲ್ಲರೂ ಆರಾಧಿಸುವ, ತಲುಪಲು ಬಯಸುವ, ಅವ್ಯಕ್ತನಾದ, ಆದರೂ ಶಿಷ್ಯರೂಪದಿಂದ ಇಲ್ಲಿಗೆ ಬಂದಿರುವ ವಿಷ್ಣು ಎಂದೂ ತಿಳಿದಿದ್ದೇನೆ. ಹೃಷೀಕೇಶ! ನಿನಗೆ ಸ್ವಾಗತ. ವಿಶ್ವಾತ್ಮನಾದ ವಿಷ್ಣುವೇ ಸಾಕ್ಷಾತ್ ಆಗಿ ನನ್ನ ಆಶ್ರಮಕ್ಕೆ ಬಂದಿರುವುದರಿಂದ ನಮ್ಮ ತಪಸ್ಸು ಸಫಲವಾಯಿತು. ನಿನ್ನ ದರ್ಶನಕ್ಕಾಗಿ ಪ್ರಯತ್ನ ಮಾಡುವ ಯೋಗಿಗಳೂ ವಿಫಲರಾಗುತ್ತಾರೆ. ಅಂತಹ ನಿನ್ನ ಆಗಮನಕ್ಕೆ ಕಾರಣವೇನು?''

ಮಹಾಯೋಗಿಯಾದ ಭಗವಾನ್ ದೇವಕೀಸುತನು ಪ್ರಸನ್ನರಾದ ಉಪಮನ್ಯುವಿಗೆ ನಮಸ್ಕಾರ ಮಾಡಿ ಹೇಳಿದನು.

''ಪೂಜ್ಯರೇ! ಕೃತ್ತಿವಾಸನಾದ ಕೈಲಾಸವಾಸಿಯನ್ನು ನೋಡಲು ಅಪೇಕ್ಷಿಸುತ್ತೇನೆ. ಅದಕ್ಕಾಗಿ ನಿಮ್ಮ ಬಳಿ ಬಂದಿದ್ದೇನೆ. ಯೋಗವನ್ನು ತಿಳಿದವರಲ್ಲಿ ಶ್ರೇಷ್ಠನಾದ ಭಗವಾನ್ ಶಿವನನ್ನು ನೋಡುವ ಉಪಾಯ ಯಾವುದು? ಅವನನ್ನು ಶೀಘ್ರವಾಗಿ ಎಲ್ಲಿ ನೋಡ ಬಹುದು?''

ಉಪಮನ್ಯು ಮುನಿಗಳು ಹೇಳಿದರು : ''ಭಕ್ತಿಯಿಂದ ಉಗ್ರ ತಪಸ್ಸಿನಿಂದ ಮಾತ್ರ ಪರಮೇಶ್ವರನನ್ನು ನೋಡಲು ಸಾಧ್ಯ. ಆದ್ದರಿಂದ ಜಿತೇಂದ್ರಿಯನಾಗಿ ತಪಸ್ಸನ್ನು ಮಾಡು.

ಬ್ರಹ್ಮವಾದಿಗಳಾದ ಮುನೀಂದ್ರರು ಈ ಸ್ಥಳದಲ್ಲೇ ಪರಮೇಶ್ವರನನ್ನು ಧ್ಯಾನಿಸುತ್ತಾರೆ. ಯೋಗಿಗಳೂ, ತಾಪಸರೂ ಇಲ್ಲೇ ಆರಾಧಿಸುತ್ತಾರೆ. ಭಗವಾನ್ ವೃಷಭಧ್ವಜನು (ಶಿವನು) ಪಾರ್ವತೀ ಸಹಿತನಾಗಿ ವಿವಿಧ ಭೂತಗಳ ಮತ್ತು ಯೋಗಿಗಳ ಜೊತೆಗೆ ಇದೇ ಆಶ್ರಮದಲ್ಲಿ ವಿಹರಿಸುತ್ತಾನೆ. ಹಿಂದೆ ಭಗವಾನ್ ವಸಿಷ್ಠರು ಇದೇ ಆಶ್ರಮದಲ್ಲಿ ಉಗ್ರವಾದ ತಪಸ್ಸನ್ನು ಮಾಡಿ ಮಹೇಶ್ವರನಿಂದ ಯೋಗವಿದ್ಯೆಯನ್ನು ಪಡೆದರು. ವೇದವ್ಯಾಸರಾದ ಭಗವಾನ್ ಕೃಷ್ಣ ದ್ವೈಪಾಯನರು ಇಲ್ಲೇ ಪರಮೇಶ್ವರನ ದರ್ಶನ ಪಡೆದು ಈಶ್ವರಜ್ಞಾನವನ್ನು ಹೊಂದಿದರು. ಇದೇ ಆಶ್ರಮದಲ್ಲಿ ಜ್ಞಾನಿಗಳು ಭಕ್ತಿಯಿಂದ, ಜಟಾಧಾರಿಗಳಾಗಿ ತಪಸ್ಸನ್ನು ಮಾಡಿ ಶ್ರೇಷ್ಠರಾದ ಮಕ್ಕಳನ್ನು ಪಡೆದರು. ಇಲ್ಲೇ ಮಹೇಶ್ವರ ಪತ್ನಿ ಪಾರ್ವತಿಯನ್ನು ಮತ್ತು ಶಿವನನ್ನು ಸ್ತುತಿಸಿ ಭಕ್ತರು ಕೈವಲ್ಯವನ್ನು ಪಡೆದರು. ತಪಸ್ವಿಗಳಲ್ಲಿ ಶ್ರೇಷ್ಠನಾದ ಸಾವರ್ಣಿಯು ಇದೇ ಆಶ್ರಮದಲ್ಲಿ ಶಿವನನ್ನು ಆರಾಧಿಸಿ ಪರಮಯೋಗವನ್ನು, ಗ್ರಂಥರಚನೆಯ ಸಾಮರ್ಥ್ಯವನ್ನು ಪಡೆದನು. ಮಂಗಳಕರವಾದ ಸಂಹಿತೆಯನ್ನು ರಚಿಸಿ ಸ್ಥಾಪಿಸಿದನು. ಅವನ ಶಿಷ್ಯರಾದ ದ್ವಿಜೋತ್ತಮರು ವೈಶಂಪಾಯನರ ಉಪದೇಶವನ್ನು ಇಲ್ಲೇ ಪ್ರಸಿದ್ಧಪಡಿಸಿದರು. ಮಹಾಯೋಗಿಗಳಾದ ಯಾಜ್ಞವಲ್ಕ್ಯರು ಇಲ್ಲೇ ತಪಸ್ಸಿನಿಂದ ಶಿವಸಾಕ್ಷಾತ್ಕಾರವನ್ನು ಮಾಡಿಕೊಂಡು, ಶಿವನ ಆಜ್ಞೆಯಿಂದ ಶ್ರೇಷ್ಠವಾದ ಯೋಗಶಾಸ್ತ್ರವನ್ನು ರಚಿಸಿದರು. ಈ ಆಶ್ರಮದಲ್ಲೇ ಭೃಗು ಮಹರ್ಷಿಗಳು ಮಹಾತಪಸ್ಸನ್ನು ಆಚರಿಸಿ ಮಹೇಶ್ವರನ ಅನುಗ್ರಹದಿಂದ ಯೋಗಿಶ್ರೇಷ್ಠನಾದ ಶುಕ್ರಾಚಾರ್ಯರನ್ನು ಮಗನನ್ನಾಗಿ ಪಡೆದರು. ಆದ್ದರಿಂದ, ದೇವೇಶ! ಇಲ್ಲೇ ಕಠಿಣವಾದ ತಪಸ್ಸನ್ನು ಆಚರಿಸಿ, ವಿಶ್ವೇಶನೂ, ಉಗ್ರನೂ ಕಪರ್ದಿಯೂ ಆದ ಶಿವನ ಸಾಕ್ಷಾತ್ಕಾರವನ್ನು ಪಡೆದುಕೋ." ಹೀಗೆ ಹೇಳಿ ಮಹಾಮುನಿ ಉಪಮನ್ಯುವು ಅನಾಯಾಸವಾಗಿ ಕೆಲಸಗಳನ್ನು ಸಾಧಿಸುವ ಶ್ರೀಕೃಷ್ಣನಿಗೆ ಪಾಶುಪತಯೋಗವನ್ನು ಉಪದೇಶಿಸಿ ಜ್ಞಾನವನ್ನು ಕೊಟ್ಟನು.

ಆ ಮುನಿವರ್ಯನ ನಿರ್ದೇಶನದಂತೆ ಮಧುಸೂದನನು ಆ ಆಶ್ರಮದಲ್ಲೇ ದೇವ ದೇವನಾದ ರುದ್ರನನ್ನು ತಪಸ್ಸಿನಿಂದ ಆರಾಧಿಸಿದನು. ಮುಂಡನ ಮಾಡಿಸಿಕೊಂಡು, ಭಸ್ಮದಿಂದ ಸರ್ವಾಂಗವನ್ನೂ ಲೇಪಿಸಿಕೊಂಡು, ವಲ್ಕಲಧಾರಿಯಾಗಿ, ಏಕಾಗ್ರತೆಯಿಂದ ಶಿವಜಪವನ್ನು ಮಾಡಿದನು. ಬಹುಕಾಲಾನಂತರ ಚಂದ್ರಭೂಷಣನಾದ ಶಿವನು ಪಾರ್ವತಿಯೊಂದಿಗೆ ಆಕಾಶದಲ್ಲಿ ಕಾಣಿಸಿಕೊಂಡನು.

ಕಿರೀಟಿನಂ ಗದಿನಂ ಚಿತ್ರಮಾಲಂ
ಪಿನಾಕಿನಂ ಶೂಲಿನಂ ದೇವದೇವಮ್ ।
ಶಾರ್ದೂಲಚರ್ಮಾಂಬರ ಸಂವೃತಾಂಗಂ
ದೇವ್ಯಾ ಮಹಾದೇವಮಸೌ ದದರ್ಶ ॥

ಕಿರೀಟವನ್ನು ಧರಿಸಿರುವ ಗದೆಯನ್ನು ಹಿಡಿದಿರುವ, ಚಿತ್ರಮಾಲೆಯನ್ನು ಧರಿಸಿರುವ ಪಿನಾಕವನ್ನೂ ಶೂಲವನ್ನೂ ಹಿಡಿದಿರುವ, ದೇವದೇವನೂ ಹುಲಿಯ ಚರ್ಮವನ್ನು ಮೈಗೆ ಸುತ್ತಿಕೊಂಡಿರುವ ದೇವೀಸಹಿತನಾದ ಮಹಾದೇವನನ್ನು ಶ್ರೀಕೃಷ್ಣನು ನೋಡಿದನು.

ಪ್ರಭುಂ ಪುರಾಣಂ ಪುರುಷಂ ಪುರಸ್ತಾತ್
ಸನಾತನಂ ಯೋಗಿನಮೀಶಿತಾರಮ್ ।
ಅಣೋರಣೀಯಾಂಸಮನಂತಶಕ್ತಿಂ
ಪ್ರಾಣೇಶ್ವರಂ ಶಂಭುಮಸೌ ದದರ್ಶ ॥

ಸಮರ್ಥನೂ ಪುರಾಣಪುರುಷನೂ, ಸನಾತನೂ, ಯೋಗಿಯೂ, ನಿಯಾಮಕನೂ ಅಣುವಿಗಿಂತ ಅಣುವು, ಮುಗಿಯದ ಶಕ್ತಿವುಳ್ಳವನೂ, ಪ್ರಾಣನಿಯಾಮಕರಲ್ಲಿ ಶ್ರೇಷ್ಠನೂ ಆದ ಶಂಭುವನ್ನು ಶ್ರೀಕೃಷ್ಣನು ತನ್ನೆದುರಿಗೆ ನೋಡಿದನು.

ಪರಶ್ವಧಾಸಕ್ತಕರಂ ತ್ರಿಣೇತ್ರಂ
ಶಾರ್ದೂಲ ಚರ್ಮಾವೃತಭಸ್ಮಗಾತ್ರಮ್ ।
ಸಮುದ್ಗಿರಂತಂ ಪ್ರಣವಂ ಬೃಹಂತಂ
ಸಹಸ್ರ ಸೂರ್ಯ ಪ್ರತಿಮಂ ದದರ್ಶ ॥

ಕೈಯಲ್ಲಿ ಕೊಡಲಿಹಿಡಿದ, ಮುಕ್ಕಣ್ಣನ್ನುಳವನು, ಶರೀರಕ್ಕೆ ಹುಲಿಯ ಚರ್ಮವನ್ನು ಸುತ್ತಿಕೊಂಡಿರುವ, ಭಸ್ಮವನ್ನು ಲೇಪಿಸಿಕೊಂಡಿರುವ, ಓಂಕಾರವನ್ನು ಉಚ್ಚರಿಸುತ್ತಿರುವ ಪೂರ್ಣನಾದ, ಸಾವಿರ ಸೂರ್ಯರಂತಿರುವ ಶಂಭುವನ್ನು ನೋಡಿದನು.

ನ ಯಸ್ಯ ದೇವಾ ನ ಪಿತಾಮಹೋಽಪಿ
ನೇಂದ್ರೋ ನಚಾಗ್ನಿರ್ವರುಣೋ ನ ಮೃತ್ಯುಃ ।
ಪ್ರಭಾವಮದ್ಯಾಪಿ ವದಂತಿ ರುದ್ರಂ
ತಮಾದಿದೇವಂ ಪುರತೋ ದದರ್ಶ ॥

ಯಾರ ಪ್ರಭಾವವನ್ನು ಇಂದ್ರ, ಅಗ್ನಿ, ವರುಣ, ಯಮ, ಮೊದಲಾದ ದೇವತೆಗಳು, ಪಿತಾಮಹನಾದ ಬ್ರಹ್ಮನೂ ಕೂಡ ಹೇಳಲಾರರೋ ಅಂತಹ ಆದಿದೇವ ರುದ್ರನನ್ನು ತನ್ನೆದುರಿಗೆ ನೋಡಿದನು.

ತದಾನ್ವಪಶ್ಯದ್ಗಿರಿಶಸ್ಯ ವಾಮೇ
ಸ್ವಾತ್ಮಾನಮವ್ಯಕ್ತಮನಂತರೂಪಮ್ ।
ಸ್ತುವಂತಮೀಶಂ ಬಹುಭಿರ್ವಚೋಭಿಃ
ಶಂಖಾಸಿ ಚಕ್ರಾನ್ವಿತಹಸ್ತಮಾದ್ಯಮ್ ॥

ಆಗ ಗಿರೀಶನ ಎಡಭಾಗದಲ್ಲಿ ನಾನಾ ವಚನಗಳಿಂದ ಶಿವನನ್ನು ಸ್ತುತಿಸುತ್ತಿರುವ ಅವ್ಯಕ್ತವೂ, ಅವಂತವೂ ಆದ, ಶಂಖ, ಖಡ್ಗ, ಚಕ್ರಗಳನ್ನು ಕೈಯಲ್ಲಿ ಹಿಡಿದಿರುವ, ಆದಿಪುರುಷನಾದ ತನ್ನನ್ನೇ ಶ್ರೀಕೃಷ್ಣನು ನೋಡಿದನು.

ಕೃತಾಂಜಲಿಂ ದಕ್ಷಿಣತಃ ಸುರೇಶಂ
ಹಂಸಾಧಿರೂಢಂ ಪುರುಷಂ ದದರ್ಶ ।
ಸ್ತುವಾನಮೀಶಸ್ಯ ಪರಂ ಪ್ರಭಾವಂ
ಪಿತಾಮಹಂ ಲೋಕಗುರುಂ ದಿವಿಸ್ಥಮ್ ॥

ಬಲಭಾಗದಲ್ಲಿ ಹಂಸವನ್ನೇರಿರುವ, ಶಿವನ ಪ್ರಭಾವವನ್ನು ಸ್ತುತಿಸುತ್ತಿರುವ ಕೈ ಮುಗಿದಿರುವ, ದೇವೇಶನಾದ, ಲೋಕಗುರುವಾದ, ಪಿತಾಮಹನಾದ ಚತುರ್ಮುಖ ಬ್ರಹ್ಮನನ್ನು ನೋಡಿದನು.

ಗಣೇಶ್ವರಾನರ್ಕಸಹಸ್ರಕಲ್ಪಾನ್
ನಂದೀಶ್ವರಾದೀನಮಿತಪ್ರಭಾವಾನ್ ।
ತ್ರಿಲೋಕಭರ್ತುಃ ಪುರುಷೋಽನ್ವಪಶ್ಯತ್
ಕುಮಾರಮಗ್ನಿಪ್ರತಿಮಂ ಗಣೇಶಮ್ ॥

ಸಾವಿರ ಸೂರ್ಯರಂತಿರುವ, ಅಮಿತ ಪ್ರಭಾವಶಾಲಿಗಳಾದ ನಂದೀಶ್ವರ ಮೊದಲಾದ ಗಣನಾಯಕರನ್ನೂ, ಮೂರು ಲೋಕದ ಒಡೆಯನ ಮಗನಾದ ಅಗ್ನಿಯಂತಿರುವ ಗಣೇಶನನ್ನೂ ನೋಡಿದನು.

ಮರೀಚಿಮತ್ರಿಂ ಪುಲಹಂ ಪುಲಸ್ತ್ಯಂ
ಪ್ರಚೇತಸಂ ದಕ್ಷಮಥಾಪಿ ಕಣ್ವಮ್ ।
ಪರಾಶರಂ ತತ್ಪರತೋ ವಸಿಷ್ಠಂ
ಸ್ವಾಯಂಭುವಂ ಚಾಪಿ ಮನುಂ ದದರ್ಶ ॥

ಮರೀಚಿ, ಅತ್ರಿ, ಪುಲಹ, ಪುಲಸ್ತ್ಯ, ಪ್ರಚೇತಸ, ದಕ್ಷ, ಕಣ್ವ, ಪರಾಶರ, ವಸಿಷ್ಠ ಮತ್ತು ಸ್ವಾಯಂಭುವಮನು - ಇವರುಗಳನ್ನು ಕಂಡನು.

ತುಷ್ಟಾವ ಮಂತ್ರೈರಮರಪ್ರಧಾನಂ
ಬದ್ಧಾಂಜಲಿರ್ವಿಷ್ಣುರುದಾರಬುದ್ಧಿಃ ।
ಪ್ರಣಮ್ಯ ದೇವ್ಯಾ ಗಿರಿಶಂ ಸ್ವಭಕ್ತ್ಯಾ
ಸ್ವಾತ್ಮನ್ಯಥಾತ್ಮಾನಮಸೌ ವಿಚಿಂತ್ಯ ॥

ಉದಾರಬುದ್ಧಿಯ ವಿಷ್ಣುವು (ಶ್ರೀಕೃಷ್ಣ) ಕೈಮುಗಿದು ಅಮರ ಪ್ರಧಾನನಾದ ದೇವೀಸಹಿತನಾದ ತನ್ನ ಅಂತರ್ಯಾಮಿಯಾದ ಶಿವನನ್ನು ಧ್ಯಾನಿಸಿ ಭಕ್ತಿಯಿಂದ ನಮಸ್ಕರಿಸಿ ಮಂತ್ರಗಳಿಂದ ಸ್ತುತಿಸಿದನು.

ಕೃಷ್ಣ ಉವಾಚ :

ನಮೋಽಸ್ತು ತೇ ಶಾಶ್ವತ ಸರ್ವಯೋಗ
ಬ್ರಹ್ಮಾದಯಸ್ತ್ವಾಮೃಷಯೋ ವದಂತಿ ।
ತಮಶ್ಚ ಸತ್ತ್ವಂ ಚ ರಜಸ್ತ್ರಯಂ ಚ
ತ್ವಾಮೇವ ಸರ್ವಂ ಪ್ರವದಂತಿ ಸಂತಃ ॥

ಶಾಶ್ವತ! ಸರ್ವ ಯೋಗ! ಬ್ರಹ್ಮಾದಿ ದೇವತೆಗಳು ಮತ್ತು ಋಷಿಗಳು ನಿನ್ನನ್ನು ತಮಸ್-ಸತ್ತ್ವ-ರಜೋಗುಣಗಳ ನಿಯಾಮಕನೆಂದು ನಿನ್ನನ್ನೇ ಪರಿಪೂರ್ಣ, ಸರ್ವನಿಯಾಮಕ ಎಂದು ಹೇಳುತ್ತಾರೆ.

ತ್ವಂ ಬ್ರಹ್ಮಾ ಹರಿರಥ ರುದ್ರ ವಿಶ್ವಕರ್ತಾ
ಸಂಹರ್ತಾ ದಿನಕರ ಮಂಡಲಾಧಿವಾಸಃ ।
ಪ್ರಾಣಸ್ತ್ವಂ ಹುತವಹವಾಸವಾದಿಭೇದ
ಸ್ತ್ವಾಮೇಕಂ ಶರಣಮುಪೈಮಿ ದೇವಮೀಶಮ್ ॥

ನೀನು ಬ್ರಹ್ಮಾ, ಹರಿ, ರುದ್ರ, ವಿಶ್ವಕರ್ತೃ, ಸರ್ವ ಸಂಹಾರಕ ಆಗಿರುವಿ. ನೀನು ಸೂರ್ಯ ಮಂಡಲದಲ್ಲಿ ಇರುವವನು. ನೀನು ಪ್ರಾಣ, ಅಗ್ನಿ, ಇಂದ್ರ ಮೊದಲಾದ ಪ್ರಭೇದವುಳ್ಳವನೂ ನೀನೆ. ಈಶನೂ, ದೇವನೂ ಸ್ವತಂತ್ರನೂ ಆದ ನಿನ್ನನ್ನು ರಕ್ಷಣೆಗಾಗಿ ಆಶ್ರಯಿಸುತ್ತೇನೆ.

ಸಾಂಖ್ಯಾಸ್ತ್ವಾಮಗುಣಮಥಾಹುರೇಕರೂಪಂ-
ಯೋಗಸ್ಥಂ ಸತತಮುಪಾಸತೇ ಹೃದಿಸ್ಥಮ್ ।
ವೇದಾಸ್ತ್ವಾಮಭಿದಧತೀಹ ರುದ್ರಮೀಡ್ಯಂ
ತ್ವಾಮೇಕಂ ಶರಣಮುಪೈಮಿ ದೇವಮೀಶಮ್ ॥

ಸಾಂಖ್ಯರು ನಿನ್ನನ್ನು ನಿರ್ಗುಣ, ಏಕರೂಪ, ಯೋಗನಿಷ್ಠ ಮತ್ತು ಹೃದಯದಲ್ಲಿರುವವನು ಎಂದು ಸತತವಾಗಿ ಉಪಾಸನೆ ಮಾಡುತ್ತಾರೆ. ವೇದಗಳು ನಿನ್ನನ್ನು ರುದ್ರ, ಸ್ತುತ್ಯ ಎಂದು ಹೇಳುತ್ತವೆ. ದೇವನೂ ಈಶನೂ, ಸ್ವತಂತ್ರನೂ ಆದ ನಿನ್ನನ್ನು ರಕ್ಷಣೆಗಾಗಿ ಆಶ್ರಯಿಸುತ್ತೇನೆ.

ತ್ವತ್ಪಾದೇ ಕುಸುಮಮಥಾಪಿ ಪತ್ರಮೇಕಂ
ದತ್ವಾಸೌ ಭವತಿ ವಿಮುಕ್ತವಿಶ್ವಬಂಧಃ ।
ಸರ್ವಾದ್ಯಂ ಪ್ರಣುದತಿ ಸಿದ್ಧಯೋಗಿಜುಷ್ಟಂ
ಸ್ಮೃತ್ವಾ ತೇ ಪದಯುಗಲಂ ಭವತ್ಪ್ರಸಾದಾತ್ ॥

ನಿನ್ನ ಪಾದಕ್ಕೆ ಒಂದು ಪುಷ್ಪ ಅಥವಾ ಪತ್ರವನ್ನು ಅರ್ಪಿಸಿದವನು ಸಕಲಬಂಧಗಳಿಂದಲೂ ಬಿಡುಗಡೆಯನ್ನು ಪಡೆಯುತ್ತಾನೆ. ಎಲ್ಲದಕ್ಕಿಂತ ಆದಿಯಾದ ಸಿದ್ಧರಿಂದಲೂ, ಯೋಗಿ-

ಗಳಿಂದಲೂ, ಭಜಿಸಲ್ಪಡುವ ನಿನ್ನ ಪಾದಗಳನ್ನು ಸ್ಮರಿಸಿದವನು ನಿನ್ನ ಅನುಗ್ರಹದಿಂದ ಮುಕ್ತಿಯನ್ನು ಪಡೆಯುತ್ತಾನೆ.

ಯಸ್ಮಾಕಶೇಷ ವಿಭಾಗಹೀನಮಮಲಂ ಹೃದ್ಯಂತರಾವಸ್ಥಿತಂ
ತೇ ತ್ವಾಂ ಯೋನಿಮನಂತಮೇಕಮಚಲಂ ಸತ್ಯಂ ಪರಂ ಸರ್ವಗಮ್ ।
ಸ್ಥಾನಂ ಪ್ರಾಹುರನಾದಿಮಧ್ಯನಿಧನಂ ಯಸ್ಮಾದಿದಂ ಜಾಯತೇ
ನಿತ್ಯಂ ತ್ವಾಹಮುಪೈಮಿ ಸತ್ಯವಿಭವಂ ವಿಶ್ವೇಶ್ವರಂ ತಂ ಶಿವಮ್ ॥

ಆ ಉಪಾಸಕರು ನಿನ್ನ ರೂಪವನ್ನು ಪೂರ್ಣ, ಅಮಲ, ಹೃದಯದಲ್ಲಿ ಇರುವಂತಹದು ಎಂದು ಹೇಳುತ್ತಾ ನಿನ್ನನ್ನು ಸರ್ವಕಾರಣ, ಅನಂತ ಅಚಲ, ಸತ್ಯ, ಪೂರ್ಣ, ಸರ್ವವ್ಯಾಪ್ತ ಎಂದು ಹೇಳುತ್ತಾರೆ. ನಿನ್ನ ಸ್ಥಾನವನ್ನು ಆದಿ, ಮಧ್ಯ, ಅಂತ ರಹಿತ ಎಂದು ಹೇಳುತ್ತಾರೆ. ಸರ್ವಜಗತ್ಕಾರಣನಾದ, ಸತ್ಯವಿಭವನೂ ವಿಶ್ವೇಶ್ವರನೂ, ಶಿವನೂ ಆದ ನಿನ್ನನ್ನು ನಾನು ರಕ್ಷಣೆಗಾಗಿ ಆಶ್ರಯಿಸುತ್ತೇನೆ.

ಓಂ ನಮೋ ನೀಲಕಂಠಾಯ ತ್ರಿನೇತ್ರಾಯ ಚ ರಂಹಸೆ ।
ಮಹಾದೇವಾಯ ತೇ ನಿತ್ಯಮೀಶಾನಾಯ. ನಮೋ ನಮಃ ॥

ನಮಃ ಪಿನಾಕಿನೇ ತುಭ್ಯಂ ನಮೋ ಮುಂಡಾಯ ದಂಡಿನೇ ।
ನಮಸ್ತೇ ವಜ್ರಹಸ್ತಾಯ ದಿಗ್ವಸ್ತ್ರಾಯ ಕಪರ್ದಿನೇ ॥

ನಮೋ ಭೈರವನಾದಾಯ ಕಾಲ ರೂಪಾಯ ದಂಷ್ಟ್ರಿಣೇ ।
ನಾಗಯಜ್ಞೋಪವೀತಾಯ ನಮಸ್ತೇ ವಹ್ನಿರೇತಸೇ ॥

ನಮೋಸ್ತು ತೇ ಗಿರೀಶಾಯ ಸ್ವಾಹಾಕಾರಾಯ ತೇ ನಮಃ ।
ನಮೋ ಮುಕ್ತಾಟ್ಟಹಾಸಾಯ ಭೀಮಾಯ ಚ ನಮೋ ನಮಃ ॥

ನಮಸ್ತೇ ಕಾಮನಾಶಾಯ ನಮಃ ಕಾಲಪ್ರಮಾಥಿನೇ ।
ನಮೋ ಭೈರವವೇಷಾಯ ಹರಾಯ ಚ ನಿಷಂಗಿಣೇ ॥

ನಮೋಽಸ್ತು ತೇ ತ್ರ್ಯಂಬಕಾಯ ನಮಸ್ತೇ ಕೃತ್ತಿವಾಸಸೇ ।
ನಮೋಂಬಿಕಾಧಿಪತಯೇ ಪಶೂನಾಂ ಪತಯೇ ನಮಃ ॥

ನಮಸ್ತೇ ವ್ಯೋಮರೂಪಾಯ ವ್ಯೋಮಾಧಿಪತಯೇ ನಮಃ ।
ನರನಾರೀಶರೀರಾಯ ಸಾಂಖ್ಯಯೋಗ ಪ್ರವರ್ತಿನೇ ॥

ನಮೋ ಭೈರವನಾಥಾಯ ದೇವಾನುಗತಲಿಂಗಿನೇ ।
ಕುಮಾರಗುರವೇ ತುಭ್ಯಂ ದೇವದೇವಾಯ ತೇ ನಮಃ ॥

ನಮೋ ಯಜ್ಞಾಧಿಪತಯೇ ನಮಸ್ತೇ ಬ್ರಹ್ಮಚಾರಿಣೇ ।
ಮೃಗವ್ಯಾಧಾಯ ಮಹತೇ ಬ್ರಹ್ಮಾಧಿಪತಯೇ ನಮಃ ॥

ನಮೋ ಹಂಸಾಯ ವಿಶ್ವಾಯ ಮೋಹನಾಯ ನಮೋ ನಮಃ ।
ಯೋಗಿನೇ ಯೋಗಗಮ್ಯಾಯ ಯೋಗಮಾಯಾಯ ತೇ ನಮಃ ॥

ನಮಸ್ತೇ ಪ್ರಾಣಪಾಲಾಯ ಘಂಟಾನಾದಪ್ರಿಯಾಯ ಚ ।
ಕಪಾಲಿನೆ ನಮಸ್ತುಭ್ಯಂ ಜ್ಯೋತಿಷಾಂ ಪತಯೇ ನಮಃ ॥

ನಮೋ ನಮೋಽಸ್ತು ತೇ ತುಭ್ಯಂ ಭೂಯ ಏವ ನಮೋ ನಮಃ ।
ಮಹ್ಯಂ ಸರ್ವಾತ್ಮನಾ ಕಾಮಾನ್ ಪ್ರಯಚ್ಛ ಪರಮೇಶ್ವರ ॥

ಶ್ರೀಕೃಷ್ಣನು ಹೀಗೆ ಭಕ್ತಿಯಿಂದ ಶಿವನನ್ನು ಸ್ತುತಿಸಿ ಶಿವಪಾರ್ವತಿಯರ ಪಾದಗಳಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಶಿವನು ಕೇಶಿನಿಷೂದನನಾದ ಕೃಷ್ಣನನ್ನು ಮೇಲೆಬ್ಬಿಸಿ ಮೇಘದಂತೆ ಗಂಭೀರವಾದ ಧ್ವನಿಯಿಂದ ಮಧುರವಾದ ವಾಕ್ಯವನ್ನು ಹೇಳಿದನು. ''ಪುಂಡರೀಕಾಕ್ಷ! ನೀನೇಕೆ ತಪಸ್ಸು ಮಾಡುತ್ತಿರುವೆ? ನೀನೇ ಸಕಲರ ಆಚರಣೆಯ ಅಪೇಕ್ಷೆಗಳನ್ನು ಪೂರೈಸುವವನು. ನೀನು ನನ್ನ ನಾರಾಯಣ ಎಂಬ ಹೆಸರಿನ ಶ್ರೇಷ್ಠ ರೂಪ. ನಿನ್ನನ್ನು ಬಿಟ್ಟು ಜಗತ್ತಿಗೆ ಅಸ್ತಿತ್ವವೇ ಇಲ್ಲ. ಕೇಶವ! ನಾರಾಯಣ! ನೀನು ನಿನ್ನನ್ನು ಅನಂತನಾದ, ಪರಮೇಶ್ವರನಾದ ಮಹಾದೇವ ಎಂದು ಯೋಗಸಾಮರ್ಥ್ಯದಿಂದ ತಿಳಿದಿರುವಿ.''

ಶ್ರೀಕೃಷ್ಣನು ಶಿವನ ಮಾತನ್ನು ಕೇಳಿ, ಮುಗುಳ್ನಗುತ್ತಾ, ವಿಶ್ವೇಶನಾದ ವೃಷಧ್ವಜನನ್ನು, ದೇವಿ ಪಾರ್ವತಿಯನ್ನು ನೋಡುತ್ತಾ ಹೇಳಿದನು.

''ಶಂಕರ, ನೀನು ನಿನ್ನ ಯೋಗಸಾಮರ್ಥ್ಯದಿಂದ ಎಲ್ಲವನ್ನೂ ತಿಳಿದಿರುವಿ. ನನಗೆ ಸಮನಾದ, ನಿನ್ನ ಭಕ್ತನಾದ ಪುತ್ರನನ್ನು ಬಯಸುತ್ತೇನೆ. ದಯವಿಟ್ಟು ಕೊಡು.'' ಹರನು ಸಂತೋಷದಿಂದ 'ಹಾಗೆಯೇ ಆಗಲಿ' ಎಂದು ಹೇಳುತ್ತಾ ಪಾರ್ವತಿಯನ್ನು ನೋಡುತ್ತಾ ಕೃಷ್ಣನನ್ನು ಆಲಿಂಗಿಸಿಕೊಂಡನು. ಆಗ ಶಂಕರನ ಅರ್ಧಶರೀರಿಣಿಯಾದ ಪಾರ್ವತಿಯು ಶ್ರೀಕೃಷ್ಣನಿಗೆ ಹೇಳಿದಳು.

''ಕೇಶವ! ನಿನಗೆ ಶಿವನ ಮೇಲೆ ಮತ್ತು ನನ್ನ ಮೇಲೆ ಅಚಲವಾದ ಅನನ್ಯವಾದ ಭಕ್ತಿ ಇದೆಯೆಂದು ನನಗೆ ಗೊತ್ತಿದೆ. ನೀನು ನಾರಾಯಣ. ಸರ್ವಾಂತರ್ಯಾಮಿಯಾದ ಪುರುಷೋತ್ತಮ. ಹಿಂದೆ ದೇವತೆಗಳಿಂದ ಪ್ರಾರ್ಥಿತನಾಗಿ ದೇವಕೀಸುತನಾಗಿ ಅವತರಿಸಿರುವೆ. ನೀನು ಆತ್ಮೇಂದ್ರಿಯ(ಸಾಕ್ಷಿ)ದಿಂದ ನೋಡು. ನಮ್ಮಿಬ್ಬರಿಗೂ ಭೇದವಿಲ್ಲ. ಜ್ಞಾನಿಗಳು ನಮ್ಮಿಬ್ಬರ ಏಕತ್ವವನ್ನು ಕಂಡುಕೊಂಡಿದ್ದಾರೆ. ಕೇಶವ! ನಿನಗೆ ಇಷ್ಟವಾದ ವರಗಳನ್ನು ಕೇಳಿಕೊ, ಕೊಡುತ್ತೇನೆ. ಸರ್ವಜ್ಞತ್ವ, ಐಶ್ವರ್ಯ, ಈಶ್ವರನಲ್ಲಿ ಮತ್ತು ನನ್ನಲ್ಲಿ ಅಚಲವಾದ ಭಕ್ತಿ ಇವುಗಳನ್ನು ವರವಾಗಿ ಸ್ವೀಕರಿಸು.''

ಪಾರ್ವತಿಯ ಮಾತನ್ನು ಶಿರಸಾವಹಿಸಿದ ಶ್ರೀಕೃಷ್ಣನಿಗೆ ಅನಂತರ ಶಿವನೂ ಅನುಗ್ರಹದ ಮಾತುಗಳನ್ನು ಹೇಳಿದನು.

ಅನಂತರ ಶಿವನು ದೇವತೆಗಳಿಂದಲೂ, ಮುನಿಗಳಿಂದಲೂ ಪೂಜಿಸಲ್ಪಟ್ಟು ಕೃಷ್ಣನನ್ನು ಕರೆದುಕೊಂಡು ಪಾರ್ವತಿಯೊಡನೆ ಕೈಲಾಸಕ್ಕೆ ಹೋದನು.

* * *

## ಕೈಲಾಸದಲ್ಲಿ ಕೃಷ್ಣ

ಅಧ್ಯಾಯ-೨೬

**ಸೂತ ಉವಾಚ :**

ಪಾರ್ವತಿ ಮತ್ತು ಕೃಷ್ಣರ ಜೊತೆ ಮೇರು ಪರ್ವತದ ಶಿಖರವಾದ ಕೈಲಾಸವನ್ನು ತಲುಪಿದ ಶಿವನು ಅಲ್ಲಿ ವಿಹರಿಸುತ್ತಾ ನೆಲೆಸಿದನು. ಕೈಲಾಸವಾಸಿಗಳೆಲ್ಲರೂ, ನಾಲ್ಕು ಬಾಹುಗಳುಳ್ಳ ಪೂರ್ಣಾಂಗನಾದ, ನೀಲಮೇಘದ ಕಾಂತಿಯಂತಹ ಕಾಂತಿವುಳ್ಳ, ಕಿರೀಟವನ್ನು ಧರಿಸಿರುವ, ಕೈಯಲ್ಲಿ ಶಾರ್ಙ್ಗ ಬಿಲ್ಲನ್ನು ಹಿಡಿದಿರುವ, ಎದೆಯಲ್ಲಿ ಶ್ರೀವತ್ಸವನ್ನು ಧರಿಸಿರುವ ಉದ್ದವಾದ ಕೈಗಳಿರುವ, ವಿಶಾಲವಾದ ಕಣ್ಣುಗಳಿರುವ, ಪೀತಾಂಬರವನ್ನು ಧರಿಸಿರುವ, ಚ್ಯುತಿರಹಿತನಾದ, ಎದೆಯಲ್ಲಿ ವೈಜಯಂತೀ ಮಾಲೆಯನ್ನು ಧರಿಸಿರುವ, ಕಾಂತಿಯಿಂದ ಶೋಭಿಸುತ್ತಿರುವ, ತರುಣನೂ, ಅತಿ ಕೋಮಲನೂ ಆದ, ಕಮಲದಂತಹ ಪಾದಗಳನ್ನು ಕಣ್ಣುಗಳನ್ನು ಹೊಂದಿರುವ, ಮುಗುಳ್ನಗುತ್ತಿರುವ, ಸದ್ಗತಿಯನ್ನು ಕೊಡುವ, ದೇವದೇವನಾದ, ಮಹಾತ್ಮನಾದ ಶ್ರೀಕೃಷ್ಣನನ್ನು ನೋಡಿ ಅವನನ್ನು ಪೂಜಿಸಿದರು.

### ಶ್ರೀಕೃಷ್ಣನನ್ನು ನೋಡಿದ ರಮಣಿಯರು...

ಒಮ್ಮೆ ದೇವಕೀನಂದನನಾದ ಶ್ರೀಕೃಷ್ಣನು ವಿಹಾರಕ್ಕಾಗಿ ಗಿರಿ-ಗುಹೆಗಳಲ್ಲಿ ಸಂಚರಿಸುತ್ತಿದ್ದನು. ಆಗ ಗಂಧರ್ವರು, ಅಪ್ಸರೆಯರು, ನಾಗಕನ್ಯೆಯರು, ಸಿದ್ಧರು, ಯಕ್ಷರು, ದೇವತೆಗಳು, ಜಗತ್ತನ್ನೇ ಆಳುವ ಆ ಪರದೇವತೆಯನ್ನು ನೋಡಿ, ಆಶ್ಚರ್ಯಚಕಿತರಾಗಿ, ಹರ್ಷದಿಂದ ಅರಳಿದ ಕಣ್ಣುಗಳುಳ್ಳವರಾಗಿ ಅವನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಎಲ್ಲರ ಮೆಚ್ಚುಗೆಗೆ ಪಾತ್ರನಾದ ಶ್ರೀಕೃಷ್ಣನನ್ನು ನೋಡಿದ ಗಂಧರ್ವರು, ಅಪ್ಸರೆಯರು ಅವನನ್ನು ಕಾಮಿಸಿದರು. ಸುಂದರನಾದ ದೇವಕೀಸುತನನ್ನು ನೋಡಿದ, ಗಾನವಿಶಾರದರಾದ ಕೆಲವರು ಕಾಮ ಮೋಹಿತರಾಗಿ ಅವನನ್ನು ಕುರಿತು ನಾನಾ ವಿಧವಾಗಿ ಹಾಡಿದರು; ವಿಲಾಸಿನಿಯರಾದ

ಕೆಲವರು ಅವನ ಎದುರು ನರ್ತನ ಮಾಡಿದರು; ಮತ್ತೆ ಕೆಲವರು ಅಮೃತಪಾನವನ್ನು ಮಾಡುವ ವೈಖರಿಯಿಂದ ಅವನ ಮುಖವನ್ನು ನೋಡಿದರು; ಕೆಲವರು ತಮ್ಮ ಆಭರಣ ಗಳಿಂದ ಕೃಷ್ಣನನ್ನು ಅಲಂಕರಿಸಿದರು; ಕೆಲವರು ಕೃಷ್ಣನ ಆಭರಣಗಳನ್ನು ತೆಗೆದುಕೊಂಡು ತಮ್ಮನ್ನು ಅಲಂಕರಿಸಿದರು; ಕೆಲವರು ಕೃಷ್ಣನ ಆಭರಣಗಳನ್ನು ತೆಗೆದುಕೊಂಡು ತಮ್ಮನ್ನು ಅಲಂಕರಿಸಿಕೊಂಡು ತಮ್ಮ ಆಭರಣಗಳಿಂದ ಶ್ರೀಕೃಷ್ಣನನ್ನು ಅಲಂಕರಿಸಿದರು.

ಜಿಂಕೆಯಂತಹ ಮುಗ್ಧ ಕಣ್ಣುಗಳ ಒಬ್ಬಳಂತೂ ಕಾಮಮೋಹಿತಳಾಗಿ ಕೃಷ್ಣನ ಬಳಿ ಓಡಿಬಂದು ಅವನ ಮುಖವನ್ನು ಚುಂಬಿಸಿದಳು. ಕೃಷ್ಣನ ಮಾಯೆಯಿಂದ ಮೋಹಿತಳಾದ ಮತ್ತೊಬ್ಬಳು ಕೃಷ್ಣನ ಕೈಹಿಡಿದು ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ಕಮಲದಂತಹ ಕಣ್ಣುಗಳ ಶ್ರೀಕೃಷ್ಣನು ಬಹುರೂಪಗಳನ್ನು ತೆಗೆದುಕೊಂಡು ಅವರೆಲ್ಲರ ಆಸೆಗಳನ್ನು ಪೂರೈಸಿದನು. ಹೀಗೆ ಭಗವಾನ್ ಶ್ರೀಕೃಷ್ಣನು ತನ್ನ ಮಾಯೆಯಿಂದ ಜಗತ್ತಿಗೆ ಮೋಹವನ್ನುಂಟುಮಾಡುತ್ತಾ ಚಿರಕಾಲ ಕೈಲಾಸದಲ್ಲಿ ನೆಲೆಸಿದನು.

## ಕೃಷ್ಣನಿಲ್ಲದ ದ್ವಾರಕ :

ಇತ್ತ ಬಹಳ ಸಮಯದಿಂದ ಕೃಷ್ಣವಿರಹಿಗಳಾಗಿರುವ ದ್ವಾರಕಾನಿವಾಸಿಗಳು ದುಃಖಿತರೂ, ಭಯಪೀಡಿತರೂ ಆದರು. ಅವರೆಲ್ಲರೂ ಕೃಷ್ಣನನ್ನು ಹುಡುಕಿ ಕರೆದುಕೊಂಡು ಬರುವುದಕ್ಕಾಗಿ ಗರುಡನನ್ನು ಬಹಳ ದಿನಗಳ ಹಿಂದೆಯೇ ಕಳಿಸಿದ್ದರು. ಅವನನು ಕೃಷ್ಣನನ್ನು ಹುಡುಕುತ್ತಾ ಹಿಮಾಲಯಕ್ಕೆ ಹೋಗಿದ್ದನು. ಅಲ್ಲಿ ಅವನ್ನು ಕಾಣದೆ ಉಪಮನ್ಯು ಮುನಿಗಳನ್ನೂ ನಮಸ್ಕರಿಸಿ ದ್ವಾರಕೆಗೆ ಹಿಂತಿರುಗಿದನು. ಆ ಸಮಯದಲ್ಲೇ ಅತಿಭಯಂಕರ ರಾದ ಸಾವಿರಾರು ರಾಕ್ಷಸರು ದ್ವಾರಕೆಯನ್ನು ಆಕ್ರಮಿಸಿದರು. ಕೃಷ್ಣನಂತೆ ಪರಾಕ್ರಮಿಯಾದ ಗರುಡನು ಭಾರೀ ಯುದ್ಧವನ್ನು ಮಾಡಿ, ಆ ರಾಕ್ಷಸರನ್ನು ಕೊಂದು ದ್ವಾರಕೆಯನ್ನು ರಕ್ಷಿಸಿದ್ದನು.

## ನಾರದರ ಆಗಮನ :

ಇದೇ ಸಮಯದಲ್ಲಿ ಕೈಲಾಸದಲ್ಲಿ ಕೃಷ್ಣನನ್ನು ಭೇಟಿಯಾಗಿದ್ದ ನಾರದರು ದ್ವಾರಕೆಗೆ ಬಂದರು. ದ್ವಾರಕಾ ನಿವಾಸಿಗಳೆಲ್ಲರೂ ''ಶ್ರೀಕೃಷ್ಣ ಎಲ್ಲಿದ್ದಾನೆ?'' ಎಂದು ಅವರನ್ನು ಕೇಳಿದರು. ''ಶ್ರೀಕೃಷ್ಣ ಕೈಲಾಸದಲ್ಲಿದ್ದಾನೆ; ಅವನನ್ನು ಭೇಟಿಮಾಡಿ ಇಲ್ಲಿಗೆ ಬಂದಿದ್ದೇನೆ'' ಎಂದು ನಾರದ ಹೇಳಿದರು.

## ದ್ವಾರಕೆಗೆ ಕೃಷ್ಣನ ಆಗಮನ :

ನಾರದರ ಮಾತನ್ನು ಕೇಳಿ ಗರುಡನು ಕೈಲಾಸಕ್ಕೆ ಹೋದನು. ಅಲ್ಲಿ ರತ್ನಾಲಂಕೃತ ಭವನದಲ್ಲಿ ಆಸನದಲ್ಲಿ ದೇವದೇವನಾದ ಶಿವನ ಹತ್ತಿರ ಕುಳಿತಿದ್ದ ಶ್ರೀಕೃಷ್ಣನನ್ನು

ನೋಡಿದನು. ದೇವತೆಗಳೂ, ದಿವ್ಯಸ್ತ್ರೀಯರೂ ಅವನ ಸೇವೆಯನ್ನು ಮಾಡುತ್ತಿದ್ದರು. ಶಿವನ ಗಣಗಳು, ಸಿದ್ಧರೂ, ಯೋಗಿಗಳೂ ಅವನ ಸುತ್ತಲೂ ಇದ್ದರು. ಗರುಡನು ಶಿವನಿಗೆ ಸಾಷ್ಟಾಂಗ ನಮಸ್ಕರಿಸಿ, ಶ್ರೀಕೃಷ್ಣನಿಗೆ ದ್ವಾರಕೆಯಲ್ಲಿ ನಡೆದದ್ದೆಲ್ಲವನ್ನೂ ತಿಳಿಸಿದನು. ಶ್ರೀಕೃಷ್ಣ ಶಿವನಿಗೆ ನಮಸ್ಕರಿಸಿ, ಅವನ ಅನುಮತಿಯನ್ನು ಪಡೆದು, ಸ್ತ್ರೀಯರಿಂದ ಅಮೃತದಂತಹ ಮಾತುಗಳಿಂದ ಮಾನಿತನಾಗಿ ಗರುಡನನ್ನೇರಿ ದ್ವಾರಕೆಗೆ ಹಿಂತಿರುಗಿದನು. ಹೊರಟು ಹೋಗುತ್ತಿದ್ದ ಶತ್ರುನಿಗ್ರಹಕರನಾದ ಶಂಖಚಕ್ರಗದಾಧರನಾದ ಶ್ರೀಕೃಷ್ಣನನ್ನು ನೋಡಿ ಗಂಧರ್ವರು, ಅಪ್ಸರೆಯರು ಅವನನ್ನು ಹಿಂಬಾಲಿಸಿದರು. ಶ್ರೀಕೃಷ್ಣ ಆ ಅಂಗನೆಯರೆಲ್ಲರನ್ನೂ ಹಿಂದಕ್ಕೆ ಕಳಿಸಿ ದ್ವಾರಕೆಗೆ ಮರಳಿದನು. ಶ್ರೀಕೃಷ್ಣವಿರಹಿತರಾದ ಕಾಮಿನಿಯರು ಚಂದ್ರನಿಲ್ಲದ ರಾತ್ರಿಯಂತಾದರು.

## ದ್ವಾರಕೆಯಲ್ಲಿ ಸಡಗರ

ದ್ವಾರಕಾನಿವಾಸಿಗಳು ಕೃಷ್ಣಾಗಮನದ ವಾರ್ತೆಯನ್ನು ಕೇಳಿ ಪತಾಕೆಗಳಿಂದಲೂ, ಮಾಲೆಗಳಿಂದಲೂ ದ್ವಾರಕೆಯನ್ನು ಅಲಂಕರಿಸಿದರು. ಮಧುರ ಧ್ವನಿಯ ವಿವಿಧ ವಾದ್ಯಗಳನ್ನು ಬಾರಿಸಿದರು. ಸಹಸ್ರಾರು ಶಂಖಗಳನ್ನು ಊದಿದರು. ವೀಣೆಗಳನ್ನು ನುಡಿಸಿದರು. ಶ್ರೀಕೃಷ್ಣನ ಪ್ರವೇಶವಾಗುತ್ತಿದ್ದಂತೆಯೇ ತರುಣಿಯರು ಮಧುರವಾಗಿ ಹಾಡಿದರು. ಪ್ರಾಸಾದಗಳ ಶಿಖರದಲ್ಲಿ ನಿಂತವರು ಶ್ರೀಕೃಷ್ಣನನ್ನು ನೋಡಿ ಕುಣಿದರು. ಅವನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಜನರು ಅವನನ್ನು ಹರಸಿದರು. ಜನರ ಹಾರೈಕೆಗಳಿಂದ ಪುಷ್ಟನಾದ ಶ್ರೀಕೃಷ್ಣನು ಅತ್ಯಂತ ರಮಣೀಯವಾದ ಮಂಟಪದಲ್ಲಿ ಕುಳಿತನು. ಅವನ ಪತ್ನಿಯರು, ಮಕ್ಕಳೂ, ಇತರರೂ ಅವನನ್ನು ಸುತ್ತುವರಿದರು. ಅಲ್ಲಿ ಜಾಂಬವತೀಸಹಿತನಾದ ಶ್ರೀಕೃಷ್ಣನು ಉಮಾಸಹಿತನಾದ ಶಿವನಂತೆ ಕಂಗೊಳಿಸಿದನು.

## ಕೃಷ್ಣದರ್ಶನಕ್ಕಾಗಿ ಮುನಿಗಳ ಆಗಮನ :

ದ್ವಾರಕೆಯಲ್ಲಿ ಶ್ರೀಕೃಷ್ಣನ ದರ್ಶನಕ್ಕಾಗಿ ಮಾರ್ಕಂಡೇಯ ಮೊದಲಾದ ಪ್ರಾಚೀನ ಮುನಿಗಳು ಬಂದರು. ಶ್ರೀಕೃಷ್ಣನು ಆಸನದಿಂದ ಎದ್ದು ಮಾರ್ಕಂಡೇಯರನ್ನು ತಲೆಬಾಗಿ ನಮಸ್ಕರಿಸಿ ತನ್ನ ಆಸನವನ್ನೇ ಅವರಿಗೆ ಕೊಟ್ಟನು. ಎಲ್ಲ ಮುನಿಗಳನ್ನು ನಮಸ್ಕಾರ ಪೂರ್ವಕವಾಗಿ ಸತ್ಕರಿಸಿ ಅವರ ಅಪೇಕ್ಷೆಗಳನ್ನು ಪೂರೈಸಿ ಬೀಳ್ಕೊಟ್ಟನು.

## ಆಹ್ನಿಕ :

ಅಷ್ಟು ಹೊತ್ತಿಗೆ ಮಧ್ಯಾಹ್ನವಾಯಿತು. ಶ್ರೀಕೃಷ್ಣ ಸ್ನಾನವನ್ನು ಮಾಡಿ ಶುಕ್ಲಾಂಬರವನ್ನು ಧರಿಸಿ ಕೈಮುಗಿದುಕೊಂಡು ಸೂರ್ಯೋಪಾಸನೆಯನ್ನು ಮಾಡಿದನು. ಸೂರ್ಯನನ್ನೇ ನೋಡುತ್ತಾ ಶಾಸ್ತ್ರೋಕ್ತರೀತಿಯಿಂದ ಜಪಗಳನ್ನು ಮಾಡಿದನು. ದೇವ-ಋಷಿ-ಪಿತೃಗಳಿಗೆ ತರ್ಪಣವನ್ನು ಕೊಟ್ಟನು. ಮಾರ್ಕಂಡೇಯರ ಜೊತೆ ಶಿವಾಲಯವನ್ನು ಪ್ರವೇಶಿಸಿ

ಭಸ್ಮಭೂಷಿತನಾದ, ಲಿಂಗಸಂನಿಹಿತನಾದ ಶಿವನನ್ನು ಪೂಜಿಸಿದನು. ಸ್ವಯಂ ಸರ್ವನಿಯಾಮಕನಾದ ಶ್ರೀಕೃಷ್ಣನು ಅನುಷ್ಠಾನವನ್ನು ಮುಗಿಸಿ ಮಾರ್ಕಂಡೇಯರಿಗೂ, ಬೇರೆ ಬ್ರಾಹ್ಮಣರಿಗೂ ಭೋಜನವನ್ನು ಮಾಡಿಸಿ, ಅವರನ್ನು ಸತ್ಕರಿಸಿ, ಧ್ಯಾನವನ್ನು ಮಾಡಿ ತನ್ನ ಮಕ್ಕಳು ಮೊದಲಾದವರೊಡನೆ ಮತ್ತು ಮಾರ್ಕಂಡೇಯರೊಡನೆ ಪುರಾಣಕಥಾಗೋಷ್ಠಿಯನ್ನು ನಡೆಸಿದನು. ಶ್ರೀಕೃಷ್ಣನ ಈ ಎಲ್ಲ ಕಾರ್ಯಗಳನ್ನು ನೋಡಿ ಮಾರ್ಕಂಡೇಯರು ನಗುತ್ತಾ ಮಧುರವಾಗಿ ಮಾತನಾಡಿದರು.

## ಕೃಷ್ಣಮಾರ್ಕಂಡೇಯರ ಸಂವಾದ :

''ಶ್ರೀಕೃಷ್ಣ! ಎಲ್ಲರ ಎಲ್ಲ ಕರ್ಮಗಳಿಂದ ಪೂಜ್ಯನಾದವನು ನೀನೇ! ಯೋಗಿಗಳಿಂದ ಧ್ಯೇಯನಾದವನೂ ನೀನೇ! ನೀನು ಪರಮಬ್ರಹ್ಮ. ನೀನೇ ಮುಕ್ತಿಪದ. ಭೂಮಿಯ ಭಾರವನ್ನು ಇಳಿಸುವುದಕ್ಕಾಗಿ ವೃಷ್ಣಿಕುಲದಲ್ಲಿ ಹುಟ್ಟಿರುವೆ. ಇಂತಹ ನೀನು ಶುಭಕರ್ಮಗಳಿಂದ ಯಾರನ್ನು ಆರಾಧಿಸುವಿ?''

## ಶ್ರೀಕೃಷ್ಣನು ಮುಗುಳ್ನಗುತ್ತಾ, ಎಲ್ಲರ ಸಮಕ್ಷಮದಲ್ಲಿ ಹೀಗೆ ಮಾತನಾಡಿದನು :

''ಮುನಿಗಳೆ! ನೀವು ಹೇಳಿದ್ದೆಲ್ಲ ನಿಜ. ಏನೂ ಸಂಶಯವಿಲ್ಲ. ಆದರೂ ಸನಾತನನಾದ ಶಿವನನ್ನು ನಾನು ಪೂಜಿಸುತ್ತೇನೆ. ನಾನು ಯಾವ ಕೆಲಸವನ್ನೂ ಮಾಡಬೇಕಿಲ್ಲ. ನಾನು ಪಡೆಯದೆ ಇದ್ದದ್ದು ಯಾವುದೂ ಇಲ್ಲ. ಆದರೂ ಶಿವನನ್ನು ಪರಮಪೂಜ್ಯ ಎಂದು ತಿಳಿದು ಪೂಜಿಸುತ್ತೇನೆ. ಮಾಯಾಮೋಹಿತರಾದ ಜನರು ಆ ದೇವನನ್ನು ಸರಿಯಾಗಿ ತಿಳಿದಿಲ್ಲ. ಆದ್ದರಿಂದ ಶಿವನೇ ನನಗೂ ಮೂಲವೆಂದು ತಿಳಿಸುವುದಕ್ಕಾಗಿ ಅವನನ್ನು ಪೂಜಿಸುವೆನು. ಲೋಕದಲ್ಲಿ ದುರ್ಗತಿಯನ್ನು ನಾಶಮಾಡುವಂತಹ, ಶಿವಲಿಂಗಾರ್ಚನೆಗಿಂತ ಹೆಚ್ಚು ಪುಣ್ಯಕರವಾದ ಕೆಲಸ ಯಾವುದೂ ಇಲ್ಲ. ಆದ್ದರಿಂದ ಲೋಕಹಿತಕ್ಕೋಸ್ಕರ ಶಿವನನ್ನು ಪೂಜಿಸಬೇಕು. ನನ್ನನ್ನೇ ಶಿವಲಿಂಗ ಎಂದು ವೇದವಾದವನ್ನು ತಿಳಿದವರು ಹೇಳುತ್ತಾರೆ. ಆದ್ದರಿಂದ ಶಿವನಾದ ನನ್ನನ್ನೇ ನಾನು ಪೂಜಿಸುತ್ತೇನೆ. ನಾನು ಆ ಪರಶಿವನ ಪರಮ ಮೂರ್ತಿಯೇ ಆಗಿದ್ದೇನೆ. ವೇದಗಳು ನಮ್ಮಿಬ್ಬರ ಭೇದವನ್ನು ಪ್ರತಿಪಾದಿಸಿಲ್ಲ. ಸಂಸಾರಕ್ಕೆ ಹೆದರುವ ಎಲ್ಲರೂ ಈ ಮಹಾದೇವನನ್ನು ಲಿಂಗದಲ್ಲಿ ಪೂಜಿಸಬೇಕು. ನಮಸ್ಕರಿಸಬೇಕು. ತಿಳಿಯಬೇಕು.''

''ಶ್ರೀಕೃಷ್ಣ! ಸುರಶ್ರೇಷ್ಠ! ವಿಶಾಲಾಕ್ಷ! ಲಿಂಗ ಎಂದರೆ ಏನು? ಅಲ್ಲಿ ಯಾರನ್ನು ಪೂಜಿಸಬೇಕು? ಗಹನವಾದ ಈ ವಿಷಯವನ್ನು ಕುರಿತು ದಯವಿಟ್ಟು ಹೇಳಬೇಕು'' ಎಂದು ಮಾರ್ಕಂಡೇಯರು ವಿನಂತಿಸಿದ್ದರು.

''ಅವ್ಯಯನಾದ ಮಹೇಶ್ವರನೇ ಲಿಂಗಸನ್ನಿಹಿತನಾದ ದೇವತೆ ಎಂದು ವೇದಗಳು ಹೇಳುತ್ತವೆ. ಲಿಂಗಾಂತರ್ಗತನಾದ ಆ ಮಹೇಶ್ವರ ಅವ್ಯಕ್ತ, ಆನಂದರೂಪ, ಜ್ಯೋತಿಸ್ವರೂಪ,

ಅಕ್ಷಯ ಎಂದು ಜ್ಞಾನಿಗಳು ಹೇಳುತ್ತಾರೆ. ಹಿಂದೆ ಪ್ರಲಯಕಾಲದಲ್ಲಿ ಸ್ಥಾವರ-ಜಂಗಮಗಳೆಲ್ಲವೂ ನಷ್ಟವಾಗಿ ಪ್ರಲಯೋದಕವೊಂದೇ ಉಳಿದಿದ್ದಾಗ ನನ್ನನ್ನೂ ಬ್ರಹ್ಮನನ್ನೂ ಎಬ್ಬಿಸಲು ಮಹಾಶಿವನು ಪ್ರಾದುರ್ಭವಿಸಿದನು. ಆಗಿನಿಂದ ನಾನು ಮತ್ತು ಬ್ರಹ್ಮ ಲೋಕಹಿತವನ್ನು ಬಯಸಿ ಮಹಾಶಿವನ ಪೂಜೆಯನ್ನು ಮಾಡುತ್ತಿದ್ದೇವೆ'' ಎಂದು ಶ್ರೀಕೃಷ್ಣನು ಹೇಳಿದನು. ''ಸರ್ವೋತ್ತಮನಾದ ಈಶ್ವರನು ಲಿಂಗರೂಪವನ್ನು ಪಡೆದದ್ದು ಹೇಗೆ? ದಯವಿಟ್ಟು ತಿಳಿಸಬೇಕು'' ಎಂದು ಶ್ರೀಕೃಷ್ಣನನ್ನು ಮಾರ್ಕಂಡೇಯ ವಿನಂತಿಸಿದರು.

ಕೃಷ್ಣ : ''ಹಿಂದೆ ಪ್ರಲಯಕಾಲದಲ್ಲಿ ಬರೀ ಸಮುದ್ರವೊಂದೇ ಇತ್ತು. ಬೇರೆ ಬೇರೆ ಪದಾರ್ಥಗಳು ಇರಲಿಲ್ಲ. ಎಲ್ಲ ಕಡೆಯೂ ಕೇವಲ ಕತ್ತಲು ಆವರಿಸಿತ್ತು. ಆ ಸಮುದ್ರ ಮಧ್ಯದಲ್ಲಿ ಸನಾತನ ಪುರುಷನಾದ ನಾನು ಸಾವಿರ ತಲೆ, ಸಾವಿರ ಕಣ್ಣುಗಳು, ಸಾವಿರ ಕಾಲುಗಳು ಮತ್ತು ಸಾವಿರ ಬಾಹುಗಳು - ಉಳ್ಳವನಾಗಿ ಶಂಖಚಕ್ರಗದಾಧರನಾಗಿ, ಮಲಗಿದ್ದೆನು. ಆಗ ಕೋಟಿಸೂರ್ಯರ ಕಾಂತಿಯಿಂದ ಬೆಳಗುತ್ತಿದ್ದ, ಋಗ್ಯಜುಸ್ಸಾಮ ವೇದಗಳಿಂದ ಪ್ರತಿಪಾದ್ಯನಾದ, ಕೃಷ್ಣಾಜಿನಧರನಾದ ನಾಲ್ಕು ಮುಖಗಳ ಮಹಾಪುರುಷನೊಬ್ಬನು ಬಂದನು. ಯೋಗವನ್ನು ತಿಳಿದವರಲ್ಲಿ ಶ್ರೇಷ್ಠನಾದ, ಮಹಾದ್ಯುತಿಯಾದ ಆ ಪುರುಷ ಚತುರ್ಮುಖಬ್ರಹ್ಮದೇವರು. ಚತುರ್ಮುಖಬ್ರಹ್ಮನು ನನ್ನನ್ನು ಕುರಿತು ''ಪ್ರಭು! ನೀನು ಯಾರು? ಎಲ್ಲಿಂದ ಬಂದಿರುವಿ? ಇಲ್ಲಿ ಏಕೆ ಇರುವಿ? ದಯವಿಟ್ಟು ತಿಳಿಸು. ನಾನು ಸ್ವಯಂಭೂ, ಸಮಸ್ತ ಲೋಕಗಳ ಪ್ರಪಿತಾಮಹ'' ಎಂದು ಹೇಳಿದನು. ನಾನು ''ನಾನೇ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವವನು'' ಎಂದು ಹೇಳಿದೆನು. ಹೀಗೆ ನನಗೂ, ಚತುರ್ಮುಖಬ್ರಹ್ಮನಿಗೂ ವಿವಾದವು ಬೆಳೆದಾಗ ಆ ಬ್ರಹ್ಮನಿಗೆ ಸರಿಯಾದ ವಿಷಯವನ್ನು ತಿಳಿಸುವುದಕ್ಕಾಗಿ ಶಿವನು ಲಿಂಗರೂಪದಿಂದ ಅಲ್ಲಿ ಬಂದನು. ಆ ಲಿಂಗವು ಪ್ರಲಯಾಗ್ನಿಯಂತೆ ಪ್ರಜ್ವಲಿಸುತ್ತಿತ್ತು. ಅದರ ಸುತ್ತಲೂ ಜ್ವಾಲಾಮಾಲೆಗಳಿದ್ದವು. ಅದಕ್ಕೆ ವೃದ್ಧಿ-ಕ್ಷಯಗಳಿಲ್ಲ. ಅದಕ್ಕೆ ಆದಿ-ಮಧ್ಯ-ಅಂತಗಳಿಲ್ಲ. ಆಗ ಬ್ರಹ್ಮದೇವರು ನನಗೆ ಹೇಳಿದರು. ''ನೀನು ಪ್ರಪಂಚದ ಕೆಳ ತುದಿಗೆ ಹೋಗು. ನಾನು ಮೇಲ್ತುದಿಗೆ ಹೋಗುತ್ತೇನೆ. ಇಬ್ಬರೂ ಸೇರಿ ಈ ಲಿಂಗದ ಅಂತವನ್ನು ತಿಳಿದುಕೊಳ್ಳೋಣ. ಈ ಏರ್ಪಾಡಿನಂತೆ ಇಬ್ಬರೂ ಕ್ರಮವಾಗಿ ಬ್ರಹ್ಮಾಂಡದ ಕೆಳಗೆ ಮತ್ತು ಮೇಲೆ ಹೋದೆವು. ಇಬ್ಬರಿಗೂ ಲಿಂಗದ ಅಂತವು ಕಾಣಲಿಲ್ಲ. ಇಬ್ಬರೂ ಆಶ್ಚರ್ಯಚಕಿತರಾಗಿ, ಶಿವನ ಮಾಯೆಯಿಂದ ಮೋಹಿತರೂ, ಹೆದರಿದವರೂ ಆಗಿ, ಅವನನ್ನೇ ಧ್ಯಾನಿಸುತ್ತಾ, ಓಂಕಾರವನ್ನು ಉಚ್ಚರಿಸುತ್ತಾ ಕೈಮುಗಿದುಕೊಂಡು ಶಿವನನ್ನು ಸ್ತುತಿಸಿದೆವು.

ಬ್ರಹ್ಮ-ವಿಷ್ಣುಗಳು ಮಾಡಿದ ಶಿವಲಿಂಗಸ್ತುತಿ :

ಅನಾದಿ ಮೂಲ ಸಂಸಾರರೋಗ ವೈದ್ಯಾಯ ಶಂಭವೆ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೆ ॥

ಪ್ರಲಯಾರ್ಣವ ಸಂಸ್ಥಾಯ ಪ್ರಲಯೋದ್ಭೂತಿಹೇತವೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥

ಜ್ವಾಲಾಮಾಲಾಪ್ರತೀಕಾಯ ಜ್ವಲನಸ್ತಂಭರೂಪಿಣೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥

ಆದಿಮಧ್ಯಾಂತಹೀನಾಯ ಸ್ವಭಾವಾಮಲದೀಪ್ತಯೇ ।
ನಮಃ ಶಿವಾಯಾನಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥

ಪ್ರಧಾನಪುರುಷೇಶಾಯ ವ್ಯೋಮರೂಪಾಯ ವೇಧಸೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೆ ॥

ಅನಾದಿಯಾದ ಸಂಸಾರರೋಗ ವೈದ್ಯನಾದ, ಸುಖಪ್ರದನಾದ, ಶಾಂತನೂ, ಪೂರ್ಣನೂ, ಲಿಂಗಮೂರ್ತಿಯೂ ಆದ ಶಿವನಿಗೆ ನಮಸ್ಕಾರ. ಪ್ರಲಯಸಮುದ್ರದಲ್ಲಿ ನೆಲೆಸಿದ, ಸೃಷ್ಟಿ ಸಂಹಾರಕಾರಣನಾದ ಜ್ವಾಲಾಮಾಲೆಯಂತೆ ತೇಜಸ್ವಿಯಾದ, ಅಗ್ನಿಸ್ತಂಭದಂತಿರುವ ಆದಿ, ಮಧ್ಯ, ಅಂತಗಳಿಲ್ಲದ, ಸ್ವಭಾವತಃ ನಿರ್ಮಲಕಾಂತಿವಂತನಾದ ಪ್ರಧಾನ ಪುರುಷರಿಗೆ ನಿಯಾಮಕನಾದ, ನಿರ್ವಿಕಾರನಾದ, ಸೃಷ್ಟಿಕರ್ತನಾದ ಶಾಂತನೂ, ಪೂರ್ಣನೂ, ಲಿಂಗಮೂರ್ತಿಯೂ ಆದ ಶಿವನಿಗೆ ನಮಸ್ಕಾರ.

ನಿರ್ವಿಕಾರಾಯ ಸತ್ಯಾಯ ನಿತ್ಯಾಯಾತುಲ ತೇಜಸೇ ।
ವೇದಾಂತಸಾರರೂಪಾಯ ಕಾಲರೂಪಾಯ ತೇ ನಮಃ ॥
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥

ಹೀಗೆ ಸ್ತುತಿಸಲ್ಪಟ್ಟ ಮಹೇಶ್ವರನು ವಿಷ್ಣು-ಬ್ರಹ್ಮರಿಗೆ ಪ್ರತ್ಯಕ್ಷನಾದನು. ಪ್ರತ್ಯಕ್ಷನಾದ ಶಿವ ಕೋಟಿ ಸೂರ್ಯರ ಪ್ರಭೆಯುಳ್ಳವನಾಗಿ ಮಹಾಯೋಗಿಯಂತೆ ಕಾಣುತ್ತಿದ್ದನು. ತನ್ನ ಕೋಟಿಬಾಯಿಗಳಿಂದ ಆಕಾಶವನ್ನು ನುಂಗುವವನಂತೆ ಕಾಣುತ್ತಿದ್ದನು. ಅವನಿಗೆ ಸಾವಿರ ಕೈಗಳು ಮತ್ತು ಸಾವಿರ ಕಾಲುಗಳು ಇದ್ದವು. ಅವನು ಕಣ್ಣುಗಳು ಚಂದ್ರ, ಸೂರ್ಯ ಅಗ್ನಿಗಳಂತಿದ್ದವು. ಕೈಯಲ್ಲಿ ಪಿನಾಕ, ತ್ರಿಶೂಲಗಳನ್ನು ಹಿಡಿದಿದ್ದ ಅವನು ಗಜಚರ್ಮವನ್ನು ಧರಿಸಿದ್ದನು. ಸರ್ಪಗಳನ್ನು ಯಜ್ಞೋಪವೀತದಂತೆ ಧರಿಸಿದ್ದ ಅವನು ಮೋಡದ ಮತ್ತು ದುಂದುಭಿಯ ನಾದದಂತಹ ಧ್ವನಿಯಿಂದ "ದೇವಶ್ರೇಷ್ಠರೇ, ನಾನು ಪ್ರೀತನಾಗಿದ್ದೇನೆ. ನನ್ನನ್ನು ಮಹಾದೇವ ಎಂದು ತಿಳಿಯಿರಿ. ಎಲ್ಲ ಭಯವನ್ನು ಬಿಟ್ಟುಬಿಡಿ. ಸನಾತನರಾದ ನೀವು ನನ್ನ ಅಂಗಗಳಿಂದ ಹುಟ್ಟಿದ್ದೀರಿ. ನನ್ನ ಬಲಭಾಗದಲ್ಲಿ ಲೋಕಪಿತಾಮಹನಾದ ಈ ಬ್ರಹ್ಮನಿರುವನು. ಎಡಭಾಗದಲ್ಲಿ ಲೋಕಪಾಲಕನಾದ ವಿಷ್ಣು ಇದ್ದಾನೆ. ಹೃದಯದಲ್ಲಿ ಹರನಿದ್ದಾನೆ. ನಾನು ನಿಮ್ಮ ಮೇಲೆ ಪ್ರೀತನಾಗಿದ್ದೇನೆ. ನಿಮಗೆ ಬೇಕಾದ ವರಗಳನ್ನು ಕೊಡುತ್ತೇನೆ" ಹೀಗೆ ಹೇಳುತ್ತಾ ಪ್ರಸನ್ನನಾದ ಶಿವನು ಬ್ರಹ್ಮದೇವರನ್ನು ಆಲಿಂಗಿಸಿಕೊಂಡನು.

ಸಂತುಷ್ಟರಾದ ಹರಿ-ಬ್ರಹ್ಮರು ಶಿವನಿಗೆ ನಮಸ್ಕರಿಸಿ, ಅವನನ್ನೇ ನೋಡುತ್ತಾ ಹೇಳಿದರು. ''ನಮ್ಮ ಮೇಲೆ ನಿನಗೆ ಪ್ರೀತಿಯುಂಟಾಗಿದ್ದರೆ ನಮಗೆ ಯಾವಾಗಲೂ ನಿನ್ನ ಮೇಲೆ ಭಕ್ತಿ ಇರುವಂತೆ ವರವನ್ನು ಕೊಡು''.

ಶಿವನು ಹೇಳಿದನು: ''ಭೂಪತಿಯೇ! ನೀನು ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವವನು. ವತ್ಸ! ಚರಾಚರವಾದ ಈ ಜಗತ್ತನ್ನು ಪಾಲಿಸು. ನಿರಂಜನನೂ, ನಿರ್ಗುಣನೂ ಆದ ನಾನು ಸೃಷ್ಟಿ-ಸ್ಥಿತಿ-ಸಂಹಾರದ ಗುಣಗಳನ್ನು (*ರಜಸ್-ಸತ್ವ-ತಮಸ್*) ಆಧರಿಸಿ ನಾನೇ ಬ್ರಹ್ಮ, ವಿಷ್ಣು, ಹರ ಎಂಬ ಮೂರು ರೂಪಗಳನ್ನು ಪಡೆದಿದ್ದೇನೆ. ವಿಷ್ಣುವೇ! ನಿನ್ನ ಸಂಮೋಹವನ್ನು ಬಿಡು. ಈ ಪಿತಾಮಹನನ್ನು (ಬ್ರಹ್ಮನನ್ನು) ಪಾಲಿಸು. ಸನಾತನನಾದ ಭಗವಂತನು ನಿನ್ನ ಮಗನಾಗಿ ಹುಟ್ಟುತ್ತಾನೆ. ನಾನು ಕಲ್ಪದ ಆದಿಯಲ್ಲಿ ನಿನ್ನ ಕೋಪದಿಂದ ನಿನ್ನ ಬಾಯಿಂದ ಕೈಯಲ್ಲಿ ಶೂಲವನ್ನು ಹಿಡಿದು ಜನಿಸುತ್ತೇನೆ.''

ಮಹಾದೇವನು ಹೀಗೆ ಹೇಳಿ ನನ್ನನ್ನು ಮತ್ತು ಬ್ರಹ್ಮನನ್ನು ಅನುಗ್ರಹಿಸಿ ಅಲ್ಲೇ ಅಂತರ್ಧಾನವನ್ನು ಹೊಂದಿದನು. ಆಗಿನಿಂದ ಲೋಕದಲ್ಲಿ ಲಿಂಗಾರಾಧನೆಯು ಒಂದು ಪದ್ಧತಿಯಾಗಿ ನಡೆದು ಬಂದಿದೆ. ಬ್ರಹ್ಮನ ಶ್ರೇಷ್ಠ ಶರೀರದ ಜನಕವೇ ಲಿಂಗ''

ಇಲ್ಲಿಯವರೆಗೆ, ಪುಣ್ಯಾತ್ಮರಾದ ಮಾರ್ಕಂಡೇಯರೇ! ನಾನು ನಿಮಗೆ ಲಿಂಗದ ಮಾಹಾತ್ಮ್ಯವನ್ನು ಹೇಳಿದ್ದೇನೆ. ಯೋಗವನ್ನು ತಿಳಿದವರು ಮಾತ್ರ ಇದನ್ನು ತಿಳಿಯಬಲ್ಲರು. ದೇವತೆಗಳಾಗಲಿ, ದಾನವರಾಗಲಿ ಇದನ್ನು ತಿಳಿಯಲಾರರು. ಯಾರ ಅನುಗ್ರಹಬಲದಿಂದ ಜ್ಞಾನಿಗಳು ಮಾತ್ರ ಸೂಕ್ಷ್ಮವೂ, ಅಚಿಂತ್ಯವೂ ಆದ ಯಾರನ್ನು ತಿಳಿಯುತ್ತಾರೋ ಆ ಭಗವಂತನಿಗೆ ನಮಸ್ಕಾರ. ವೇದಗಳ ರಹಸ್ಯಾರ್ಥವಾದ ನೀಲಕಂಠನಾದ ದೇವದೇವನಿಗೆ ನಮಸ್ಕಾರ. ವಿಭೀಷಣನೂ, ಶಾಂತನೂ, ಸ್ಥಿರನೂ, ಸರ್ವಕಾರಣನೂ, ತ್ರಿನೇತ್ರನೂ ಪೂರ್ಣನೂ, ವಾಮದೇವನೂ ಆದ ಶಿವನಿಗೆ ನಮಸ್ಕಾರ. ಶಂಕರನಿಗೆ ನಮಸ್ಕಾರ. ಮಹೇಶನಿಗೆ ನಮಸ್ಕಾರ. ಗಿರೀಶನಿಗೆ ನಮಸ್ಕಾರ. ಮಹೇಶ್ವರನನ್ನು ಸತತವಾಗಿ ಧ್ಯಾನಿಸಿ ಯಾವಾಗಲೂ ನಮಸ್ಕರಿಸಿ ಹೀಗೆ ಮಾಡುವವರಿಂದ ಸಂಸಾರ ಸಾಗರವನ್ನು ದಾಟುವಿರಿ.''

ಹೀಗೆ ಶ್ರೀಕೃಷ್ಣನಿಂದ ಉಪದೇಶಿಸಲ್ಪಟ್ಟ ಮುನಿಪುಂಗವರಾದ ಮಾರ್ಕಂಡೇಯರು ಶಿವನನ್ನು ಮನಸಾ ನಮಸ್ಕರಿಸಿದರು. ಅನಂತರ ಶ್ರೀಕೃಷ್ಣನನ್ನು ತಲೆಬಾಗಿಸಿ ನಮಸ್ಕರಿಸಿ, ಶಿವನನ್ನೇ ಧ್ಯಾನಿಸುತ್ತಾ ಹೊರಟರು.

ಯಾರು ಈ ಲಿಂಗಾಧ್ಯಾಯವನ್ನು ನಿತ್ಯವೂ ಕೇಳುವರೋ, ಶ್ರವಣ ಮಾಡಿಸುವರೋ ಅವರ ಸರ್ವಪಾಪಗಳೂ ನಾಶವಾಗುತ್ತವೆ. ಇಲ್ಲಿ ಹೇಳಿರುವ ಶ್ರೀಕೃಷ್ಣ ತಪಸ್ಸನ್ನು ಒಂದು ಸಲ ಕೇಳಿದರೂ ಕೂಡ ಮಾನವನು ಪಾಪದಿಂದ ಬಿಡುಗಡೆಯನ್ನು ಪಡೆಯುತ್ತಾನೆ. ನಿತ್ಯವೂ ಜಪಿಸುವವರು ಬ್ರಹ್ಮಲೋಕದಲ್ಲಿ ಸತ್ಕರಿಸಲ್ಪಡುತ್ತಾರೆ. *

## ಅಧ್ಯಾಯ-೨೭

ಶಿವವರದಿಂದ ಶ್ರೀಕೃಷ್ಣನು ಜಾಂಬವತಿಯಲ್ಲಿ ಸಾಂಬ ಎಂಬ ಮಗನನ್ನು ಪಡೆದನು.

ಶ್ರೀಕೃಷ್ಣನು ಕಂಸ, ಬಾಣ, ನರಕ ಮೊದಲಾದ ನೂರಾರು ಅಸುರರನ್ನು ಕೊಂದು, ಇಂದ್ರನನ್ನು ಸೋಲಿಸಿ, ಲೋಕದಲ್ಲಿ ಧರ್ಮ ಸ್ಥಾಪನೆಯನ್ನು ಮಾಡಿ ತನ್ನ ಲೋಕಕ್ಕೆ ಹಿಂದಿರುಗಲು ಆಲೋಚಿಸಿದನು. ಈ ಸಮಯದಲ್ಲೇ ಭೃಗು ಮೊದಲಾದ ವಿಪ್ರರು ಶ್ರೀಕೃಷ್ಣನನ್ನು ನೋಡಲು ದ್ವಾರಕೆಗೆ ಬಂದರು. ಶ್ರೀಕೃಷ್ಣನು ಅವರನ್ನು ಸತ್ಕರಿಸಿ ಹೇಳಿದನು :

"ಮುನೀಶ್ವರರೇ! ಮಾಡಬೇಕಾದ ಕೆಲಸಗಳೆಲ್ಲವನ್ನು ಮಾಡಿದ್ದೇನೆ. ಸ್ವಸ್ಥಾನಕ್ಕೆ ಹೋಗುತ್ತೇನೆ. ಈಗ ಘೋರವಾದ ಕಲಿಯುಗದ ಆರಂಭವಾಗಿದೆ. ಇದು ಅಶುಭ ಯುಗ. ಈ ಯುಗದಲ್ಲಿ ಜನರೆಲ್ಲರೂ ಪಾಪಕಾರ್ಯಗಳನ್ನೇ ಮಾಡುತ್ತಾರೆ. ಪಾಪಿಗಳನ್ನೇ ಅನುಸರಿಸುತ್ತಾರೆ. ಅಜ್ಞಾನಿಗಳಿಗೆ ಹಿತವುಂಟುಮಾಡುವ ಯಥಾರ್ಥಜ್ಞಾನವನ್ನು ಪ್ರಚುರಪಡಿಸಿರಿ. ಅದರಿಂದ ಸಜ್ಜನರು ಕಲಿದೋಷದಿಂದ ಮುಕ್ತರಾಗಲಿ. ಕಲಿಯುಗದಲ್ಲಿ ನನ್ನನ್ನು ಒಂದು ಸಲ ಸ್ಮರಿಸುವ ಜನರೂ ಪಾಪದಿಂದ ಬಿಡುಗಡೆಯನ್ನು ಪಡೆಯುತ್ತಾರೆ; ವೇದದಲ್ಲಿ ಹೇಳಿದ ವಿಧಾನದಿಂದ ಪ್ರತಿದಿನ ನನ್ನನ್ನು ಭಕ್ತಿಯಿಂದ ಪೂಜಿಸುವವರು ಪರಮಪದವನ್ನು ಹೊಂದುತ್ತಾರೆ. ಕಲಿಯುಗದಲ್ಲಿ ನಿಮ್ಮ ವಂಶದಲ್ಲಿ ಹುಟ್ಟಿದವರು ಹರಿಭಕ್ತರಾಗುತ್ತಾರೆ. ಹರಿಭಕ್ತರಾದವರು ಮುಕ್ತಲೋಕಕ್ಕೆ ಹೋಗುತ್ತಾರೆ. ಆದರೆ ಮಹೇಶ್ವರನನ್ನು ದ್ವೇಷಿಸುವವರು ಹೋಗುವುದಿಲ್ಲ. ಶಿವನಿಂದನೆಯನ್ನು ಮಾಡುವವರ ಧ್ಯಾನ, ಯೋಗ, ತಪಸ್ಸು, ಜ್ಞಾನ, ಯಜ್ಞಾದಿಗಳಿಂದ ಉಂಟಾದ ಪುಣ್ಯ-ಇವೆಲ್ಲವೂ ಬೇಗನೆ ನಾಶ ಹೊಂದುತ್ತವೆ. ಏಕಾಂತಭಕ್ತಿಯಿಂದ ನನ್ನನ್ನೂ ಪೂಜಿಸುವ, ಆದರೆ ಶಿವನನ್ನು ನಿಂದಿಸುವ ಜನರು ವಿಚಿತ್ರ ನರಕಯಾತನೆಗಳನ್ನು ಅನುಭವಿಸುತ್ತಾರೆ. ಆದ್ದರಿಂದ ಶಿವನಿಂದನೆಯನ್ನು ಆಲೋಚಿಸಬಾರದು, ಹೇಳಬಾರದು. ಅವನ ನಿಂದನೆಯ ಕೆಲಸಗಳನ್ನು ಮಾಡಬಾರದು. ನನ್ನ ಭಕ್ತರ ನಿಂದನೆಯನ್ನೂ ಮಾಡಬಾರದು.

"ದಕ್ಷಯಜ್ಞದಲ್ಲಿ ದಧೀಚಿ ಮಹರ್ಷಿಗಳ ಶಾಪಕ್ಕೊಳಗಾದವರು ಕಲಿಯುಗದಲ್ಲಿ ಹುಟ್ಟುತ್ತಾರೆ. ಪ್ರಯತ್ನಪಟ್ಟು ಅವರಿಂದ ದೂರವಿರಬೇಕು. ನಿಮ್ಮ ವಂಶದಲ್ಲಿ ಹುಟ್ಟಿದ, ಆದರೆ ಶಿವನನ್ನು ದ್ವೇಷಿಸುವ ಮತ್ತು ಗೌತಮರ ಶಾಪಕ್ಕೊಳಗಾದ ಬ್ರಾಹ್ಮಣರ ಜೊತೆ ಮಾತನಾಡಬಾರದು." ಶ್ರೀಕೃಷ್ಣನ ಈ ಮಾತುಗಳನ್ನು ಕೇಳಿ "ಹಾಗೆಯೇ ಆಗಲಿ" ಎಂದು ಹೇಳಿ ಆ ಮಹರ್ಷಿಗಳೆಲ್ಲರೂ ತಮ್ಮ ಸ್ಥಾನಗಳಿಗೆ ತೆರಳಿದರು. ಅನಂತರ ಶ್ರೀಕೃಷ್ಣನು ಯಾದವರೆಲ್ಲರನ್ನೂ ಸಂಹರಿಸಿ ತನ್ನ ಮೂಲಸ್ಥಾನಕ್ಕೆ ಹೊರಟುಹೋದನು. ಹೀಗೆ ರಾಜರುಗಳ ವಂಶದ ವರ್ಣನೆಯು ಸಂಗ್ರಹವಾಗಿ ಮಾಡಲ್ಪಟ್ಟಿದೆ. ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ. ಯಾರು ವಂಶಗಳ ವರ್ಣನೆಯನ್ನು ಓದುತ್ತಾರೋ, ಅಥವಾ ಕೇಳುತ್ತಾರೋ

ಅವರುಗಳ ಎಲ್ಲ ಪಾಪಗಳೂ ನಾಶವಾಗುತ್ತವೆ. ಅವರು ಸ್ವರ್ಗಲೋಕದಲ್ಲಿ ಗೌರವವನ್ನು ಪಡೆಯುತ್ತಾರೆ.

* * *

## ಅಧ್ಯಾಯ-೨೮

**ಋಷಯ ಊಚು :**

ಸೂತರೇ! ಕೃತ, ತ್ರೇತಾ, ದ್ವಾಪರ, ಕಲಿ -ಈ ನಾಲ್ಕು ಯುಗಗಳ ಪ್ರಭಾವವನ್ನು ಸಂಕ್ಷೇಪವಾಗಿ ಹೇಳಿರಿ.

**ಸೂತ ಉವಾಚ :**

ಶ್ರೀಕೃಷ್ಣನು ಪರಂಧಾಮಕ್ಕೆ ಹೋದನಂತರ, ಮಹಾಧರ್ಮಾತ್ಮನಾದ ಅರ್ಜುನನಿಗೆ ಬಹಳ ದುಃಖವಾಯಿತು. ಶಿಷ್ಯ-ಪ್ರಶಿಷ್ಯರೊಡನೆ ಹೋಗುತ್ತಿದ್ದ ಬ್ರಹ್ಮವಾದಿಗಳಾದ ಕೃಷ್ಣ ದ್ವೈಪಾಯನರನ್ನು ಕಂಡು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಕೇಳಿದನು.

''ಮಹಾಮುನಿಗಳೇ! ನೀವು ಎಲ್ಲಿಂದ ಬಂದಿರಿ? ಇಷ್ಟು ತ್ವರಿತತೆಯಿಂದ ಎಲ್ಲಿಗೆ ಹೋಗುತ್ತಿದ್ದೀರಿ? ನಿಮ್ಮ ದರ್ಶನದಿಂದ ನನ್ನ ಶೋಕವೆಲ್ಲವೂ ಪರಿಹೃತವಾಗಿದೆ. ಈಗ ನನ್ನ ಕರ್ತವ್ಯವೇನು? ದಯವಿಟ್ಟು ತಿಳಿಸಿರಿ.'' ಅರ್ಜುನನಿಗೆ ಕೃಷ್ಣದ್ವೈಪಾಯನರು ಹೇಳಿದರು.

* * *

## ಅಧ್ಯಾಯ-೨೯

**ವ್ಯಾಸ ಉವಾಚ :**

''ಅರ್ಜುನ! ಈಗ ಘೋರವಾದ ಕಲಿಯುಗ ಬಂದಿದೆ. ಆದ್ದರಿಂದ ಶಿವನ ವಾಸಸ್ಥಳವಾದ, ಮಂಗಳಕರವಾದ ವಾರಾಣಸಿಗೆ ಹೋಗುತ್ತಿದ್ದೇನೆ. ಈ ಘೋರವಾದ

ಕಲಿಯುಗದಲ್ಲಿ ಜನಗಳು ವರ್ಣ-ಆಶ್ರಮಗಳಿಗೆ ಅನುಗುಣವಾದ ಆಚಾರಗಳನ್ನು ಬಿಟ್ಟು ಪಾಪಕರ್ಮಗಳನ್ನೇ ಮಾಡುತ್ತಾರೆ. ಕಲಿಯುಗದಲ್ಲಿ ಎಲ್ಲ ಪಾಪಗಳನ್ನು ಪರಿಹರಿಸುವ ಕ್ಷೇತ್ರ ವಾರಾಣಸಿಯೊಂದೆ ಆಗಿದೆ; ಬೇರೆ ಯಾವುದೂ ಇಲ್ಲ. ನೀನು ಧೈರ್ಯಶಾಲಿಯೂ, ಜನಪ್ರಿಯನೂ ಆಗಿ ಲೋಕಪ್ರಸಿದ್ಧನಾಗಿರುವಿ. ನೀನು ನಿನ್ನ ಧರ್ಮವನ್ನು ಆಚರಿಸು. ಭಯದಿಂದ ಮುಕ್ತನಾಗುವಿ.''

ಹೀಗೆ ಹೇಳಲ್ಪಟ್ಟ ಅರ್ಜುನನು ವೇದವ್ಯಾಸರನ್ನು ನಮಸ್ಕರಿಸಿ ಯುಗಧರ್ಮಗಳನ್ನು ವಿವರಿಸಬೇಕೆಂದು ಕೇಳಿದನು. ವೇದವ್ಯಾಸರು ಶಿವನನ್ನು ನಮಸ್ಕರಿಸಿ ಅರ್ಜುನನಿಗೆ ಯುಗಧರ್ಮಗಳನ್ನು ವಿವರಿಸಿದರು.

**ವ್ಯಾಸ ಉವಾಚ :**

''ಅರ್ಜುನ! ಯುಗಧರ್ಮಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ. ವಿಸ್ತಾರವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಯುಗಗಳಲ್ಲಿ ಕೃತ ಮೊದಲನೆಯದು. ಎರಡನೆಯದು ತ್ರೇತಾ. ದ್ವಾಪರ ಮೂರನೆಯದು ಮತ್ತು ಕಲಿ ನಾಲ್ಕನೆಯದು. ಕೃತಯುಗದಲ್ಲಿ ಧ್ಯಾನವೇ ತಪಸ್ಸು. ತ್ರೇತಾಯುಗದಲ್ಲಿ ಜ್ಞಾನವು ತಪಸ್ಸು. ದ್ವಾಪರದಲ್ಲಿ ಯಜ್ಞ ತಪಸ್ಸು. ಕಲಿಯುಗದಲ್ಲಿ ದಾನವೊಂದೇ ತಪಸ್ಸು. ಕೃತಯುಗದಲ್ಲಿ ಚತುರ್ಮುಖ ಬ್ರಹ್ಮನು ಪೂಜ್ಯನಾದ ದೇವತೆ. ತ್ರೇತಾಯುಗದಲ್ಲಿ ಸೂರ್ಯ, ದ್ವಾಪರದಲ್ಲಿ ವಿಷ್ಣು ಮತ್ತು ಕಲಿಯುಗದಲ್ಲಿ ಮಹೇಶ್ವರ ಪೂಜ್ಯ ದೇವತೆಗಳು. ಚತುರ್ಮುಖಬ್ರಹ್ಮ, ವಿಷ್ಣು, ಸೂರ್ಯರು ಮೇಲೆ ಹೇಳಿದ ಯುಗಗಳಲ್ಲದೆ ಕಲಿಯುಗದಲ್ಲೂ ಪೂಜಿಸಲ್ಪಡುತ್ತಾರೆ. ಪಿನಾಕಧಾರಿಯಾದ ಶಿವನು ನಾಲ್ಕೂ ಯುಗಗಳಲ್ಲಿ ಪೂಜಿಸಲ್ಪಡುತ್ತಾನೆ.

ಕೃತಯುಗದಲ್ಲಿ ಧರ್ಮವು ನಾಲ್ಕು ಪಾದಗಳ ಮೇಲೆ ನಿಂತಿರುತ್ತದೆ. ಅರ್ಥಾತ್ ಜನರು ಧರ್ಮವನ್ನು ಪೂರ್ಣವಾಗಿ ಆಚರಿಸುತ್ತಾರೆ. ತ್ರೇತಾಯುಗದಲ್ಲಿ ಒಂದು ಪಾದ ಇಲ್ಲವಾಗುತ್ತದೆ - ಅಂದರೆ ಧರ್ಮಾಚರಣೆಯಲ್ಲಿ ಶೈಥಿಲ್ಯವುಂಟಾಗುತ್ತದೆ. ದ್ವಾಪರಯುಗದಲ್ಲಿ ಎರಡು ಪಾದ ಮಾತ್ರ. ಕಲಿಯುಗದಲ್ಲಿ ಧರ್ಮದ ಮೂರು ಪಾದಗಳು ನಾಶವಾಗಿ ಒಂದು ಪಾದ ಮಾತ್ರವೇ ಇರುತ್ತದೆ.

ಕೃತ ಯುಗದಲ್ಲಿ ಮೈಥುನದಿಂದ ಪ್ರಜೆಗಳ ಉತ್ಪತ್ತಿಯಾಗುತ್ತದೆ. ಜನರು ನಿಸ್ಪೃಹರೂ ತೃಪ್ತರೂ, ಭೋಗವಂತರೂ ಆಗಿರುತ್ತಾರೆ. ಅವರಲ್ಲಿ ನೀಚೋಚ್ಚಭಾವಗಳು ಇರುವುದಿಲ್ಲ. ಸುಖ, ರೂಪ, ಆಯುಸ್ಸು, ಇವುಗಳು ಎಲ್ಲರಿಗೂ ಸಮಾನವಾಗಿರುತ್ತವೆ. ಎಲ್ಲರೂ ಶೋಕರಹಿತರೂ, ತತ್ತ್ವನಿಷ್ಠರೂ, ಏಕಾಂತಪ್ರಿಯರೂ ಆಗಿರುತ್ತಾರೆ. ಧ್ಯಾನನಿಷ್ಠೆ, ತಪೋನಿಷ್ಠೆ ಶಿವಭಕ್ತಿ, ನಿಷ್ಕಾಮಕರ್ಮಾಚರಣೆ, ಸದಾಸಂತೋಷ - ಇವುಗಳು ಈ ಯುಗದ ಜನರ ಸಾಮಾನ್ಯ ಲಕ್ಷಣ. ಪರ್ವತ ಸಮುದ್ರತೀರಗಳಲ್ಲಿ ವಾಸಿಸುವ ಇವರಿಗೆ ಮನೆಗಳಿರುವುದಿಲ್ಲ. ಇವರುಗಳಿಗೆ 'ರಸೋಲ್ಲಾಸ' ಎಂಬ ಸಿದ್ಧಿಯು ಇರುತ್ತದೆ.

ತ್ರೇತಾಯುಗದಲ್ಲಿ ಈ ಸಿದ್ಧಿಯು ನಶಿಸುತ್ತದೆ. ಆದರೆ ಬೇರೊಂದು ಸಿದ್ಧಿ ಈ ಜನರಲ್ಲಿರುತ್ತದೆ. ಈ ಯುಗದಲ್ಲಿ ಮಳೆಯಿಂದ ಭೂಮಿಯಲ್ಲಿ ಮರಗಳು ಹುಟ್ಟುತ್ತವೆ. ಜನಗಳಿಗೆ ಈ ಮರಗಳೇ ವಾಸಕ್ಕೆ ಆಶ್ರಯವಾಗುತ್ತವೆ. ಇವುಗಳಿಂದ ನಾನಾ ವಿಧವಾದ ಉಪಯೋಗಗಳನ್ನು ಆ ಜನರು ಪಡೆಯುತ್ತಾರೆ. ಕಾಲಕ್ರಮೇಣ ಈ ಜನರಲ್ಲಿ ರಾಗ, ಲೋಭಗಳು ಉದಯಿಸಿ ಈ ದೋಷದಿಂದಾಗಿ ಆಶ್ರಯವಾಗಿದ್ದ ಮರಗಳು ನಾಶ ಹೊಂದುತ್ತವೆ. ಹೆದರಿದ ಜನರು ನಿಷ್ಠೆಯಿಂದ ಧ್ಯಾನವನ್ನು ಮಾಡಿ ಮರಗಳು ಪುನಃ ಹುಟ್ಟುವಂತೆ ಮಾಡುತ್ತಾರೆ. ಆ ಮರಗಳು ವಸ್ತ್ರ, ಫಲ, ಆಭರಣ, ಗಂಧ, ವರ್ಣ, ರಸಗಳನ್ನು ಪ್ರಸವಿಸುತ್ತವೆ. ಪ್ರತಿಯೊಂದು ಮರದಲ್ಲಿಯೂ ದುಂಬಿಗಳಿಂದ ಉತ್ಪಾದಿಸಲ್ಪಡದ ಮಧುವು ಸ್ರವಿಸುತ್ತದೆ. ಈ ಪದಾರ್ಥಗಳಿಂದ ಜನರ ಜೀವನ ನಡೆಯುತ್ತದೆ. ಈ ಸಿದ್ಧಿಯಿಂದ ಹೃಷ್ಟ-ಪುಷ್ಟ ಜೀವನವನ್ನು ನಡೆಸುವ ಈ ಜನಗಳಲ್ಲಿ ಮತ್ತೆ ಲೋಭವು ಉಂಟಾಗಿ ಮರಗಳನ್ನು ಅತಿಯಾಗಿ ಬಳಸುತ್ತಾರೆ. ಲೋಭದಿಂದ ನಡೆದ ಈ ಅಪಚಾರದಿಂದ ಮಧುವನ್ನು ಕೊಡುತ್ತಿದ್ದ ಈ ಕಲ್ಪವೃಕ್ಷಗಳು ಅಲ್ಲಲ್ಲಿ ನಾಶವಾಗುತ್ತವೆ. ವೃಕ್ಷನಾಶದಿಂದ ತೀವ್ರವಾದ ಛಳಿ, ಮಳೆ, ಬಿಸಿಲುಗಳು ಜನರನ್ನು ಬಾಧಿಸುತ್ತವೆ. ಇವುಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಜನರು ಆವರಣಗಳನ್ನು ನಿರ್ಮಿಸಿಕೊಳ್ಳುತ್ತಾರೆ. ನಾನಾವಿಧವಾದ ಜೀವನೋಪಾಯವನ್ನು ಅವರು ಆಲೋಚಿಸುತ್ತಾರೆ. ತಗ್ಗುಪ್ರದೇಶದಲ್ಲಿ ಹರಿಯುವ ಮಳೆಯ ನೀರು ಅವರಿಗೆ ಜೀವನೋಪಾಯವಾಗುತ್ತದೆ. ಮಳೆಯಿಂದ ನದಿಗಳು ಹುಟ್ಟುತ್ತವೆ. ನೀರು-ಭೂಮಿಗಳ ಸಂಯೋಗದಿಂದ ಕೃಷಿ-ಬಿತ್ತನೆಗಳಿಲ್ಲದೆ ಹದಿನಾಲ್ಕು ಬಗೆಯ ಔಷಧಿಗಳು ಆಗುತ್ತವೆ. ಇವುಗಳಲ್ಲಿ ಗ್ರಾಮ್ಯ ಮತ್ತು ಆರಣ್ಯ ಎಂಬ ವಿಭಾಗವಿರುತ್ತದೆ. ಮರಗಳು ಮತ್ತು ಗುಲ್ಮಗಳು ಬೇರೆ ಬೇರೆ ಋತುಗಳ ಪುಷ್ಪ ಮತ್ತು ಫಲಗಳನ್ನು ಹೊತ್ತು ಹುಟ್ಟುತ್ತವೆ. ಅನಂತರ ಜನಗಳಿಗೆ ಮತ್ತೆ ಆಸೆ, ಲೋಭಗಳು ಉಂಟಾಗುತ್ತವೆ. ಇವೆಲ್ಲ ತ್ರೇತಾಯುಗದಲ್ಲಿ ಆಗಬೇಕಾದದ್ದೆ. ಜನರು ನದಿಗಳನ್ನು ಫಲವತ್ತಾದ ಭೂಮಿಯನ್ನು ಪರ್ವತಗಳನ್ನು, ಮರ, ಪೊದೆ, ಔಷಧಿಗಳನ್ನು ದೊಡ್ಡಪ್ರಮಾಣದಲ್ಲಿ ಬಳಸುತ್ತಾರೆ. ಜನಗಳ ಈ ವಿಪರೀತ ವರ್ತನೆಯಿಂದ ಔಷಧಿಗಳೆಲ್ಲವೂ ಭೂಮಿಯಲ್ಲಿ ಅಡಗಿ ಹೋಗುತ್ತವೆ. ಚತುರ್ಮುಖಬ್ರಹ್ಮದೇವರ ಆಜ್ಞೆಯಂತೆ ಪೃಥುಚಕ್ರವರ್ತಿಯ ತನ್ನ ವರ್ಚಸ್ಸಿನಿಂದ ಅಡಗಿದ ಔಷಧಿಗಳನ್ನು ಮೇಲೆ ಬರುವಂತೆ ಮಾಡುತ್ತಾನೆ. ಪ್ರಜೆಗಳು ಮತ್ತೆ ದುರಾಚಾರದಿಂದಲೇ ಅವುಗಳನ್ನು ಬಳಸುತ್ತಾರೆ. ಕಾಲ ಬಲದಿಂದ ಜನಗಳ ಸದಾಚಾರವು ನಾಶ ಹೊಂದಿದಾಗ ನಡತೆಯ ಇತಿ-ಮಿತಿಗಳನ್ನು ಸ್ಥಾಪಿಸುವುದಕ್ಕಾಗಿ ಚತುರ್ಮುಖಬ್ರಹ್ಮನು ಕ್ಷತ್ರಿಯರನ್ನು ಸೃಷ್ಟಿಸುತ್ತಾನೆ. ಬ್ರಾಹ್ಮಣರ ಹಿತಕ್ಕಾಗಿ ವರ್ಣಾಶ್ರಮ ವ್ಯವಸ್ಥೆಯನ್ನು ಏರ್ಪಡಿಸುತ್ತಾನೆ. ಪಶು ಹಿಂಸೆ ಇಲ್ಲದ ಯಜ್ಞಗಳನ್ನು ಏರ್ಪಡಿಸುತ್ತಾನೆ.

ದ್ವಾಪರಯುಗದಲ್ಲಿ ಜನರಿಗೆ ಬುದ್ಧಿದೋಷದಿಂದ ರಾಗ, ಲೋಭಗಳು ಇರುತ್ತವೆ. ಅವರು ಪರಸ್ಪರ ಕಲಹಮಾಡಿಕೊಳ್ಳುತ್ತಾರೆ. ಇಲ್ಲಿಯವರೆಗೆ ಒಂದೇ ಆಗಿದ್ದ ವೇದವನ್ನು

ವೇದವ್ಯಾಸರು ನಾಲ್ಕು ಭಾಗವಾಗಿ ವಿಭಜಿಸುತ್ತಾರೆ. ಋಷಿಪುತ್ರರು ವಿಭಜಿಸಲ್ಪಟ್ಟ ವೇದಗಳನ್ನು ಮತ್ತಷ್ಟು ವಿಭಜಿಸುತ್ತಾರೆ. ಬ್ರಾಹ್ಮಣ್ಯಗಳು, ಕಲ್ಪಸೂತ್ರಗಳು, ಇತಿಹಾಸ-ಪುರಾಣಗಳು, ಧರ್ಮಶಾಸ್ತ್ರಗಳು ಈ ಯುಗದಲ್ಲಿ ರಚಿತವಾಗುತ್ತವೆ.

ಅವೃಷ್ಟಿ, ಮರಣ ಮೊದಲಾದ ಉಪದ್ರವಗಳು ಈ ಯುಗದಲ್ಲಿ ಜನಗಳಿಗೆ ಉಂಟಾಗುತ್ತವೆ. ಮಾತು, ಮನಸ್ಸು ಮತ್ತು ಶರೀರಗಳಲ್ಲಿ ಉಂಟಾಗುವ ದೋಷಗಳಿಂದ ಜನರಿಗೆ ಜುಗುಪ್ಸೆ ಉಂಟಾಗುತ್ತದೆ. ಆದ್ದರಿಂದ ಜನರು ದುಃಖದಿಂದ ಬಿಡುಗಡೆಯನ್ನು ಪಡೆಯುವ ಮಾರ್ಗಗಳ ಬಗ್ಗೆ ಆಲೋಚಿಸಲು ಆರಂಭಿಸುತ್ತಾರೆ. ಈ ಆಲೋಚನೆಯ ಫಲವಾಗಿ ಕೆಲವರಿಗೆ ಭೌತವಸ್ತುಗಳ ಮೇಲೆ ವೈರಾಗ್ಯವುಂಟಾಗುತ್ತದೆ. ವೈರಾಗ್ಯದಿಂದ ತತ್ವಜ್ಞಾನವು ಲಭಿಸುತ್ತದೆ. ದ್ವಾಪರಯುಗದ ಜನರಲ್ಲಿ ರಜೋಗುಣ, ತಮೋಗುಣಗಳು ಅಧಿಕವಾಗಿದ್ದು ಅದಕ್ಕನುಗುಣವಾದ ವೃತ್ತಿಗಳು ಅಭಿವ್ಯಕ್ತವಾಗುತ್ತವೆ.

ಮೊದಲನೆಯ ಕೃತಯುಗದಲ್ಲಿ ಧರ್ಮವು ಸ್ಥಿರವಾಗಿರುತ್ತದೆ. ತ್ರೇತಾಯುಗದಲ್ಲಿ ಮುಂದುವರಿಯುತ್ತದೆ. ದ್ವಾಪರದಲ್ಲಿ ಅದು ವ್ಯಾಕುಲಸ್ಥಿತಿಯನ್ನು ಪಡೆದು ಕಲಿಯುಗದಲ್ಲಿ ನಾಶವಾಗುತ್ತದೆ

* * *

## ಅಧ್ಯಾಯ-೩೦

**ವ್ಯಾಸ ಉವಾಚ :**

ಕಲಿಯುಗದಲ್ಲಿ ತಮೋಗುಣವು ಜನರನ್ನು ಯಾವಾಗಲೂ ವ್ಯಾಕುಲಗೊಳಿಸುತ್ತದೆ. ಕಪಟ, ಅಸೂಯೆ, ತಪಸ್ವಿಗಳ ವಧೆ-ಇವುಗಳು ಕಲಿಯುಗದಲ್ಲಿ ಸಾಮಾನ್ಯ ಸಂಗತಿ-ಗಳಾಗಿರುತ್ತದೆ

ಮಾರಕ ರೋಗಗಳು, ಹಸಿವೆಯ ಭಯ, ಅನಾವೃಷ್ಟಿಯ ಭಯ, ದೇಶಗಳ ನಾಶ-ಇವುಗಳು ಸಂಭವಿಸುತ್ತವೆ. ಜನಗಳು ಬಹಳ ಕೆಟ್ಟವರಾಗುತ್ತಾರೆ. ಅವರು ಅಧಾರ್ಮಿಕರೂ, ತೇಜೋಹೀನರೂ, ಮಹಾಕೋಪಿಗಳೂ, ಲೋಭಿಗಳೂ ಆಗಿರುತ್ತಾರೆ. ಸುಳ್ಳು ಹೇಳುತ್ತಾರೆ. ಬ್ರಾಹ್ಮಣರು ಕೆಟ್ಟರೀತಿಯಿಂದ ಯಜ್ಞಗಳನ್ನು ಮಾಡುತ್ತಾರೆ, ವೇದಾಧ್ಯಯನವನ್ನು ಮಾಡುತ್ತಾರೆ. ಅವರ ಆಚಾರ ಕೆಟ್ಟು ಹೋಗುತ್ತದೆ. ಬ್ರಾಹ್ಮಣರ ಅವನತಿಯಿಂದ ಎಲ್ಲರಿಗೂ

ಭಯವೇ ಉಂಟಾಗುತ್ತದೆ. ಅವರು ವೇದಾಧ್ಯಯನವನ್ನೂ ಯಜ್ಞಗಳನ್ನು ಮಾಡುವುದಿಲ್ಲ. ಮಂದಮತಿಗಳು ಈ ಕೆಲಸಗಳನ್ನು ಮಾಡುತ್ತಾರೆ. ಶೂದ್ರರು ಮಂತ್ರಗಳನ್ನು ಕಲಿಯುತ್ತಾರೆ. ಶಯನ, ಆಸನ, ಭೋಜನಗಳನ್ನು ಬ್ರಾಹ್ಮಣರು ಶೂದ್ರರೊಂದಿಗೆ ಮಾಡುತ್ತಾರೆ. ಶೂದ್ರರೇ ರಾಜರಾಗಿ (ಆಳುವವರಾಗಿ) ಬ್ರಾಹ್ಮಣರನ್ನು ಪೀಡಿಸುತ್ತಾರೆ. ಭ್ರೂಣಹತ್ಯೆ ವೀರಹತ್ಯೆಗಳು ನಡೆಯುತ್ತವೆ. ಬ್ರಾಹ್ಮಣರು ಸ್ನಾನ, ಹೋಮ, ಜಪ, ದಾನ, ದೇವತಾರ್ಚನೆ ಮೊದಲಾದ ಸತ್ಕರ್ಮಗಳನ್ನು ಮಾಡುವುದಿಲ್ಲ. ಕಲಿಯುಗದ ಜನರು ಬ್ರಾಹ್ಮಣರನ್ನೂ, ವಿಷ್ಣುವನ್ನೂ, ಶಿವನನ್ನೂ, ವೇದಗಳನ್ನೂ ಧರ್ಮಶಾಸ್ತ್ರಗಳನ್ನೂ ನಿಂದಿಸುತ್ತಾರೆ. ವೇದೋಕ್ತವಲ್ಲದ ನಾನಾವಿಧ ಕರ್ಮಗಳನ್ನು ಮಾಡುತ್ತಾರೆ. ಬ್ರಾಹ್ಮಣರಿಗೆ ಸ್ವಧರ್ಮದಲ್ಲಿ ಅಭಿರುಚಿ ಇರುವುದಿಲ್ಲ. ಈ ಯುಗದ ಜನರ ಶೀಲ-ಆಚಾರಗಳು ಕೆಟ್ಟದಾಗಿರುತ್ತವೆ. ವ್ಯರ್ಥವೇಷಗಳನ್ನು ಧರಿಸಿದ ಪಾಷಂಡಿಗಳ ಸಹವಾಸವನ್ನು ಮಾಡುತ್ತಾರೆ. ಪರಸ್ಪರ ಬೇಡುವ ಪ್ರವೃತ್ತಿ ಹೆಚ್ಚಾಗಿರುತ್ತದೆ. ಜನರು ಅನ್ನವನ್ನು ಮಾರುತ್ತಾರೆ. ಅರ್ಚಕರು ದೇವರನ್ನು ಮಾರುತ್ತಾರೆ. ಹೆಂಗಸರು ತಮ್ಮ ಶರೀರವನ್ನೇ ಮಾರಿಕೊಳ್ಳುತ್ತಾರೆ. ಶೂದ್ರರು ಕಾಷಾಯವಸ್ತ್ರ-ದಂಡಗಳನ್ನು ಧರಿಸಿ ಧರ್ಮಾಚರಣೆಯನ್ನು ಮಾಡುತ್ತಾರೆ. ಸಸ್ಯಗಳನ್ನು, ವಸ್ತ್ರಗಳನ್ನು ಕದಿಯುತ್ತಾರೆ. ಚೋರರು ಬೇರೆ ಚೋರರ ವಸ್ತುಗಳನ್ನು ಅಪಹರಿಸುತ್ತಾರೆ. ಒಬ್ಬ ಕೊಲೆಗಡುಕನನ್ನು ಮತ್ತೊಬ್ಬ ಕೊಲೆಗಡುಕ ಕೊಲ್ಲುತ್ತಾನೆ. ತಮೋಗುಣದ ಪರಿಣಾಮಗಳಾದ ಹೆಚ್ಚು ದುಃಖ, ಅಲ್ಪ ಆಯುಸ್ಸು, ರೋಗ, ಅಧರ್ಮದಲ್ಲಿ ಅಭಿರುಚಿ ಇವು ಕಲಿಯುಗದಲ್ಲಿ ಹೆಚ್ಚಾಗುತ್ತವೆ. ವೇದವನ್ನು ತಿರಸ್ಕರಿಸುವ ಕಾಷಾಯವಸ್ತ್ರಧಾರಿಗಳೂ, ಕಾಪಾಲಿಕರೂ, ವೇದಗಳನ್ನೂ, ತೀರ್ಥವನ್ನೂ ಮಾರುವವರೂ ಹೆಚ್ಚಾಗುತ್ತಾರೆ. ಮಂದಮತಿಗಳು ಬ್ರಾಹ್ಮಣರ ಸ್ಥಾನ ಮಾನಗಳಿಗೆ ಹಾನಿವುಂಟುಮಾಡುತ್ತಾರೆ. ರಾಜಾಶ್ರಯವನ್ನು ಪಡೆದ ಶೂದ್ರರು ಬ್ರಾಹ್ಮಣರನ್ನು ಹೊಡೆಯುತ್ತಾರೆ. ಶೂದ್ರರು ಬ್ರಾಹ್ಮಣರ ಮಧ್ಯೆ ದೊಡ್ಡ ಸ್ಥಾನಗಳಲ್ಲಿ ಕೂಡುತ್ತಾರೆ. ರಾಜರು ಬ್ರಾಹ್ಮಣರನ್ನು ಪೂಜಿಸುವುದಿಲ್ಲ. ಬ್ರಾಹ್ಮಣರೇ ಪುಷ್ಪ, ಆಭರಣ ಮೊದಲಾದವುಗಳಿಂದ ಶೂದ್ರರ ಸೇವೆಯನ್ನು ಮಾಡುತ್ತಾರೆ. ಹೀಗೆ ಸೇವೆ ಪಡೆದ ಶೂದ್ರರು ಬ್ರಾಹ್ಮಣರನ್ನು ಗಮನಕ್ಕೆ ತೆಗೆದುಕೊಳ್ಳುವುದಿಲ್ಲ. ಸೇವೆಯ ಅವಕಾಶಕ್ಕಾಗಿ ಕಾಯುತ್ತಾ ಬ್ರಾಹ್ಮಣರು ಶೂದ್ರರ ಬಾಗಿಲು ಕಾಯುತ್ತಾರೆ. ಜೀವನಕ್ಕಾಗಿ ಶೂದ್ರರ ಸೇವೆಯನ್ನು ಮಾಡುತ್ತಾರೆ. ವೇದಾಧಿಕಾರವಿಲ್ಲದ ಅವರಿಗೆ ವೇದಾಧ್ಯಯನವನ್ನು ಮಾಡಿಸುತ್ತಾರೆ. ಹೀಗೆ ಬ್ರಾಹ್ಮಣರು ಘೋರ ನಾಸ್ತಿಕರಾಗುತ್ತಾರೆ. ಬ್ರಾಹ್ಮಣರು ತಪಸ್ಸು, ಯಜ್ಞ ಮತ್ತು ನಾನಾವಿಧವಾದ ವಿದ್ಯೆಗಳನ್ನು ಮಾರುತ್ತಾರೆ. (ಹಣ ತೆಗೆದುಕೊಂಡು ಪಾಠ ಹೇಳುತ್ತಾರೆ. ಹಣಕ್ಕಾಗಿ ತಪಸ್ಸು, ಯಜ್ಞಗಳನ್ನು ಮಾಡುತ್ತಾರೆ.) ಕಲಿಯುಗದಲ್ಲಿ ಸಾವಿರಾರು ಬ್ರಾಹ್ಮಣರು ಸನ್ಯಾಸಿಗಳಾಗುತ್ತಾರೆ. ತಮ್ಮ ಧರ್ಮವನ್ನು ಆಚರಿಸದೆ ನಾಶಮಾಡುತ್ತಾರೆ. ಪರಧರ್ಮವನ್ನು ಆಚರಿಸುತ್ತಾರೆ. ಲೌಕಿಕ-ಗಾನಗಳಿಂದ ದೇವತೆಗಳನ್ನು ಹಾಡುತ್ತಾರೆ. ಬ್ರಾಹ್ಮಣರು ಮತ್ತು ಕ್ಷತ್ರಿಯರು ವಾಮಾಚಾರವನ್ನು ಪ್ರತಿಪಾದಿಸುವ ಪಾಶುಪತಾಗಮ ಮತ್ತು ಪಂಚರಾತ್ರಾಗಮಗಳನ್ನು ಅನುಸರಿಸಿ

ವಾಮಾಚಾರಗಳನ್ನು ನಡೆಸುತ್ತಾರೆ. ಹೀಗೆ ಕಲಿಯುಗದಲ್ಲಿ ಜ್ಞಾನ-ಕರ್ಮಗಳು ನಾಶವಾಗಿ, ಇಡೀಲೋಕ ಸತ್ಕರ್ಮಹೀನವಾದಾಗ ಕೀಟಗಳು, ಇಲಿಗಳು, ಸರ್ಪಗಳು ಮನುಷ್ಯರನ್ನು ಬಾಧಿಸುತ್ತವೆ. ಹಿಂದೆ ದಕ್ಷಯಜ್ಞದಲ್ಲಿ ಪಾರ್ವತಿಯ ಶಾಪಕ್ಕೊಳಗಾದ ಬ್ರಾಹ್ಮಣರು ಕಲಿಯುಗದಲ್ಲಿ ಬ್ರಾಹ್ಮಣಕುಲಗಳಲ್ಲಿ ಹುಟ್ಟುತ್ತಾರೆ. ಇವರು ಶಿವನಿಂದನೆಯನ್ನು ಮಾಡುತ್ತಾ ಅರ್ಥಹೀನವಾದ ಧರ್ಮಾಚರಣೆಯನ್ನು ಮಾಡುತ್ತಾರೆ. ಗೌತಮಋಷಿಗಳ ಶಾಪಕ್ಕೊಳಗಾದ ಬ್ರಾಹ್ಮಣರೂ ಕೂಡ ಅಂತಹ ಬ್ರಾಹ್ಮಣಕುಲಗಳಲ್ಲಿ ಹುಟ್ಟಿ ಇಂದ್ರಿಯಪ್ರೇರಕನಾದ ಶ್ರೀಹರಿಯನ್ನು ನಿಂದಿಸುತ್ತಾರೆ. ವೇದವಿಹಿತವಲ್ಲದ ಆಚಾರಗಳನ್ನೂ, ದುರಾಚಾರಗಳನ್ನೂ ವ್ಯರ್ಥವಾಗಿ ಮಾಡುತ್ತಾ, ತಮ್ಮ ಆಚರಣೆಗಳ ಫಲವನ್ನೂ ಕೂಡ ತೋರಿಸುತ್ತಾ ಜನಗಳಿಗೆ ಮೋಹವುಂಟುಮಾಡುತ್ತಾರೆ. ಇವರಲ್ಲಿ ತಮೋಗುಣದ ಆವೇಶವಾಗಿರುತ್ತದೆ. ಬೆಕ್ಕಿನಂತೆ ಸ್ವಾರ್ಥಕ್ಕಾಗಿ ವ್ರತಗಳನ್ನು ಆಚರಿಸುತ್ತಾರೆ.

ಲೋಕೇಶ್ವರನಾದ ಶಿವ ಎಲ್ಲ ದೇವತೆಗಳ ದೇವತೆ. ಕಲಿಯುಗದಲ್ಲಿ ಜನರ ಕಾರ್ಯಸಿದ್ಧಿ ಅವನಿಂದಲೇ ಆಗುತ್ತದೆ. ಈ ಮಹಾದೇವನು ಕಲಿಯುಗದಲ್ಲಿ ನಾನಾ ಅವತಾರಗಳನ್ನು ಮಾಡುವನು. ಭಕ್ತರ ಹಿತಕ್ಕಾಗಿ ಸರ್ವವೇದಾಂತದ ಸಾರವಾದ ಬ್ರಹ್ಮನನ್ನು ಉಪದೇಶಿಸುತ್ತಾನೆ. ಎಲ್ಲ ವರ್ಣದೇವರಿಗೂ ವೇದವು ವಿಧಿಸುವ ಧರ್ಮಗಳನ್ನು ಉಪದೇಶಿಸುತ್ತಾನೆ. ಯಾರು ಪ್ರಸನ್ನ ಮನಸ್ಸಿನಿಂದ ಆ ಮಹಾದೇವನ ಸೇವೆಯನ್ನು ಮಾಡುತ್ತಾರೋ ಅವರ ಕಲಿದೋಷವು ನಾಶವಾಗುತ್ತದೆ. ಅವರು ಪರಮಪದವನ್ನು ಹೊಂದುತ್ತಾರೆ. ಹೆಚ್ಚು ಕಷ್ಟ ಪಡದೆ ಮಹಾಪುಣ್ಯವನ್ನು ಪಡೆಯುತ್ತಾರೆ. ಅನೇಕ ದೋಷಗಳಿಂದ ತುಂಬಿದ ಕಲಿಯುಗದ ಒಂದು ದೊಡ್ಡ ಗುಣ ಸುಲಭವಾಗಿ ಮಹಾಪುಣ್ಯ ಸಂಪಾದನೆಯ ಅವಕಾಶ. ಆದ್ದರಿಂದ ಈ ಕಲಿಯುಗದಲ್ಲಿ ಹುಟ್ಟಲು ಪ್ರಯತ್ನಿಸಬೇಕು. ಹುಟ್ಟಿ ಶಿವನಿಗೆ ಶರಣಾಗಬೇಕು. ಯಾರು ಪ್ರಸನ್ನವಾದ ಮನಸ್ಸಿನಿಂದ ವಿರೂಪಾಕ್ಷನೂ, ಗಜಚರ್ಮವನ್ನು ಧರಿಸಿದವನೂ ಆದ ಶಿವನನ್ನು ನಮಸ್ಕರಿಸುವರೋ ಅವರು ಮುಕ್ತಿಯನ್ನು ಪಡೆಯುತ್ತಾರೆ. ರುದ್ರನಿಗೆ ನಮಸ್ಕಾರ ಮಾಡುವುದರಿಂದ ಎಂತಹ ಫಲಗಳನ್ನು ಪಡೆಯಬಹುದೋ ಅಂತಹ ಫಲಗಳನ್ನು ಬೇರೆ ದೇವತೆಗಳನ್ನು ನಮಸ್ಕರಿಸಿ ಪಡೆಯಲು ಸಾಧ್ಯವಿಲ್ಲ. ಇಂತಹ ಕಲಿಯುಗದಲ್ಲಿ ಮಹಾದೇವನಿಗೆ ಮಾಡುವ ನಮಸ್ಕಾರ ಅವನ ಧ್ಯಾನ, ದಾನಗಳು ದೋಷಗಳನ್ನು ತೊಡೆದು ಹಾಕುತ್ತವೆ. ಆದ್ದರಿಂದ ಮುಕ್ತಿಯ ಅಪೇಕ್ಷೆ ಇರುವವರು ಸಮರ್ಥರಲ್ಲದ ಬೇರೆ ದೇವತೆಗಳನ್ನು ಬಿಟ್ಟು ವಿರೂಪಾಕ್ಷನಾದ ಮಹಾದೇವನನ್ನೇ ಆಶ್ರಯಿಸಬೇಕು. ದೇವವಂದಿತನಾದ ಶಿವನ ಅರ್ಚನೆಯನ್ನು ಮಾಡದವರ ದಾನ, ತಪಸ್ಸು, ಯಜ್ಞ, ಜೀವನ - ಎಲ್ಲವೂ ವ್ಯರ್ಥ.

ನಮೋ ರುದ್ರಾಯ ಮಹತೇ ದೇವದೇವಾಯ ಶೂಲಿನೇ ।
ತ್ರ್ಯಂಬಕಾಯ ತ್ರಿನೇತ್ರಾಯ ಯೋಗಿನಾಂ ಗುರವೇ ನಮಃ ॥

ನಮೋಽಸ್ತು ದೇವದೇವಾಯ ಮಹಾದೇವಾಯ ವೇಧಸೇ ।
ಶಂಭವೇ ಸ್ಥಾಣವೇ ನಿತ್ಯ ಶಿವಾಯ ಪರಮೇಷ್ಠಿನೇ ॥

ನಮಃ ಸೋಮಾಯ ರುದ್ರಾಯ ಮಹಾಗ್ರಾಸಾಯ ಹೇತವೇ ।
ಪ್ರಪದ್ಯೇಽಹಂ ವಿರೂಪಾಕ್ಷಂ ಶರಣ್ಯಂ ಬ್ರಹ್ಮಚಾರಿಣಮ್ ॥

ಮಹಾದೇವಂ ಮಹಾಯೋಗಮೀಶಾನಂ ಚಾಂಬಿಕಾಪತಿಮ್ ।
ಯೋಗಿನಾಂ ಯೋಗದಾತಾರಂ ಯೋಗಮಾಯಾಸಮಾವೃತಮ್ ॥

ಯೋಗಿನಾಂ ಗುರುಮಾಚಾರ್ಯಂ ಯೋಗಿಗಮ್ಯಂ ಪಿನಾಕಿನಮ್ ।
ಸಂಸಾರತರಣಂ ರುದ್ರಂ ಬ್ರಹ್ಮಾಣಂ ಬ್ರಹ್ಮಣೋಽಧಿಪಮ್ ॥

ಶಾಶ್ವತಂ ಸರ್ವಗಂ ಶಾಂತಂ ಬ್ರಹ್ಮಣ್ಯಂ ಬ್ರಾಹ್ಮಣಪ್ರಿಯಮ್ ।
ಕಪರ್ದಿನಂ ಕಾಲಮೂರ್ತಿಮಮೂರ್ತಿಂ ಪರಮೇಶ್ವರಮ್ ॥

ಏಕಮೂರ್ತಿಂ ಮಹಾಮೂರ್ತಿಂ ವೇದವೇದ್ಯಂ ದಿವಸ್ಪತಿಮ್ ।
ನೀಲಕಂಠಂ ವಿಶ್ವಮೂರ್ತಿಂ ವ್ಯಾಪಿನಂ ವಿಶ್ವರೇತಸಮ್ ॥

ಕಾಲಾಗ್ನಿಂ ಕಾಲದಹನಂ ಕಾಮದಂ ಕಾಮನಾಶನಮ್ ।
ನಮಸ್ಯೇ ಗಿರಿಶಂ ದೇವಂ ಚಂದ್ರಾವಯವಭೂಷಣಮ್ ॥

ವಿರೋಹಿತಂ ಲೇಲಿಹಾನಮಾದಿತ್ಯಂ ಪರಮೇಷ್ಠಿನಮ್ ।
ಉಗ್ರಂ ಪಶುಪತಿಂ ಭೀಮಂ ಭಾಸ್ಕರಂ ಪರಮಂ ತಪಃ ॥

ಹೀಗೆ ಹಿಂದಿನ, ಮುಂದಿನ ಎಲ್ಲ ಯುಗಗಳ ಲಕ್ಷಣಗಳನ್ನು ಮತ್ತು ಮನ್ವಂತರ ಕ್ಷಯವನ್ನು ವಿವರಿಸಲಾಯಿತು. ಎಲ್ಲ ಮನ್ವಂತರಗಳು ಒಂದೇ ರೀತಿ ಇರುವುದರಿಂದ ಒಂದರ ವಿವರಣೆಯೇ ಎಲ್ಲದರ ವಿವರಣೆ. ಒಂದು ಕಲ್ಪದಂತೆಯೇ ಎಲ್ಲ ಕಲ್ಪಗಳೂ ಇರುವುದರಿಂದ ಒಂದು ಕಲ್ಪದ ವಿವರಣೆಯೇ ಎಲ್ಲ ಕಲ್ಪಗಳ ವಿವರಣೆ. ಹಿಂದಿನ-ಮುಂದಿನ ಎಲ್ಲ ಮನ್ವಂತರಗಳಲ್ಲೂ ಪ್ರಜೆಗಳು ಒಂದೇ ವಿಧವಾದ ಹೆಸರು, ರೂಪಗಳನ್ನು ಹೊಂದಿರುತ್ತಾರೆ.

ಹೀಗೆ ಭಗವಾನ್ ವೇದವ್ಯಾಸರಿಂದ ಉಪದೇಶವನ್ನು ಪಡೆದ ಅರ್ಜುನನಿಗೆ ಶಿವನ ಮೇಲೆ ಅಚಂಚಲವಾದ ಪರಮಭಕ್ತಿಯು ಉಂಟಾಯಿತು. ಸರ್ವಜ್ಞನೂ, ಸರ್ವಕರ್ತೃವೂ ವಿಷ್ಣುವಿನ ಅವತಾರಸ್ವರೂಪನೂ ಆದ ಮಹರ್ಷಿ ಕೃಷ್ಣದ್ವೈಪಾಯನರಿಗೆ ನಮಸ್ಕರಿಸಿದನು.

ವೇದವ್ಯಾಸರು ಪುನಃ ಅರ್ಜುನನಿಗೆ ಹೇಳಿದರು- "ನೀನು ಧನ್ಯ. ನೀನು ಅನುಗೃಹಿತ. ಮೂರು ಲೋಕಗಳಲ್ಲೂ ನಿನ್ನಂತಹ ಶಿವಭಕ್ತ ಮತ್ತೊಬ್ಬನಿಲ್ಲ. ಎಲ್ಲವನ್ನೂ ನೋಡುವ, ವಿಶ್ವವ್ಯಾಪಿಯಾದ, ಸರ್ವೋತ್ತಮನಾದ ರುದ್ರನನ್ನು ನೀನು ನೋಡಿರುವಿ. ಆ ಶಿವನ

ಜ್ಞಾನವನ್ನು ನಿನಗೆ ಹೃಷೀಕೇಶನೇ (ವೇದವ್ಯಾಸರೇ) ಪ್ರೀತಿಯಿಂದ ಉಪದೇಶಿಸಿದ್ದಾರೆ. ನಿನ್ನ ಸ್ಥಾನಕ್ಕೆ ಹಿಂತಿರುಗು. ಶೋಕಪಡಬೇಡ. ಪರಮಭಕ್ತಿಯಿಂದ ಶಿವನನ್ನು ಆರಾಧಿಸು. ಅವನಿಗೆ ಶರಣಾಗತನಾಗು.''

ಕೃಷ್ಣದ್ವೈಪಾಯನರು ಅರ್ಜುನನಿಗೆ ಹೀಗೆ ಹೇಳಿ ಶಿವನನ್ನು ಆರಾಧಿಸುವುದಕ್ಕಾಗಿ ವಾರಾಣಸಿಗೆ ಹೋದರು. ಅರ್ಜುನನೂ ಅವರ ಉಪದೇಶದಂತೆ ಶಿವನಿಗೆ ಶರಣಾಗತನಾಗಿ ಎಲ್ಲ ಕರ್ಮಗಳನ್ನೂ ಬಿಟ್ಟು ಶಿವನಿಷ್ಠನಾದನು. ಕೃಷ್ಣದ್ವೈಪಾಯನ ಮತ್ತು ಶ್ರೀಕೃಷ್ಣರಿಗೆ ಸಮನಾದ ಶಿವಾರ್ಚಕರು ಹಿಂದೆ ಇರಲಿಲ್ಲ, ಮುಂದೆ ಯಾರು ಬರುವುದಿಲ್ಲ. ಶಾಂತರೂ, ಧೀಮಂತರೂ ಆದ ಪರಾಶರಸುತ ಶ್ರೀವೇದವ್ಯಾಸರಿಗೆ ನಮಸ್ಕಾರ. ಕೃಷ್ಣದ್ವೈಪಾಯನರು ವಿಷ್ಣುವಿನ ಅವತಾರ. ಅವರನ್ನು ಬಿಟ್ಟು ಬೇರೆ ಯಾರೂ ಪರಮೇಶ್ವರನಾದ ರುದ್ರನನ್ನು ಯಥಾರ್ಥವಾಗಿ ತಿಳಿದಿಲ್ಲ. ಪರಾಶರ-ಸತ್ಯವತಿಯರ ಮಗನಾದ, ಮಹಾತ್ಮನೂ, ಯೋಗಿಯೂ, ವಿಷ್ಣುಸ್ವರೂಪನೂ ಆದ ಕೃಷ್ಣದ್ವೈಪಾಯನ ಮಹರ್ಷಿಗಳಿಗೆ ನಮಸ್ಕರಿಸಿರಿ.''

ಹೀಗೆ ಸೂತರಿಂದ ಹೇಳಲ್ಪಟ್ಟ ಮುನಿಗಳೆಲ್ಲರೂ ಮಹಾತ್ಮರಾದ ವೇದವ್ಯಾಸರಿಗೆ ಏಕಾಗ್ರತೆಯಿಂದ ನಮಸ್ಕರಿಸಿದರು.

* * *

## ಅಧ್ಯಾಯ-೩೧

''ಮಹಾಜ್ಞಾನಿಗಳಾದ ಕೃಷ್ಣದ್ವೈಪಾಯನರು ವಾರಾಣಸಿಯಲ್ಲಿ ಏನು ಮಾಡಿದರು'' ದಯವಿಟ್ಟು ತಿಳಿಸಿ ಎಂದು ಶೌನಕಾದಿ ಮಹರ್ಷಿಗಳು ಸೂತರನ್ನು ಕೇಳಿದರು.

**ಸೂತ ಉವಾಚ :**

ಮಹಾಮುನಿ ಕೃಷ್ಣದ್ವೈಪಾಯನರು ವಾರಾಣಸಿಯನ್ನು ತಲುಪಿ ಗಂಗೆಯಲ್ಲಿ ಸ್ನಾನಮಾಡಿ ವಿಶ್ವೇಶ್ವರನನ್ನು ಪೂಜಿಸಿದರು. ಅಲ್ಲಿಯ ನಿವಾಸಿಗಳಾದ ಮುನಿಗಳು ಮುನಿಪುಂಗವರಾದ ಕೃಷ್ಣದ್ವೈಪಾಯನರನ್ನು ನೋಡಿ ಅವರನ್ನು ಸತ್ಕರಿಸಿ ನಮಸ್ಕರಿಸಿದರು. ಪಾಪನಾಶಕವೂ ಪುಣ್ಯಕರವೂ ಆದ ಶಿವನ ಕಥೆಯನ್ನೂ, ಸನಾತನವಾದ ಮೋಕ್ಷಧರ್ಮವನ್ನೂ ಹೇಳಬೇಕೆಂದು ಅವರನ್ನು ಪ್ರಾರ್ಥಿಸಿದರು. ಸರ್ವಜ್ಞರಾದ ವೇದವ್ಯಾಸರು ವೇದೋಕ್ತವಾದ, ಧರ್ಮಸಾಧಕ ವಾದ ಮಹಾದೇವನ ಮಹಿಮೆಯನ್ನು ಹೇಳಿದರು. ಆಗ ವ್ಯಾಸಶಿಷ್ಯರಾದ ಜೈಮಿನಿ ಮಹರ್ಷಿಗಳು ವ್ಯಾಸರನ್ನು ಹೀಗೆ ಪ್ರಾರ್ಥಿಸಿದರು :

"ಪೂಜ್ಯರೇ, ನೀವು ತಿಳಿಯದ ಯಾವ ವಿಷಯವೂ ಇಲ್ಲ. ದಯವಿಟ್ಟು ನನ್ನ ಸಂಶಯವೊಂದನ್ನು ಪರಿಹರಿಸಿರಿ. ಕೆಲವರು ಧ್ಯಾನವನ್ನು ಪ್ರಶಂಸಿಸುತ್ತಾರೆ. ಮತ್ತೆ ಕೆಲವರು ಧರ್ಮವನ್ನು, ಮತ್ತಿತರರು ಸಾಂಖ್ಯ-ಯೋಗವನ್ನೂ ಇನ್ನೂ ಬೇರೆಯವರು ತಪಸ್ಸನ್ನೂ ಪ್ರಶಂಸಿಸುತ್ತಾರೆ. ಮತ್ತಷ್ಟು ಮಹರ್ಷಿಗಳು ಬ್ರಹ್ಮಚರ್ಯವನ್ನು ಪ್ರಶಂಸಿಸಿದರೆ, ಅಹಿಂಸಾ, ಸತ್ಯಗಳನ್ನು ಇತರರು, ಸಂನ್ಯಾಸವನ್ನು ಮತ್ತಿತರರೂ ಪ್ರಶಂಸಿಸುತ್ತಾರೆ. ಕೆಲವರು ದಯೆಯನ್ನೂ, ದಾನವನ್ನೂ, ಅಧ್ಯಯನವನ್ನೂ ಪ್ರಶಂಸಿಸುತ್ತಾರೆ. ತೀರ್ಥಯಾತ್ರೆಯನ್ನೂ, ಇಂದ್ರಿಯನಿಗ್ರಹವನ್ನೂ ಪ್ರಶಂಸಿಸುವವರೂ ಇದ್ದಾರೆ. ಇವುಗಳಲ್ಲಿ ಯಾವುದು ಶ್ರೇಯಸ್ಕರ? ದಯವಿಟ್ಟು ಹೇಳಿರಿ. ಇದಲ್ಲದೆ ರಹಸ್ಯವಾದ ಬೇರೆ ವಿಷಯಗಳಿದ್ದರೆ ಅವುಗಳನ್ನೂ ದಯವಿಟ್ಟು ತಿಳಿಸಿರಿ."

ಜೈಮಿನಿ ಮಹರ್ಷಿಗಳ ಮಾತನ್ನು ಕೇಳಿ ಕೃಷ್ಣದ್ವೈಪಾಯನರು ಶಿವನನ್ನು ನಮಸ್ಕರಿಸಿ ಹೇಳಿದರು :

"ಭಾಗ್ಯಶಾಲಿಯಾದ ಮುನಿಯೇ! ಒಳ್ಳೆಯ ವಿಚಾರವನ್ನು ಕೇಳಿರುವಿರಿ. ರಹಸ್ಯತಮವಾದ ವಿಷಯವನ್ನು ಹೇಳುವೆ. ಬೇರೆ ಮಹರ್ಷಿಗಳೂ ಕೇಳಲಿ. ಹಿಂದೆ ಈಶ್ವರನು ಪಾರ್ವತಿಗೆ ಉಪದೇಶಿಸಿದ ವಿಷಯವನ್ನೇ ಈಗ ನಾನು ನಿಮಗೆ ಹೇಳುತ್ತೇನೆ. ಈ ವಿಷಯ ಬಹಳ ಗೂಢವಾದುದು. ಅಜ್ಞಾನಿಗಳು ಇದನ್ನು ದ್ವೇಷಿಸುತ್ತಾರೆ. ಸೂಕ್ಷ್ಮಮತಿಗಳು ಸೇವಿಸುತ್ತಾರೆ. ನಾಸ್ತಿಕರಿಗೆ, ಶಿವಭಕ್ತರಲ್ಲದವರಿಗೆ, ವೇದವನ್ನು ತಿಳಿಯದವರಿಗೆ ಶ್ರೇಷ್ಠತಮವಾದ ಈ ವಿಷಯಗಳನ್ನು ಉಪದೇಶಿಸಬಾರದು."

ಒಮ್ಮೆ ಮೇರುಪರ್ವತದ ಶಿಖರದಲ್ಲಿ ಮಹಾದೇವನ ಜೊತೆ ಕುಳಿತಿದ್ದ ಪಾರ್ವತಿಯು ಆ ದೇವನನ್ನು ಕೇಳಿದಳು :

ದೇವೀ ಉವಾಚ :

ದೇವದೇವ! ಭಕ್ತರ ದುಃಖವನ್ನು ಪರಿಹರಿಸುವ ಮಹಾದೇವ! ಜನರು ನಿನ್ನನ್ನು ಬೇಗ ಸಾಕ್ಷಾತ್ಕರಿಸಿಕೊಳ್ಳುವ ದಾರಿ ಯಾವುದು? ಶಂಕರ! ಸಾಂಖ್ಯ-ಯೋಗ-ತಪಸ್ಸು, ಧ್ಯಾನ -ಕರ್ಮಯೋಗ ಮತ್ತು ಬೇರೆ ಇಂತಹ ಅನುಷ್ಠಾನಗಳು ಆಯಾಸವುಂಟುಮಾಡುತ್ತವೆ. ಭ್ರಾಂತಚಿತ್ತರೂ, ಜ್ಞಾನಿಗಳೂ, ಯೋಗಿಗಳೂ ಎಲ್ಲರೂ ಸೂಕ್ಷ್ಮನಾದ ಭಗವಂತನನ್ನು ನೋಡಲು ಅನುಕೂಲಕರವಾದ, ಬ್ರಹ್ಮಾದಿದೇವತೆಗಳೂ ಅನುಸರಿಸುವ ಮಾರ್ಗವನ್ನು ಭಕ್ತರ ಹಿತಕ್ಕಾಗಿ ದಯವಿಟ್ಟು ಹೇಳು' ಎಂದು.

ಈಶ್ವರ ಉವಾಚ :

'ನೀನು ಯಾವ ಜ್ಞಾನವನ್ನು ಅಪೇಕ್ಷಿಸಿದ್ದಿಯೋ, ಅದನ್ನು ಅಜ್ಞಾನಿಗಳು ಬಹಿಷ್ಕರಿಸಿದ್ದಾರೆ. ಇದು ಗೂಢವಾದದ್ದು. ಎಲ್ಲರಿಗೂ ಹೇಳಲ್ಪಡತಕ್ಕದ್ದಲ್ಲ. ಆದರೂ ಮಹರ್ಷಿಗಳು

ಹೇಳಿರುವ ಈ ವಿಷಯವನ್ನು ನಿನಗೆ ಹೇಳುತ್ತೇನೆ ಕೇಳು. ವಾರಾಣಸಿಯು ಅತ್ಯಂತ ಗೋಪ್ಯವಾದ ನನ್ನ ಕ್ಷೇತ್ರ. ಇದು ಸಂಸಾರಿಗಳು ಸಂಸಾರಸಾಗರವನ್ನು ದಾಟುವ ಕ್ಷೇತ್ರ. ಇಲ್ಲಿ ಮಹಾತ್ಮರು ನನಗೆ ಪ್ರಿಯವಾದ ವ್ರತಗಳನ್ನು ಮಾಡುತ್ತಾ ವಾಸ ಮಾಡುತ್ತಿದ್ದಾರೆ. ಈ ಕ್ಷೇತ್ರ ಕ್ಷೇತ್ರಗಳಲ್ಲಿ ಅತ್ಯುತ್ತಮ, ಸ್ಥಾನಗಳಲ್ಲಿ ಅತ್ಯುತ್ತಮ.

ಈ ವಾರಾಣಸಿಯಲ್ಲಿ ಅವಿಮುಕ್ತ ಎಂಬ ತಪೋವನವಿದೆ. ಇದು ತೀರ್ಥಗಳಲ್ಲಿ ಅತ್ಯುತ್ತಮ ತೀರ್ಥ. ಸ್ಥಾನಗಳಲ್ಲಿ ಅತ್ಯುತ್ತಮಸ್ಥಾನ. ಜ್ಞಾನಸಾಧನಗಳಲ್ಲಿ ಅತ್ಯುತ್ತಮ ಸಾಧನ. ಭೂಮಿಯಲ್ಲಿ ಅಥವಾ ಅಂತರಿಕ್ಷದಲ್ಲಿರುವ ಪವಿತ್ರಕ್ಷೇತ್ರಗಳು ಈ ಕ್ಷೇತ್ರಕ್ಕೆ ಸಮವಲ್ಲ. ಇದು ಭೂಲೋಕಕ್ಕೂ ಸೇರಿಲ್ಲ. ಅಂತರಿಕ್ಷಕ್ಕೂ ಸೇರಿಲ್ಲ. ಅಮುಕ್ತರು ಈ ಕ್ಷೇತ್ರವನ್ನು ನೋಡಲು ಸಾಧ್ಯವಿಲ್ಲ. ಮುಕ್ತರು ಮಾತ್ರ ಮನಸ್ಸಿನಿಂದ ನೋಡಬಹುದು. ಈ ಅವಿಮುಕ್ತ ಕ್ಷೇತ್ರ ಸ್ಮಶಾನ ಎಂದು ಪ್ರಸಿದ್ಧವಾಗಿದೆ. ನಾನು ಕಾಲರೂಪಿಯಾಗಿ ಈ ಕ್ಷೇತ್ರದಲ್ಲಿದ್ದು ಜಗತ್ತನ್ನು ಸಂಹರಿಸುತ್ತೇನೆ. ಇದು ಅತ್ಯಂತ ಗೋಪ್ಯವಾದ ಸ್ಥಾನ. ನನಗೆ ಬಹಳ ಪ್ರಿಯವಾದುದು. ಇಲ್ಲಿಗೆ ಹೋಗುವ ನನ್ನ ಭಕ್ತರು ನನ್ನನ್ನೇ ಪ್ರವೇಶಿಸುತ್ತಾರೆ. ಈ ಕ್ಷೇತ್ರದಲ್ಲಿ ಆಚರಿಸಲ್ಪಡುವ ದಾನ, ಜಪ, ಹೋಮ, ಯಜ್ಞ, ತಪಸ್ಸು, ಧ್ಯಾನ, ಅಧ್ಯಯನ ಮತ್ತು ಜ್ಞಾನ ಎಲ್ಲವೂ ಅಕ್ಷಯವಾಗುವುದು. ಜನ್ಮಾಂತರಗಳಲ್ಲಿ ಮಾಡಿದ ಪಾಪಗಳೆಲ್ಲವೂ ಈ ಕ್ಷೇತ್ರಕ್ಕೆ ಬಂದರೆ ನಾಶವಾಗುತ್ತವೆ. ಈ ಕ್ಷೇತ್ರದಲ್ಲಿ ನಿಧನರಾಗುವ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ವರ್ಣಸಾಂಕರ್ಯಕ್ಕೆ ಒಳಗಾದವರು, ಸ್ತ್ರೀಯರು, ಮ್ಲೇಂಛರು, ಬೇರೆ ಪಾಪಿಗಳೂ, ಕೀಟಗಳು, ಇರುವೆಗಳು, ಬೇರೆ ಬೇರೆ ಮೃಗಗಳು ಪಕ್ಷಿಗಳು ನನ್ನ ಪುರವಾದ ಕೈಲಾಸದಲ್ಲಿ ಜನ್ಮ ಪಡೆಯುವರು. ತಲೆಯಲ್ಲಿ ಅರ್ಧಚಂದ್ರನನ್ನು ಧರಿಸಿ, ವೃಷಭಗಳನ್ನು ಏರಿ ಸಂಚರಿಸುವ ಭಾಗ್ಯವು ಅವರಿಗೆ ಲಭಿಸುತ್ತದೆ. ಅವಿಮುಕ್ತಕ್ಷೇತ್ರದಲ್ಲಿ ಮೃತರಾದ ಯಾರೂ ನರಕಕ್ಕೆ ಹೋಗುವುದಿಲ್ಲ. ಅಂತಹವರೆಲ್ಲರೂ ಈಶ್ವರಾನುಗ್ರಹದಿಂದ ಪರಮಗತಿಯನ್ನು ಹೊಂದುತ್ತಾರೆ. ಸಂಸಾರ ಬಹಳ ಭಯಾನಕ. ಆದರಿಂದ ಬಿಡುಗಡೆ ಬಹಳ ಕಷ್ಟ. ಇದನ್ನು ತಿಳಿದು ವಾರಾಣಸಿಯಲ್ಲಿ ವಾಸಿಸಬೇಕು. ಹುಟ್ಟಿದವರಿಗೆಲ್ಲ ತಪಸ್ಸು ಸಾಧ್ಯವಾಗುವುದಿಲ್ಲ. ಎಲ್ಲೋ ಸತ್ತವರಿಗೆ ಸಂಸಾರ ಮೋಚಕವಾದ ಗತಿ ಲಭಿಸುವುದಿಲ್ಲ. ನನ್ನ ಅನುಗ್ರಹದಿಂದ ಮಾತ್ರ ಪಾಪಗಳು ಸುಟ್ಟುಹೋಗುತ್ತವೆ. ನನ್ನ ಮಾಯೆಯಿಂದ ವಿಮೋಹಿತರಾದ ಅಜ್ಞಾನಿಗಳು ಇದನ್ನು ತಿಳಿಯಲಾರರು. ತಮೋಗುಣವನ್ನು ತುಂಬಿಕೊಂಡಿರುವ ಮೂಢರು ಅವಿಮುಕ್ತಕ್ಷೇತ್ರದ ಬಗ್ಗೆ ಎಂದೂ ತಿಳಿಯುವುದಿಲ್ಲ. ಇದನ್ನು ಕಾಣುವುದಂತೂ ಇನ್ನು ದೂರದ ವಿಷಯ. ಇಂತಹವರು ಮಲ-ಮೂತ್ರ-ರೇತಸ್ಸುಗಳ ಮಧ್ಯೆ ಮತ್ತೆ ಮತ್ತೆ ಪ್ರವೇಶಿಸುತ್ತಾರೆ. ನೂರಾರು ವಿಘ್ನಗಳು ಎದುರಾದರೂ, ಯಾರು ಅವುಗಳಿಂದ ಧೃತಿಗೆಡದೆ ಅವಿಮುಕ್ತಕ್ಷೇತ್ರವನ್ನು ಪ್ರವೇಶಿಸುತ್ತಾರೋ ಅವರು ಶೋಕರಹಿತವಾದ ಪರಮಗತಿಯನ್ನು ಹೊಂದುತ್ತಾರೆ. ಜನ್ಮ, ಮರಣ, ಮುಪ್ಪುಗಳಿಲ್ಲದ ಶಿವಾಲಯಕ್ಕೆ ಹೋಗುತ್ತಾರೆ. ಅವಿಮುಕ್ತ ಕ್ಷೇತ್ರದಲ್ಲಿ ಸಂಪಾದಿಸಲು ಸಾಧ್ಯವಾಗುವ ಉತ್ಕೃಷ್ಟಗತಿಯನ್ನು ಬೇರೆ ಕಡೆ ದಾನ, ತಪಸ್ಸು, ವಿದ್ಯೆ

ಅಥವಾ ಯಜ್ಞಗಳಿಂದ ಸಂಪಾದಿಸಲು ಸಾಧ್ಯವಿಲ್ಲ. ಬೇರೆ ಬೇರೆ ವರ್ಣಗಳಿಗೆ ಸೇರಿದ ಮತ್ತು ವರ್ಣಬಾಹಿರರಾದ, ಜನರಿಗೆ, ಚಂಡಾಲ ಮೊದಲಾದವರಿಗೆ, ಹೆಚ್ಚೇನು, ಸಕಲ ಪಾಪಿಗಳಿಗೆ ಅವಿಮುಕ್ತಸ್ಥಾನವು ಸದ್ಗತಿಯನ್ನುಂಟುಮಾಡುತ್ತದೆ. ಈ ಕ್ಷೇತ್ರ ಶ್ರೇಷ್ಠವಾದ ತತ್ವಜ್ಞಾನಸಾಧನ, ಪರಮಮಂಗಳಕರ. ಈ ಕ್ಷೇತ್ರದಲ್ಲಿ ಮರಣಪರ್ಯಂತ ಬ್ರಹ್ಮಚರ್ಯದೀಕ್ಷೆಯಿಂದ ವಾಸ ಮಾಡುವವರಿಗೆ ತತ್ತ್ವಜ್ಞಾನವನ್ನೂ, ಕೊನೆಗೆ ಮುಕ್ತಿಯನ್ನೂ ಕೊಡುತ್ತೇನೆ.

ಪ್ರಯಾಗ, ನೈಮಿಷ, ಶ್ರೀಶೈಲ, ಹಿಮಾಲಯ, ಕೇದಾರ, ಭದ್ರಕರ್ಣ, ಗಯಾ, ಪುಷ್ಕರ, ಕುರುಕ್ಷೇತ್ರ, ರುದ್ರಕೋಟಿ, ನರ್ಮದಾ, ಹಾಟಕೇಶ್ವರ, ಶಾಲಗ್ರಮ, ಪುಷ್ಪಾಗ್ರ, ವಂಶ, ಕೋಕಾಮುಖ, ಪ್ರಭಾಸ, ವಿಜಯೇಶಾನ, ಗೋಕರ್ಣ, ಶಂಕುಕರ್ಣ -ಇವುಗಳು ತ್ರಿಲೋಕ ಪ್ರಸಿದ್ಧವಾದ ಪುಣ್ಯಕ್ಷೇತ್ರಗಳು. ಆದರೆ ವಾರಾಣಸಿ ಇವೆಲ್ಲಕ್ಕಿಂತ ಹೆಚ್ಚು ಮಹತ್ವವನ್ನು ಹೊಂದಿದೆ. ಇಲ್ಲಿ ಮೃತರಾದವರು ಮುಕ್ತಿಯನ್ನು ಪಡೆಯುತ್ತಾರೆ. ಇಲ್ಲಿ ಗಂಗಾಸ್ನಾನವು ನೂರಾರು ಜನ್ಮಗಳಲ್ಲಿ ಮಾಡಿದ ಪಾಪಗಳನ್ನು ಪರಿಹರಿಸುತ್ತದೆ. ಬೇರೆ ಸ್ಥಳಗಳಲ್ಲಿಯೂ ಗಂಗಾಸ್ನಾನ, ಶ್ರಾದ್ಧ, ದಾನ, ಜಪ -ಇವುಗಳನ್ನು ಮಾಡಬಹುದು. ಆದರೆ ವಾರಾಣಾಸಿಯಲ್ಲಿ ಇವುಗಳ ಆಚರಣೆಯ ಅವಕಾಶ ದುರ್ಲಭ. ವಾರಾಣಸಿಯಲ್ಲಿ ನೆಲೆಸಿ ಯಜ್ಞ, ದಾನ ಮೊದಲಾದ ಸತ್ಕರ್ಮಗಳನ್ನು ಮಾಡುವವನಿಂದ ಅವನು ಇದಕ್ಕೆ ಮೊದಲು ಎಂತಹ ಪಾಪಿಯಾಗಿದ್ದರೂ, ಮೂರುಕುಲಗಳು ಪವಿತ್ರವಾಗುತ್ತವೆ. ವಾರಾಣಾಸಿಯಲ್ಲಿ ಮಹಾದೇವನ ಸ್ತೋತ್ರ ಅರ್ಚನೆಗಳನ್ನು ಮಾಡುವವರು ಎಲ್ಲ ಪಾಪಗಳಿಂದ ಬಿಡುಗಡೆ ಯನ್ನು ಪಡೆದು ಶಿವಗಣದ ಅಧಿಪತಿಗಳಾಗುವರು. ಬೇರೆ ಸ್ಥಳಗಳಲ್ಲಿ ಸಾವಿರ ಜನ್ಮಗಳಲ್ಲಿ ಸಾಧಿಸಲ್ಪಡುವ ಯೋಗ, ಜ್ಞಾನ, ಸಂನ್ಯಾಸ ಮೊದಲಾದವುಗಳಿಂದ ಪಡೆಯುವ ಪರಮ-ಪದವನ್ನು ವಾರಾಣಾಸಿಯಲ್ಲಿದ್ದು ಒಂದೇ ಜನ್ಮದ ಸಾಧನೆಯಿಂದ ಪಡೆಯಬಹುದು.

ಅವಿಮುಕ್ತ ಕ್ಷೇತ್ರಕ್ಕೆ ಹೋದವನು ಬೇರೆ ಕ್ಷೇತ್ರಗಳಿಗೆ ಹೋಗುವ ಅವಶ್ಯಕತೆ ಇಲ್ಲ. ನಾನು ಆ ಕ್ಷೇತ್ರವನ್ನು ಎಂದೂ ಬಿಟ್ಟು ಹೋಗುವುದಿಲ್ಲ. ಆದ್ದರಿಂದ ಆ ಕ್ಷೇತ್ರಕ್ಕೆ ಅವಿಮುಕ್ತ ಎಂದು ಹೆಸರು. ಇದು ಗೋಪ್ಯಸ್ಥಳಗಳಲ್ಲಿ ಹೆಚ್ಚು ಗೋಪ್ಯವಾದ ಸ್ಥಳ. ಈ ಕ್ಷೇತ್ರದ ಬಗ್ಗೆ ತಿಳಿದವನು ಮುಕ್ತಿಯನ್ನು ಪಡೆಯುತ್ತಾನೆ. ಪರಮಾನಂದವನ್ನು ಬಯಸುವ, ಅದಕ್ಕಾಗಿ ಜ್ಞಾನ, ಧ್ಯಾನ ಗಳನ್ನು ಸಾಧಿಸುವ ಜನರು ಈ ಕ್ಷೇತ್ರದಲ್ಲಿ ಅದನ್ನು ಸಾಧಿಸಿದರೆ ತಮ್ಮ ಗುರಿಯನ್ನು ಶೀಘ್ರವಾಗಿ ತಲುಪುತ್ತಾರೆ.

ದೇವತೆಗಳು ಬೇರೆ ಬೇರೆ ಅವಿಮುಕ್ತ ಸ್ಥಾನಗಳ ಬಗ್ಗೆ ಹೇಳುತ್ತಾರೆ. ಅಂತಹ ಅನೇಕ ಅವಿಮುಕ್ತ ಸ್ಥಾನಗಳಲ್ಲಿ ವಾರಾಣಾಸಿಯು ಅತಿಶ್ರೇಷ್ಠ. ಇಲ್ಲಿ ಮರಣಕಾಲದಲ್ಲಿ ಮಹಾದೇವನೇ ತಾರಕಮಂತ್ರವನ್ನು ಉಪದೇಶಿಸುತ್ತಾನೆ. ಅವಿಮುಕ್ತವನ್ನೂ ಉಪದೇಶಿಸು ತ್ತಾನೆ. ಪರಾತ್ಪರತತ್ವಕ್ಕೆ ಅವಿಮುಕ್ತ ಎಂದು ಹೆಸರು. ವಾರಾಣಾಸಿಯಲ್ಲಿ ಒಂದು ಜನ್ಮದ ಸಾಧನೆಯಿಂದಲೇ ಪರಾತ್ಪರತತ್ತ್ವದ ಸಾಕ್ಷಾತ್ಕಾರವನ್ನು ಸಾಧಿಸಬಹುದು. ಈ ತತ್ತ್ವವು

ಭ್ರೂಮಧ್ಯದಲ್ಲಿ, ನಾಭಿಮಧ್ಯದಲ್ಲಿ, ಹೃದಯದಲ್ಲಿ, ತಲೆಯಲ್ಲಿ ಮತ್ತು ಸೂರ್ಯ ಮಂಡಲದಲ್ಲಿ ಇರುವಂತೆ ವಾರಾಣಾಸಿಯಲ್ಲೂ ಇದೆ. ಆದ್ದರಿಂದ ವಾರಾಣಾಸಿಗೆ ಸಮವಾದ ಕ್ಷೇತ್ರ ಹಿಂದೆ ಇರಲಿಲ್ಲ. ಮುಂದೆ ಆಗುವುದಿಲ್ಲ. ಈ ಕ್ಷೇತ್ರದಲ್ಲಿ ದೇವತೆಗಳು, ಗಂಧರ್ವರು, ಯಕ್ಷರು, ನಾಗರು, ರಾಕ್ಷಸರು, ದೇವದೇವನಾದ ಚತುರ್ಮುಖಬ್ರಹ್ಮನೂ ನನ್ನ ಉಪಾಸನೆಯನ್ನು ಮಾಡುತ್ತಾರೆ. ವಾರಾಣಾಸಿಗೆ ಬರುವ ಮಹಾಪಾತಕಿಗಳೂ ಕೂಡ ಸದ್ಗತಿಯನ್ನು ಪಡೆಯುತ್ತಾರೆ. ಆದ್ದರಿಂದ ಮುಕ್ತಿಯನ್ನು ಅಪೇಕ್ಷಿಸುವವನು ಮರಣ ಪರ್ಯಂತ ವಾರಾಣಾಸಿಯಲ್ಲಿ ವಾಸಿಸಬೇಕು. ಇಲ್ಲಿ ಜ್ಞಾನವನ್ನು ಪಡೆದರೆ ಮುಕ್ತಿಯು ಲಭಿಸುತ್ತದೆ. ಆದರೆ ಪಾಪಿಗಳಿಗೆ ವಿಘ್ನಗಳು ಸಂಭವಿಸುತ್ತವೆ. ಆದ್ದರಿಂದ ಕಾಯಕ, ವಾಚಕ, ಮಾನಸಿಕ ಪಾಪಗಳನ್ನು ಮಾಡಬಾರದು. ಅವಿಮುಕ್ತ ಸ್ಥಾನದಲ್ಲಿ ಗಳಿಸುವ ಜ್ಞಾನದಷ್ಟು ಶ್ರೇಷ್ಠವಾದ ಜ್ಞಾನ ಬೇರೆ ಯಾವ ಕ್ಷೇತ್ರದಲ್ಲೂ ಗಳಿಸಲಾಗುವುದಿಲ್ಲ.

ಶ್ರವಣ ಮಾಡುತ್ತಿದ್ದ ಮಹಾತ್ಮರಾದ ದೇವತೆಗಳ ಮತ್ತು ಋಷಿಗಳ ಸಮ್ಮುಖದಲ್ಲಿ ಅವಿಮುಕ್ತ ಕ್ಷೇತ್ರದ ಮಹಿಮೆಯು ಶಿವನಿಂದ ಪಾರ್ವತಿಗೆ ಹೇಳಲ್ಪಟ್ಟಿದೆ. ದೇವತೆಗಳಲ್ಲಿ ಪುರುಷೋತ್ತಮನಾದ ನಾರಾಯಣನಂತೆ, ಈಶ್ವರರಲ್ಲಿ ಶಿವನಂತೆ ಕ್ಷೇತ್ರಗಳಲ್ಲಿ ಅವಿಮುಕ್ತವು ಶ್ರೇಷ್ಠವಾಗಿದೆ. ಹಿಂದಿನ ಜನ್ಮಗಳಲ್ಲಿ ರುದ್ರದೇವನ ಉಪಾಸನೆಯನ್ನು ಮಾಡಿದವರಿಗೆ ಮಾತ್ರ ಅವಿಮುಕ್ತ ಕ್ಷೇತ್ರಕ್ಕೆ ಹೋಗಲು ಸಾಧ್ಯ. ಕಲಿದೋಷದಿಂದ ಯಾರ ಬುದ್ಧಿಯು ಕೆಟ್ಟಿರುತ್ತದೋ ಅಂತಹವರು ಈ ಕ್ಷೇತ್ರಕ್ಕೆ ಹೋಗಲಾರರು. ಯಾವಾಗಲೂ ಈ ಕ್ಷೇತ್ರವನ್ನು ಸ್ಮರಿಸುವವರ ಸಕಲಪಾಪಗಳೂ ನಾಶವಾಗುತ್ತವೆ. ಈ ಕ್ಷೇತ್ರದಲ್ಲಿ ಸಂಭವಿಸಿದ ಪಾಪಗಳನ್ನೂ ಶಿವನು ನಾಶ ಮಾಡುತ್ತಾನೆ. ಮೋಕ್ಷಾಪೇಕ್ಷೆಯಿಂದ ಸೇವೆ ಮಾಡಲು ಇಲ್ಲಿಗೆ ಬಂದು ಇಲ್ಲಿಯೇ ಮೃತರಾದವರಿಗೆ ಪುನರ್ಜನ್ಮ ಇಲ್ಲ. ಆದ್ದರಿಂದ ಎಲ್ಲ ವಿಧವಾದ ಪ್ರಯತ್ನಗಳಿಂದ ವಾರಾಣಾಸಿಯಲ್ಲಿ ವಾಸಿಸಬೇಕು. ತಂದೆ-ತಾಯಿಗಳ, ಗುರುಗಳ, ಜನರ ಮಾತನ್ನು ಕೇಳಿ ಈ ಉದ್ದೇಶವನ್ನು, ಪ್ರಯತ್ನವನ್ನು ಬಿಡಬಾರದು.''

**ಸೂತ ಉವಾಚ :**

ವೇದವನ್ನು ತಿಳಿದವರಲ್ಲಿ ಶ್ರೇಷ್ಠರಾದ ವೇದವ್ಯಾಸರು ಈ ವಿಚಾರವನ್ನು ಹೇಳಿ ಶಿಷ್ಯರೊಡನೆ ವಾರಾಣಾಸಿಯಲ್ಲಿ ಸಂಚರಿಸಿದರು.

* * *

## ಓಂಕಾರಲಿಂಗದ ಮಹಿಮೆ

**ಅಧ್ಯಾಯ-೩೨**

**ಸೂತ ಉವಾಚ :**

ಜ್ಞಾನಿಗಳಾದ ದ್ವೈಪಾಯನಮುನಿಗಳು ಶಿಷ್ಯರ ಜೊತೆ ಮುಕ್ತಿದಾಯಕವಾದ, ಓಂಕಾರ ಪ್ರತಿಪಾದ್ಯವಾದ ಮಹಲಿಂಗ ಸನ್ನಿಧಾನಕ್ಕೆ ಹೋದರು. ಅಲ್ಲಿ ಮಹಾದೇವನನ್ನು ಪೂಜಿಸಿ ಸಂಸ್ಕೃತಮನಸ್ಸಿನ ಮುನಿಗಳಿಗೆ ಆ ದೇವನ ಮಹಿಮೆಯನ್ನು ಹೇಳಿದರು.

''ಪವಿತ್ರವೂ, ಶೋಭನವೂ, ಪ್ರಸಿದ್ಧವೂ ಆದ ಈ ಲಿಂಗವು ಓಂಕಾರಲಿಂಗ. ಇದರ ಸ್ಮರಣೆಯಿಂದಲೇ ಸಕಲಪಾಪಗಳ ಪರಿಹಾರವಾಗುತ್ತದೆ. ಪರಮಜ್ಞಾನದಾಯಕವೂ, ಪಂಚಾಯತನಸ್ವರೂಪವೂ, ಉತ್ತಮವೂ, ಮೋಕ್ಷದಾಯಕವೂ ಆದ ಈ ಲಿಂಗವನ್ನು ಮುನಿಗಳು ಯಾವಾಗಲೂ ಪೂಜಿಸುತ್ತಾರೆ. ಇಲ್ಲಿ ಪಂಚಾಯತನಸ್ವರೂಪನಾದ, ಮೋಕ್ಷ ಪ್ರದನಾದ ಭಗವಾನ್ ರುದ್ರನು ವಿಹರಿಸುತ್ತಿದ್ದಾನೆ. ಶಾಂತ್ಯತೀತ, ಶಾಂತಿ, ವಿದ್ಯಾ, ಪ್ರತಿಷ್ಠಾ ನಿವೃತ್ತಿ ಎಂಬ ಸ್ವರೂಪಗಳನ್ನು ಹೊಂದಿರುವ ಓಂಕಾರಲಿಂಗವು ಪಂಚಾರ್ಥ ಎಂದು ಪ್ರಸಿದ್ಧವಾಗಿದೆ. ಈ ಲಿಂಗದ ಉಪಾಸನೆಯಿಂದ ಪಶುಪತಿಯ ಜ್ಞಾನವು ಲಭಿಸುತ್ತದೆ. ಈ ಓಂಕಾರಲಿಂಗವು ಬ್ರಹ್ಮ ಮೊದಲಾದ ಐದು ದೇವತೆಗಳಿಗೆ ಆಶ್ರಯವಾದುದರಿಂದ ಪಂಚಾಯತನಲಿಂಗ ಎಂದು ಪ್ರಸಿದ್ಧವಾಗಿದೆ. ಈ ಪಂಚಾಯತನಲಿಂಗವನ್ನು ಸ್ಮರಿಸುವವನು ಮರಣಾನಂತರ ಆನಂದರೂಪನಾದ ಪರಂಜ್ಯೋತಿಯನ್ನು ಹೊಂದುವನು. ಹಿಂದೆ ದೇವರ್ಷಿಗಳೂ, ಬ್ರಹ್ಮರ್ಷಿಗಳೂ ಈ ಲಿಂಗದ ಉಪಾಸನೆಯನ್ನು ಮಾಡಿ ಪರಮಪದವನ್ನು ಹೊಂದಿದರು.

ಮತ್ತ್ಯೋದರೀ ನದಿಯ ಪವಿತ್ರವೂ, ಗೋಪ್ಯವೂ ಆದ ತೀರದಲ್ಲಿ ಓಂಕಾರೇಶ್ವರ ಕ್ಷೇತ್ರವಿದೆ. ಕೃತ್ತಿವಾಸೇಶ್ವರ, ಮಧ್ಯಮೇಶ್ವರ, ವಿಶ್ವೇಶ್ವರ, ಓಂಕಾರ, ಕಪರ್ದೀಶ್ವರ ಎಂಬ ಐದು ಲಿಂಗಗಳು ಕಾಶಿಯಲ್ಲಿ ಅತಿಗೋಪ್ಯವಾಗಿವೆ. ಶಂಭುವಿನ ಅನುಗ್ರಹವಿಲ್ಲದೆ ಯಾರೂ ಇವುಗಳನ್ನು ತಿಳಿಯಲಾರರು.

ಹೀಗೆ ಉಪದೇಶಿಸಿದ ಕೃಷ್ಣದ್ವೈಪಾಯನರು ಶಿವನ ಕೃತ್ತಿವಾಸೇಶ್ವರ ಲಿಂಗವನ್ನು ನೋಡಲು ಹೋದರು. ಅಲ್ಲಿ ಕೃತ್ತಿವಾಸೇಶ್ವರ ಲಿಂಗವನ್ನು ಪೂಜಿಸಿ ಕೃತ್ತಿವಾಸನ ಮಹಿಮೆಯನ್ನು ಹೇಳಿದರು. ''ಈ ಸ್ಥಳದಲ್ಲಿ ಹಿಂದೆ ಬ್ರಾಹ್ಮಣರು ಶಿವನ ಉಪಾಸನೆಯನ್ನು ಮಾಡುತ್ತಿದ್ದರು. ಒಬ್ಬ ದೈತ್ಯನು ಆನೆಯ ರೂಪದಿಂದ ಇವರನ್ನು ಕೊಲ್ಲಲು ಬಂದನು. ಭಕ್ತವತ್ಸಲನಾದ ಶಿವನು ಈ ಭಕ್ತರ ರಕ್ಷಣೆಗಾಗಿ ಲಿಂಗದಿಂದ ಮುಕ್ಕಣ್ಣನಾಗಿ ಆವಿರ್ಭವಿಸಿದನು. ಗಜಾಸುರನನ್ನು ಶೂಲದಿಂದ ಕೊಂದು ಗಜಚರ್ಮವನ್ನು ಧರಿಸಿದನು. ಆದ್ದರಿಂದ ಇವನಿಗೆ ಕೃತ್ತಿವಾಸೇಶ್ವರ ಎಂದು ಹೆಸರು. ಈ ಕ್ಷೇತ್ರದಲ್ಲಿ ಸನ್ನಿಹಿತವಾಗಿರುವ ಶಿವಲಿಂಗದ ಉಪಾಸನೆಯಿಂದ ಮುನಿಗಳು ಅದೇ ಶರೀರದಿಂದ ಪರಮಪದವನ್ನು ಹೊಂದಿದರು. ಕಲಿಯುಗವು ಘೋರವೂ, ಅಧರ್ಮಮಯವೂ ಆಗಿರುವುದೆಂದು ತಿಳಿದು ಶಿವಭಕ್ತರು

ಕೃತ್ತಿವಾಸನ ಸನ್ನಿಧಾನವನ್ನು ಬಿಡದೆ ಅಲ್ಲೇ ಇದ್ದಾರೆ. ಬೇರೆ ದೇವತೆಗಳ ಉಪಾಸನೆಯಿಂದ ಸಾವಿರಾರು ಜನ್ಮಗಳಾದರೂ ಮುಕ್ತಿ ಲಭಿಸುತ್ತದೋ! ಇಲ್ಲವೋ! ಒಂದೇ ಜನ್ಮದಲ್ಲಿ ಕೃತ್ತಿವಾಸಸನ ಉಪಾಸನೆಯಿಂದ ಮುಕ್ತಿಯು ಲಭಿಸುತ್ತದೆ. ಈ ಸ್ಥಾನ ಸಮಸ್ತ ಸಿದ್ಧರ ನಿವಾಸವೆಂದು ತಿಳಿದವರು ಹೇಳುತ್ತಾರೆ. ದೇವಾಧಿದೇವನಾದ ಶಿವನಿಂದ ಈ ಸ್ಥಾನವು ರಕ್ಷಿತವಾಗಿದೆ. ಇಲ್ಲಿ ಎಲ್ಲ ಯುಗಗಳಲ್ಲೂ ವೇದಪಾರಂಗತರಾದ ಬ್ರಾಹ್ಮಣರು ಶತರುದ್ರಿಯಾಧ್ಯಾಯವನ್ನು ಜಪಿಸುತ್ತಾ ಮಹಾದೇವನ ಉಪಾಸನೆಯನ್ನು ಮಾಡುತ್ತಾರೆ. ಹೃದಯದಲ್ಲಿ ಶಿವನ ಧ್ಯಾನವನ್ನು ಮಾಡುತ್ತಾ ಯಾವಾಗಲೂ ಸ್ತುತಿಸುತ್ತಾರೆ. ವಾರಾಣಸಿ-ಯಲ್ಲಿ ವಾಸಿಸುವ, ಶಿವನ ಮಹಿಮೆಯನ್ನು ಹಾಡುವ ಶಿವನನ್ನು ಆಶ್ರಯಿಸಿದ ಬ್ರಾಹ್ಮಣರು ಒಂದೇ ಜನ್ಮದಲ್ಲಿ ಮುಕ್ತಿಯನ್ನು ಪಡೆಯುತ್ತಾರೆ. ಲೋಕದಲ್ಲಿ ಎಲ್ಲರೂ ಬಯಸುವ, ಆದರೆ ದುರ್ಲಭವಾದ ವಿಪ್ರಜನ್ಮವನ್ನು ಪಡೆದವರು ರುದ್ರನನ್ನೇ ಜಪಿಸುತ್ತಾರೆ, ಧ್ಯಾನಿಸುತ್ತಾರೆ. ವಾರಾಣಸೀ ನಿವಾಸಿಗಳಾದ ಮುನೀಂದ್ರರು ಶಿವನನ್ನೇ ಆರಾಧಿಸುತ್ತಾರೆ. ಫಲಾಪೇಕ್ಷೆ ಇಲ್ಲದೆ ಯಜ್ಞವನ್ನು ಮಾಡುತ್ತಾರೆ, ಸ್ತುತಿಸುತ್ತಾರೆ, ನಮಿಸುತ್ತಾರೆ. ನಿರ್ಮಲಭಾವಗಳ ನಿಧಿಯಾದ ಶಿವನಿಗೆ ನಮಸ್ಕಾರ. ನಿರ್ವಿಕಾರನಾದ ಶಿವನಿಗೆ ನಮಸ್ಕಾರ. ಹೃದಯ ಸನ್ನಿಹಿತನಾದ ಶಿವನಿಗೆ ನಮಸ್ಕಾರ. ಅನೇಕರೂಪನಾದ ಶಿವನಿಗೆ ನಮಸ್ಕಾರ.

* * *

## ಕಪರ್ದೀಶ್ವರನ ಕಥೆ

**ಅಧ್ಯಾಯ-೩೩**

**ಸೂತ ಉವಾಚ :**

ಅನಂತರ ಜ್ಞಾನಿಗಳಾದ ಕೃಷ್ಣದ್ವೈಪಾಯನರು ತಮ್ಮ ಶಿಷ್ಯರ ಜೊತೆ ಕಪರ್ದೀಶ್ವರ ಲಿಂಗವನ್ನು ನೋಡಲು ಹೋದರು. ಅಲ್ಲಿ ಪಿಶಾಚಮೋಚನತೀರ್ಥದಲ್ಲಿ ಸ್ನಾನಮಾಡಿ, ಪಿತೃಗಳಿಗೆ ತರ್ಪಣವನ್ನು ಕೊಟ್ಟು ಶಿವನನ್ನು ಪೂಜಿಸಿದರು. ಅಲ್ಲಿ ಕೃಷ್ಣದ್ವೈಪಾಯನರು ಮತ್ತು ಅವರ ಶಿಷ್ಯರು ಆಶ್ಚರ್ಯವೊಂದನ್ನು ನೋಡಿದರು. ಅದು ಕ್ಷೇತ್ರ ಮಾಹಾತ್ಮ್ಯವೆಂದು ತಿಳಿದು ಶಿವನಿಗೆ ನಮಸ್ಕರಿಸಿದರು.

ಘೋರರೂಪದ ಹುಲಿಯೊಂದು ಹೆಣ್ಣುಜಿಂಕೆಯೊಂದನ್ನು ಬೆನ್ನಟ್ಟಿಕೊಂಡು ಕಪರ್ದೀಶ್ವರನ ಸ್ಥಾನಕ್ಕೆ ಬಂದಿತು. ಅಲ್ಲಿ ಹೆದರಿದ ಜಿಂಕೆಯು ಕಪರ್ದೀಶ್ವರನ ಸುತ್ತಲೂ

ಓಡುತ್ತಾ ಹುಲಿಯ ಕೈಗೆ ಸಿಕ್ಕಿತು. ಹುಲಿಯು ಅದನ್ನು ತನ್ನ ಹರಿತವಾದ ಉಗುರುಗಳಿಂದ ಸೀಳಿ, ಅಲ್ಲಿದ್ದ ಮುನಿಜನರನ್ನು ನೋಡಿ ಹೊರಟುಹೋಯಿತು. ಕಪರ್ದೀಶನ ಎದುರಿಗೆ ಆ ಜಿಂಕೆಯು ಸತ್ತುಹೋಯಿತು. ಕೂಡಲೇ ಸೂರ್ಯನ ಕಾಂತಿಯಂತಿದ್ದ ಮಹಾಜ್ವಾಲಾ ಕೃತಿಯು ಆಕಾಶದಲ್ಲಿ ಕಾಣಿಸಿತು. ಆ ಆಕೃತಿಗೆ ಮೂರು ಕಣ್ಣುಗಳಿದ್ದವು. ಕಂಠ ನೀಲವಾಗಿತ್ತು. ತಲೆಯಲ್ಲಿ ಅರ್ಧಚಂದ್ರನಿದ್ದನು. ವೃಷಭವನ್ನೇರಿದ್ದ ಆಕೃತಿಯನ್ನು ಅದೇ ಆಕೃತಿಯ ಪುರುಷರು ಅನುಸರಿಸುತ್ತಿದ್ದರು. ಆಕಾಶಸಂಚಾರಿಗಳು ಅದರ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಆ ಕ್ಷಣದಲ್ಲಿ ಗಣಾಧಿಪತಿಯ ಸ್ಥಾನವನ್ನು ಪಡೆದು ಆ ಆಕೃತಿಯು ಅದೃಶ್ಯ ವಾಯಿತು. ಈ ಆಶ್ಚರ್ಯವನ್ನು ನೋಡಿದ ಜೈಮಿನಿ ಮೊದಲಾದ ಮುನಿಗಳು ಕಪರ್ದೀಶ್ವರನ ಮಹಿಮೆಯನ್ನು ತಿಳಿಸಬೇಕೆಂದು ತಮ್ಮ ಗುರುಗಳಾದ ಕೃಷ್ಣದ್ವೈಪಾಯನರನ್ನು ಕೇಳಿದರು. ಅವರು ಕಪರ್ದೀಶ್ವರನಿಗೆ ನಮಸ್ಕರಿಸಿ, ಆ ದೇವನ ಎದುರು ಕುಳಿತು ಅವನ ಮಹಿಮೆಯನ್ನು ವಿವರಿಸಿದರು.

''ಈ ಕಪರ್ದೀಶ್ವರಲಿಂಗವನ್ನು ಪ್ರಯತ್ನಪೂರ್ವಕವಾಗಿ ವೇದದಲ್ಲಿರುವ ಸ್ತೋತ್ರಗಳಿಂದ ಪೂಜಿಸಬೇಕು. ಈ ಲಿಂಗದಲ್ಲಿ ತಪ್ಪದೆ ಶಿವನನ್ನು ಧ್ಯಾನಿಸುವ ಶಾಂತಮನಸ್ಸಿನ ಯೋಗಿಗಳಿಗೆ ಆರು ತಿಂಗಳಲ್ಲಿ ಯೋಗಸಿದ್ಧಿಯು ಉಂಟಾಗುತ್ತದೆ. ಇಲ್ಲಿಗೆ ಸಮೀಪದಲ್ಲಿರುವ ಪಿಶಾಚ ಮೋಚನ ಕುಂಡದಲ್ಲಿ ಸ್ನಾನಮಾಡಿ ಈ ಲಿಂಗವನ್ನು ಪೂಜಿಸಿದರೆ ಬ್ರಹ್ಮಹತ್ಯಾ ಮೊದಲಾದ ಪಾಪಗಳು ನಾಶವಾಗುತ್ತವೆ. ಬ್ರಾಹ್ಮಣರೇ! ಈ ಕ್ಷೇತ್ರದಲ್ಲಿ ಹಿಂದೆ ಶಂಕುಕರ್ಣ ಎಂದು ವ್ರತನಿಷ್ಠನಾದ ತಪಸ್ವಿಯು ಶಿವನನ್ನು ಪೂಜಿಸಿದನು. ರುದ್ರ ಪ್ರತಿಪಾದಕವಾದ ಪ್ರಣವ ಮಂತ್ರವನ್ನು ನಿರಂತರವಾಗಿ ಜಪಿಸಿದನು. ಪುಷ್ಪ, ಧೂಪ, ದೀಪ, ಸ್ತೋತ್ರ, ಪ್ರದಕ್ಷಿಣ ನಮಸ್ಕಾರಗಳಿಂದ ಆರಾಧಿಸಿದನು. ಆಮರಣ ಬ್ರಹ್ಮಚರ್ಯ ದೀಕ್ಷೆಯನ್ನು ತೊಟ್ಟು ಯೋಗನಿಷ್ಠನಾಗಿ ಇಲ್ಲಿ ವಾಸಮಾಡಿದನು.''

ಒಮ್ಮೆ ಹಸಿದಿದ್ದ, ಕೇವಲ ಎಲುಬು, ಚರ್ಮಗಳ ದೇಹವನ್ನು ಹೊಂದಿದ್ದ ಪ್ರೇತವೊಂದು ಅಲ್ಲಿಗೆ ಬಂದಿತು. ಅದನ್ನು ನೋಡಿ ದಯೆತುಂಬಿದ ಆ ಮುನಿಯು ಹೇಳಿದನು. ''ನೀನು ಯಾರು? ಎಲ್ಲಿಂದ ಇಲ್ಲಿಗೆ ಬಂದಿರುವಿ'' ? ಹಸಿವೆಯಿಂದ ಕಂಗಾಲಾಗಿದ್ದ ಆ ಪಿಶಾಚಿಯು ಹೇಳಿತು. ''ನಾನು ಹಿಂದಿನ ಜನ್ಮದಲ್ಲಿ ಧನ-ಧಾನ್ಯ ಸಮೃದ್ಧಿಯನ್ನು ಹೊಂದಿದ ವಿಪ್ರ-ನಾಗಿದ್ದೆನು. ಮಕ್ಕಳು ಮೊಮ್ಮಕ್ಕಳಿಂದ ತುಂಬಿದ ಕುಟುಂಬವನ್ನು ಪೋಷಿಸುವುದರಲ್ಲಿ ಉತ್ಸುಕನಾಗಿದ್ದ ನಾನು ದೇವತೆಗಳನ್ನು, ಅತಿಥಿಗಳನ್ನು, ಗೋವುಗಳನ್ನು ಪೂಜಿಸಲಿಲ್ಲ. ಎಂದೂ ಕೂಡ ಸ್ವಲ್ಪ ಪುಣ್ಯವನ್ನು ಕೂಡ ಮಾಡಲಿಲ್ಲ. ಒಮ್ಮೆ ವಾರಾಣಸಿಯಲ್ಲಿ ವೃಷಭ ವಾಹನನಾದ ಭಗವಾನ್ ರುದ್ರನ ದರ್ಶನವು ಆಯಿತು. ಆ ದೇವನನ್ನು ನಮಸ್ಕರಿಸಿದೆನು. ಅನಂತರ ಮರಣಹೊಂದಿದ ನನಗೆ ಘೋರವಾದ ಯಮನ ದರ್ಶನವು ಆಗಲಿಲ್ಲ. ಆದರೆ ಈ ಪಿಶಾಚಜನ್ಮವನ್ನು ಹೊಂದಿ, ಹಸಿವೆ-ಬಾಯಾರಿಕೆಗಳಿಂದ ಪೀಡಿತನಾಗಿ ಹಿತ-

ಅಹಿತಗಳನ್ನು ತಿಳಿಯದೆ ಇದ್ದೇನೆ. ನನ್ನನ್ನು ಉದ್ಧರಿಸುವ ಉಪಾಯವನ್ನು ನೀನು ತಿಳಿದಿದ್ದರೆ ದಯವಿಟ್ಟು ಉದ್ಧರಿಸು. ನಿನಗೆ ನಮಸ್ಕಾರ.''

ಶಂಕುಕರ್ಣನು ಪಿಶಾಚಿಗೆ ಹೇಳಿದನು. ''ನಿನ್ನಂತಹ ಪುಣ್ಯಾತ್ಮ ಇನ್ನೊಬ್ಬನಿಲ್ಲ. ಏಕೆಂದರೆ ನೀನು ವಿಶ್ವೇಶ್ವರನಾದ ಶಿವನನ್ನು ನೋಡಿ, ಮುಟ್ಟಿ, ನಮಸ್ಕರಿಸಿರುವಿ. ಲೋಕದಲ್ಲಿ ನಿನಗೆ ಸಮನಾದವನು ಯಾರು ? ಆ ಪುಣ್ಯದ ಫಲದಿಂದ ನೀನು ಈ ಪ್ರದೇಶಕ್ಕೆ ಬಂದಿರುವಿ. ಈ ಪಿಶಾಚಮೋಚನ ಕುಂಡದಲ್ಲಿ ಸಮಾಧಾನ ತುಂಬಿದ ಮನಸ್ಸಿನಿಂದ ಸ್ನಾನ ಮಾಡು. ಈ ಕೆಟ್ಟ ದೇಹವು ಕೂಡಲೇ ಹೋಗುತ್ತದೆ.''

ದಯಾಲುವಾದ ಶಂಕುಕರ್ಣನ ಮಾತಿನಂತೆ ಪಿಶಾಚಿಯು ದೇವಶ್ರೇಷ್ಠನೂ ಮುಕ್ಕಣ್ಣನೂ ಸರ್ವನಿಯಾಮಕನೂ ಆದ ಕಪರ್ದೀಶ್ವರನನ್ನು ಸ್ಮರಿಸಿ, ಸಮಾಧಾನ ತುಂಬಿದ ಮನಸ್ಸಿನಿಂದ ಅವಗಾಹನವನ್ನು ಮಾಡಿತು. ಕೂಡಲೇ ಆ ಪಿಶಾಚದೇಹವು ನಾಶವಾಯಿತು. ದಿವ್ಯಾಭರಣ ಗಳನ್ನು ತಲೆಯಮೇಲೆ ಚಂದ್ರಚಿಹ್ನೆಯನ್ನೂ ಧರಿಸಿದ ದಿವ್ಯರೂಪದಿಂದ ಸೂರ್ಯಸದೃಶವಾದ ವಿಮಾನದಲ್ಲಿ ಕಾಣಿಸಿಕೊಂಡನು. ಆಗ ಅವನ ಸುತ್ತಲೂ ಅನೇಕ ರುದ್ರರೂ, ಅಪ್ರಮೇಯ-ರಾದ ವಾಲಖಿಲ್ಯ ಮೊದಲಾದ ಯೋಗಿಗಳೂ ಇದ್ದರು. ಆಕಾಶದಲ್ಲಿ ಉದಯಿಸುತ್ತಿರುವ ಸೂರ್ಯನು ಪ್ರಕಾಶಿಸುವಂತೆ ಇವನು ಕಾಣಿಸಿದನು. ಪಿಶಾಚಾವಸ್ಥೆಯಿಂದ ಮುಕ್ತನಾದ ಈ ಚೇತನನನ್ನು ಸಿದ್ಧರೂ, ದೇವತೆಗಳೂ ಸ್ತುತಿಸಿದರು. ಅಪ್ಸರೆಯರು ನೃತ್ಯಮಾಡಿದರು. ಗಂಧರ್ವರು, ವಿದ್ಯಾಧರರು, ಕಿನ್ನರರು ಮೊದಲಾದವರು ಪುಷ್ಪವೃಷ್ಟಿಯನ್ನು ಮಾಡಿದರು. ಹೀಗೆ ಮುನಿಶ್ರೇಷ್ಠರಿಂದ ಸ್ತುತಿಸಲ್ಪಡುತ್ತಾ, ಭಗವಂತನ ದಯೆಯಿಂದ ತತ್ತ್ವಜ್ಞಾನವನ್ನು ಪಡೆದ ಈ ಚೇತನನು ವೇದ ಪ್ರತಿಪಾದ್ಯವಾದ ರುದ್ರಾಧಿಷ್ಠಿತವಾದ ಸೂರ್ಯಮಂಡಲವನ್ನು ಪ್ರವೇಶಿಸಿದನು. ಪಿಶಾಚಿಯಾಗಿದ್ದವನು ಆ ಅವಸ್ಥೆಯಿಂದ ಮುಕ್ತನಾದದ್ದನ್ನು ನೋಡಿ ಸಂತುಷ್ಟನಾದ ಶಂಕುಕರ್ಣನು ಶಿವನನ್ನು ಸ್ಮರಿಸಿ, ನಮಸ್ಕರಿಸಿ ಹೀಗೆ ಸ್ತುತಿಸಿದನು.

ನಮಾಮಿ ನಿತ್ಯಂ ಪರತಃ ಪರಸ್ತಾದ್
ಗೋಪ್ತಾರಮೇಕಂ ಪುರುಷಂ ಪುರಾಣಮ್ ।
ವ್ರಜಾಮಿ ಯೋಗೇಶ್ವರಮೀಶಿತಾರ-
ಮಾದಿತ್ಯಮಗ್ನಿಂ ಕಲಿಲಾಧಿರೂಢಮ್ ॥

ಪರವಸ್ತುವಿಗಿಂತ ಶ್ರೇಷ್ಠನೂ, ಶಾಶ್ವತನೂ, ರಕ್ಷಕನೂ, ಅದ್ವಿತೀಯನೂ, ಪುರಾಣ ಪುರುಷನೂ, ಯೋಗೇಶ್ವರನೂ, ನಿಯಾಮಕನೂ, ಆದಿತ್ಯ-ಅಗ್ನಿಸ್ವರೂಪನೂ ಕಲಿಲಾಧಿ-ರೂಢನೂ ಆದ ಶಿವನನ್ನು ನಮಸ್ಕರಿಸುತ್ತೇನೆ.

ತ್ವಾಂ ಬ್ರಹ್ಮಪಾರಂ ಹೃದಿ ಸನ್ನಿವಿಷ್ಟಂ
ಹಿರಣ್ಮಯಂ ಯೋಗಿನಮಾದಿಹೀನಮ್ ।

ವ್ರಜಾಮಿ ರುದ್ರಂ ಶರಣಂ ದಿವಿಸ್ಥಂ
ಮಹಾಮುನಿಂ ಬ್ರಹ್ಮಪರಂ ಪವಿತ್ರಮ್ ॥

ವೇದಗಳ ಮುಖ್ಯಾರ್ಥನೂ, ಸರ್ವರ ಹೃದಯದಲ್ಲಿರುವವನೂ, ಹಿರಣ್ಮಯನೂ, ಯೋಗಿಯೂ, ಜನ್ಮರಹಿತನೂ, ಮಹಾಮುನಿಯೂ, ಪರಬ್ರಹ್ಮನೂ, ಪವಿತ್ರನೂ ಆದ ರುದ್ರನನ್ನು ಶರಣು ಹೊಂದುವೆನು.

ಸಹಸ್ರಪಾದಾಕ್ಷಿಶಿರೋಭಿಯುಕ್ತಂ
ಸಹಸ್ರಬಾಹುಂ ತಮಸಃ ಪರಸ್ತಾತ್ ।
ತ್ವಾಂ ಬ್ರಹ್ಮಪಾರಂ ಪ್ರಣಮಾಮಿ ಶಂಭುಂ
ಹಿರಣ್ಯಗರ್ಭಾಧಿಪತಿಂ ತ್ರಿನೇತ್ರಮ್ ॥

ಸಾವಿರಪಾದ, ಕಣ್ಣು, ತಲೆ, ಬಾಹುಗಳನ್ನು ಹೊಂದಿರುವ ತಮೋಗುಣಾತೀತನಾದ, ಚತುರ್ಮುಖನಿಗೆ ಅಧಿಪತಿಯೂ, ತ್ರಿನೇತ್ರನೂ, ವೇದಗಳ ಮುಖ್ಯಾರ್ಥನೂ ಆದ ಶಂಭೋ! ನಿನ್ನನ್ನು ನಮಸ್ಕರಿಸುತ್ತೇನೆ.

ಯತಃ ಪ್ರಸೂತಿರ್ಜಗತೋ ವಿನಾಶೋ
ಯೇನಾಹೃತಂ ಸರ್ವಮಿದಂ ಶಿವೇನ ।
ತಂ ಬ್ರಹ್ಮಪಾರಂ ಭಗವಂತಮೀಶಂ
ಪ್ರಣಮ್ಯ ನಿತ್ಯಂ ಶರಣಂ ಪ್ರಪದ್ಯೆ ॥

ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವ ವೇದಗಳ ಮುಖ್ಯಾರ್ಥನಾದ, ಷಡ್ಗುಣೈಶ್ವರ್ಯ ಸಂಪನ್ನನಾದ ಶಿವನನ್ನು ನಮಸ್ಕರಿಸಿ ಶರಣುಹೊಂದುವೆನು.

ಅಲಿಂಗಮಾಲೋಕವಿಹೀನರೂಪಂ
ಸ್ವಯಂಪ್ರಭುಂ ಚಿತ್ಪತಿಮೈಕರುದ್ರಮ್ ।
ತಂ ಬ್ರಹ್ಮಪಾರಂ ಪರಮೇಶ್ವರಂ ತ್ವಾಂ
ನಮಸ್ಕರಿಷ್ಯೆ ನ ಯತೋಽನ್ಯದಸ್ತಿ ॥

ಪೂರ್ಣವಾಗಿ ತಿಳಿಯಲಾಗದ, ಪೂರ್ಣವಾಗಿ ತಿಳಿಸುವ ಸಾಧನವಿಲ್ಲದ ಸ್ವಯಂ ಪ್ರಭುವಾದ, ಜ್ಞಾನಸ್ವರೂಪನಾದ, ವೇದಗಳ ಮುಖ್ಯಾರ್ಥನಾದ ಪರಮೇಶ್ವರ ನಿನಗೆ ನಮಸ್ಕಾರ. ನಿನಗಿಂತ ಉತ್ತಮವಾದ ವಸ್ತು ಯಾವುದೂ ಇಲ್ಲ.

ಯಂ ಯೋಗಿನಸ್ತ್ಯಕ್ತಸಬೀಜಯೋಗಾ
ಲ್ಲಬ್ಧ್ವಾ ಸಮಾಧಿಂ ಪರಮಾತ್ಮಭೂತಾಃ ।

ಪಶ್ಯಂತಿ ದೇವಂ ಪ್ರಣತೋಽಸ್ಮಿ ನಿತ್ಯಂ
ತದ್ಬ್ರಹ್ಮ ಪಾರಂ ಭವತಃ ಸ್ವರೂಪಮ್ ॥

ಯೋಗಿಗಳು ಸವಿಕಲ್ಪ ಸಮಾಧಿಯಿಂದ ನಿರ್ವಿಕಲ್ಪಕ ಸಮಾಧಿಸ್ಥಿತಿಯನ್ನು ತಲುಪಿ ಪರಮಾತ್ಮನಿಷ್ಠರಾಗಿ ಯಾರನ್ನು ನೋಡುತ್ತಾರೋ, ಅಂತಹ ವೇದಗಳ ಮುಖ್ಯಾರ್ಥವಾದ ನಿನ್ನ ಸ್ವರೂಪಕ್ಕೆ ನಮಸ್ಕಾರ.

ನ ಯತ್ರ ನಾಮಾನಿ ವಿಶೇಷಕ್ಲೃಪ್ತಿ-
ರ್ನ ಸಂದೃಶೇ ತಿಷ್ಠತಿ ಯತ್ಸ್ವರೂಪಮ್ ।
ತಂ ಬ್ರಹ್ಮಪಾರಂ ಪ್ರಣತೋಽಸ್ಮಿ ನಿತ್ಯಂ
ಸ್ವಯಂಭುವಂ ತ್ವಾಂ ಶರಣಂ ಪ್ರಪದ್ಯೆ ॥

ಯಾರಿಗೆ ನಾಮ-ರೂಪಗಳು ಇಲ್ಲವೋ, ಯಾರ ಸ್ವರೂಪವು ದೃಗ್ಗೋಚರವಾಗುವುದಿಲ್ಲವೋ,ಅಂತಹ ವೇದಗಳ ಮುಖ್ಯಾರ್ಥನಾದ, ಸ್ವತಂತ್ರನಾಗಿರುವ ನಿನಗೆ ನಮಸ್ಕಾರ. ನಿನ್ನನ್ನು ಶರಣು ಹೊಂದುವೆನು.

ಯದ್ವೇದವಾದಾಭಿರತಾ ವಿದೇಹಂ
ಸ ಬ್ರಹ್ಮವಿಜ್ಞಾನಮಭೇದಮೇಕಮ್ ।
ಪಶ್ಯಂತ್ಯನೇಕಂ ಭವತಃ ಸ್ವರೂಪಂ
ತದ್ಬ್ರಹ್ಮಪಾರಂ ಪ್ರಣಮಾಮಿ ನಿತ್ಯಮ್ ॥

ವೇದನಿಷ್ಠರು ನಿನ್ನ ಸ್ವರೂಪವನ್ನು ದೇಹರಹಿತ, ಪೂರ್ಣ, ಜ್ಞಾನಸ್ವರೂಪ, ಸ್ವಗತ-ಭೇದವರ್ಜಿತ, ಅದ್ವಿತೀಯ ಎಂದು ನಾನಾವಿಧವಾಗಿ ಕಾಣುತ್ತಾರೆ. ಅಂತಹ ವೇದಗಳ ಮುಖ್ಯಾರ್ಥನಾದ ನಿನ್ನನ್ನು ಯಾವಾಗಲೂ ನಮಸ್ಕರಿಸುತ್ತೇನೆ.

ಯತಃ ಪ್ರಧಾನಂ ಪುರುಷಃ ಪುರಾಣೋ
ನಿವರ್ತತೆ ಯಂ ಪ್ರಣಮಂತಿ ದೇವಾಃ ।
ನಮಾಮಿ ತಂ ಜ್ಯೋತಿಷಿ ಸನ್ನಿವಿಷ್ಟಂ
ಕಾಲಂ ಬೃಹಂತಂ ಭವತಃ ಸ್ವರೂಪಮ್ ॥

ಯಾರ ಸಾಮರ್ಥ್ಯದಿಂದ ಪ್ರಕೃತಿ, ಪುರಾಣಪುರುಷರು ಇದ್ದಾರೋ, ಯಾರನ್ನು ದೇವತೆಗಳು ನಮಸ್ಕರಿಸುತ್ತಾರೋ, ಅಂತಹ ಜ್ಯೋತಿರ್ಮಂಡಲದಲ್ಲಿರುವ, ಕಾಲಸ್ವರೂಪನೂ, ವಿರಾಡ್ರೂಪನೂ ಆದ ನಿನ್ನನ್ನು ನಮಸ್ಕರಿಸುತ್ತೇನೆ.

ವ್ರಜಾಮಿ ನಿತ್ಯಂ ಶರಣಂ ಮಹೇಶಂ
ಸ್ಥಾಣುಂ ಪ್ರಪದ್ಯೇ ಗಿರೀಶಂ ಪುರಾಣಮ್ ।

ಶಿವಂ ಪ್ರಪದ್ಯೇ ಹರಮಿಂದುಮೌಲಿಂ
ಪಿನಾಕಿನಂ ತ್ವಾಂ ಶರಣಂ ವ್ರಜಾಮಿ ॥

ಮಹೇಶನಾದ ನಿನ್ನನ್ನು ಶರಣು ಹೊಂದುವೆನು. ಅಚಲನಾದ, ಕೈಲಾಸವಾಸಿಯಾದ ನಿನ್ನನ್ನು ಶರಣಹೊಂದುವೆನು. ಚಂದ್ರಶೇಖರನೂ, ಶಿವನೂ, ಹರನೂ ಆದ ನಿನ್ನನ್ನು ಶರಣು ಹೊಂದುವೆನು. ಪಿನಾಕಧಾರಿಯಾದ ನಿನ್ನನ್ನು ಶರಣು ಹೊಂದುವೆನು.

ಶಂಕುಕರ್ಣನು ಹೀಗೆ ಕಪರ್ದೀಶ್ವರನನ್ನು ಸ್ತುತಿಸುತ್ತಾ, ಮಂಗಳಕರವಾದ ಪ್ರಣವವನ್ನು ಉಚ್ಚರಿಸುತ್ತಾ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಆ ಕ್ಷಣದಲ್ಲಿ ಜ್ಞಾನ-ಆನಂದ ಮಯವಾದ ಅದ್ವಿತೀಯವಾದ, ಕೋಟಿಪ್ರಲಯಾಗ್ನಿಯಂತೆ ಪ್ರಜ್ವಲಿಸುತ್ತಿದ್ದ ಶಿವಸ್ವರೂಪದ ಶ್ರೇಷ್ಠಲಿಂಗವು ಗೋಚರವಾಯಿತು. ಆಗ ನಿರ್ಮಲನೂ, ಪೂರ್ಣನೂ ಆದ ಶಂಕುಕರ್ಣನು ಆ ನಿರ್ಮಲಲಿಂಗದಲ್ಲಿ ವಿಲೀನನಾದನು. ಅದು ಅದ್ಭುತವಾಗಿತ್ತು.

ಇದು ಕಪರ್ದೀಶ್ವರನ ಗೋಪ್ಯವಾದ ಮಹಿಮೆ. ತಮೋಗುಣ ತುಂಬಿದವರಿಗೆ ಇದು ತಿಳಿಯುವುದಿಲ್ಲ. ಜ್ಞಾನಿಗಳೂ ಈ ಕಪರ್ದೀಶ್ವರನ ವಿಷಯದಲ್ಲಿ ಮೋಹ ಹೊಂದಿರುತ್ತಾರೆ. ಪಾಪಪ್ರಣಾಶಿನಿಯಾದ ಈ ಕಥೆಯನ್ನು ಕೇಳುವ ಭಕ್ತರು ಪಾಪದಿಂದ ಬಿಡುಗಡೆಯನ್ನು ಹೊಂದಿ ರುದ್ರಸಾನ್ನಿಧ್ಯವನ್ನು ಹೊಂದುವರು. ಈ ಸ್ತೋತ್ರಕ್ಕೆ ಬ್ರಹ್ಮಪಾರ ಎಂದು ಹೆಸರು. ಈ ಶ್ರೇಷ್ಠವಾದ ಬ್ರಹ್ಮಪಾರಸ್ತೋತ್ರವನ್ನು ಯಾರು ಶುದ್ಧರಾಗಿ ಪ್ರಾತಃಕಾಲದಲ್ಲಿ ಮತ್ತು ಮಧ್ಯಾಹ್ನದಲ್ಲಿ ಪಠಿಸುವರೋ ಅವರು ಯೋಗಸಿದ್ಧಿಯನ್ನು ಹೊಂದುವರು. ನಾವು ಇಲ್ಲೇ ವಾಸಿಸೋಣ. ದೇವದೇವ ಕಪರ್ದೀಶ್ವರನನ್ನು ನಿತ್ಯವೂ ನೋಡೋಣ. ಈ ದೇವ ತ್ರಿಲೋಚನನನ್ನು ಯಾವಾಗಲೂ ಪೂಜಿಸೋಣ.''

ಭಗವಾನ್ ಕೃಷ್ಣದ್ವೈಪಾಯನರು ಹೀಗೆ ಹೇಳಿ ತಮ್ಮ ಶಿಷ್ಯರ ಜೊತೆ ಕಪರ್ದೀಶ್ವರನನ್ನು ಆರಾಧಿಸುತ್ತಾ ಅಲ್ಲಿಯೇ ವಾಸಿಸಿದರು.

* * *

# ಮಧ್ಯಮೇಶ್ವರನ ಮಹಿಮೆ

ಅಧ್ಯಾಯ-೩೪

**ಸೂತ ಉವಾಚ :**

ಭಗವಾನ್ ವೇದವ್ಯಾಸರು ಕಪರ್ದೀಶ್ವರನ ಸನ್ನಿಧಾನದಲ್ಲಿ ಬಹಳ ವರ್ಷ ವಾಸಿಸಿದರು. ಅನಂತರ ಅವರು ಮಧ್ಯಮೇಶ್ವರ ಲಿಂಗವನ್ನು ನೋಡಲು ಹೊರಟರು. ಮಧ್ಯಮೇಶ ಕ್ಷೇತ್ರದಲ್ಲಿ ಹರಿಯುವ ಪವಿತ್ರವಾದ ಗಂಗಾನದಿಯನ್ನು ನೋಡಿ ಬಹಳ ಸಂತೋಷಗೊಂಡು ಭಕ್ತಿಯಿಂದ ಪವಿತ್ರರಾದ ಭಗವಾನ್ ಕೃಷ್ಣದ್ವೈಪಾಯನರು ತಮ್ಮ ಶಿಷ್ಯವೃಂದದ ಜೊತೆ ಸ್ನಾನವಿಧಿಗನುಗುಣವಾಗಿ ಸ್ನಾನಮಾಡಿದರು. ಲೋಕದ ಪ್ರಥಮ ತತ್ವವಾದ ಮಧ್ಯಮೇಶ್ವರ ನನ್ನು ಶಿಷ್ಯರೊಡಗೂಡಿ ಪೂಜಿಸಿದರು. ವಿಧಿಗನುಗುಣವಾಗಿ ದೇವ-ಋಷಿ-ಪಿತೃಗಳಿಗೆ ತರ್ಪಣವನ್ನು ಕೊಟ್ಟರು.

ಅನಂತರ ಪಾಶುಪತವ್ರತಧಾರಿಗಳಾದ ಶಿವಭಕ್ತರು ಅಲ್ಲಿಗೆ ಮಧ್ಯಮೇಶ್ವರ ದರ್ಶನಕ್ಕಾಗಿ ಬಂದರು. ಅವರೆಲ್ಲರೂ ಶಾಂತಮನಸ್ಸಿನವರಾಗಿದ್ದರು. ಭಸ್ಮವನ್ನು ಲೇಪಿಸಿಕೊಂಡಿದ್ದರು. ಪ್ರಣವೋಪಾಸನೆಯಲ್ಲಿ ಮತ್ತು ವೇದಾಧ್ಯಯನದಲ್ಲಿ ನಿರತರಾಗಿದ್ದ ಶುದ್ಧಯಜ್ಞೋಪ ವೀತವನ್ನು ಧರಿಸಿದ್ದ ಅವರಲ್ಲಿ ಕೆಲವರು ಜಟಾಧಾರಿಗಳಾಗಿದ್ದರು. ಕೆಲವರು ಮುಂಡಿತ ರಾಗಿದ್ದರು. ಕೆಲವರು ಕೌಪೀನಧಾರಿಗಳಾಗಿದ್ದರೆ ಕೆಲವರು ದಿಗಂಬರರಾಗಿದ್ದರು. ಬ್ರಹ್ಮಚರ್ಯ ವ್ರತನಿಷ್ಠರಾಗಿದ್ದ ಅವರೆಲ್ಲರೂ ಶಾಂತರೂ, ಇಂದ್ರಿಯನಿಗ್ರಹವುಳ್ಳವರೂ, ಜ್ಞಾನನಿಷ್ಠರೂ ಆಗಿದ್ದರು. ಅವರು ಶಿಷ್ಯಸಹಿತರಾದ ಕೃಷ್ಣದ್ವೈಪಾಯನರನ್ನು ನೋಡಿ, ಅವರನ್ನು ಉಚಿತವಾಗಿ ಸತ್ಕರಿಸಿ ಕೇಳಿದರು.

''ಮಹಾಮುನಿಗಳೆ! ನೀವು ಯಾರು? ಎಲ್ಲಿಂದ ಬಂದಿರುವಿರಿ'' ? ಪೈಲ ಮೊದಲಾದ ವೇದವ್ಯಾಸಶಿಷ್ಯರು ಧರ್ಮಿಷ್ಠರಾದ ಆ ಮುನಿಗಳಿಗೆ ಹೇಳಿದರು.

''ಈ ಮಹಾತ್ಮರು ಸತ್ಯವತೀ ಸುತರಾದ ಕೃಷ್ಣದ್ವೈಪಾಯನರು. ಹೃಷಿಕೇಶನ ಅವತಾರ. ವೇದಗಳ ವಿಭಾಗವನ್ನು ಮಾಡಿದ ವೇದವ್ಯಾಸರು. ಪಿನಾಕಧಾರಿಯಾದ ಮಹಾದೇವನೇ ಒಂದು ಅಂಶದಿಂದ ಈ ವೇದವ್ಯಾಸರ ಮಗನಾಗಿ ಹುಟ್ಟಿದ್ದಾನೆ. ಶುಕಾಚಾರ್ಯರೇ ಈ ಮಗ. ಈ ವೇದವ್ಯಾಸರು ಭಕ್ತಿಯಿಂದ ಶಂಕರನನ್ನು ಆರಾಧಿಸಿ, ಅವನ ಅನುಗ್ರಹದಿಂದ ಪೂರ್ಣವಾದ ಜ್ಞಾನವನ್ನು ಪಡೆದಿದ್ದಾರೆ.''

ಕೃಷ್ಣದ್ವೈಪಾಯನರ ಮಹತ್ತ್ವವನ್ನು ತಿಳಿದು ಪುಲಕಗೊಂಡ ಆ ಪಾಶುಪತರೆಲ್ಲರೂ ಹೇಳಿದರು. ''ಪೂಜ್ಯರೇ! ಮಹೇಶ್ವರನ ಅನುಗ್ರಹದಿಂದ ನೀವು ಪರಮೇಶ್ವರ ತತ್ತ್ವಜ್ಞಾನ ವನ್ನು ಪಡೆದಿದ್ದೀರಿ. ದಯವಿಟ್ಟು ನಮಗೆ ಉಪದೇಶಿಸಿರಿ. ನಿಮ್ಮ ಉಪದೇಶಬಲದಿಂದ ನಾವೂ ಜ್ಞಾನವನ್ನು ಪಡೆದು ಬೇಗನೆ ಪರಮೇಶ್ವರ ಸಾಕ್ಷಾತ್ಕಾರವನ್ನು ಹೊಂದುವೆವು.''

ಕೃಷ್ಣದ್ವೈಪಾಯನರು ಸುಮಂತು ಮೊದಲಾದ ಶಿಷ್ಯರನ್ನು ಹಿಂದಿರುಗಲು ಹೇಳಿ ಪಾಶುಪಾತಯೋಗಿಗಳಿಗೆ ಪರಮೇಶ್ವರ ತತ್ತ್ವವನ್ನು ಉಪದೇಶಿಸಿದರು. ಉಪದೇಶ ಮುಗಿದ ಕ್ಷಣದಲ್ಲೇ ವಿಮಲವಾದ ಒಂದು ಬೆಳಕು ಅಲ್ಲಿ ಉದಯಿಸಿತು. ಉಪದೇಶ ಪಡೆದ ಪಾಶುಪಾತರೆಲ್ಲರೂ ಆ ಬೆಳಕಿನಲ್ಲಿ ಅಂತರ್ಧಾನರಾದರು.

ಅನಂತರ ಕೃಷ್ಣದ್ವೈಪಾಯನರು ಪೈಲ ಮೊದಲಾದ ತಮ್ಮ ಶಿಷ್ಯರಿಗೆ ಮಧ್ಯಮೇಶನ ಮಹಿಮೆಯನ್ನು ಉಪದೇಶಿಸಿದರು.

"ಈ ಕ್ಷೇತ್ರದಲ್ಲಿ ಮಹೇಶ್ವರನು ತನ್ನ ದೇವಿಯೊಂದಿಗೆ ಯಾವಾಗಲೂ ವಿಹರಿಸುತ್ತಿದ್ದಾನೆ. ರುದ್ರಗುಣವು ದೇವ-ದೇವಿಯರ ಸೇವೆಯನ್ನು ಮಾಡುತ್ತಿದೆ. ಹಿಂದೆ ಇಲ್ಲಿ ದೇವಕೀ ಸುತನಾದ ಕೃಷ್ಣನು ಪಾಶುಪತವ್ರತಧಾರಿಗಳೊಂದಿಗೆ ಒಂದು ವರ್ಷ ಶಿವಾರಾಧನೆಯನ್ನು ಮಾಡಿದನು. ಆಗ ಕೃಷ್ಣನ ಅನೇಕ ಶಿಷ್ಯರು ಅವನ ಉಪದೇಶವನ್ನು ಪಡೆದು, ಬ್ರಹ್ಮಚರ್ಯ ವ್ರತನಿಷ್ಠರಾಗಿ ಜ್ಞಾನವನ್ನು ಪಡೆದು ಮಹೇಶ್ವರನ ಸಾಕ್ಷಾತ್ಕಾರವನ್ನು ಪಡೆದರು.

ನೀಲಲೋಹಿತನಾದ ಶಿವನು ಕೃಷ್ಣನಿಗೆ ಶ್ರೇಷ್ಠವಾದ ವರವನ್ನು ಕೊಟ್ಟನು. "ಶ್ರೀಕೃಷ್ಣನನ್ನು ವಿಧಿಪೂರ್ವಕವಾಗಿ ಪೂಜಿಸುವ ನನ್ನ ಭಕ್ತರೆಲ್ಲರೂ ಈಶ್ವರ ತತ್ತ್ವಜ್ಞಾನವನ್ನು ಪಡೆಯುತ್ತಾರೆ. ನನ್ನ ಭಕ್ತರಾದ ಎಲ್ಲ ದ್ವಿಜರೂ ನಿನ್ನನ್ನು ಪೂಜಿಸುತ್ತಾರೆ. ಧ್ಯಾನಿಸುತ್ತಾರೆ."

ಯಾರು ಪಿನಾಕಧಾರಿಯಾದ ಶಿವನನ್ನು ಧ್ಯಾನಿಸಿ, ಅವನ ಸಾಕ್ಷಾತ್ಕಾರವನ್ನು ಪಡೆಯುತ್ತಾರೋ ಅವರ ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ ನಾಶವಾಗುತ್ತವೆ. ಪಾಪಕರ್ಮಗಳನ್ನು ಮಾಡಿದವರು, ಈ ಕ್ಷೇತ್ರದಲ್ಲಿ ಪ್ರಾಣತ್ಯಾಗವನ್ನು ಮಾಡಿದರೆ ಸದ್ಗತಿಯನ್ನು ಪಡೆಯುತ್ತಾರೆ, ಈ ವಿಷಯದಲ್ಲಿ ಏನೂ ಸಂದೇಹವಿಲ್ಲ. ಮಂದಾಕಿನಿಯಲ್ಲಿ ಸ್ನಾನ ಮಾಡಿ ಮಧ್ಯಮೇಶ್ವರನನ್ನು ಪೂಜಿಸುವವರು ನಿಜವಾಗಿಯೂ ಧನ್ಯರು. ಈ ಕ್ಷೇತ್ರದಲ್ಲಿ ಮಾಡಲ್ಪಡುವ ಸ್ನಾನ, ದಾನ, ತಪಸ್ಸು, ಶ್ರಾದ್ಧ, ಪಿಂಡನಿರ್ವಾಪ ಮೊದಲಾದ ಒಂದೊಂದು ಕರ್ಮವೂ ಕುಲದ ಏಳು ತಲೆಮಾರಿನವರೆಗಿನ ಜನರನ್ನು ಪವಿತ್ರಗೊಳಿಸುತ್ತದೆ. ಸೂರ್ಯಗ್ರಹಣಕಾಲದಲ್ಲಿ ಬೇರೆ ಕ್ಷೇತ್ರದಲ್ಲಿ ಮಾಡಲ್ಪಡುವ ಸ್ನಾನ, ದಾನ ಮೊದಲಾದವುಗಳಿಂದ ಲಭಿಸುವ ಪುಣ್ಯದ ಹತ್ತರಷ್ಟು ಪುಣ್ಯವನ್ನು ಈ ಕ್ಷೇತ್ರದಲ್ಲಿ ಸ್ನಾನ-ದಾನ ಮೊದಲಾದವುಗಳಿಂದ ಗಳಿಸಬಹುದು.

ಮಹಾಯೋಗಿಗಳಾದ ಕೃಷ್ಣದ್ವೈಪಾಯನರು ಹೀಗೆ ಉಪದೇಶಿಸಿ ಬಹಳಕಾಲ ಮಧ್ಯಮೇಶ್ವರನನ್ನು ಪೂಜಿಸುತ್ತಾ ಆ ಕ್ಷೇತ್ರದಲ್ಲಿ ವಾಸಿಸಿದರು.

* * *

## ತೀರ್ಥಗಳು

## ಅಧ್ಯಾಯ-೩೫

**ಸೂತ ಉವಾಚ :**

ಇನ್ನು ಮುಂದೆ ಭಗವಾನ್ ವೇದವ್ಯಾಸರು ಜೈಮಿನಿ ಮೊದಲಾದ ತಮ್ಮ ಶಿಷ್ಯರೊಡನೆ ಎಲ್ಲ ರಹಸ್ಯತೀರ್ಥಗಳಿಗೆ ಮತ್ತು ದೇವಾಲಯಗಳಿಗೆ ಯಾತ್ರೆ ಮಾಡಿದರು.

ಶ್ರೇಷ್ಠವಾದ ಪ್ರಯಾಗತೀರ್ಥ, ಅದಕ್ಕಿಂತ ಶ್ರೇಷ್ಠವಾದ ವಿಶ್ವರೂಪತೀರ್ಥ, ಅಸದೃಶವಾದ ಕಾಲತೀರ್ಥ, ಆಕಾಶಮಹಾತೀರ್ಥ, ಅನುಷತೀರ್ಥ, ಸ್ವರ್ಲೀನಮಹಾತೀರ್ಥ, ಶ್ರೇಷ್ಠವಾದ ಗೌರೀತೀರ್ಥ, ಪ್ರಾಜ್ಞಾಪತ್ಯತೀರ್ಥ, ಸ್ವರ್ಗದ್ವಾರತೀರ್ಥ, ಜಂಬುಕೇಶ್ವರತೀರ್ಥ, ಚರ್ಮ ತೀರ್ಥ, ಗಯಾತೀರ್ಥ, ಮಹಾತೀರ್ಥ, ನಾರಾಯಣತೀರ್ಥ, ವಾಯುತೀರ್ಥ, ಜ್ಞಾನ ತೀರ್ಥ, ವಾರಾಹತೀರ್ಥ, ಯಮತೀರ್ಥ, ಸಂವರ್ತಕತೀರ್ಥ, ಅಗ್ನಿತೀರ್ಥ, ಕಾಲಕೇಶ್ವರ ತೀರ್ಥ, ನಾಗತೀರ್ಥ, ಸೋಮತೀರ್ಥ, ಸೂರ್ಯತೀರ್ಥ, ಪರ್ವತತೀರ್ಥ, ಮಣಿಕರ್ಣ ತೀರ್ಥ, ಶ್ರೇಷ್ಠವಾದ ಘಟೋತ್ಕಚತೀರ್ಥ, ಶ್ರೀತೀರ್ಥ, ಗಂಗಾತೀರ್ಥ, ದೇವೇಶತೀರ್ಥ, ಕಾಪಿಲತೀರ್ಥ, ಸೋಮೇಶತೀರ್ಥ, ಬ್ರಹ್ಮತೀರ್ಥ -ಈ ತೀರ್ಥಗಳ ಯಾತ್ರೆಯನ್ನು ಮಾಡಿದರು. ಬ್ರಹ್ಮತೀರ್ಥದಲ್ಲಿ ಚತುರ್ಮುಖಬ್ರಹ್ಮನು ಸ್ಥಾಪಿಸಲು ಉದ್ದೇಶಿಸಿ ಇಟ್ಟಿದ್ದ ಈಶ್ವರಲಿಂಗವನ್ನು, ವಿಷ್ಣುವು ಪ್ರತಿಷ್ಠೆ ಮಾಡಿದನು. ಅನಂತರ ಸ್ನಾನಮಾಡಿ ಬಂದ ಬ್ರಹ್ಮನು ''ನಾನು ತಂದ ಲಿಂಗವನ್ನು ನೀನೇಕೆ ಪ್ರತಿಷ್ಠೆ ಮಾಡಿದಿ'' ಎಂದು ವಿಷ್ಣುವನ್ನು ಕೇಳಿದನು. ''ನಿನಗಿಂತಲೂ ನನಗೆ ರುದ್ರನ ಮೇಲೆ ಹೆಚ್ಚು ಭಕ್ತಿಯಿರುವುದರಿಂದ ಪ್ರತಿಷ್ಠೆ ಮಾಡಿದೆ'' ಎಂದು ಹೇಳಿದನು.

ಮುಂದೆ ಭೂತೇಶ್ವರತೀರ್ಥ, ಧರ್ಮಸಮುದ್ಭವತೀರ್ಥ, ಗಂಧರ್ವತೀರ್ಥ, ಸುಶುಭ ತೀರ್ಥ, ವಾಹ್ನೇಯತೀರ್ಥ, ದೌರ್ವಾಸಿಕ ತೀರ್ಥ, ಹೋಮತೀರ್ಥ, ಚಂದ್ರತೀರ್ಥ, ಚಿತ್ರಾಂಗದೇಶ್ವರ ತೀರ್ಥ, ವಿದ್ಯಾಧರೇಶ್ವರ ತೀರ್ಥ, ಕೇದಾರತೀರ್ಥ, ಕಾಲಂಜರ ತೀರ್ಥ, ಸಾರಸ್ವತತೀರ್ಥ, ಪ್ರಭಾಸತೀರ್ಥ, ಖೇಟಕರ್ಣತೀರ್ಥ, ಹರತೀರ್ಥ, ಲೌಕಿಕಮಹಾತೀರ್ಥ, ಹಿಮಾಲಯತೀರ್ಥ, ಹಿರಣ್ಯಗರ್ಭತೀರ್ಥ, ಗೋಪ್ರಖ್ಯತೀರ್ಥ, ವೃಷಧ್ವಜತೀರ್ಥ, ಉಪಶಾಂತ ತೀರ್ಥ, ಶಿವತೀರ್ಥ, ವ್ಯಾಘ್ರೇಶ್ವರತೀರ್ಥ, ತ್ರಿಲೋಚನ ಮಹಾತೀರ್ಥ, ಲೋಲಾರ್ಕತೀರ್ಥ, ಉತ್ತರಾಹ್ವಯತೀರ್ಥ, ಕಪಾಲಪ್ರಮೋಚನತೀರ್ಥ, ಬ್ರಹ್ಮಹತ್ಯಾ ವಿನಾಶನತೀರ್ಥ, ಶುಕ್ರೇಶ್ವರಮಹಾತೀರ್ಥ -ಈ ತೀರ್ಥಗಳ ಯಾತ್ರೆಯನ್ನು ಮಾಡಿದರು.

ಮೇಲೆ ಹೇಳಲ್ಪಟ್ಟ ತೀರ್ಥಗಳು ಪ್ರಧಾನತೀರ್ಥಗಳು. ಇವುಗಳಲ್ಲದೆ ಇನ್ನೂ ಎಷ್ಟೋ ತೀರ್ಥಗಳಿವೆ. ಅವುಗಳನ್ನು ವಿವರವಾಗಿ ಹೇಳಲು ಆಗುವುದಿಲ್ಲ.

ವೇದವ್ಯಾಸ ಮಹಾಮುನಿಗಳು ಈ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿ, ಭಗವಂತನನ್ನು ಪೂಜಿಸಿದರು. ಅಲ್ಲಲ್ಲಿ ಉಪವಾಸ ಮಾಡಿದರು. ಪಿಂಡಪ್ರದಾನವನ್ನು ಮಾಡಿ ಪಿತೃಗಳನ್ನು ಮತ್ತು ದೇವತೆಗಳನ್ನು ಪೂಜಿಸಿದರು. ಅವರಿಗೆ ತರ್ಪಣವನ್ನು ಕೊಟ್ಟರು. ಹೀಗೆ ಮಾಡುತ್ತಾ ಕಾಶೀವಿಶ್ವೇಶ್ವರನ ಸನ್ನಿಧಾನಕ್ಕೆ ಹೋದರು. ಸ್ನಾನ ಮಾಡಿ ಶಿಷ್ಯರೊಡನೆ ವಿಶ್ವೇಶ್ವರ ಲಿಂಗವನ್ನು ಪೂಜಿಸಿದರು. ಶಿಷ್ಯರನ್ನು ''ನಿಮ್ಮ ಇಚ್ಛೆಯಂತೆ ನೀವು ಹೋಗಬಹುದು'' ಎಂದು ಹೇಳಿ ಬೀಳ್ಕೊಟ್ಟರು. ಪೈಲ ಮೊದಲಾದ ಶಿಷ್ಯರು ವೇದವ್ಯಾಸರನ್ನು ನಮಸ್ಕರಿಸಿ ಅಲ್ಲಿಂದ ಹೊರಟರು. ವೇದವ್ಯಾಸರು ವಾರಾಣಸಿಯಲ್ಲೇ ವಾಸಮಾಡಿದರು. ಅಲ್ಲಿ ಅವರು ಇಂದ್ರಿಯಗಳನ್ನು ನಿಗ್ರಹಿಸಿ ಮೂರು ಹೊತ್ತು ಸ್ನಾನ, ಶಿವಾರ್ಚನೆ ಮೊದಲಾದವುಗಳನ್ನು ಮಾಡುತ್ತಾ ಶಾಂತರಾಗಿ ಇದ್ದರು. ಬ್ರಹ್ಮಚರ್ಯ ನಿಷ್ಠರಾಗಿದ್ದ ಅವರು ಆಹಾರಕ್ಕಾಗಿ ಭಿಕ್ಷೆ ಬೇಡುತ್ತಿದ್ದರು.

ಒಂದು ದಿನ ವ್ಯಾಸರಿಗೆ ಯಾರು ಭಿಕ್ಷೆಯನ್ನು ಹಾಕಲಿಲ್ಲ. ಇದರಿಂದ ಕ್ರುದ್ಧರಾಗಿ ವಾರಾಣಸಿಯ ಜನರ ಸಮೃದ್ಧಿಯೆಲ್ಲ ನಾಶವಾಗಲಿ ಎಂಬ ಶಾಪವನ್ನು ಕೊಡಲು ಉದ್ಯುಕ್ತರಾದರು. ಆಗ ಶಿವನ ಅರ್ಧಾಂಗಿಯಾದ ಮಹಾದೇವಿಯು ಅಲ್ಲಿ ಮನುಷ್ಯರೂಪ ದಿಂದ ಪ್ರತ್ಯಕ್ಷಳಾಗಿ ''ಮಹಾಪ್ರಾಜ್ಞರಾದ ವೇದವ್ಯಾಸರೆ! ಈ ಊರನ್ನು ದಯವಿಟ್ಟು ಶಪಿಸಬೇಡಿ, ನಾನು ಭಿಕ್ಷೆ ನೀಡುತ್ತೇನೆ'' ಎಂದು ಹೇಳಿ ಭಿಕ್ಷೆ ನೀಡಿದಳು. ''ಮುನಿಗಳೇ! ನೀವು ಕೋಪದ ಸ್ವಭಾವದವರು; ಆದ್ದರಿಂದ ಕೃತಘ್ನರಾಗಿಬಿಡುತ್ತೀರಿ; ಆದ್ದರಿಂದ ಈ ಕ್ಷೇತ್ರದಲ್ಲಿ ವಾಸಿಸಬೇಡಿ'' ಎಂದು ಹೇಳಿದಳು. ಹೀಗೆ ಹೇಳಲ್ಪಟ್ಟ ವೇದವ್ಯಾಸರು ಏಕಾಗ್ರತೆಯಿಂದ ಧ್ಯಾನಮಾಡಿ ಆ ಸ್ತ್ರೀಯನ್ನು ಶಿವಪತ್ನೀ ಎಂದು ತಿಳಿದುಕೊಂಡರು. ನಮಸ್ಕರಿಸಿ, ಸ್ತುತಿಸಿ ಹೇಳಿದರು. ''ಶಂಕರಪತ್ನಿ! ಅಷ್ಟಮಿ ಮತ್ತು ಚತುರ್ದಶಿ ದಿನಗಳಲ್ಲಿ ನನಗೆ ಈ ಕ್ಷೇತ್ರಕ್ಕೆ ಬರಲು ದಯವಿಟ್ಟು ಅನುಮತಿ ಕೊಡಬೇಕು'' ಎಂದು ಪ್ರಾರ್ಥಿಸಿದರು. ದೇವಿಯು 'ಅಸ್ತು' ಎಂದು ಹೇಳಿ ಅಂತರ್ಧಾನಳಾದಳು. ಹೀಗೆ ಮಹಾಯೋಗಿಗಳೂ, ಪುರಾಣಕರ್ತರೂ ಆದ ವೇದವ್ಯಾಸರು ಎಲ್ಲ ಕ್ಷೇತ್ರಗಳ ಗುಣಗಳನ್ನು ತಿಳಿದುಕೊಂಡು ವಾರಾಣಸಿಯ ಪಾರ್ಶ್ವದಲ್ಲಿ ವಾಸಿಸಿದರು. ವ್ಯಾಸರು ಇಲ್ಲಿ ವಾಸಿಸುತ್ತಿದ್ದಾರೆಂದು ತಿಳಿದ ಪಂಡಿತರೆಲ್ಲರೂ ಈ ಕ್ಷೇತ್ರಕ್ಕೆ ಬರುತ್ತಾರೆ. ಆದ್ದರಿಂದ ಸರ್ವಪ್ರಯತ್ನಗಳನ್ನೂ ಮಾಡಿ ವಾರಾಣಸಿಯಲ್ಲಿ ವಾಸಿಸಬೇಕು.

**ಸೂತ ಉವಾಚ :**

ಯಾರು ಅವಿಮುಕ್ತ ಕ್ಷೇತ್ರದ ಮಹಿಮೆಯನ್ನು ಕೇಳುವರೋ, ಶಾಂತಮನಸ್ಸಿನ ದ್ವಿಜರಿಗೆ ಹೇಳುವರೋ ಅವರು ಸದ್ಗತಿಯನ್ನು ಪಡೆಯುತ್ತಾರೆ. ಶ್ರಾದ್ಧಕಾಲದಲ್ಲಿ ದೇವತಾಕಾರ್ಯದ ಕಾಲದಲ್ಲಿ, ರಾತ್ರಿಯಲ್ಲಾಗಲಿ, ಹಗಲಿನಲ್ಲಾಗಲಿ, ನದೀತೀರಗಳಲ್ಲಿ ಅಥವಾ ದೇವಾಲಯ ಗಳಲ್ಲಿ ಯಾರು ಈ ಅವಿಮುಕ್ತ ಕ್ಷೇತ್ರದ ಮಹಿಮೆಯನ್ನು ಕೇಳುವರೋ ಅಥವಾ ಹೇಳುತ್ತಾರೋ ಮತ್ತು ಕಾಮಕ್ರೋಧಗಳನ್ನು ಬಿಟ್ಟು ಶಿವನಿಗೆ ನಮಸ್ಕರಿಸುತ್ತಾರೋ ಅವರು ಮುಕ್ತಿಯನ್ನು ಹೊಂದುತ್ತಾರೆ. *

## ಪ್ರಯಾಗಕ್ಷೇತ್ರದ ಮಹಿಮೆ

**ಅಧ್ಯಾಯ-೩೬**

**ಋಷಯ ಊಚುః :** (ನೈಮಿಷಾರಣ್ಯ ವಾಸಿಗಳಾದ, ಸತ್ರಯಾಗವನ್ನು ಮಾಡುತ್ತಿದ್ದ ಋಷಿಗಳು, ಅಧ್ಯಾಯ ಒಂದನ್ನು ನೋಡಿ)

ಅವಿಮುಕ್ತ ಕ್ಷೇತ್ರದ ಮಾಹಾತ್ಮ್ಯವನ್ನು ಚೆನ್ನಾಗಿ ಹೇಳಿದಿರಿ. ಈಗ ಪ್ರಯಾಗಕ್ಷೇತ್ರದ ಮಾಹಾತ್ಮ್ಯವನ್ನು ದಯವಿಟ್ಟು ಹೇಳಿರಿ. ಎಲ್ಲ ವಿಚಾರಗಳನ್ನೂ ತಿಳಿದಿರುವ ನೀವು ಪ್ರಯಾಗಕ್ಷೇತ್ರದ ಪ್ರಸಿದ್ಧ ಮತ್ತು ಶ್ರೇಷ್ಠ ತೀರ್ಥಗಳ ಬಗ್ಗೆ ನಮಗೆ ದಯವಿಟ್ಟು ತಿಳಿಸಿರಿ.

**ಸೂತ ಉವಾಚ :**

ಋಷಿಗಳೇ! ಪ್ರಯಾಗದ ಮಹಿಮೆಯನ್ನು ವಿಸ್ತರವಾಗಿ ಹೇಳುತ್ತೇನೆ. ದಯವಿಟ್ಟು ಕೇಳಿರಿ. ಚತುರ್ಮುಖಬ್ರಹ್ಮದೇವರ ಸನ್ನಿಧಾನವುಳ್ಳ ಈ ಕ್ಷೇತ್ರದ ಮಹಿಮೆಯನ್ನು ಮಾರ್ಕಂಡೇಯರು ಯುಧಿಷ್ಠಿರನಿಗೆ ಹೇಳಿದರು. ಅದನ್ನೇ ನಾನು ನಿಮಗೆ ಹೇಳುತ್ತೇನೆ.

ಯುಧಿಷ್ಠಿರ ಮತ್ತು ಅವನ ಸೋದರರು ಯುದ್ಧದಲ್ಲಿ ಕೌರವರೆಲ್ಲರನ್ನೂ ಕೊಂದರು. ಯುದ್ಧ ಮುಗಿದನಂತರ ಯುಧಿಷ್ಠಿರನು ಬಹಳ ಶೋಕಕ್ಕೆ ಒಳಗಾದನು. ಅವನಿಗೆ ಏನೂ ತೋಚದಂತಾಯಿತು. ಆಗ ಒಂದು ದಿನ ಮಾರ್ಕಂಡೇಯರು ಹಸ್ತಿನಾವತಿಗೆ ಹೋದರು. ಯುಧಿಷ್ಠಿರನು ಅವರನ್ನು ಬಹಳ ಭಕ್ತಿಯಿಂದ ಸ್ವಾಗತಿಸಿ ''ಇಂದು ನನ್ನ ಜನ್ಮ ಸಫಲ ವಾಯಿತು, ನನ್ನ ಕುಲಕ್ಕೆ ಸದ್ಗತಿಯ ಅವಕಾಶವು ಒದಗಿತು, ನನ್ನ ಪಿತೃಗಳಿಗೆ ಸಂತುಷ್ಟಿ ಯಾಯಿತು'' ಎಂದು ಹೇಳಿದನು. ಸಿಂಹಾಸನದಲ್ಲಿ ಕೂಡಿಸಿ, ಪಾದಪ್ರಕ್ಷಾಲನ, ಪೂಜೆ ಮೊದಲಾದ ವಿಧಿಗಳಿಂದ ಆ ಮುನಿಯನ್ನು ಪೂಜಿಸಿದನು. ಕೊನೆಗೆ ಶಿರಸಾ ನಮಸ್ಕರಿಸಿ ಹೇಳಿದನು. ''ಕೌರವರ ವಿರುದ್ಧ ನಡೆಸಿದ ಯುದ್ಧದಲ್ಲಿ ನಾವು ಬಹಳ ಜನ ನಿರಪರಾಧಿ ಗಳನ್ನು ಕೊಂದಿದ್ದೇವೆ. ಈ ಹಿಂಸೆಯಿಂದ ಉಂಟಾದ ಮತ್ತು ಜನ್ಮಾಂತರಗಳಲ್ಲಿ ಮಾಡಿರುವ ಪಾಪದಿಂದ ಬಿಡುಗಡೆಯನ್ನು ಪಡೆಯಲು ಏನು ಮಾಡಬೇಕು ? ದಯವಿಟ್ಟು ತಿಳಿಸಿರಿ.''

**ಮಾರ್ಕಂಡೇಯ ಉವಾಚ :**

''ಮಹಾರಾಜನೆ! ಪ್ರಯಾಗಯಾತ್ರೆಯು ಮಾನವರ ಎಲ್ಲ ಪಾಪಗಳನ್ನೂ ಪರಿಹರಿಸು ತ್ತದೆ. ಅಲ್ಲಿ ಮಹಾದೇವ ರುದ್ರನು ವಾಸವಾಗಿದ್ದಾನೆ. ಭಗವಾನ್ ಬ್ರಹ್ಮನು ದೇವತೆ ಗಳೊಂದಿಗೆ ಅಲ್ಲಿ ಸನ್ನಿಹಿತನಾಗಿದ್ದಾನೆ.''

**ಯುಧಿಷ್ಠಿರ ಉವಾಚ :**

''ಪೂಜ್ಯರೆ! ಪ್ರಯಾಗಯಾತ್ರೆಯಿಂದ ಏನು ಫಲ? ಅಲ್ಲಿ ಸ್ನಾನ ಮಾಡಿದರೆ, ಮೃತರಾದರೆ ಏನು ಫಲ ? ಪ್ರಯಾಗದಲ್ಲಿ ವಾಸ ಮಾಡಿದರೆ ಏನು ಫಲ? ದಯವಿಟ್ಟು ತಿಳಿಸಿರಿ.''

**ಮಾರ್ಕಂಡೇಯ ಉವಾಚ :**

"ಮಹಾರಾಜ! ಹಿಂದಿನ ಋಷಿಗಳು ಹೇಳಿರುವಂತೆ ಪ್ರಯಾಗಸ್ನಾನದ ಫಲವನ್ನು ಹೇಳುತ್ತೇನೆ. ಕೇಳು :" "ಪ್ರಯಾಗವು ಚತುರ್ಮುಖಬ್ರಹ್ಮದೇವನ ಕ್ಷೇತ್ರವೆಂದು ಮೂರು ಲೋಕದಲ್ಲಿ ಪ್ರಸಿದ್ಧವಾಗಿದೆ. ಇಲ್ಲಿ ಸ್ನಾನ ಮಾಡಿದವರು ಸ್ವರ್ಗಕ್ಕೆ ಹೋಗುತ್ತಾರೆ. ಇಲ್ಲಿ ಮೃತರಾದವರು ಮುಕ್ತರಾಗುತ್ತಾರೆ. ಬ್ರಹ್ಮಾದಿದೇವತೆಗಳೇ ಇಲ್ಲಿ ವಾಸಿಸುವವರನ್ನು ರಕ್ಷಿಸುತ್ತಾರೆ. ಎಲ್ಲ ಪಾಪಗಳನ್ನೂ ಪರಿಹರಿಸುವ ಅನೇಕ ತೀರ್ಥಗಳು ಈ ಕ್ಷೇತ್ರದಲ್ಲಿವೆ. ಪ್ರಯಾಗಕ್ಷೇತ್ರದ ಮಹಿಮೆಯನ್ನು ಪೂರ್ಣವಾಗಿ ಹೇಳಲು ನೂರಾರು ವರ್ಷಗಳು ಸಾಕಾಗುವುದಿಲ್ಲ. ಸಂಕ್ಷೇಪವಾಗಿ ಹೇಳುತ್ತೇನೆ."

"ಅರವತ್ತುಸಾವಿರ ಧನುರ್ಧಾರಿಗಳು ಜಾಹ್ನವಿಯನ್ನು ರಕ್ಷಿಸುತ್ತಾರೆ. ಏಳು ಕುದುರೆಗಳು ಎಳೆಯುವ ರಥದಲ್ಲಿ ಸಂಚರಿಸುವ ಸೂರ್ಯನು ಯಮುನೆಯನ್ನು ಯಾವಾಗಲೂ ರಕ್ಷಿಸುತ್ತಾನೆ. ಪ್ರಯಾಗದಲ್ಲಿ ಇಂದ್ರನ ವಿಶೇಷ ಸನ್ನಿಧಾನವಿದೆ. ಇಡೀ ಪ್ರಯಾಗ ಮಂಡಲವನ್ನು ಹರಿಯು ರಕ್ಷಿಸುತ್ತಾನೆ. ಶೂಲಪಾಣಿಯಾದ ಮಹೇಶ್ವರನು ಇಲ್ಲಿಯ ನ್ಯಗ್ರೋಧಮರವನ್ನು ರಕ್ಷಿಸುತ್ತಾನೆ. ಸರ್ವಪಾಪಗಳನ್ನೂ ಪರಿಹರಿಸುವ ಈ ಶುಭಸ್ಥಾನವನ್ನು ಎಲ್ಲ ದೇವತೆಗಳೂ ರಕ್ಷಿಸುತ್ತಾರೆ. ಕರ್ಮಬಂಧನಕ್ಕೊಳಗಾದವರು ಪ್ರಯಾಗದ ಶುಭಸ್ಥಾನಕ್ಕೆ ಹೋಗಲು ಆಗುವುದಿಲ್ಲ. ಅತ್ಯಲ್ಪ ಪಾಪವನ್ನು ಮಾಡಿದವರು ಮತ್ತು ಅದನ್ನು ಉಳಿಸಿ ಕೊಂಡಿರುವವರು ಈ ಸ್ಥಾನಕ್ಕೆ ಹೋಗಲಾಗುವುದಿಲ್ಲ. ಪ್ರಯಾಗದ ಸ್ಮರಣೆಯನ್ನು ಮಾಡುವುದರಿಂದ, ಅಲ್ಲಿಯ ತೀರ್ಥಗಳ ದರ್ಶನದಿಂದ ಮತ್ತು ಅವುಗಳ ಹೆಸರನ್ನು ಹೇಳುವುದರಿಂದ ಎಲ್ಲ ಪಾಪಗಳೂ ನಾಶವಾಗುತ್ತವೆ. ಈ ಕ್ಷೇತ್ರದ ಮೃತ್ತಿಕಾಸ್ಪರ್ಶವನ್ನು ಮಾಡಿದರೂ ಸಕಲ ಪಾಪಗಳೂ ನಾಶವಾಗುತ್ತವೆ. ಇಲ್ಲಿ ಐದು ಕುಂಡಗಳೂ ಅವುಗಳ ಮಧ್ಯೆ ಜಾಹ್ನವಿಯೂ ಇದೆ. ಪ್ರಯಾಗವನ್ನು ಪ್ರವೇಶಮಾಡಿದವನ ಪಾಪವು ಕೂಡಲೇ ನಶಿಸುತ್ತದೆ. ಸಾವಿರಾರು ಯೋಜನ ದೂರದಿಂದ ಗಂಗೆಯ ಸ್ಮರಣೆಯನ್ನು ಮಾಡುವ ಮನುಷ್ಯನೂ ಕೂಡ, ಅವನು ಎಷ್ಟೇ ಪಾಪಗಳನ್ನು ಮಾಡಿದ್ದರೂ ಸದ್ಗತಿಯನ್ನು ಪಡೆಯುತ್ತಾನೆ. ಸಾವಿರಾರು ಯೋಜನ ದೂರದಿಂದ ಗಂಗೆಯ ಕೀರ್ತನೆ ಮಾಡಿದರೂ ಪಾಪದಿಂದ ಬಿಡುಗಡೆಯಾಗುತ್ತದೆ. ಗಂಗೆಯನ್ನು ನೋಡಿದವನಂತೂ ಎಲ್ಲ ಮಂಗಳವನ್ನೂ ಕಾಣುತ್ತಾನೆ. ರಾಜನೇ! ವ್ಯಾಧಿಗ್ರಸ್ತನಾದ, ದೀನನಾದ, ಕ್ರುದ್ಧನಾದ ನರನೂ ಕೂಡ ಗಂಗೆಯ ಸ್ನಾನ, ಆಚಮನಗಳಿಂದ ಶುದ್ಧನಾಗಿ ದೇವಲೋಕದಲ್ಲಿ ಮಾನ್ಯತೆಯನ್ನು ಪಡೆಯುವನು. ಗಂಗಾಸ್ನಾನ ಮಾಡಿದವರ ಪಿತೃಗಳು ಬಿಡುಗಡೆಯನ್ನು ಪಡೆಯುತ್ತಾರೆ. ಅಂತಹವರ ಸಕಲಪಾಪಗಳೂ ನಾಶವಾಗುತ್ತವೆ. ಪ್ರಯಾಗದಲ್ಲಿ ವಾಸಮಾಡಿದವರು ಸಂಸಾರಸಾಗರವನ್ನೇ ದಾಟುತ್ತಾರೆ. ಗಂಗಾ-ಯಮುನಾ ಸಂಗಮದಲ್ಲಿ (ವಿಧಿಗೆ ಅನುಗುಣವಾಗಿ) ಪ್ರಯತ್ನಪಟ್ಟು ಪ್ರಾಣತ್ಯಾಗ ಮಾಡಿದವರ ಎಲ್ಲ ಅಪೇಕ್ಷೆಗಳೂ ಈಡೇರುತ್ತವೆ. ಹೀಗೆ ಪ್ರಾಣತ್ಯಾಗ

ಮಾಡಿದವನು ಹೊಳೆಯುವ ಬಂಗಾರದ ಬಣ್ಣವನ್ನು ಹೊಂದಿರುವ, ಸೂರ್ಯನಂತೆ ಹೊಳೆಯುವ, ಎಲ್ಲ ವಿಧವಾದ ರತ್ನಗಳಿಂದ ಭೂಷಿತವಾದ, ನಾನಾಧ್ವಜಗಳಿಂದ ಅಲಂಕೃತವಾದ, ವರಾಂಗನೆಯರಿರುವ ಹಾರುವ ಬಂಗಲೆಗಳಲ್ಲಿ ಆನಂದ ವನ್ನನುಭವಿಸುತ್ತಾನೆ. ಶುಭಲಕ್ಷಣಗಳನ್ನು ಹೊಂದಿದ ಇಂತಹ ವ್ಯಕ್ತಿಯನ್ನು ಗೀತ ಮತ್ತು ವಾದ್ಯಘೋಷಗಳಿಂದ ನಿದ್ರೆಯಿಂದ ಎಬ್ಬಿಸುತ್ತಾರೆ. ತನ್ನ ಜನ್ಮದ ನೆನಪು ಆಗದಿರುವವರೆಗೆ ಇವನು ಸ್ವರ್ಗಲೋಕದಲ್ಲಿ ಪೂಜ್ಯನಾಗಿರುತ್ತಾನೆ. ಜನ್ಮವು ನೆನಪಾದರೆ ಪುಣ್ಯವು ಮುಗಿದಿದೆ ಎಂದು ಅರ್ಥ. ಪುಣ್ಯ ಮುಗಿದವನು ಸ್ವರ್ಗದಿಂದ ಪರಿಭ್ರಷ್ಟನಾಗಿ ಹಿರಣ್ಯ-ರತ್ನಗಳ ಸಮೃದ್ಧಿಯನ್ನು ಹೊಂದಿದ ಕುಲದಲ್ಲಿ ಹುಟ್ಟುತ್ತಾನೆ. ಆದೇ ಗಂಗಾ-ಯಮುನಾ ಸಂಗಮದ ನೆನಪು ಅವನಿಗೆ ಆಗುತ್ತದೆ. ಅಲ್ಲಿಗೇ ಹೋಗುತ್ತಾನೆ. ಸ್ವದೇಶದಲ್ಲಾಗಲಿ, ವಿದೇಶದಲ್ಲಾಗಲಿ, ಸ್ವಗೃಹದಲ್ಲಾಗಲಿ, ಅರಣ್ಯದಲ್ಲಾಗಲಿ, ಪ್ರಯಾಗವನ್ನು ಸ್ಮರಿಸುತ್ತಾ ಪ್ರಾಣತ್ಯಾಗವನ್ನು ಮಾಡುವವನು ಬ್ರಹ್ಮಲೋಕವನ್ನು ಹೊಂದುವನು. ಎಲ್ಲ ಅಪೇಕ್ಷೆಗಳನ್ನು ಈಡೇರಿಸುವ ವೃಕ್ಷಗಳು, ಬಂಗಾರದ ಭೂಮಿ, ಋಷಿಗಳು, ಮುನಿಗಳು, ಸಿದ್ಧರೂ ಇರುವ ಲೋಕಕ್ಕೆ ಹೋಗುವನು.

ಪುಣ್ಯಕರ್ಮಗಳನ್ನು ಮಾಡಿದವನು ಮಾತ್ರ ರಮ್ಯವಾದ ದೇವಲೋಕದ ಮಂದಾಕಿನೀ ತೀರದಲ್ಲಿ ಮುನಿಗಳ ಜೊತೆ ಸಂತೋಷವಾಗಿರುವ ಅವಕಾಶವನ್ನು ಪಡೆಯುತ್ತಾನೆ. ಸಿದ್ಧರು, ಚಾರಣರು, ಗಂಧರ್ವರು ದೇವತೆಗಳು, ದಾನವರು -ಇವರುಗಳಿಂದ ಪೂಜಿತನಾಗುತ್ತಾನೆ.

ಸ್ವರ್ಗವಾಸದ ಅವಧಿಯು ಮುಗಿದನಂತರ ಭೂಮಿಗೆ ಬರುವ ವ್ಯಕ್ತಿಯು ಜಂಬೂದ್ವೀಪದ ಅಧಿಪತಿಯಾಗುತ್ತಾನೆ. ಮತ್ತೆ ಶುಭಕರ್ಮಗಳನ್ನೇ ಪುನಃ ಪುನಃ ಚಿಂತಿಸುತ್ತಾ ಗುಣವಂತನೂ, ಶೀಲಸಂಪನ್ನನೂ ಆಗುತ್ತಾನೆ ಎಂದು ಜ್ಞಾನಿಗಳು ಹೇಳುವುದನ್ನು ಕೇಳಿದ್ದೇವೆ. ಅವನು ಕಾಯಾ, ವಾಚಾ, ಮನಸಾ ಸತ್ಯ-ಧರ್ಮನಿಷ್ಠನಾಗಿರುತ್ತಾನೆ. ಗಂಗಾ-ಯಮುನೆ ಯರ ಮಧ್ಯದಲ್ಲಿ ಅನ್ನ, ಬಂಗಾರ, ಮುತ್ತು-ರತ್ನ ಮುಂತಾದವುಗಳ ಪರಿಗ್ರಹವನ್ನು ಮಾಡುವ ನರನು, ಆ ಪರಿಗ್ರಹದಿಂದ ಫಲವನ್ನು ಅನುಭವಿಸುತ್ತಿರುವವರೆಗೂ, ಮಾಡುವ ಸತ್ಕರ್ಮ ಗಳು, ಪಿತೃಯಜ್ಞ ಮೊದಲಾದುವುಗಳೆಲ್ಲವೂ ನಿಷ್ಫಲವಾಗುತ್ತವೆ. ಆದ್ದರಿಂದ ತೀರ್ಥಗಳಲ್ಲಿ, ಪುಣ್ಯಸ್ಥಳಗಳಲ್ಲಿ, ಯಾವುದೇ ನಿಮಿತ್ತದಿಂದ ಪರಿಗ್ರಹವನ್ನು ಮಾಡಬಾರದು. ಈ ವಿಷಯ ದಲ್ಲಿ ಎಚ್ಚರದಿಂದಿರಬೇಕು. ಪುಣ್ಯಕ್ಷೇತ್ರದಲ್ಲಿ ಕೊಂಬಿಗೆ ಬಂಗಾರವನ್ನು ಕಟ್ಟಿರುವ, ಗೊರಸಿಗೆ ಬೆಳ್ಳಿಯನ್ನು ಕಟ್ಟಿರುವ, ಕಿವಿಗೆ ವಸ್ತ್ರಾಲಂಕಾರವನ್ನು ಮಾಡಿರುವ ಹಾಲು ಕರೆಯುವ, ಕಪಿಲ, ಪಾಟಲ ಅಥವಾ ಕಪ್ಪುಬಣ್ಣದ ಹಸುವನ್ನು ದಾನಮಾಡಿದವನು ಆ ಹಸುವಿನ ಶರೀರದಲ್ಲಿ ಎಷ್ಟು ರೋಮಗಳು ಇರುತ್ತವೋ ಅಷ್ಟು ವರ್ಷಗಳ ಕಾಲ ರುದ್ರಲೋಕದಲ್ಲಿ ಮಾನ್ಯನಾಗುತ್ತಾನೆ.

* * *

## ನಾನಾತೀರ್ಥಗಳ ಮಹಿಮೆ-ಗಂಗಾಮಹಿಮೆ | ಅಧ್ಯಾಯ-೩೭

**ಮಾರ್ಕಂಡೇಯ ಉವಾಚ :**

ಮಹಾರಾಜ! ಋಷಿಸಮ್ಮತವಾದ ತೀರ್ಥಯಾತ್ರೆಯ ವಿಧಾನವನ್ನು ನಾನು ನೋಡಿರುವಂತೆ ಮತ್ತು ಕೇಳಿರುವಂತೆ ಹೇಳುತ್ತೇನೆ.

ಪ್ರಯಾಗಯಾತ್ರೆ ಮಾಡುವವನು ಎತ್ತಿನ ಮೇಲೆ ಕುಳಿತು ಪ್ರಯಾಣ ಮಾಡಬಾರದು. ಹಾಗೆ ಮಾಡಿದರೆ ಸಾವಿರಾರು ವರ್ಷಗಳ ಕಾಲ ಘೋರ ನರಕದಲ್ಲಿ ಬೀಳುತ್ತಾನೆ. ಗೋವುಗಳ ಘೋರ ಕ್ರೋಧಕ್ಕೆ ಗುರಿಯಾಗುತ್ತಾನೆ. ಚಿಕ್ಕಮಕ್ಕಳನ್ನು, ಅವರಿಗೆ ಆಹಾರ ಕೊಡದೆ, ಬಿಟ್ಟುಬಿಡುವವನ ತರ್ಪಣವನ್ನು ಪಿತೃಗಳು ಹೇಗೆ ಸ್ವೀಕರಿಸುವುದಿಲ್ಲವೋ ಹಾಗೆ ಎತ್ತಿನ ಮೇಲೆ ಕುಳಿತು ಪ್ರಯಾಗಯಾತ್ರೆ ಮಾಡಿದವನ ತರ್ಪಣವನ್ನು ಪಿತೃಗಳು ಸ್ವೀಕರಿಸುವುದಿಲ್ಲ. ಐಶ್ವರ್ಯವಿದೆಯೆಂಬ ಕಾರಣದಿಂದ ಅಥವಾ ಮೋಹದಿಂದ ವಾಹನದಲ್ಲಿ ಕುಳಿತು ಮಾಡುವ ತೀರ್ಥಯಾತ್ರೆ ವ್ಯರ್ಥ. ಆದ್ದರಿಂದ ಯಾನವನ್ನು ಉಪಯೋಗಿಸಬಾರದು.

ಗಂಗಾ-ಯಮುನಾ ನದಿಗಳ ಮಧ್ಯದಲ್ಲಿರುವ ಕ್ಷೇತ್ರದಲ್ಲಿ ತನ್ನ ಐಶ್ವರ್ಯಕ್ಕೆ ಅನುಗುಣವಾದ ವೈಭವದಿಂದ, ಋಷಿಸಮ್ಮತವಾದ ವಿಧಾನದಿಂದ ಯಾರು ಕನ್ಯಾದಾನವನ್ನು ಮಾಡುತ್ತಾರೋ ಅವರು ಈ ಸತ್ಕರ್ಮದ ಫಲವಾಗಿ ಘೋರನರಕಕ್ಕೆ ಹೋಗುವ ಪ್ರಸಂಗವನ್ನು ತಪ್ಪಿಸಿಕೊಳ್ಳುತ್ತಾರೆ. ಯಾರು ಉತ್ತರ ಕುರುಕ್ಷೇತ್ರದಲ್ಲಿ ಬಹಳ ಕಾಲ ವಾಸಿಸಿ ಅಲ್ಲಿಯ ವಟವೃಕ್ಷದ ಬುಡದಲ್ಲಿ ಕುಳಿತು ಪ್ರಾಣತ್ಯಾಗವನ್ನು ಮಾಡುವನೋ ಅವನು ಸ್ವರ್ಗಲೋಕವನ್ನು ದಾಟಿ ರುದ್ರಲೋಕಕ್ಕೆ ಹೋಗುತ್ತಾನೆ. ಅಲ್ಲಿ ಬ್ರಹ್ಮಾದಿ ಸಕಲದೇವತೆಗಳೂ ಲೋಕಪಾಲರು, ಎಲ್ಲ ಪಿತೃಗಳೂ, ಸನತ್ಕುಮಾರ ಮೊದಲಾದ ಬ್ರಹ್ಮರ್ಷಿಗಳು, ನಾಗಗಳು, ಪಕ್ಷಿಗಳು ಮತ್ತು ಸಿದ್ಧರೂ ಇದ್ದಾರೆ. ಚತುರ್ಮುಖಬ್ರಹ್ಮದೇವರಿಂದ ಪುರಸ್ಕೃತನಾಗಿ ಭಗವಾನ್ ಶ್ರೀಹರಿಯೂ ಅಲ್ಲಿದ್ದಾನೆ.

ಗಂಗೆ-ಯಮುನೆಯ ಮಧ್ಯದಲ್ಲಿರುವ ಭೂಪ್ರದೇಶವು ಭೂಮಂಡಲದ ಜಘನ ಎಂದು ಪ್ರಸಿದ್ಧ. ಪ್ರಯಾಗವು ಮೂರು ಲೋಕದಲ್ಲಿ ಪ್ರಸಿದ್ಧ. ಗಂಗಾ-ಯಮುನೆಯರ ಸಂಗಮದಲ್ಲಿ ಯಾರು ನಿಯಮವಂತನಾಗಿ ಸ್ನಾನವನ್ನು ಮಾಡುತ್ತಾನೋ ಅವನು ರಾಜಸೂಯ-ಅಶ್ವಮೇಧಗಳ ಫಲವನ್ನು ಪಡೆಯುತ್ತಾನೆ. ತಾಯಿಯ ಮಾತಿನಿಂದಾಗಲಿ, ಜನರ ಮಾತಿನಿಂದಾಗಲಿ ಪ್ರಯಾಗಕ್ಕೆ ಹೋಗುವ ಆಲೋಚನೆಯನ್ನು ಬಿಟ್ಟುಬಿಡಬಾರದು. ಪ್ರಯಾಗದಲ್ಲಿ ಅರವತ್ತು ಸಾವಿರ ತೀರ್ಥಗಳ ಮತ್ತು ಅರವತ್ತು ಕೋಟಿ ತೀರ್ಥಗಳ ಸನ್ನಿಧಾನವಿದೆ. ಸರ್ವವನ್ನೂ ಭಗವಂತನಿಗೆ ಸಮರ್ಪಿಸಿದ, ಸಂನ್ಯಾಸಿಯಾದ ಜ್ಞಾನಿಗೆ ಪ್ರಾಣತ್ಯಾಗಾನಂತರ ಯಾವ ಗತಿ ಆಗುವುದೋ ಆ ಸದ್ಗತಿಯು ಗಂಗಾ-ಯಮುನಾ ಸಂಗಮದಲ್ಲಿ ಪ್ರಾಣತ್ಯಾಗ ಮಾಡಿದವರಿಗೆ ಆಗುವುದು. ಪ್ರಯಾಗಯಾತ್ರೆಯನ್ನು ಮಾಡದವರ ಜೀವನ ನಿರರ್ಥಕ.

ಪರಮಪದವನ್ನು ಕೊಡುವ ಪ್ರಯಾಗವನ್ನು ನೋಡಿದವರು ಸಕಲ ಪಾಪಗಳಿಂದಲೂ, ರಾಹುವಿನಿಂದ ಚಂದ್ರನು ಬಿಡುಗಡೆ ಪಡೆಯುವಂತೆ, ಬಿಡುಗಡೆಯನ್ನು ಪಡೆಯುತ್ತಾರೆ.

ಯಮುನೆಯ ದಕ್ಷಿಣತೀರದಲ್ಲಿ ಕಂಬಲನಾಗ ಮತ್ತು ಅಶ್ವತರನಾಗ ಎಂಬ ಎರಡು ತೀರ್ಥಗಳಿವೆ. ಅಲ್ಲಿ ಸ್ನಾನ ಮಾಡಿದವರು ಮತ್ತು ಆ ಜಲವನ್ನು ಪಾನ ಮಾಡಿದವರು ಸಕಲ ಪಾಪಗಳಿಂದ ಬಿಡುಗಡೆಯನ್ನು ಪಡೆಯುತ್ತಾರೆ. ಮಹಾದೇವನ ಸನ್ನಿಧಾನವಿರುವ ಆ ಕ್ಷೇತ್ರದ ತೀರ್ಥಗಳಲ್ಲಿ ಸ್ನಾನ ಮಾಡಿದವನ ವಂಶದ ಹತ್ತು ಜನ ಪೂರ್ವಜರು ಮತ್ತು ಹತ್ತು ಜನ ಮುಂದಿನವರು ಸದ್ಗತಿಯನ್ನು ಹೊಂದುವರು. ಸ್ನಾನ ಮಾಡಿದವನು ಅಶ್ವಮೇಧದ ಫಲವನ್ನು ಹೊಂದುವನು. ಪ್ರಲಯವಾಗುವವರೆಗೆ ಸ್ವರ್ಗಲೋಕದಲ್ಲಿರುವನು.

ಗಂಗೆಯ ಪೂರ್ವಪಾರ್ಶ್ವದಲ್ಲಿ ತ್ರಿಲೋಕವಿಖ್ಯಾತವಾದ, ಸರ್ವಸಮುದ್ರಗಳ ಸಂಗಮ ದಂತಿರುವ ಒಂದು ಜಲಾಶಯ ಮತ್ತು ಪ್ರತಿಷ್ಠಾನ ಎಂಬ ಕ್ಷೇತ್ರವು ಇರುವುದು. ಆ ಕ್ಷೇತ್ರದಲ್ಲಿ ಮೂರುದಿನ ಕೋಪರಹಿತನಾಗಿ, ಬ್ರಹ್ಮಚರ್ಯದಿಂದ ಇರುವವನು ಸರ್ವಪಾಪವಿಶುದ್ಧನಾಗಿ ಅಶ್ವಮೇಧದ ಫಲವನ್ನು ಹೊಂದುವನು.

ಪ್ರತಿಷ್ಠಾನದ ಉತ್ತರದಲ್ಲಿ, ಭಾಗೀರಥಿಯ ಎಡಗಡೆ ಹಂಸಪ್ರಥಿತ ಎಂಬ ಮೂರು ಲೋಕದಲ್ಲಿ ಪ್ರಸಿದ್ಧವಾದ ತೀರ್ಥವಿದೆ. ಈ ತೀರ್ಥದ ಸ್ಮರಣೆಯಿಂದಲೇ ಅಶ್ವಮೇಧದ ಫಲವು ಲಭಿಸುವುದು. ಸ್ಮರಣೆ ಮಾಡಿದವನು ಸೂರ್ಯ-ಚಂದ್ರರಿರುವವರೆಗೆ ಸ್ವರ್ಗಲೋಕ ದಲ್ಲಿ ಪೂಜ್ಯನಾಗಿರುತ್ತಾನೆ.

ರಮ್ಯವೂ, ವಿಶಾಲವೂ, ಹಂಸಪಕ್ಷಿಗಳ ವಾಸದಿಂದ ಶುದ್ಧವೂ ಆದ ಉರ್ವಶೀಪುಲಿನ ಎಂಬ ಕ್ಷೇತ್ರದಲ್ಲಿ ಪ್ರಾಣತ್ಯಾಗ ಮಾಡುವವನು. ಅರವತ್ತುಸಾವಿರದ ಆರುನೂರುವರ್ಷ ಪಿತೃಗಳ ಜೊತೆ ಸ್ವರ್ಗಲೋಕದಲ್ಲಿರುತ್ತಾನೆ.

ಸಂಧ್ಯಾವಟಕ್ಷೇತ್ರದಲ್ಲಿ, ಏಕಾಗ್ರಚಿತ್ತನಾಗಿ ಬ್ರಹ್ಮಚರ್ಯದಿಂದ ಇದ್ದು ಉಪಾಸನೆ ಮಾಡುವವನು ಬ್ರಹ್ಮಲೋಕವನ್ನು ಹೊಂದುವನು.

ಕೋಟಿತೀರ್ಥಕ್ಕೆ ಹೋಗಿ ಪ್ರಾಣಪರಿತ್ಯಾಗವನ್ನು ಮಾಡುವವನು ಒಂದುಸಾವಿರಕೋಟಿ ವರ್ಷ ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ.

ಅನೇಕ ತೀರ್ಥ, ತಪೋವನಗಳಿಂದ ಕೂಡಿದ, ಮಹಾಪವಿತ್ರವಾದ ಗಂಗೆಯು ಎಲ್ಲಿ ಹರಿಯುವುದೋ ಅದು ಸಿದ್ಧಕ್ಷೇತ್ರವೆಂದು ತಿಳಿಯಬೇಕು. ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಈ ಗಂಗೆಯು ಭೂಮಿಯಲ್ಲಿ ಮರ್ತ್ಯರನ್ನೂ, ಪಾತಾಳದಲ್ಲಿ ನಾಗಗಳನ್ನೂ, ಸ್ವರ್ಗಲೋಕದಲ್ಲಿ ದೇವತೆಗಳನ್ನೂ ಸದ್ಗತಿಗೆ ಒಯ್ಯುತ್ತದೆ. ಆದ್ದರಿಂದ ಈ ನದಿಗೆ ತ್ರಿಪಥಾ ಎಂದು ಹೆಸರು.

ಮೃತನಾದ ಮಾನವನ ಅಸ್ಥಿಗಳು ಎಷ್ಟು ಕಾಲ ಗಂಗೆಯಲ್ಲಿರುತ್ತದೋ ಅಷ್ಟುಕಾಲ ಅವನು ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ. ಗಂಗೆಯು ತೀರ್ಥಗಳಲ್ಲಿ ಉತ್ತಮವಾದ ತೀರ್ಥ. ನದಿಗಳಲ್ಲಿ ಶ್ರೇಷ್ಠವಾದ ನದಿ. ಮಹಾಪಾತಕಗಳನ್ನು ಮಾಡಿದವರಿಗೂ ಮೋಕ್ಷವನ್ನು ಕೊಡುವ ಪುಣ್ಯನದಿ. ಗಂಗಾದ್ವಾರ, ಪ್ರಯಾಗ ಮತ್ತು ಗಂಗಾ-ಸಾಗರ ಸಂಗಮಗಳಿಗೆ ಹೋಗಿ ಗಂಗೆಯಲ್ಲಿ ಸ್ನಾನಾದಿಗಳನ್ನು ಮಾಡುವುದು ಬಹಳ ಕಷ್ಟ. ಬೇರೆ ಸ್ಥಾನಗಳಲ್ಲಿ ಸುಲಭವಾಗಿ ಗಂಗೆಯನ್ನು ಸಮೀಪಿಸಬಹುದು. ಪಾಪಗಳನ್ನು ತುಂಬಿಕೊಂಡಿರುವ, ಸದ್ಗತಿಗಾಗಿ ಪ್ರಯತ್ನ ಮಾಡುತ್ತಿರುವ ಎಲ್ಲರಿಗೂ ಗಂಗೆಗೆ ಸದೃಶವಾದ ಗಮ್ಯಸ್ಥಾನವಿಲ್ಲ. ಶಿವನ ಜಟೆಯಿಂದ ಹರಿದ, ಸರ್ವಪಾಪವನ್ನೂ ಪರಿಹರಿಸುವ ಗಂಗೆ ಪವಿತ್ರಗಳಲ್ಲಿ ಪವಿತ್ರ. ಮಂಗಳವಸ್ತುಗಳಿಗೂ ಮಂಗಳವುಂಟುಮಾಡುವವಳು.

ಕೃತಯುಗದಲ್ಲಿ ನೈಮಿಷತೀರ್ಥಶ್ರೇಷ್ಠ. ತ್ರೇತಾಯುಗದಲ್ಲಿ ಪುಷ್ಕರವು ಶ್ರೇಷ್ಠ. ದ್ವಾಪರಯುಗದಲ್ಲಿ ಕುರುಕ್ಷೇತ್ರ ಶ್ರೇಷ್ಠ. ಕಲಿಯುಗದಲ್ಲಿ ಗಂಗೆಯು ವಿಶಿಷ್ಟವಾದುದು. ಕಲಿಯುಗದಲ್ಲಿ ಎಲ್ಲರೂ ಪ್ರಯಾಗಕ್ಷೇತ್ರದ ಗಂಗೆಯನ್ನೇ ಆಶ್ರಯಿಸುತ್ತಾರೆ. ಘೋರವಾದ ಕಲಿಯುಗದಲ್ಲಿ ಬೇರೆ ಯಾವ ಔಷಧವೂ ಇಲ್ಲ. ಬಯಸಿ ಅಥವಾ ಬಯಸದೆ ಗಂಗೆಯಲ್ಲಿ ಮೃತನಾದವನು ಸ್ವರ್ಗದಲ್ಲಿ ಹುಟ್ಟುತ್ತಾನೆ. ಅವನಿಗೆ ನರಕದರ್ಶನವಾಗುವುದಿಲ್ಲ.

* * *

## ತೀರ್ಥಗಳ ವರ್ಣನೆ (ಮುಂದುವರಿದದ್ದು) ಅಧ್ಯಾಯ-೩೮

**ಮಾರ್ಕಂಡೇಯ ಉವಾಚ :**

ಮಾಘಮಾಸದಲ್ಲಿ ಗಂಗಾಯಮುನಾಸಂಗಮದಲ್ಲಿ ಅರವತ್ತಾರು ಸಾವಿರ ತೀರ್ಥಗಳ ಸನ್ನಿಧಾನವು ಉಂಟಾಗುತ್ತದೆ. ಮಾಘಮಾಸದಲ್ಲಿ ಪ್ರಯಾಗದಲ್ಲಿ ಮೂರು ದಿನ ಸ್ನಾನ ಮಾಡಿದರೆ ಒಂದು ಲಕ್ಷ ಗೋವುಗಳನ್ನು ವಿಧಿಗೆ ಅನುಗುಣವಾಗಿ ದಾನ ಮಾಡಿದರೆ ಬರುವಷ್ಟು ಫಲವು ಲಭಿಸುವುದು. ಗಂಗಾ-ಯಮುನಾ ನದಿಗಳ ಮಧ್ಯದಲ್ಲಿ ಗೋಮಯದ ಅಗ್ನಿಯನ್ನು ಸಾಧಿಸಿದರೆ ಅಂಗಗಳ ಊನತೆಯಿಲ್ಲದವನೂ, ರೋಗರಹಿತನೂ, ಪಂಚೇಂದ್ರಿಯಗಳ ಪಾಟವವುಳ್ಳವನೂ ಆಗುತ್ತಾನೆ. ಅವನ ದೇಹದಲ್ಲಿ ಎಷ್ಟು ರೋಮ ಕೂಪಗಳಿವೆಯೋ ಅಷ್ಟುಸಾವಿರ ವರ್ಷ ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ. ಸ್ವರ್ಗವಾಸ ಮುಗಿದನಂತರ ಜಂಬೂದ್ವೀಪದ ಅಧಿಪತಿಯಾಗುತ್ತಾನೆ. ಸಮೃದ್ಧ ಭೋಗಗಳನ್ನು

ಅನುಭವಿಸಿ ಪುನಃ ಗಂಗಾ-ಯಮುನಾ ಸಂಗಮಕ್ಕೆ ಹೋಗುತ್ತಾನೆ. ಲೋಕಪ್ರಸಿದ್ಧವಾದ ಈ ಸಂಗಮದಲ್ಲಿ ಜಲಪ್ರವೇಶವನ್ನು ಮಾಡುವವನು ಚಂದ್ರನು ರಾಹುವಿನಿಂದ ಬಿಡುಗಡೆಯನ್ನು ಪಡೆಯುವಂತೆ ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆಯುತ್ತಾನೆ. ಚಂದ್ರಲೋಕದಲ್ಲಿ ಚಂದ್ರನ ಜೊತೆ ಅರವತ್ತಾರು ಸಾವಿರ ವರ್ಷ ಆನಂದವನ್ನನುಭವಿಸುತ್ತಾನೆ. ಅಲ್ಲಿಂದ ಸ್ವರ್ಗಲೋಕಕ್ಕೆ ಹೋಗಿ ನಾನಾ ಭೋಗಗಳನ್ನು ಅನುಭವಿಸುತ್ತಾನೆ. ಅವಧಿ ಮುಗಿದ ನಂತರ ಭೂಮಿಯಲ್ಲಿ ಸಮೃದ್ಧವಾದ ಕುಲದಲ್ಲಿ ಹುಟ್ಟುತ್ತಾನೆ. ಪಾದವನ್ನು ಮೇಲ್ಮುಖಮಾಡಿ ತಲೆಯನ್ನು ಕೆಳಮುಖ ಮಾಡಿ ಸಂಗಮದ ಜಲಪಾನವನ್ನು ಮಾಡುವವನು ಏಳುಸಾವಿರ ವರ್ಷ ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ. ಅವಧಿ ಮುಗಿದ ನಂತರ ಭೂಮಿಯಲ್ಲಿ ಹುಟ್ಟಿ ಅಗ್ನಿಹೋತ್ರಿಯಾಗುತ್ತಾನೆ. ತನ್ನ ಶರೀರವನ್ನು ಕತ್ತರಿಸಿ ಹಕ್ಕಿಗಳಿಗೆ ಆಹಾರವಾಗಿ ಕೊಡುವವನು ಒಂದು ಲಕ್ಷ ವರ್ಷ ಸೋಮಲೋಕದಲ್ಲಿ ಪೂಜಿತನಾಗುತ್ತಾನೆ. ಅನಂತರ ಭೂಮಿಯಲ್ಲಿ ಹುಟ್ಟಿ ಪರಮಧಾರ್ಮಿಕನಾದ ರಾಜನಾಗುತ್ತಾನೆ. ಗುಣವಂತನೂ, ರೂಪವಂತನೂ ಜ್ಞಾನಿಯೂ ಆಗುತ್ತಾನೆ. ಚೆನ್ನಾಗಿ ಮಾತನಾಡುತ್ತಾನೆ. ಭೋಗಗಳನ್ನು ಅನುಭವಿಸಿ, ದಾನಗಳನ್ನು ಮಾಡಿ ಇದೇ ಸಂಗಮಕ್ಕೆ ಪುನಃ ಬರುತ್ತಾನೆ.

ಯಮುನಾತೀರದ ಉತ್ತರದಲ್ಲಿ, ಪ್ರಯಾಗದ ದಕ್ಷಿಣದಲ್ಲಿ ಋಣಪ್ರಮೋಚನ ಎಂಬ ಪರಮತೀರ್ಥವಿದೆ. ಇಲ್ಲಿ ಒಂದು ರಾತ್ರಿ ವಾಸಮಾಡಿ, ಸ್ನಾನ ಮಾಡಿದರೆ ಋಣಗಳಿಂದ ಬಿಡುಗಡೆಯಾಗುತ್ತದೆ. ಸ್ವರ್ಗಲೋಕದ ಪ್ರಾಪ್ತಿಯಾಗುತ್ತದೆ. ಮುಂದೆ ಯಾವಾಗಲೂ ಋಣರಹಿತನಾಗಿರುತ್ತಾನೆ.

* * *

## ಗಂಗಾ-ಯಮುನಾ ನದಿಗಳ ಮತ್ತಷ್ಟು ವರ್ಣನೆ

**ಅಧ್ಯಾಯ-೩೯**

### ಮಾರ್ಕಂಡೇಯ ಉವಾಚ

ಯಮುನೆ ಸೂರ್ಯನ ಮಗಳು. ತ್ರಿಲೋಕಪ್ರಸಿದ್ಧವಾದ ಈ ನದಿ ಗಂಗೆ ಯಾವ ಮೂಲದಿಂದ ಹರಿಯುತ್ತದೆಯೋ ಅದೇ ಮೂಲದಿಂದ ಹರಿಯುತ್ತದೆ. ಸಾವಿರಾರು ಯೋಜನ ದೂರದಲ್ಲಿ ಈ ನದಿಯ ಮಹಿಮೆಯನ್ನು ವರ್ಣಿಸಿದವನ ಪಾಪವೂ ಕೂಡ ನಾಶವಾಗುತ್ತದೆ. ಯಮುನಾನದಿಯಲ್ಲಿ ಸ್ನಾನ ಮಾಡಿದವರ, ಆ ನೀರನ್ನು ಕುಡಿದವರ ಸಕಲ

ಪಾಪಗಳೂ ನಾಶವಾಗುತ್ತವೆ. ತನ್ನಿಂದ ಏಳನೆಯವರೆಗಿನ ತನ್ನ ಕುಲದ ಪೂರ್ವಜರು ಪವಿತ್ರರಾಗುತ್ತಾರೆ. ಯಮುನೆಯಲ್ಲಿ ಮೃತರಾದವರು ಪರಮಗತಿಯನ್ನು ಪಡೆಯುತ್ತಾರೆ.

ಯಮುನೆಯ ದಕ್ಷಿಣತೀರದಲ್ಲಿ ಅಗ್ನಿತೀರ್ಥ ಎಂಬ ಪ್ರಸಿದ್ಧ ತೀರ್ಥವಿದೆ. ಪಶ್ಚಿಮ ತೀರದಲ್ಲಿ ಧರ್ಮರಾಜನ ತೀರ್ಥವಿದೆ. ಇದಕ್ಕೆ ಅನರ(ಶ)ಕ ತೀರ್ಥ ಎಂದು ಹೆಸರು. ಅಗ್ನಿತೀರ್ಥದಲ್ಲಿ ಸ್ನಾನಮಾಡಿದವರು ಸ್ವರ್ಗವನ್ನು ಪಡೆಯುತ್ತಾರೆ. ಅಲ್ಲಿ ಮೃತರಾದವರು ಮತ್ತೆ ಹುಟ್ಟುವುದಿಲ್ಲ. ಧರ್ಮರಾಜ ತೀರ್ಥದಲ್ಲಿ ಕೃಷ್ಣಪಕ್ಷದ ಚತುರ್ದಶಿಯಂದು ಸ್ನಾನ ಮಾಡಿ ಧರ್ಮರಾಜನಿಗೆ ತರ್ಪಣ ಕೊಡುವವರು ಮಹಾಪಾಪಗಳಿಂದಲೂ ಬಿಡುಗಡೆಯನ್ನು ಪಡೆಯುತ್ತಾರೆ.

ಪ್ರಯಾಗದಲ್ಲಿ ಹತ್ತುಸಾವಿರ ತೀರ್ಥಗಳಿವೆ. ಅಲ್ಲಿ ಮತ್ತೊಂದು ಕಡೆ ಹತ್ತುಕೋಟಿ ತೀರ್ಥಗಳಿವೆ. ಹೀಗೆ ಜ್ಞಾನಿಗಳು ಹೇಳುತ್ತಾರೆ. ಭೂಮಿ-ಆಕಾಶ-ಅಂತರಿಕ್ಷಗಳಲ್ಲಿ ಒಟ್ಟು ಮೂರೂವರೆಕೋಟಿ ತೀರ್ಥಗಳಿವೆಯೆಂದು ವಾಯುದೇವನು ಹೇಳಿರುವನು. ಈ ಎಲ್ಲ ತೀರ್ಥಗಳ ಪ್ರಭಾವವೂ ಜಾಹ್ನವಿಯಲ್ಲಿದೆ ಎಂದು ಪ್ರಸಿದ್ಧಿಯಿದೆ. ಅತ್ಯಂತ ಶ್ರೇಷ್ಠವಾದ ಗಂಗೆಯು ಎಲ್ಲಿ ಹರಿಯುತ್ತದೆಯೋ ಅದು ಅತ್ಯಂತ ಶ್ರೇಷ್ಠವಾದ ಪ್ರದೇಶ. ಅದೇ ತಪೋವನ. ಗಂಗಾತೀರದಲ್ಲಿರುವ ಕ್ಷೇತ್ರಗಳು ಸಿದ್ಧಿಯನ್ನು ಕೊಡುವ ಕ್ಷೇತ್ರಗಳು. ಅಲ್ಲಿ ಮಹಾದೇವನಾದ ಮಹೇಶ್ವರನು ಮಾಧವನ ಜೊತೆ ಯಾವಾಗಲೂ ಸನ್ನಿಹಿತನಾಗಿರುತ್ತಾನೆ. ಆದ್ದರಿಂದ ಅದು ತೀರ್ಥ. ಅದು ತಪೋವನ. ಈ ಸತ್ಯವನ್ನು ದ್ವಿಜರಿಗೆ, ಸಾಧುಗಳಿಗೆ, ಮಕ್ಕಳಿಗೆ, ಸ್ನೇಹಿತರಿಗೆ, ಶಿಷ್ಯರಿಗೆ ಮತ್ತು ಅನುಯಾಯಿಗಳಿಗೆ ರಹಸ್ಯದಲ್ಲಿ ಹೇಳಬೇಕು. ಈ ಕ್ಷೇತ್ರ ಸಮೃದ್ಧಿಯನ್ನುಂಟುಮಾಡುತ್ತದೆ. ಇದು ಸ್ವರ್ಗವನ್ನು ಗಳಿಸಲು ಸಾಧನ. ಇದು ಪವಿತ್ರ, ಶುಭ. ಇದು ಪುಣ್ಯಕ್ಷೇತ್ರ ರಮ್ಯಕ್ಷೇತ್ರ. ಧರ್ಮಸಾಧನಕ್ಷೇತ್ರ. ಮಹರ್ಷಿಗಳಿಗೂ ಗೋಪ್ಯವಾದ ಈ ಕ್ಷೇತ್ರವು ಸರ್ವಪಾಪಗಳನ್ನೂ ಪರಿಹರಿಸುತ್ತದೆ. ಈ ಕ್ಷೇತ್ರದಲ್ಲಿ ಈ ಅಧ್ಯಾಯವನ್ನು ಪಠಿಸುವ ದ್ವಿಜನು ನಿರ್ಮಲನಾಗುತ್ತಾನೆ.

ಈ ತೀರ್ಥದ ಮಹಿಮೆಯನ್ನು ಪ್ರತಿದಿನವೂ ಶುಚಿಯಾಗಿದ್ದು ಶ್ರವಣ ಮಾಡುವವನು ಪೂರ್ವಜನ್ಮದ ಸ್ಮರಣಶಕ್ತಿಯನ್ನು ಪಡೆಯುತ್ತಾನೆ. ಸ್ವರ್ಗದಲ್ಲಿ ಸುಖವನ್ನನುಭವಿಸುತ್ತಾನೆ. ಶಿಷ್ಟರಿಂದ ಉಪದೇಶವನ್ನು ಪಡೆದ ಸಜ್ಜನರು ಮಾತ್ರ ಈ ತೀರ್ಥಗಳಿಗೆ ಹೋಗುವ ಅವಕಾಶವನ್ನು ಪಡೆಯುತ್ತಾರೆ.

ಇಷ್ಟು ಹೇಳಿದ ಮಾರ್ಕಂಡೇಯರು ಭೂಮಿಯಲ್ಲಿರುವ ಮತ್ತಷ್ಟು ತೀರ್ಥಗಳ ಬಗ್ಗೆ ಹೇಳಿದರು.

ಯುಧಿಷ್ಠಿರನ ಪ್ರಾರ್ಥನೆಗನುಗುಣವಾಗಿ ಭೂಮಿ, ಗ್ರಹ, ಜ್ಯೋತಿರ್ಮಂಡಲ ಇವುಗಳ ಆಕಾರವನ್ನು, ಸ್ಥಿತಿಯನ್ನು ಮಾರ್ಕಂಡೇಯರು ವಿವರಿಸಿ ಅಲ್ಲಿಂದ ನಿರ್ಗಮಿಸಿದರು.

**ಸೂತ ಉವಾಚ**

ಯಾರು ಪ್ರಾತಃಕಾಲದಲ್ಲಿ ಈ ಮಾರ್ಕಂಡೇಯ ಪ್ರವಚನವನ್ನು ಕೇಳುತ್ತಾರೋ ಅಥವಾ ಓದುತ್ತಾರೋ ಅವರು ಸಕಲ ಪಾಪಗಳಿಂದ ಮುಕ್ತರಾಗಿ ರುದ್ರಲೋಕಕ್ಕೆ ಹೋಗುತ್ತಾರೆ.

* * *

## ರಾಜರ ವಂಶಾವಳಿ

**ಅಧ್ಯಾಯ-೪೦**

ರೋಮಹರ್ಷಣರಿಂದ ತೀರ್ಥ-ಕ್ಷೇತ್ರಗಳ ಮಹಿಮೆಯನ್ನು ತಿಳಿದುಕೊಂಡ ನೈಮಿಷಾರಣ್ಯವಾಸಿ ಮುನಿಗಳು ಭೂಮಂಡಲ ಮೊದಲಾದವುಗಳ ಬಗ್ಗೆ ತಿಳಿಯಲು ಅಪೇಕ್ಷಿಸಿದರು.

**ಋಷಯ ಊಚುಃ**

"ಪೂಜ್ಯ ರೋಮಹರ್ಷಣರೆ ! ಸ್ವಾಯಂಭುವ ಮನುವಿನ ವಂಶದ ವರ್ಣನೆಯನ್ನು ತಾವು ಮಾಡಿದಿರಿ. ಈಗ ಮೂರು ಲೋಕಗಳನ್ನೂ, ಸಾಗರಗಳನ್ನೂ, ದ್ವೀಪಗಳನ್ನೂ, ಪ್ರದೇಶಗಳನ್ನೂ, ಪರ್ವತಗಳನ್ನೂ, ಕಾಡುಗಳನ್ನೂ, ನದಿಗಳನ್ನೂ, ಸೂರ್ಯನನ್ನೂ, ಗ್ರಹಗಳ ಸ್ಥಿತಿಯನ್ನೂ ಇವುಗಳ ಆಧಾರವನ್ನೂ, ಪೃಥಿವಿಯನ್ನೂ ಆಳಿದ ರಾಜರ ಚರಿತ್ರೆಯನ್ನೂ ದಯವಿಟ್ಟು ತಿಳಿಸಿರಿ."

**ಸೂತ ಉವಾಚ**

"ದೇವಾಧಿದೇವನೂ, ಸರ್ವಶಕ್ತನೂ, ಅಪ್ರಮೇಯನೂ (ಯಾರಿಂದಲೂ ಪೂರ್ಣವಾಗಿ ತಿಳಿಯಲಾಗದ) ಆದ ವಿಷ್ಣುವನ್ನು ನಮಸ್ಕರಿಸಿ ಅವನು (ವಿಷ್ಣು) ಹೇಳಿರುವ ವಿಷಯಗಳನ್ನೇ ಹೇಳುತ್ತೇನೆ."

**ಪ್ರಿಯವ್ರತನ ಸಂತತಿ**

ಸ್ವಾಯಂಭುವ ಮನುವಿನ ಮಗ ಪ್ರಿಯವ್ರತನಿಗೆ ಹತ್ತುಜನ ಮಕ್ಕಳು. ಎಲ್ಲರೂ ಪ್ರಜಾಪತಿ (ಬ್ರಹ್ಮದೇವರ ಮಕ್ಕಳು)ಗಳಂತಿದ್ದರು. ಆಗ್ನೀಧ್ರ, ಅಗ್ನಿಬಾಹು, ವಪುಷ್ಮಾನ್, ದ್ಯುತಿಮಾನ್, ಮೇಧಾ, ಮೇಧಾತಿಥಿ, ಹವ್ಯ, ಸವನ, ಪುತ್ರ, ಜ್ಯೋತಿಷ್ಮಾನ್ -ಇವರೇ ಆ ಹತ್ತು ಜನ.

ಇವರಲ್ಲಿ ಮೇಧಾ, ಅಗ್ನಿಬಾಹು ಮತ್ತು ಪುತ್ರ -ಈ ಮೂರು ಜನ ಯೋಗನಿಷ್ಣಾತರು. ಪೂರ್ವಜನ್ಮದ ಸ್ಮರಣೆವುಳ್ಳವರು. ಮಹಾಲಕ್ಷಣಸಂಪನ್ನರಾದ ಅವರು ರಾಜ್ಯವನ್ನು ಆಳಲು

ಬಯಸಲಿಲ್ಲ. ಉಳಿದ ಏಳು ಜನರನ್ನು ಪ್ರಿಯವ್ರತನು ಏಳು ದ್ವೀಪಗಳ ಅಧಿಪತಿಗಳೆಂದು ಅಭಿಷೇಕ ಮಾಡಿದನು. ಆಗ್ನೀಧ್ರನನ್ನು ಜಂಬೂದ್ವೀಪದ ಅಧಿಪತಿಯನ್ನಾಗಿಸಿದನು. ಮೇಧಾತೀಥಿಯನ್ನು ಪ್ಲಕ್ಷದ್ವೀಪದ ಅಧಿಪತಿಯನ್ನಾಗಿಸಿದನು. ವಪುಷ್ಮಂತ, ಜ್ಯೋತಿಷ್ಮಂತ, ದ್ಯುತಿಮಂತ, ಹವ್ಯ, ಸವನ -ಇವರನ್ನು ಕ್ರಮವಾಗಿ ಶಾಲ್ಮಲ, ಕುಶ, ಕ್ರೌಂಚ, ಶಾಕ, ಪುಷ್ಕರ ದ್ವೀಪಗಳಿಗೆ ಅಧಿಪತಿಗಳನ್ನು ಮಾಡಿದನು. ಪುಷ್ಕರದ್ವೀಪದ ಅಧಿಪತಿಯಾದ ಸವನನಿಗೆ ಮಹಾವೀತ ಮತ್ತು ಧಾತಕಿ ಎಂಬ ಶ್ರೇಷ್ಠರಾದ ಮಕ್ಕಳಿದ್ದರು. ಮಹಾವೀತನು ಆಳಿದ ಪುಷ್ಕರದ್ವೀಪದ ಭಾಗಕ್ಕೆ ಮಹಾವೀತವರ್ಷವೆಂದೂ, ಧಾತಕಿಯು ಆಳಿದ ಭಾಗಕ್ಕೆ ಧಾತಕಿವರ್ಷ ಎಂದೂ ಹೆಸರು.

ಶಾಕದ್ವೀಪದ ಅಧಿಪತಿಯಾದ ಹವ್ಯನಿಗೆ ಜಲದ, ಕುಮಾರ, ಸುಕುಮಾರ, ಮಣೀಚಕ, ಕುಶೋತ್ತರ, ಮೋದಾಕಿ ಮತ್ತು ಮಹಾದ್ರುಮ ಎಂಬ ಏಳು ಜನ ಮಕ್ಕಳು. ಇವರು ಆಳಿದ ಶಾಕದ್ವೀಪದ ಭಾಗಗಳಿಗೆ ಜಲದವರ್ಷ, ಕುಮಾರವರ್ಷ, ಸುಕುಮಾರವರ್ಷ, ಮಣೀಚಕ ವರ್ಷ, ಕುಶೋತ್ತರವರ್ಷ, ಮೋದಾಕಿವರ್ಷ ಮತ್ತು ಮಹಾದ್ರುಮವರ್ಷ ಎಂದು ಹೆಸರು.

ಕ್ರೌಂಚದ್ವೀಪದ ಅಧಿಪತಿಯಾದ ದ್ಯುತಿಮಂತನಿಗೆ ಕುಶಲ, ಮನೋಹರ, ಉಷ್ಣ ಪೀವರ, ಅಂಧಕಾರ, ಮುನಿ, ದುಂದುಭಿ ಎಂಬ ಏಳು ಜನ ಮಕ್ಕಳು. ಇವರು ಆಳಿದ ಈ ದ್ವೀಪದ ಭಾಗಗಳಿಗೆ ಕುಶಲವರ್ಷ ಮೊದಲಾದ ಹೆಸರು.

ಕುಶದ್ವೀಪದ ಅಧಿಪತಿಯಾದ ಜ್ಯೋತಿಷ್ಮಂತನಿಗೆ ಉದ್ಭೇದ, ವೇಣುಮಾನ್, ಅಶ್ವರಥ, ಲಂಬನ, ಧೃತಿ, ಪ್ರಭಾಕರ, ಕಪಿಲ ಎಂಬ ಏಳು ಜನ ಮಕ್ಕಳು. ಇವರು ಆಳಿದ ಈ ದ್ವೀಪದ ಭಾಗಗಳು ಇವರ ಹೆಸರಿನ ವರ್ಷಗಳೆಂದು ಪ್ರಸಿದ್ಧ.

ಶಾಲ್ಮಲದ್ವೀಪದ ಅಧಿಪತಿ ವಪುಷ್ಮಂತನಿಗೆ ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯೂತ, ಮಾನಸ ಮತ್ತು ಸುಪ್ರಭ ಎಂಬ ಏಳು ಜನ ಮಕ್ಕಳು. ಇವರು ಶಾಲ್ಮಲದ್ವೀಪದ ಏಳುಭಾಗಗಳನ್ನು ಆಳಿದರು. ಅವುಗಳಿಗೆ ಶ್ವೇತವರ್ಷ ಇತ್ಯಾದಿ ಹೆಸರುಗಳು.

ಪ್ಲಕ್ಷದ್ವೀಪದ ಅಧಿಪತಿ ಮೇಧಾತಿಥಿಗೆ ಶಾಂತಮಯ, ಶಿಶಿರ, ಸುಖೋದಯ, ಆನಂದ, ಶಿವ, ಕ್ಷೇಮಕ, ಧ್ರುವ ಎಂಬ ಏಳುಜನ ಮಕ್ಕಳು. ಇವರು ಪ್ಲಕ್ಷದ್ವೀಪದ ಏಳು ಭಾಗಗಳನ್ನು ಆಳಿದರು. ಅವುಗಳಿಗೆ ಶಾಂತಮಯವರ್ಷ ಇತ್ಯಾದಿ ಹೆಸರುಗಳು.

ಪ್ಲಕ್ಷ ಮೊದಲಾದ ದ್ವೀಪಗಳಲ್ಲಿ ವರ್ಣ-ಆಶ್ರಮವ್ಯವಸ್ಥೆಗಳು ಇವೆ. ಇವುಗಳನ್ನು ಪಾಲಿಸುವುದರಿಂದ ಮುಕ್ತಿಯು ಲಭಿಸುತ್ತದೆ.

ಜಂಬೂದ್ವೀಪದ ಅಧಿಪತಿ ಆಗ್ನೀಧ್ರನಿಗೆ ನಾಭಿ, ಕಿಂಪುರುಷ, ಹರಿ, ಇಲಾವೃತ, ರಮ್ಯ, ಹಿರಣ್ವಾನ್, ಕುರು, ಭದ್ರಾಶ್ವ, ಕೇತುಮಾಲಕ ಎಂಬ ಒಂಭತ್ತು ಜನ ಮಕ್ಕಳು. ಆಗ್ನೀಧ್ರನು

ತನ್ನ ದ್ವೀಪವನ್ನು ಒಂಭತ್ತು ಭಾಗವನ್ನಾಗಿ ಮಾಡಿ ತನ್ನ ಮಕ್ಕಳಿಗೆ ಒಂದೊಂದು ಭಾಗವನ್ನು ನ್ಯಾಯಕ್ಕನುಗುಣವಾಗಿ ಕೊಟ್ಟನು.

ಹಂಚಿಕೆಯ ವಿವರ ಹೀಗಿದೆ :

**ನಾಭಿ** - ಹಿಮವರ್ಷ. ಇದಕ್ಕೆ ದಕ್ಷಿಣವರ್ಷ ಎಂದೂ ಹೆಸರು.

**ಕಿಂಪುರುಷ** - ಹೇಮಕೂಟ ವರ್ಷ

**ಹರಿ** - ನಿಷಧವರ್ಷ

**ಇಲಾವೃತ** - ಮೇರುಪರ್ವತದ ಮಧ್ಯಭಾಗ. ಇದಕ್ಕೆ ಇಲಾವೃತವರ್ಷ ಎಂದೇ ಹೆಸರು.

**ರಮ್ಯ** - ನೀಲಪರ್ವತದಿಂದ ಆವೃತವಾದ ನೀಲವರ್ಷ

**ಹಿರಣ್ವಾನ್** - ಶ್ವೇತವರ್ಷ, ಇದು ನೀಲವರ್ಷದ ಉತ್ತರಭಾಗ

**ಕುರು** - ಮೇರುಪರ್ವತದ ಉತ್ತರಭಾಗ

**ಭದ್ರಾಶ್ವ** - ಮೇರುಪರ್ವತದ ಪೂರ್ವಭಾಗ

**ಕೇತುಮಾಲ** - ಗಂಧಮಾದನ ವರ್ಷ.

ಹೀಗೆ ಮಕ್ಕಳಿಗೆ ರಾಜ್ಯವನ್ನು ಒಪ್ಪಿಸಿದ ಆಗ್ನೀಧ್ರನು ಸಂಸಾರ ಅಸಾರ ಎಂದು ತಿಳಿದು ತಪಸ್ಸನ್ನಾಚರಿಸಲು ಕಾಡಿಗೆ ಹೋದನು.

ಹಿಮವರ್ಷದ ಅಧಿಪತಿ ನಾಭಿಯ ಹೆಂಡತಿ ಮೇರುದೇವಿ. ಇವರ ಮಗ ಋಷಭ. ಇವನು ಮಹಾತೇಜಸ್ವಿಯಾಗಿದ್ದನು. ಇವನಿಗೆ ನೂರು ಜನ ಮಕ್ಕಳು. ಭರತ ಜ್ಯೇಷ್ಠ. ಋಷಭನು ಭರತನಿಗೆ ರಾಜ್ಯವನ್ನು ಒಪ್ಪಿಸಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಶಾಸ್ತ್ರವಿಧಿಗನುಗುಣವಾಗಿ ತಪಸ್ಸನ್ನು ಮಾಡಿದನು. ತಪಸ್ಸಿನಿಂದ ಶರೀರ ಬಹಳ ಕೃಶವಾಯಿತು. ಇಂತಹ ಕಠಿಣ ತಪಸ್ಸಿನಿಂದ ಜ್ಞಾನಯೋಗದಲ್ಲಿ ನಿರತನಾಗಿ ಪಾಶುಪಾತಶಾಸ್ತ್ರವನ್ನು ಚೆನ್ನಾಗಿ ತಿಳಿದನು. ಪಶುಪತಿಯ ಮಹಾಭಕ್ತನಾದನು.

ಭರತನ ಮಗ ಸುಮತಿ. ಇವನು ಪರಮಧಾರ್ಮಿಕ. ಇವನ ಮಗ ತೈಜಸ. ತೈಜಸನ ಮಗ ಇಂದ್ರದ್ಯುಮ್ನ. ಇವನ ಮಗ ಪರಮೇಷ್ಠೀ. ಇವನ ಮಗ ಪ್ರತೀಹಾರ. ಪ್ರತೀಹಾರನ ಮಗ ಪ್ರತಿಹರ್ತಾ. ಇವನ ಮಗ ಭವ. ಇವನ ಮಗ ಉದ್ಗೀಥ. ಉದ್ಗೀಥನ ಮಗ ಪ್ರಸ್ತಾವಿ. ಇವನ ಮಗ ಪೃಥು. ಪೃಥುವಿನ ಮಗ ನಕ್ತ. ನಕ್ತನ ಮಗ ಗಯ. ಗಯನ ಮಗ ನರ. ಇವನ ಮಗ ವಿರಾಟ್. ಇವನ ಮಗ ಮಹಾವೀರ್ಯ. ಇವನ ಮಗ ಧೀಮಾನ್. ಧೀಮಂತನ ಮಗ ರೌವಣ. ಇವನ ಮಗ ತ್ವಷ್ಟಾ. ತ್ವಷ್ಟೃವಿನ ಮಗ ವಿರಜ. ಇವನ ಮಗ ರಜ. ರಜನ ಮಗ ಶತಜಿತ್. ಇವನ ಮಗ ರಥಜಿತ್. ಇವನಿಗೆ ನೂರು ಜನ ಮಕ್ಕಳು. ವಿಶ್ವಜ್ಯೋತಿ ಇವರಲ್ಲಿ

ಜ್ಯೇಷ್ಠ. ಇವನು ಚತುರ್ಮುಖ ಬ್ರಹ್ಮದೇವರನ್ನು ಆರಾಧಿಸಿ ಕ್ಷೇಮಕ ಎಂಬ ಮಗನನ್ನು ಪಡೆದನು. ಇವನು ಧರ್ಮಜ್ಞ. ಮಹಾಪರಾಕ್ರಮಿ. ಶತ್ರುಗಳನ್ನು ದಮನ ಮಾಡಿದ್ದನು.

ಮೇಲೆ ವರ್ಣಿಸಲ್ಪಟ್ಟ ರಾಜರೆಲ್ಲರೂ ಮಹಾಸತ್ವರೂ, ಮಹಾಬಲಶಾಲಿಗಳೂ ಆಗಿದ್ದರು. ಇವರ ವಂಶದಲ್ಲಿ ಹುಟ್ಟಿದವರು ಈ ಭೂಮಿಯನ್ನು ಆಳಿದರು.

* * *

## ಬ್ರಹ್ಮಾಂಡದ ವಿಸ್ತಾರ

**ಅಧ್ಯಾಯ-೪೧**

**ಸೂತ ಉವಾಚ**

ದ್ವಿಜೋತ್ತಮರೇ! ಇನ್ನು ಮುಂದೆ ಈ ಬ್ರಹ್ಮಾಂಡದ ಪರಿಮಾಣವನ್ನು ಸಂಕ್ಷೇಪವಾಗಿ ನಿಮಗೆ ತಿಳಿಸುತ್ತೇನೆ. ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ.

ಬ್ರಹ್ಮಾಂಡದಲ್ಲಿ ಏಳು ಲೋಕಗಳು ಉದ್ಭವಿಸಿವೆ. ಅವು (೧) ಭೂಲೋಕ (೨) ಭುವರ್ಲೋಕ (೩) ಸ್ವರ್ಲೋಕ (೪) ಮಹರ್ಲೋಕ (೫) ಜನಲೋಕ (೬) ತಪೋಲೋಕ (೭) ಸತ್ಯಲೋಕ.

(೧) ಸೂರ್ಯಚಂದ್ರರ ಕಿರಣಗಳು ಎಷ್ಟು ಭಾಗವನ್ನು ಪ್ರಕಾಶಗೊಳಿಸುತ್ತವೋ ಅಷ್ಟುಭಾಗ ಭೂಲೋಕ.

(೨) ಭೂಲೋಕದಷ್ಟೆ ವಿಸ್ತಾರ ಮತ್ತು ಸುತ್ತಳತೆಯನ್ನು ಹೊಂದಿರುವ ಲೋಕ ಭುವರ್ಲೋಕ. ಈ ಲೋಕ ಸೂರ್ಯಮಂಡಲದ ಮೇಲಿದೆ.

(೩) ಸೂರ್ಯಮಂಡಲದ ಮೇಲೆ, ಧ್ರುವಮಂಡಲದ ವ್ಯಾಪ್ತಿ ಇರುವಷ್ಟು ಪ್ರದೇಶ ಸ್ವರ್ಲೋಕ. ಇಲ್ಲಿ ಅವಹ, ಪ್ರವಹ, ಅನುವಹ, ಸಂವಹ, ವಿವಹ, ಪರಾವಹ ಮತ್ತು ಪರಿವಹ ಎಂಬ ಏಳು ವಾಯುಚಕ್ರ(ನೇಮಿ)ಗಳು ಇವೆ.

ಭೂಮಿಯಿಂದ ಒಂದುಲಕ್ಷ ಯೋಜನ ದೂರದಲ್ಲಿ ಸೂರ್ಯಮಂಡಲವಿದೆ. ಸೂರ್ಯಮಂಡಲದಿಂದ ಒಂದು ಲಕ್ಷ ಯೋಜನ ದೂರದಲ್ಲಿ ಚಂದ್ರಮಂಡಲವಿದೆ. ಚಂದ್ರಮಂಡಲದಿಂದ ಒಂದುಲಕ್ಷ ಯೋಜನ ದೂರದಲ್ಲಿ ನಕ್ಷತ್ರ ಮಂಡಲವು ಪ್ರಕಾಶಿಸುತ್ತಿದೆ. ನಕ್ಷತ್ರಮಂಡಲದಿಂದ ಎರಡು ಲಕ್ಷ ಯೋಜನ ದೂರದಲ್ಲಿ ಬುಧಗ್ರಹವಿದೆ. ಬುಧನಿಂದ ಎರಡು ಲಕ್ಷ ಯೋಜನ ದೂರದಲ್ಲಿ ಶುಕ್ರಗ್ರಹವಿದೆ. ಅಲ್ಲಿಂದ ಅಷ್ಟೇ

ದೂರದಲ್ಲಿ ಮಂಗಳಗ್ರಹವಿದೆ. ಅಲ್ಲಿಂದ ಅಷ್ಟೇ ದೂರದಲ್ಲಿ ಗುರುಗ್ರಹವಿದೆ. ಗುರುಗ್ರಹದಿಂದ ಎರಡು ಲಕ್ಷ ಯೋಜನ ದೂರದಲ್ಲಿ ಶನಿಗ್ರಹವಿದೆ.

ಈ ಗ್ರಹಗಳ ಮಂಡಲದಿಂದ ಒಂದು ಲಕ್ಷ ಯೋಜನ ಮೇಲ್ಭಾಗದಲ್ಲಿ ಸಪ್ತರ್ಷಿ ಮಂಡಲವಿದೆ. ಸಪ್ತರ್ಷಿ ಮಂಡಲದಿಂದ ಒಂದುಲಕ್ಷಯೋಜನ ಮೇಲ್ಭಾಗದಲ್ಲಿ ಧ್ರುವ ಮಂಡಲವಿದೆ. ಅಲ್ಲಿ ಧರ್ಮಮೂರ್ತಿಯೂ, ಷಡ್ಗುಣೈಶ್ವರ್ಯ ಸಂಪನ್ನನೂ, ವ್ಯಾಪಕನೂ ಆದ ನಾರಾಯಣನು ಇದ್ದಾನೆ. ಸೂರ್ಯಮಂಡಲದ ವ್ಯಾಸ ಒಂಭತ್ತು ಸಾವಿರ ಯೋಜನ. ಸೂರ್ಯಮಂಡಲದ ವಿಸ್ತಾರ ಇದರ ಮೂರು ಪಟ್ಟು ಇದೆ.

ಚಂದ್ರಮಂಡಲದ ವಿಸ್ತಾರ ಸೂರ್ಯಮಂಡಲದ ಎರಡರಷ್ಟಿದೆ. ರಾಹುವು ಚಂದ್ರನ ವಿಸ್ತಾರದಷ್ಟೇ ವಿಸ್ತಾರವುಳ್ಳವನಾಗಿ ಚಂದ್ರನನ್ನು ಸೂರ್ಯಮಂಡಲದ ವಿಸ್ತಾರದಷ್ಟೇ ವಿಸ್ತಾರವುಳ್ಳವನಾಗಿ ಸೂರ್ಯನನ್ನು ಸಮೀಪಿಸುತ್ತಾನೆ. ಇದಲ್ಲದೆ ರಾಹುವಿನ ಮೂರನೆಯ ಸ್ಥಾನವೂ ಇದೆ. ಇದು ಭೂಮಿಯ ಛಾಯೆ ಬಹಳ ದೊಡ್ಡದು. ಇಲ್ಲಿ ಬರೀ ಕತ್ತಲು. ಚಂದ್ರಮಂಡಲದ ವಿಸ್ತಾರದ ಹದಿನಾರನೇ ಒಂದರಷ್ಟು ವಿಸ್ತಾರ ಶುಕ್ರಗ್ರಹಕ್ಕೆ ಇದೆ. ಗುರುಗ್ರಹದ ವಿಸ್ತಾರ ಶುಕ್ರನ ವಿಸ್ತಾರದ ನಾಲ್ಕನೆಯ ಮೂರರಷ್ಟಿದೆ. ಅಂಗಾರಕ ಮತ್ತು ಶನಿಗಳ ವಿಸ್ತಾರ ಮತ್ತು ಮಂಡಲಗಳು ಗುರುಗ್ರಹದ ವಿಸ್ತಾರ-ಮಂಡಲಗಳಿಗಿಂತ ನಾಲ್ಕನೆ ಒಂದು ಭಾಗ ಕಡಿಮೆ ಇವೆ. ಈ ಎರಡು ಗ್ರಹಗಳ ವಿಸ್ತಾರ-ಮಂಡಲಗಳಿಗಿಂತ ಬುಧಗ್ರಹದ ವಿಸ್ತಾರ-ಮಂಡಲಗಳು ನಾಲ್ಕನೆಯ ಒಂದು ಭಾಗ ಕಡಿಮೆ ಇದೆ. ಶರೀರವನ್ನು ಹೊಂದಿರುವ ತಾರಾನಕ್ಷತ್ರಗಳ ವಿಸ್ತಾರ ಮತ್ತು ಮಂಡಲಗಳು ಬುಧನ ವಿಸ್ತಾರ ಮಂಡಲಗಳಿಗೆ ಸಮನಾಗಿವೆ. ಶರೀರವಿಲ್ಲದ ತಾರಾನಕ್ಷತ್ರಗಳಲ್ಲಿ ಕೆಲವು ಪರಸ್ಪರ ನೂರುಯೋಜನ ದೂರದಲ್ಲಿವೆ. ಮತ್ತೆ ಕೆಲವು ಐದು ಯೋಜನ ದೂರದಲ್ಲಿವೆ. ಹೀಗೆಯೇ ನಾಲ್ಕು, ಮೂರು, ಎರಡು ಯೋಜನ ದೂರದಲ್ಲಿಯೂ ತಾರಾನಕ್ಷತ್ರಗಳು ಇವೆ. ಅತ್ಯಂತ ಚಿಕ್ಕ ತಾರಕಾ-ಮಂಡಲದ ಪರಿಮಾಣ ಒಂದು ಅರ್ಧರ್ಧ ಯೋಜನ. ಇದಕ್ಕಿಂತ ಚಿಕ್ಕ ತಾರಕಾಮಂಡಲ ಇಲ್ಲವೇ ಇಲ್ಲ. ಈ ತಾರಕಾಮಂಡಲದ ಮೇಲೆ ದೂರದಲ್ಲಿ ಮೂರು ಗ್ರಹಗಳು ಸಂಚರಿಸುತ್ತವೆ. ಇವು ಶನಿ, ಬೃಹಸ್ಪತಿ ಮತ್ತು ಅಂಗಾರಕ. ಇವುಗಳು ಮಂದಗತಿಯ ಗ್ರಹಗಳು. ಈ ಗ್ರಹಗಳ ಕೆಳಗೆ ಸೂರ್ಯ, ಚಂದ್ರ, ಬುಧ, ಶುಕ್ರ ಎಂಬ ನಾಲ್ಕು ಮಹಾಗ್ರಹಗಳು ಶೀಘ್ರವಾಗಿ ಚಲಿಸುತ್ತವೆ.

ಸೂರ್ಯನು ದಕ್ಷಿಣಾಯನ ಮಾರ್ಗದಲ್ಲಿದ್ದಾಗ ಹಿಂದೆ ಹೇಳಿದ ಎಲ್ಲ ಗ್ರಹಗಳಿಗಿಂತ ಕೆಳಗೆ ಇರುತ್ತಾನೆ. ಚಂದ್ರನು ತನ್ನ ಮಂಡಲವನ್ನು ಹೆಚ್ಚು ವಿಸ್ತರಿಸಿ ಸೂರ್ಯನ ಮೇಲೆ ಚಲಿಸುತ್ತಾನೆ. ಚಂದ್ರಮಂಡಲದ ಮೇಲೆ ನಕ್ಷತ್ರಮಂಡಲವು ಚಲಿಸುತ್ತದೆ. ನಕ್ಷತ್ರಮಂಡಲದ ಮೇಲೆ ಬುಧನೂ, ಬುಧನ ಮೇಲೆ ಶುಕ್ರನೂ ಶುಕ್ರನ ಮೇಲೆ ಅಂಗಾರಕನೂ, ಅಂಗಾರಕನ ಮೇಲೆ ಗುರುವೂ ಅವನ ಮೇಲೆ ಶನಿಯೂ ಚಲಿಸುತ್ತವೆ. ಶನಿಯ ಮೇಲೆ ಸಪ್ತರ್ಷಿ

ಮಂಡಲವಿದೆ. ಅವರ ಮೇಲೆ ಧ್ರುವಮಂಡಲವಿದೆ. ಸೂರ್ಯನ ರಥವು ಒಂಭತ್ತುಸಾವಿರ ಯೋಜನ. ಮಾನಸಪರ್ವತದ ಮೇಲೆ ಪೂರ್ವದಿಕ್ಕಿನಲ್ಲಿ ದೇವೇಂದ್ರನ ನಗರವಿದೆ. ದಕ್ಷಿಣದಲ್ಲಿ ಯಮನ, ಪಶ್ಚಿಮದಲ್ಲಿ ವರುಣನ, ಉತ್ತರದಲ್ಲಿ ಕುಬೇರನ ನಗರಗಳು ಇವೆ. ಈ ನಗರಗಳಿಗೆ ಕ್ರಮವಾಗಿ ಅಮರಾವತೀ, ಸಂಯಮನೀ, ಸುಖಾ ಮತ್ತು ವಿಭಾವರೀ ಎಂದು ಹೆಸರುಗಳು.

ದೇವದೇವನಾದ ಸೂರ್ಯನು ಜ್ಯೋತಿಶ್ಚಕ್ರನನ್ನು ತೆಗೆದುಕೊಂಡು ಎಸೆಯಲ್ಪಟ್ಟ ಬಾಣದಂತೆ ಸಂಚರಿಸುತ್ತಾನೆ. ಸೂರ್ಯನು ಸಪ್ತದ್ವೀಪಗಳಲ್ಲಿ ಹಗಲಿನ ಮಧ್ಯಕಾಲದಲ್ಲಿ ಯಾವಾಗಲೂ ಇರುತ್ತಾನೆ. ಹಗಲಿನ ಮಧ್ಯಕಾಲಕ್ಕೆ ಎದುರಾಗಿ ಮಧ್ಯರಾತ್ರಿಯು ಉಂಟಾಗುತ್ತದೆ. ಎಲ್ಲಾ ದಿಕ್ಕುಗಳಲ್ಲೂ, ಕೋಣದಿಕ್ಕುಗಳಲ್ಲೂ ಸೂರ್ಯನ ಉದಯ ಮತ್ತು ಅಸ್ತಗಳು ಪರಸ್ಪರ ಎದುರಾಗಿರುತ್ತವೆ. ಕುಂಬಾರನ ಚಕ್ರದಂತೆ ತಿರುಗುವ ಸೂರ್ಯನು ಭೂಮಿಯ ಯಾವ ಭಾಗವನ್ನು ಬಿಡುತ್ತಾನೋ, ಅಂದರೆ ಯಾವಭಾಗದಲ್ಲಿ ಅವನ ಬೆಳಕು ಬೀಳುವುದಿಲ್ಲವೋ, ಅಲ್ಲಿ ಕತ್ತಲು ಉಂಟಾಗುತ್ತದೆ. ಸೂರ್ಯನ ಕಿರಣಗಳು ಎಲ್ಲಾ ಲೋಕಗಳನ್ನು ವ್ಯಾಪಿಸಿವೆ. ಆದ್ದರಿಂದ ಎಲ್ಲ ಲೋಕಗಳಿಗೂ (ದೇವಲೋಕ, ಅಸುರಲೋಕ, ಮಾನುಷಲೋಕ) ಸೂರ್ಯನೇ ಮೂಲ.

ರುದ್ರ, ಇಂದ್ರ, ಉಪೇಂದ್ರ, ಚಂದ್ರ ಮೊದಲಾದ ಎಲ್ಲ ದೇವತೆಗಳ, ಎಲ್ಲ ಬ್ರಾಹ್ಮಣ ಶ್ರೇಷ್ಠರ, ಹೆಚ್ಚೇನು, ಲೋಕದಲ್ಲಿರುವ ಎಲ್ಲ ಚೇತನಾಚೇತನಗಳ ತೇಜಸ್ಸನ್ನು ಮೀರಿದ ತೇಜಸ್ಸನ್ನು ಸೂರ್ಯನು ಹೊಂದಿದ್ದಾನೆ. ಸೂರ್ಯನೇ ಈ ಲೋಕದ ಮೂಲಾಧಾರ. ಇವನೇ ಪರಮ ದೇವತೆ. ಅವನು ಸರ್ವರ ಆತ್ಮ, ಸರ್ವರ ಅಧಿಪತಿ. ಅವನೇ ಮಹಾದೇವ. ಅವನೇ ಪ್ರಜಾಪತಿ. ಈ ಸೂರ್ಯದೇವನಲ್ಲದೆ ಇನ್ನೂ ಹನ್ನೆರಡು ಮಂದಿ ಆದಿತ್ಯರು ಇದ್ದಾರೆ. ಇವರಲ್ಲಿ ಸೂರ್ಯನ ಅಂಶಗಳು ಇವೆ. ಇವರು ವಿಷ್ಣುವಿನ ಮೂರ್ತಿಗಳಾಗಿದ್ದಾರೆ. ಗಂಧರ್ವ, ಯಕ್ಷ, ಉರಗ, ಕಿನ್ನರ ಮೊದಲಾದ ಎಲ್ಲರೂ ಸಹಸ್ರಬಾಹುವಾದ ಸೂರ್ಯನನ್ನು ನಮಸ್ಕರಿಸುತ್ತಾರೆ. ಮುನಿಶ್ರೇಷ್ಠರು ಛಂದೋಮಯನೂ, ಸನಾತನನೂ, ಬ್ರಹ್ಮಮಯನೂ ಆಗಿರುವ ಸೂರ್ಯನನ್ನು ವಿವಿಧ ಯಜ್ಞಗಳಿಂದ ಆರಾಧಿಸುತ್ತಾರೆ.

* * *

# ಸೂರ್ಯರಥದ ಚಲನೆಯಲ್ಲಿ ದೇವತೆಗಳು ಮೊದಲಾದವರ ಪಾತ್ರ

**ಅಧ್ಯಾಯ-೪೨**

ದೇವತೆಗಳು, ಆದಿತ್ಯರು, ಮುನಿಗಳು, ಗಂಧರ್ವರು, ಅಪ್ಸರೆಯರು, ಗ್ರಾಮಣಿಗಳು, ಸರ್ಪಗಳು ಮತ್ತು ರಾಕ್ಷಸರು, ಸೂರ್ಯರಥದ ಚಲನೆಯಲ್ಲಿ ವಿವಿಧ ಪಾತ್ರಗಳನ್ನು ನಿರ್ವಹಿಸುತ್ತಾರೆ.

ಧಾತಾ, ಅರ್ಯಮಾ, ಮಿತ್ರ, ವರುಣ, ಶಕ್ರ, ವಿವಸ್ವಾನ್, ಪೂಷಾ, ಪರ್ಜನ್ಯ, ಅಂಶು, ಭಗ, ತ್ವಷ್ಟ್ರ ಮತ್ತು ವಿಷ್ಣು -ಇವರು ಹನ್ನೆರಡು ಮಂದಿ ಆದಿತ್ಯರು. ಇವರು ಕ್ರಮವಾಗಿ ವಸಂತ ಮೊದಲಾದ ಋತುಗಳಲ್ಲಿ ಸೂರ್ಯನಿಗೆ ಪುಷ್ಟಿ ಸ್ಫೂರ್ತಿಗಳನ್ನು ಕೊಡುತ್ತಾರೆ.

ಪುಲಸ್ತ್ಯ ಪುಲಹ, ಅತ್ರಿ, ವಸಿಷ್ಠ, ಅಂಗಿರಸ್, ಭೃಗು, ಭರದ್ವಾಜ, ಗೌತಮ, ಕಶ್ಯಪ, ಕ್ರತು, ಜಮದಗ್ನಿ, ಕೌಶಿಕ ಈ ಮುನಿಗಳು ಬ್ರಹ್ಮವಾದಿಗಳು. ಇವರು ವಿವಿಧ ವೇದಮಂತ್ರ-ಗಳಿಂದ ಸೂರ್ಯದೇವನನ್ನು ಸ್ತುತಿಸುತ್ತಾರೆ.

ರಥಕೃತ್, ರಥೌಜಸ್, ರಥಚಿತ್ರ, ಸುಬಾಹುಕ, ರಥಸ್ವನ, ವರುಣ, ಸುಷೇಣ, ಸೇನಜಿತ್, ತಾರ್ಕ್ಷ್ಯ, ಅರಿಷ್ಟನೇಮಿ, ಕೃತಜಿತ್, ಸತ್ಯಜಿತ್ ಇವರು ಗ್ರಾಮಣಿಗಳು. ಇವರು ಸೂರ್ಯದೇವನ ರಶ್ಮಿಸಂಗ್ರಹವನ್ನು ಮಾಡುತ್ತಾರೆ.

ಹೇತಿ, ಪ್ರಹೇತಿ, ಪೌರುಷೇಯ, ವಧ, ಸರ್ಪ, ವ್ಯಾಘ್ರ, ಆಪ, ವಾತ, ವಿದ್ಯುತ್, ದಿವಾಕರ, ಬ್ರಹ್ಮೋಪೇತ, ಯಜ್ಞೋಪೇತ -ಇವರು ರಾಕ್ಷಸಶ್ರೇಷ್ಠರು. ಇವರು ಸೂರ್ಯನ ರಥದ ಮುಂದೆ ಸಾಗುತ್ತಾರೆ.

ವಾಸುಕಿ, ಕಂಕನೀಲ, ತಕ್ಷಕ, ಸರ್ಪಪುಂಗವ, ಏಲಾಪತ್ರ, ಶಂಖಪಾಲ, ಐರಾವತ, ಧನಂಜಯ, ಮಹಾಪದ್ಮ, ಕರ್ಕೋಟಕ, ಕಂಬಲ, ಅಶ್ವತರ - ಈ ಸರ್ಪಗಳು ಸೂರ್ಯರಥವನ್ನು ಎಳೆಯುತ್ತವೆ.

ತುಂಬುರು, ನಾರದ, ಹಾಹಾ, ಹೂಹೂ, ವಿಶ್ವಾವಸು, ಉಗ್ರಸೇನ, ಸುರುಚಿ, ವಾವಸು, ಚಿತ್ರಸೇನ, ಉರ್ಣಾಯು, ಧೃತರಾಷ್ಟ್ರ, ಸೂರ್ಯವರ್ಚಸ್ -ಈ ಹನ್ನೆರಡು ಮಂದಿ ಗಂಧರ್ವರು ಷಡ್ಜ ಮೊದಲಾದ ಸ್ವರಗಳಿಂದ ಸೂರ್ಯದೇವನ ಗಾಯನವನ್ನು ಮಾಡುತ್ತಾರೆ.

ಕೃತಸ್ಥಲಾ, ಪುಂಜಿಕಸ್ಥಲಾ, ಮೇನಕಾ, ಸಹಜನ್ಯಾ, ಪ್ರಮ್ಲೋಚಾ, ಅನುಮ್ಲೋಚಾ, ವಿಶ್ವಾಚೀ, ಘೃತಾಚೀ, ಊರ್ವಶೀ, ಪೂರ್ವಚಿತ್ತಿ, ರಂಭಾ, ತಿಲೋತ್ತಮಾ -ಇವರು ಶ್ರೇಷ್ಠ ಅಪ್ಸರೆಯರು. ಇವರು ಕ್ರಮವಾಗಿ ವಸಂತ ಮೊದಲಾದ ಋತುಗಳಲ್ಲಿ ವಿವಿಧ ತಾಂಡವ-

ನೃತ್ಯಗಳಿಂದ ದೇವೋತ್ತಮನೂ, ಅವ್ಯಯನೂ ಆದ ಸೂರ್ಯನನ್ನು ಸಂತೋಷ ಗೊಳಿಸುತ್ತಾರೆ.

ಮೇಲೆ ಹೇಳಿದಂತೆ ದೇವತೆಗಳು ಕ್ರಮವಾಗಿ ಸೂರ್ಯನಲ್ಲಿ ಎರಡೆರಡು ತಿಂಗಳು ವಾಸಮಾಡುತ್ತಾರೆ. ತೇಜಸ್ಸುಗಳ ನಿಧಿಯಾದ ಈ ದೇವನನ್ನು ತಮ್ಮ ತೇಜಸ್ಸಿನಿಂದ ಪುಷ್ಟನನ್ನಾಗಿಸುತ್ತಾರೆ. ತಾವು ರಚಿಸಿದ ಸ್ತುತಿಗಳಿಂದ ಅವನನ್ನು ಸ್ತುತಿಸುತ್ತಾರೆ.

ಅಪ್ಸರೆಯರು ಮತ್ತು ಗಂಧರ್ವರು ನೃತ್ಯ ಮತ್ತು ಗೇಯಗಳಿಂದ ಇವನ ಸೇವೆಯನ್ನು ಮಾಡುತ್ತಾರೆ. ಗ್ರಾಮಣಿಗಳು, ಯಕ್ಷಗಳು ಮತ್ತು ಭೂತಗಳು ರಶ್ಮಿಗಳನ್ನು ಹಿಡಿಯುತ್ತಾರೆ. ಸರ್ಪಗಳನ್ನು ಸೂರ್ಯರಥವನ್ನು ಎಳೆಯುತ್ತಾರೆ. ರಾಕ್ಷಸರು ರಥದ ಮುಂದೆ ಸಾಗುತ್ತಾರೆ.

ವಾಲಖಿಲ್ಯರು ಸೂರ್ಯನನ್ನು ಉದಯದಿಂದ ಅಸ್ತಕ್ಕೆ ಕರೆದೊಯ್ಯುತ್ತಾರೆ. ಸೂರ್ಯನಲ್ಲಿ ಕಂಡುಬರುವ ತಪನ, ವರ್ಷಣ, (ಮಳೆ ಸುರಿಸುವುದು) ಭಾನ (ಹೊಳೆಯುವುದು), ಬೀಸುವ ಕ್ರಿಯೆ, ಸೃಷ್ಟಿಸುವಕ್ರಿಯೆ - ಇವುಗಳನ್ನು ಇವರೇ ಮಾಡುತ್ತಾರೆ. ಚೇತನಗಳ ಅಶುಭಕರ್ಮಗಳನ್ನು ಪರಿಹರಿಸುತ್ತಾರೆ. ಇವರು ಅಂತರಿಕ್ಷದಲ್ಲಿ ವಾಯುವೇಗದ ವಿಮಾನದಲ್ಲಿ ಕುಳಿತು ಸೂರ್ಯನ ಜೊತೆಯೇ ಸಾಗುತ್ತಾರೆ. ಇವರೇ ಮಳೆ ಸುರಿಯುವಂತೆ ಮಾಡುತ್ತಾ, ತಾಪವು ಇರುವಂತೆ ಮಾಡುತ್ತಾ, ಆಹ್ಲಾದವನ್ನು ಉಂಟುಮಾಡುತ್ತಾ ಎಲ್ಲ ಭೂತಗಳನ್ನೂ ರಕ್ಷಿಸುತ್ತಾರೆ.

ಈ ಮುನಿಗಳ ಮತ್ತು ದೇವತೆಗಳ ಸಾಮರ್ಥ್ಯ, ತಪಸ್ಸು, ಯೋಗ ಮತ್ತು ಅಂತಸ್ಸತ್ವ-ಗಳಿಗನುಗುಣವಾಗಿ ಸೂರ್ಯನು ತಪಿಸುತ್ತಾನೆ. ಹಗಲು-ರಾತ್ರಿಗಳ ವ್ಯವಸ್ಥೆಗೆ ಕಾರಣನಾದ ಈ ಸೂರ್ಯನೇ ಯಾವಾಗಲೂ ಪಿತೃಗಳಿಗೂ ದೇವತೆಗಳಿಗೂ ಮತ್ತು ಮನುಷ್ಯರಿಗೂ ಪುಷ್ಟಿಯನ್ನು ಕೊಡುತ್ತಾನೆ. ಈ ಸೂರ್ಯನಲ್ಲಿ ವೇದಜ್ಞಾನಿಗಳಿಗೆ ದೇವೋತ್ತಮನೂ ಸನಾತನನೂ ಆದ ನೀಲಕಂಠನು ಕಾಣಿಸುತ್ತಾನೆ. ಸೂರ್ಯನು ಪ್ರಜಾಪತಿಯಾದ ಶಿವನ ವಾಸಸ್ಥಾನವೆಂದು ವೇದವನ್ನು ತಿಳಿದವರು ತಿಳಿದಿದ್ದಾರೆ.

* * *

## ಅಧ್ಯಾಯ-೪೩

**ಸೂತ ಉವಾಚ :**

ದೇವದೇವನೂ, ಪಿತಾಮಹನೂ, ಅಚಿಂತ್ಯ ಐಶ್ವರ್ಯವನ್ನು ತನ್ನ ಸ್ವರೂಪದಲ್ಲಿ ಹೊಂದಿರುವವನೂ ಆದ ಸೂರ್ಯಾಂತರ್ಯಾಮಿಯಾದ ಶಿವನು ಕಾಲವನ್ನು ನಿಯಂತ್ರಿಸುತ್ತಾನೆ.

ವಿಪ್ರರೇ! ಎಲ್ಲ ಲೋಕಗಳನ್ನೂ ಬೆಳಗುವ ಸೂರ್ಯರಶ್ಮಿಗಳಲ್ಲಿ ಏಳು ರಶ್ಮಿಗಳು ಶ್ರೇಷ್ಠ. ಸುಷುಮ್ನ, ಹರಿಕೇಶ, ವಿಶ್ವಕರ್ಮ, ವಿಶ್ವಶ್ರವಸ್, ಸಂಯದ್ವಸು, ಅರ್ವಾವಸು, ಸ್ವರ -ಇವು ಆ ರಶ್ಮಿಗಳ ಹೆಸರುಗಳು.

ಅಡ್ಡವಾಗಿ ಮತ್ತು ಮೇಲ್ಮುಖವಾಗಿ ಸಂಚರಿಸುವ ಸುಷುಮ್ನವು ಚಂದ್ರನನ್ನು ಪೋಷಿಸುತ್ತದೆ. ಹರಿಕೇಶರಶ್ಮಿಯು ನಕ್ಷತ್ರಗಳನ್ನು ಪೋಷಿಸುತ್ತದೆ. ವಿಶ್ವಕರ್ಮ ರಶ್ಮಿಯು ಬುಧನನ್ನು ಪೋಷಿಸುತ್ತದೆ. ವಿಶ್ವಶ್ರವಸ್ ಎಂಬ ರಶ್ಮಿಯು ಶುಕ್ರನನ್ನು ಪೋಷಿಸುತ್ತದೆ. ಸಂಯದ್ವಸು ಎಂಬ ರಶ್ಮಿಯು ಅಂಗಾರಕನಿಗೆ ಪೋಷಕ. ಅರ್ವಾವಸುವು ಬೃಹಸ್ಪತಿಗೆ ಪೋಷಕ. ಏಳನೆಯ ಸ್ವರ ಶನಿಯನ್ನು ಪೋಷಿಸುತ್ತದೆ. ಹೀಗೆ ಸೂರ್ಯನ ಪ್ರಭಾವದಿಂದ ಎಲ್ಲ ನಕ್ಷತ್ರಗಳೂ, ತಾರಕಗಳೂ ವೃದ್ಧಿಯನ್ನು ಹೊಂದುತ್ತವೆ. ಹೀಗೆ ವೃದ್ಧಿಯನ್ನು (ಪುಷ್ಟಿಯನ್ನು) ಹೊಂದಿದ ಗ್ರಹ-ನಕ್ಷತ್ರಗಳು ಮೇಲಿನ ಲೋಕಗಳ ಮತ್ತು ಭೂಲೋಕಗಳ ಎಲ್ಲ ಪದಾರ್ಥಗಳಿಗೂ ಪುಷ್ಟಿಯನ್ನು ಕೊಡುತ್ತವೆ.

ಎಲ್ಲ ವಿಧವಾದ ತೇಜಸ್ಸುಗಳ ಮತ್ತು ತಮಸ್ಸುಗಳ ನಿಧಿಯಾದ್ದರಿಂದಲೇ ಸೂರ್ಯನಿಗೆ ಆದಿತ್ಯ ಎಂದು ಹೆಸರು. ಆದಿತ್ಯನು ತನ್ನ ಸಾವಿರಾರು ನಾಡಿಗಳಿಂದ ಎಲ್ಲ ಕಡೆ ಇರುವ ನದಿಗಳ, ಸಮುದ್ರಗಳ, ಭಾವಿಗಳ ನೀರನ್ನು ಹರಿಯುತ್ತಿರುವ ಅಥವಾ ನಿಂತಿರುವ ಎಲ್ಲ ನೀರನ್ನೂ ಹೀರಿಕೊಳ್ಳುತ್ತಾನೆ. ಅವನ ಸಾವಿರ ರಶ್ಮಿಗಳು ಶೀತವನ್ನೂ, ಮಳೆಯನ್ನೂ, ಬಿಸಿಯನ್ನೂ ಉಂಟುಮಾಡುತ್ತವೆ. ಈ ನಾಡಿಗಳಲ್ಲಿ ವಿಚಿತ್ರ ಆಕೃತಿಗಳನ್ನು ಹೊಂದಿರುವ ನಾಲ್ಕು ನಾಡಿಗಳು ಮಳೆಯನ್ನು ಸುರಿಸುತ್ತವೆ. ಈ ನಾಡಿಗಳಿಗೆ ಚಂದ್ರಗಾ, ಗಾಹ, ಕಾಂಚನ, ಶೀತನ ಮತ್ತು ಅಮೃತ ಎಂದು ಹೆಸರು.

ರೇಷ್ಯ, ಮೇಷ್ಯ, ವಾಸ್ಯ, ಹ್ರಾದಿನೀ, ಸುರ್ಜನ ಮತ್ತು ಚಂದ್ರ ಎಂಬ ನಾಡೀರಶ್ಮಿಗಳು ಹಿಮವನ್ನು ಉಂಟುಮಾಡುತ್ತವೆ. ಈ ರಶ್ಮಿಗಳು ಹಳದಿಯಾಗಿರುತ್ತವೆ. ಕುಂಕುಮ, ಗೋ, ವಿಶ್ವಭೃತ್ ಮತ್ತು ಶುಕ್ಲ ಎಂಬ ಬಿಳಿಬಣ್ಣದ ನಾಡಿಗಳು, ಪ್ರತಿಯೊಂದು ಮೂರು ವಿಧವಾಗಿ ತಾಪವನ್ನು ಹೊರಡಿಸುತ್ತವೆ. ಸೂರ್ಯನು ಈ ರಶ್ಮಿಗಳಿಂದ ಮನುಷ್ಯರನ್ನೂ, ಪಿತೃಗಳನ್ನೂ, ದೇವತೆಗಳನ್ನೂ ಒಂದೇ ರೀತಿಯಿಂದ ಪೋಷಿಸುತ್ತಾನೆ. ಮನುಷ್ಯರನ್ನು ಔಷಧಿಗಳಿಂದ,

ಪಿತೃಗಳನ್ನು ಸ್ವಧಾದಿಂದ (ಶ್ರಾದ್ಧದ್ರವ್ಯಗಳಿಂದ) ಮತ್ತು ದೇವತೆಗಳನ್ನು ಅಮೃತದಿಂದ ತೃಪ್ತಿ ಪಡಿಸುತ್ತಾನೆ.

ಸೂರ್ಯನು ವಸಂತ ಮತ್ತು ಗ್ರೀಷ್ಮಋತುಗಳಲ್ಲಿ ಆರು ರಶ್ಮಿಗಳಿಂದ ತಾಪವುಂಟು ಮಾಡುತ್ತಾನೆ. ಶರತ್ ಮತ್ತು ವರ್ಷಋತುಗಳಲ್ಲಿ ನಾಲ್ಕು ರಶ್ಮಿಗಳಿಂದ ಮಳೆ ಸುರಿಸುತ್ತಾನೆ. ಹೇಮಂತ-ಶಿಶಿರಋತುಗಳಲ್ಲಿ ಮೂರು ರಶ್ಮಿಗಳಿಂದ ಹಿಮವನ್ನು ಸುರಿಸುತ್ತಾನೆ.

## ಪ್ರತಿಮಾಸದಲ್ಲೂ ಬೇರೆಬೇರೆ ದೇವತೆಗಳು ಸೂರ್ಯರಾಗುತ್ತಾರೆ.

ಮಾಘಮಾಸದಲ್ಲಿ ವರುಣನೂ, ಫಾಲ್ಗುನದಲ್ಲಿ ಪೂಷನ್ ಎಂಬ ದೇವತೆಯೂ ಸೂರ್ಯನಾಗಿ ಅಧಿಕಾರವನ್ನು ನಡೆಸುತ್ತಾರೆ. ಚೈತ್ರಮಾಸದಲ್ಲಿ ದೇವೇಶ ಎಂಬ ದೇವತೆಯೂ, ವೈಶಾಖದಲ್ಲಿ ಧಾತೃ ಎಂಬ ದೇವತೆಯೂ ಸೂರ್ಯನ ಅಧಿಕಾರವನ್ನು ನಡೆಸುತ್ತಾರೆ. ಜ್ಯೇಷ್ಠಮಾಸದಲ್ಲಿ ಇಂದ್ರನೂ, ಆಷಾಢದಲ್ಲಿ ರವಿಯೂ ಸೂರ್ಯನಾಗಿ ರುತ್ತಾರೆ. ಶ್ರಾವಣಮಾಸದಲ್ಲಿ ವಿವಸ್ವಾನ್ ಎಂಬ ದೇವತೆಯು ಸೂರ್ಯ, ಭಾದ್ರಪದ ಮಾಸದಲ್ಲಿ ಭಗ ಎಂಬ ದೇವತೆಯು ಸೂರ್ಯ. ಆಶ್ವಿನದಲ್ಲಿ ಪರ್ಜನ್ಯ ಎಂಬ ದೇವತೆಯೂ, ಕಾರ್ತೀಕದಲ್ಲಿ ಭಾಸ್ಕರ ಎಂಬ ದೇವತೆಯೂ ಸೂರ್ಯ. ಮಾರ್ಗಶೀರ್ಷದಲ್ಲಿ ಮಿತ್ರನೂ, ಪುಷ್ಯದಲ್ಲಿ ಸನಾತನನಾದ ವಿಷ್ಣುವೂ ಸೂರ್ಯ.

ವರುಣನು ಐದು ಸಾವಿರ ಕಿರಣಗಳಿಂದ ಸೂರ್ಯಾಧಿಕಾರವನ್ನು ನಡೆಸುತ್ತಾನೆ. ಆರುಸಾವಿರ ಕಿರಣಗಳಿಂದ ಪೂಷನ್ ದೇವತೆಯೂ ಏಳು ಸಾವಿರ ಕಿರಣಗಳಿಂದ ದೇವೇಶನೂ ತಮ್ಮ ಅಧಿಕಾರವನ್ನು ನಿರ್ವಹಿಸುತ್ತಾರೆ. ಧಾತೃವು ಎಂಟು ಸಾವಿರ ಕಿರಣಗಳಿಂದಲೂ ಇಂದ್ರನು ಒಂಭತ್ತು ಸಾವಿರ ಕಿರಣಗಳಿಂದಲೂ ತಮ್ಮ ಅಧಿಕಾರವನ್ನು ನಿರ್ವಹಿಸುತ್ತಾರೆ. ವಿವಸ್ವಂತನು ಹತ್ತುಸಾವಿರ ಕಿರಣಗಳಿಂದಲೂ ಭಗನು ಹನ್ನೊಂದು ಸಾವಿರ ಕಿರಣಗಳಿಂದಲೂ ತಮ್ಮ ಕೆಲಸವನ್ನು ಮಾಡುತ್ತಾರೆ. ಮಿತ್ರನು ಏಳುಸಾವಿರ ಕಿರಣಗಳಿಂದ, ತ್ವಷ್ಟ್ರವು ಎಂಟುಸಾವಿರ ಕಿರಣಗಳಿಂದ, ಅರ್ಯಮ (ರವಿ) ದೇವತೆಯು ಹತ್ತುಸಾವಿರ ಕಿರಣಗಳಿಂದ ತಮ್ಮ ಕೆಲಸವನ್ನು ಮಾಡುತ್ತಾರೆ. ಪರ್ಜನ್ಯನು ಒಂಭತ್ತುಸಾವಿರ ಕಿರಣಗಳಿಂದ ತನ್ನ ಕೆಲಸವನ್ನು ನಿರ್ವಹಿಸುತ್ತಾನೆ. ವಿಷ್ಣುವು ಆರುಸಾವಿರ ಕಿರಣಗಳಿಂದ ತಪನಕಾರ್ಯವನ್ನು ಮಾಡುತ್ತಾನೆ.

## ಸೂರ್ಯನ ಬಣ್ಣಗಳು

ವಸಂತಮಾಸದಲ್ಲಿ ಸೂರ್ಯನು ಕಪಿಲಬಣ್ಣದವನಾಗಿರುತ್ತಾನೆ. ಗ್ರೀಷ್ಮದಲ್ಲಿ ಬಂಗಾರದ ಬಣ್ಣ. ವರ್ಷಋತುವಿನಲ್ಲಿ ಶ್ವೇತವರ್ಣ, ಶರದೃತುವಿನಲ್ಲಿ ಪಾಂಡುರ ಬಣ್ಣ. ಹೇಮಂತದಲ್ಲಿ ತಾಮ್ರದ ಬಣ್ಣ. ಶಿಶಿರದಲ್ಲಿ ಲೋಹಿತ ಬಣ್ಣ. (ಶ್ವೇತ, ಪಾಂಡುರಗಳು ಬಿಳಿಬಣ್ಣದ ಬೇರೆ

ಬೇರೆ ಪ್ರಕಾರಗಳು. ತಾಮ್ರ ಮತ್ತು ಲೋಹಿತಗಳು ಕೆಂಪು ಬಣ್ಣದ ಬೇರೆ ಬೇರೆ ಪ್ರಕಾರಗಳು.)

## ಚಂದ್ರ ಮೊದಲಾದ ಗ್ರಹಗಳಿಗೆ ಸೂರ್ಯನೇ ಆಧಾರ :

ಚಂದ್ರ, ಬುಧ, ಶುಕ್ರ, ಗುರು, ಕುಜ, ಶನಿ, ರಾಹು, ಕೇತು - ಈ ಎಂಟು ಗ್ರಹಗಳಿಗೆ ಸೂರ್ಯನೇ ಆಧಾರ. ಈ ಗ್ರಹಗಳೆಲ್ಲವೂ ಒಂದು ವಿಧವಾದ ಗಾಳಿಯಿಂದ ಧ್ರುವ ಮಂಡಲದ ಸೆಳೆತಕ್ಕೆ ಒಳಗಾಗಿವೆ. ಈ ಗ್ರಹಗಳು ತಮ್ಮ ಯೋಗ್ಯತೆಗನುಗುಣವಾಗಿ ಸೂರ್ಯನನ್ನು ಅನುಸರಿಸುತ್ತಾ ಚಲಿಸುತ್ತವೆ. ವಾಯುಮಂಡಲದಿಂದ ಹೊರಟು ತಮ್ಮ ಮೇಲೆ ಬರುವ ಶಕ್ತಿಯಿಂದ ಈ ಗ್ರಹಗಳು ಅಲಾತ ಚಕ್ರದಂತೆ (ಕೊಳ್ಳಿಯ ಚಕ್ರದಂತೆ) ತಿರುಗುತ್ತವೆ. ವಾಯುಶಕ್ತಿಯಿಂದ ಈ ಗ್ರಹಗಳು ಚಲಿಸುವುದರಿಂದ ವಾಯು ಇವುಗಳ ವಾಹಕ. ವಾಹಕನಾದ್ದರಿಂದ ವಾಯುವಿಗೆ ಪ್ರವಹ ಎಂದು ಹೆಸರು.

## ಚಂದ್ರ :

ಚಂದ್ರನ ರಥಕ್ಕೆ ಮೂರುಚಕ್ರಗಳಿವೆ. ಅದರ ಕುದುರೆಗಳು ಕುಂದಪುಷ್ಪದ ಕಾಂತಿಯನ್ನು ಹೊಂದಿವೆ. ಎಡಪಾರ್ಶ್ವ ಮತ್ತು ಬಲಪಾರ್ಶ್ವಗಳಲ್ಲಿ ಒಟ್ಟು ಹತ್ತು ಕುದುರೆಗಳನ್ನು ರಥಕ್ಕೆ ಜೋಡಿಸಲಾಗಿದೆ. ಇಂತಹ ರಥದಲ್ಲಿ ಇದ್ದು ಧ್ರುವಮಂಡಲವನ್ನು ಆಶ್ರಯಿಸಿರುವ ನಕ್ಷತ್ರಮಂಡಲವನ್ನು ಸುತ್ತುತ್ತಾನೆ.

ಈ ಚಂದ್ರನಿಗೆ ಹ್ರಾಸ-ವೃದ್ಧಿಗಳು ಇದ್ದೇ ಇವೆ. ದೇವತೆಗಳು ಚಂದ್ರನಲ್ಲಿರುವ ಅಮೃತವನ್ನು ಕುಡಿಯುವುದರಿಂದ ಅವನು ಕ್ರಮವಾಗಿ ಕ್ಷೀಣನಾಗುತ್ತಾನೆ. ಹೀಗೆ ಕ್ಷೀಣನಾದ ಚಂದ್ರನನ್ನು ಶುಕ್ಲಪಕ್ಷದಲ್ಲಿ ಸುಷುಮ್ನ ಎಂಬ ರಶ್ಮಿಯಿಂದ ಸೂರ್ಯನು ಪುಷ್ಟಿಗೊಳಿಸುತ್ತಾನೆ. ಹೀಗೆ ಸೂರ್ಯತೇಜಸ್ಸಿನಿಂದ ಕ್ರಮವಾಗಿ ಪುಷ್ಟಿಯನ್ನು ಪಡೆಯುವ ಚಂದ್ರನು ಹುಣ್ಣಿಮೆಯಂದು ಪೂರ್ಣನಾಗುತ್ತಾನೆ.

ಶುಕ್ಲಪಕ್ಷದಲ್ಲಿ ಪೂರ್ಣನಾದ, ಅಮೃತಮಯನಾದ ಚಂದ್ರನಲ್ಲಿ ಇರುವ ಅಮೃತವನ್ನು ನಿತ್ಯವೂ ದೇವತೆಗಳು ಕುಡಿಯುತ್ತಾರೆ. ಹದಿನೈದನೆಯ ಭಾಗವು ಸ್ವಲ್ಪ ಉಳಿದಿದ್ದಾಗ ಅಪರಾಹ್ನಕಾಲದಲ್ಲಿ ಪಿತೃಗಳು ಅದನ್ನು ಕುಡಿಯುತ್ತಾರೆ. ಹೀಗೆ ಚಂದ್ರನಲ್ಲಿರುವ ಅಮೃತವನ್ನು ಅಮಾವಸ್ಯೆಯಂದು ಪಾನಮಾಡುವ ಪಿತೃಗಳು ಒಂದು ತಿಂಗಳು ತೃಪ್ತರಾಗಿರುತ್ತಾರೆ. ಚಂದ್ರನಿಗೆ ವಿನಾಶವಿಲ್ಲವಾದ್ದರಿಂದ ದೇವತೆಗಳು ಮತ್ತು ಪಿತೃಗಳು ಅಮೃತಪಾನ ಮಾಡುವ ವ್ಯವಸ್ಥೆಗೆ ಎಂದೂ ಭಂಗವಾಗುವುದಿಲ್ಲ. ಚಂದ್ರನಿಗೆ ದೇವತೆಗಳು ಮತ್ತು ಪಿತೃಗಳು ಅಮೃತಪಾನ ಮಾಡುವ ನಿಮಿತ್ತ ಕ್ಷಯವೂ, ಸೂರ್ಯನಿಂದ ಅವನು ಅಮೃತವನ್ನು ಪಡೆಯುವ ಕಾರಣದಿಂದ ವೃದ್ಧಿಯೂ ನಿರಂತರವಾಗಿ ಇದ್ದೇ ಇರುತ್ತದೆ.

## ಬುಧ ಮೊದಲಾದವರ ರಥಗಳು

ಬುಧನ ರಥಕ್ಕೆ ಎಂಟು ಕುದುರೆಗಳು. ಅವು ನೀರಿನಲ್ಲಿ ಹುಟ್ಟಿದವುಗಳು, ವಾಯುವೇಗವುಳ್ಳವುಗಳು.

ಶುಕ್ರನ ರಥಕ್ಕೆ ಭೂಮಿಯಲ್ಲಿ ಹುಟ್ಟಿದ ಹತ್ತು ಕುದುರೆಗಳು. ಕುಜನ ರಥ ಬಂಗಾರದಿಂದ ನಿರ್ಮಿತ. ಅದಕ್ಕೆ ಎಂಟು ಕುದುರೆಗಳು.

ಬೃಹಸ್ಪತಿಯ ರಥವೂ ಬಂಗಾರದಿಂದ ನಿರ್ಮಿತ. ಅದಕ್ಕೂ ಎಂಟು ಕುದುರೆಗಳು. ಶನಿಯ ರಥ ಬೆಳ್ಳಿಯಿಂದ ನಿರ್ಮಿತ ಮತ್ತು ಅದಕ್ಕೆ ಎಂಟು ಕುದುರೆಗಳು. ರಾಹು ಮತ್ತು ಕೇತುಗಳ ರಥಗಳು ಕಬ್ಬಿಣದಿಂದ ನಿರ್ಮಿತ. ಎರಡು ರಥಗಳಿಗೂ ಪ್ರತ್ಯೇಕವಾಗಿ ಎಂಟು ಕುದುರೆಗಳು. ಈ ಎಲ್ಲ ಗ್ರಹಗಳೂ, ನಕ್ಷತ್ರಗಳೂ, ತಾರಾಮಂಡಲಗಳೂ ವಾಯುರಶ್ಮಿಗಳಿಂದ ಧ್ರುವನಕ್ಷತ್ರದ ನಿಯಂತ್ರಣಕ್ಕೆ ಒಳಪಟ್ಟು ಸಂಚರಿಸುತ್ತಿವೆ.

* * *

## ಅಧ್ಯಾಯ-೪೪

**ಸೂತ ಉವಾಚ :**

ಧ್ರುವಮಂಡಲದ ಮೇಲೆ ಮಹರ್ಲೋಕವಿದೆ. ಇದರ ವಿಸ್ತಾರ ಒಂದು ಕೋಟಿ ಯೋಜನ. ಒಂದು ಕಲ್ಪಕಾಲ ಸಾಧನೆಯನ್ನು ಮಾಡುವ ಅರ್ಹತೆ ಮತ್ತು ಅಧಿಕಾರವಿರುವವರು ಇಲ್ಲಿ ವಾಸಿಸುತ್ತಾರೆ. ಮಹರ್ಲೋಕದ ಮೇಲೆ ಜನಲೋಕ. ಇದರ ವಿಸ್ತಾರ ಎರಡುಕೋಟಿ ಯೋಜನ. ಚತುರ್ಮುಖಬ್ರಹ್ಮದೇವರ ಪುತ್ರರಾದ ಸನಕ ಮೊದಲಾದ ಮಹರ್ಷಿಗಳು ಇಲ್ಲಿ ವಾಸಿಸುತ್ತಾರೆ. ಜನಲೋಕದ ಮೇಲೆ ತಪೋಲೋಕ. ಇದರ ವಿಸ್ತಾರ ಮೂರುಕೋಟಿಯೋಜನೆ. ಇಲ್ಲಿ ದುಃಖರಹಿತರಾದ ವೈರಾಜ ಎಂಬ ದೇವತೆಗಳು ವಾಸಿಸುತ್ತಾರೆ. ಈ ಲೋಕಕ್ಕೆ ಪ್ರಾಜಾಪತ್ಯ ಎಂದೂ ಹೆಸರು. ಪ್ರಾಜಾಪತ್ಯ ಲೋಕದ ಮೇಲೆ ಸತ್ಯಲೋಕ. ಇದರ ವಿಸ್ತಾರ ಆರುಕೋಟಿ ಯೋಜನ. ಇದು ಬ್ರಹ್ಮಲೋಕ. ಇಲ್ಲಿ ಬಂದವರಿಗೆ ಹುಟ್ಟು ಸಾವುಗಳಿಲ್ಲ. ಆದ್ದರಿಂದ ಈ ಲೋಕಕ್ಕೆ ಅಪುನರ್ಮಾರಕ ಎಂದು ಹೆಸರು. ಇಲ್ಲಿ ವಿಶ್ವಸೃಷ್ಟಿಯನ್ನು ಮಾಡುವ, ಲೋಕಗುರುವಾದ ಚತುರ್ಮುಖ ಬ್ರಹ್ಮದೇವರು ಯೋಗಿಗಳ ಯೋಗನಿರತರಾಗಿ ಇದ್ದಾರೆ. ಇಲ್ಲಿ ಶಾಂತರೂ, ಸದಾ ಬ್ರಹ್ಮಚಾರಿಗಳೂ, ತಪಸ್ವಿಗಳೂ, ಸಿದ್ಧರೂ, ಪರಮಾತ್ಮನನ್ನು ಜಪಿಸುವವರೂ, ಯೋಗಿಗಳೂ ಆದ ಯತಿಗಳು

ವಾಸವಾಗಿದ್ದಾರೆ. ಪರಮಪದಕ್ಕೆ ಹೋಗುವ ಯೋಗಿಗಳಿಗೆ ಇದೊಂದೇ ದ್ವಾರ. ಅಲ್ಲಿಗೆ ಹೋದವರಿಗೆ ಇನ್ನೆಂದೂ ದುಃಖವಿಲ್ಲ. ಈ ಲೋಕದ ಅಧಿಪತಿಯಾದ ಚತುರ್ಮುಖ ಬ್ರಹ್ಮದೇವರೇ ವಿಷ್ಣು. ಅವರೇ ಶಂಕರ. ಕೋಟಿ ಸೂರ್ಯರ ಕಾಂತಿಯನ್ನು ಹೊಂದಿರುವ, ಸಮೀಪಿಸಲು ಬಹಳ ಕಷ್ಟವಾದ, ಜ್ವಾಲೆಗಳ ಮಾಲೆಗಳಿಂದ ತುಂಬಿದ ಈ ಲೋಕವನ್ನು ನಾನು ವರ್ಣಿಸಲಾರೆ.

ಈ ಬ್ರಹ್ಮದೇವರ ಲೋಕದಲ್ಲಿ ಶ್ರೀಮನ್ನಾರಾಯಣನ ಭವನವಿದೆ. ಅಲ್ಲಿ ಮಾಯಾಮಯನೂ, ಉತ್ಕೃಷ್ಟನೂ, ಯೋಗಿಯೂ ಆದ ಹರಿಯು (ನಾರಾಯಣನು) ವಾಸವಾಗಿದ್ದಾನೆ. ಈ ಲೋಕ ವಿಷ್ಣುಲೋಕ ಎಂದು ಪ್ರಸಿದ್ಧ. ಈ ಲೋಕಕ್ಕೆ ಹೋದವರಿಗೆ ಪುನರ್ಜನ್ಮವಿಲ್ಲ. ಪ್ರಕೃತಿ ಸಂಬಂಧವು ಪುನಃ ಉಂಟಾಗುವುದಿಲ್ಲ. ಶ್ರೀಮನ್ನಾರಾಯಣನನ್ನು ಆಶ್ರಯಿಸಿದ ಮಹಾತ್ಮರು ಈ ಲೋಕಕ್ಕೆ ಹೋಗುತ್ತಾರೆ. ಬ್ರಹ್ಮಲೋಕದ ಮೇಲೆ ಬೆಂಕಿಯಿಂದ ಸುತ್ತುವರಿಯಲ್ಪಟ್ಟಿರುವ ಜ್ಯೋತಿರ್ಮಯವಾದ ಪುರವಿದೆ. ಅಲ್ಲಿ ಯೋಗಿಗಳಿಂದ ಧ್ಯೇಯನಾದ ಭಗವಾನ್ ಹರನು ದೇವಿ ಉಮೆಯೊಂದಿಗೆ ವಾಸಿಸುತ್ತಾನೆ. ಅಲ್ಲಿ ಲಕ್ಷ ಸಂಖ್ಯೆಯಲ್ಲಿರುವ ಭೂತಗಣಗಳು ಮತ್ತು ರುದ್ರಗಣಗಳು ಶಿವನ ಸೇವೆಯನ್ನು ಮಾಡುತ್ತವೆ. ಶಿವಭಕ್ತರೂ, ಶಾಂತರೂ, ಸತ್ಯವಾದಿಗಳೂ, ಅಹಂಕಾರ, ಮಮಕಾರಗಳಿಲ್ಲದವರೂ, ಕಾಮ-ಕ್ರೋಧಗಳನ್ನು ಬಿಟ್ಟವರೂ ಆದ ಬ್ರಾಹ್ಮಣರು ಈ ಲೋಕಕ್ಕೆ ಹೋಗುತ್ತಾರೆ.

ಇದು ಭೂಲೋಕದ ಮೇಲಿರುವ ಏಳು ಲೋಕಗಳ ವಿವರಣೆ.

**ಪಾತಾಳಲೋಕಗಳು :**

ಭೂಲೋಕದ ಕೆಳಗೆ ಇರುವ ಲೋಕಗಳಿಗೆ ಪಾತಾಳ ಎಂದು ಹೆಸರು. ಮಹಾತಲ, ರಸಾತಲ, ತಲ, ಅತಲ, ತಲಾತಲ, ಸುತಲ, ವಿತಲ -ಇವು ಪಾತಾಳಲೋಕಗಳ ಹೆಸರುಗಳು.

ಮಹಾತಲವು ಸರ್ವವಿಧರತ್ನಗಳಿಂದ ಸಮೃದ್ಧವಾಗಿದೆ. ವಿವಿಧ ಉಪ್ಪರಿಗೆಯ ಮನೆಗಳು ಮತ್ತು ಶುಭ್ರವಾದ ದೇವಾಲಯಗಳು ಇಲ್ಲಿವೆ. ಆದಿಶೇಷ, ಜ್ಞಾನಿ ಮುಚುಕುಂದ ಮತ್ತು ಬಲಿಚಕ್ರವರ್ತಿ ಇಲ್ಲಿಯ ನಿವಾಸಿಗಳು.

ರಸಾತಲವು ಪಾಷಾಣಭೂಯಿಷ್ಠವಾಗಿದೆ. ತಲಾತಲದಲ್ಲಿ ಮರಳು ಪ್ರದೇಶವೇ ಹೆಚ್ಚು. ಸುತಲಲೋಕದ ಬಣ್ಣ ಹಳದಿ. ಅಂದರೆ ಇಲ್ಲಿ ಬಂಗಾರ ಸಮೃದ್ಧವಾಗಿದೆ. ವಿತಲಲೋಕವು ಹವಳದಿಂದ ಸಮೃದ್ಧವಾಗಿದೆ. ವಿತಲದಲ್ಲಿ ಬಿಳಿ ಬಣ್ಣದ ಪದಾರ್ಥಗಳು ಹೆಚ್ಚಾಗಿದ್ದರೆ ತಲದಲ್ಲಿ ಕಪ್ಪುಬಣ್ಣದ ಪದಾರ್ಥಗಳು ಹೆಚ್ಚಾಗಿವೆ. ಗರುಡನೂ, ವಾಸುಕಿಯೂ ರಸಾತಲದಲ್ಲಿ ವಾಸಮಾಡುತ್ತಾರೆ. ವಿರೋಚನ, ಹಿರಣ್ಯಾಕ್ಷ, ತಾರಕಾ ಮೊದಲಾದ ಅಸುರರೂ ಇಲ್ಲಿ ವಾಸಮಾಡುತ್ತಾರೆ.

ಗರುಡನು ತಲಾತಲದಲ್ಲೂ ವಾಸಮಾಡುತ್ತಾನೆ. ಕಾಲನೇಮಿ ಮೊದಲಾದ ಅಸುರರು ಇಲ್ಲಿ ವಾಸಮಾಡುತ್ತಾರೆ.

ವಿತಲದಲ್ಲಿ ಯವನ ಮೊದಲಾದವರು, ತಾರಕ ಅಗ್ನಿಮುಖ, ಪ್ರಹ್ಲಾದ ಮೊದಲಾದವರು ಅಸುರರು, ಜಂಭಕ ಮೊದಲಾದ ನಾಗಗಳು ವಾಸಮಾಡುತ್ತಾರೆ.

ತಲದಲ್ಲಿ ವೀರನಾದ ಮಹಾಜಂಭ, ಧೀಮಂತನಾದ ಹಯಗ್ರೀವ, ಶಂಕುಕರ್ಣ, ನಮುಚಿ ಮೊದಲಾದ ನಾಗಗಳು ವಾಸಮಾಡಿಕೊಂಡಿದ್ದಾರೆ.

**ಪಾತಾಳದ ಕೆಳಗೆ ನರಕಗಳು :**

ಪಾತಾಳ ಲೋಕಗಳ ಕೆಳಗೆ ಕೂರ್ಮ ಮೊದಲಾದ ನರಕಗಳು ಇವೆ. ಅಲ್ಲಿ ಪಾಪಿಗಳಿಗೆ ನಾನಾ ವಿಧವಾದ ಶಿಕ್ಷೆಗಳನ್ನು ಕೊಡಲಾಗುತ್ತದೆ. ಅವುಗಳನ್ನು ವರ್ಣಿಸಲು ಸಾಧ್ಯವಿಲ್ಲ.

**ಇನ್ನೂ ಕೆಳಗೆ.....**

ಇನ್ನೂ ಕೆಳಗೆ ವಿಷ್ಣುವು ಶೇಷರೂಪದಿಂದ ವಾಸವಾಗಿದ್ದಾನೆ. ಈ ನಾಗರೂಪಿಯಾದ ಜನಾರ್ದನನಿಗೆ ಅನಂತ ಎಂದು ಹೆಸರು. ಈ ಪ್ರಪಂಚವೆಲ್ಲವೂ ಈ ಅನಂತನನ್ನು ಆಶ್ರಯಿಸಿದೆ. ಈ ಅನಂತನು ಸಂಹಾರಕರ್ತೃವಾದ ಶಿವನನ್ನು ಆಶ್ರಯಿಸಿದ್ದಾನೆ. ಶಿವನು ಭಯಂಕರ ತಾಮಸರೂಪದಿಂದ ಜಗತ್ತನ್ನು ಸಂಹರಿಸುತ್ತಾನೆ.

* * *

## ಭೂಲೋಕದ ವಿವರ

**ಅಧ್ಯಾಯ-೪೫**

**ಸೂತ ಉವಾಚ**

ಇಲ್ಲಿಯವರೆಗೆ ಹದಿನಾಲ್ಕು ಲೋಕಗಳನ್ನು ಹೊಂದಿರುವ ಬ್ರಹ್ಮಾಂಡವನ್ನು ವಿವರಿಸಿದ್ದೇನೆ. ಇನ್ನು ಮುಂದೆ ಭೂಲೋಕವನ್ನು ವಿವರಿಸುತ್ತೇನೆ.

ಭೂಲೋಕದಲ್ಲಿ ಏಳು ದ್ವೀಪಗಳು. (೧) ಜಂಬೂದ್ವೀಪ (೨) ಪ್ಲಕ್ಷ (೩) ಶಾಲ್ಮಲೀ (೪) ಕುಶ (೫) ಕ್ರೌಂಚ (೬) ಶಾಕ (೭) ಪುಷ್ಕರ. ಇವುಗಳಲ್ಲಿ ಜಂಬೂದ್ವೀಪವು ಪ್ರಧಾನ. ಈ ಏಳು ದ್ವೀಪಗಳು ಏಳು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿದೆ. ಅವುಗಳು (೧) ಕ್ಷಾರಸಮುದ್ರ (೨) ಇಕ್ಷುರಸಸಮುದ್ರ (೩) ಸುರಾಸಮುದ್ರ (೪) ಘೃತೋದಕಸಮುದ್ರ

(೫) ದಧಿಸಮುದ್ರ (೬) ಕ್ಷೀರಸಮುದ್ರ (೭) ಸ್ವಾದೂದಕ ಸಮುದ್ರ. ಮೊದಲನೆಯ ದ್ವೀಪಕ್ಕಿಂತ ಎರಡನೆಯದು ದೊಡ್ಡದು. ಹಾಗೆಯೇ ಮುಂದಿನ ದ್ವೀಪಗಳು ಹಿಂದಿನ ದ್ವೀಪಕ್ಕಿಂತ ದೊಡ್ಡದಾಗಿವೆ. ಅಂತೆಯೇ ಸಮುದ್ರಗಳೂ ಒಂದಕ್ಕಿಂತ ಇನ್ನೊಂದು ದೊಡ್ಡದಾಗಿದೆ.

ಏಳುದ್ವೀಪ ಮತ್ತು ಏಳು ಸಾಗರಗಳನ್ನು ಹೊಂದಿದ ಭೂಲೋಕದ ಒಟ್ಟು ವಿಸ್ತಾರ ಐವತ್ತುಕೋಟಿ ಯೋಜನ.

ಏಳು ದ್ವೀಪಗಳಲ್ಲಿ ಮಧ್ಯದ ದ್ವೀಪವೇ ಜಂಬೂದ್ವೀಪ. ಈ ದ್ವೀಪದ ಮಧ್ಯದಲ್ಲಿ ಮೇರುಪರ್ವತವಿದೆ. ಇದು ಬಂಗಾರದ ಪರ್ವತ. ಅಂದರೆ, ಇಲ್ಲಿ ಬಂಗಾರವು ವಿಪುಲವಾಗಿದೆ. ಪರ್ವತಕ್ಕೆ ಬಂಗಾರದ ಕಾಂತಿಯಿದೆ. ಇದರ ಎತ್ತರ ಎಂಭತ್ತನಾಲ್ಕು ಸಾವಿರ ಯೋಜನ. ಭೂಮಿಯಲ್ಲಿ ಹದಿನಾರು ಸಾವಿರ ಯೋಜನ ಕೆಳಗೆ ಇಳಿದಿದೆ. ಶಿಖರದಲ್ಲಿ ಇದರ ವಿಸ್ತಾರ ಮೂವತ್ತು ಸಾವಿರ ಯೋಜನ. ತಳದ ವಿಸ್ತಾರ ಹದಿನಾರು ಸಾವಿರ ಯೋಜನ. ಭೂಮಂಡಲವನ್ನು ಕಮಲ ಎಂದು ಪರಿಗಣಿಸಿದರೆ ಈ ಮೇರುಪರ್ವತವನ್ನು ಕರ್ಣಿಕೆ ಎಂದು ವರ್ಣಿಸಬಹುದು. ಇದರ ಬಲಭಾಗದಲ್ಲಿ ಹಿಮಾಲಯ ಮತ್ತು ಹೇಮಕೂಟ ಮತ್ತು ನಿಷಧ ಪರ್ವತಗಳಿವೆ. ಎಡಭಾಗದಲ್ಲಿ ನೀಲ, ಶ್ವೇತ, ಶೃಂಗೀ ಎಂಬ ಪರ್ವತಗಳಿವೆ. ಮಧ್ಯದಲ್ಲಿರುವ ಎರಡು ಪರ್ವತಗಳು, ಎಂದರೆ ಹೇಮಕೂಟ ಮತ್ತು ಶ್ವೇತಪರ್ವತಗಳು ಒಂದುಲಕ್ಷ ಯೋಜನ ಎತ್ತರವಾಗಿವೆ. ಉಳಿದ ನಾಲ್ಕು ಪರ್ವತಗಳು ತೊಂಭತ್ತು ಸಾವಿರ ಯೋಜನ ವಿಸ್ತಾರವುಳ್ಳವುಗಳು.

**ವರ್ಷಗಳು :**

ಮೇರುಪರ್ವತ ದಕ್ಷಿಣಕ್ಕೆ ಭಾರತ, ಕಿಂಪುರುಷ ಮತ್ತು ಹರಿವರ್ಷಗಳು ಇವೆ. ಉತ್ತರಕ್ಕೆ ರಮ್ಯಕ, ಹಿರಣ್ಮಯ ಮತ್ತು ಉತ್ತರಕುರುವರ್ಷಗಳು ಇವೆ. ಪ್ರತಿಯೊಂದು ವರ್ಷವೂ ಒಂಭತ್ತು ಸಾವಿರ ಯೋಜನ ವಿಸ್ತಾರವುಳ್ಳದ್ದು. ಈ ವರ್ಷಗಳ ಮಧ್ಯದಲ್ಲಿ ಇಲಾವೃತ ವರ್ಷವಿದೆ. ಇದರ ಮಧ್ಯದಲ್ಲಿ ಮೇರುಪರ್ವತವಿದೆ. ಇಲಾವೃತ ವರ್ಷ ಒಂಭತ್ತು ಸಾವಿರಯೋಜನ ವಿಸ್ತಾರವುಳ್ಳದ್ದು. ಈ ವರ್ಷದಲ್ಲಿ ನಾಲ್ಕು ಪರ್ವತಗಳಿವೆ. ಹತ್ತುಸಾವಿರ ಯೋಜನ ಎತ್ತರವಿರುವ ಈ ಪರ್ವತಗಳು ಮೇರುಪರ್ವತದ ಅಗಳಿಯಂತೆ ಇವೆ.

ಇಲಾವೃತದ ಪೂರ್ವದಲ್ಲಿ ಮಂದರಪರ್ವತವೂ ದಕ್ಷಿಣದಲ್ಲಿ ಗಂಧಮಾದನವೂ; ಪಶ್ಚಿಮದಲ್ಲಿ ವಿಪುಲವೂ ಉತ್ತರದಲ್ಲಿ ಸುಪಾರ್ಶ್ವ ಪರ್ವತವೂ ಇದೆ. ಅವುಗಳಲ್ಲಿ ಕ್ರಮವಾಗಿ ಕದಂಬ, ಜಂಬೂ, ಪಿಪ್ಪಲ, ವಟವೃಕ್ಷಗಳು ಇವೆ. ಜಂಬೂಮರವೇ ಜಂಬೂದ್ವೀಪ ಎಂಬ ಹೆಸರಿಗೆ ಕಾರಣ. ಈ ಮರದ ಹಣ್ಣುಗಳು ಪರ್ವತದ ತಳದ ಮೇಲೆ ಬಿದ್ದು ಒಡೆದುಕೊಳ್ಳುತ್ತವೆ. ಹೀಗೆ ಒಡೆದ ಹಣ್ಣಿನ ರಸವು ನದಿಯಾಗಿ ಹರಿಯುತ್ತದೆ. ಈ ನದಿಗೆ ಜಂಬೂನದಿ ಎಂದು ಹೆಸರು. ದಕ್ಷಿಣದಿಕ್ಕಿನಲ್ಲಿರುವ ಗಂಧಮಾದನ ಪರ್ವತದಲ್ಲಿ ಯಮನ

ಪಟ್ಟಣವಿದೆ. ಈ ಪಟ್ಟಣಕ್ಕೆ ಸಂಯಮನೀ ಎಂದು ಹೆಸರು. ಇದು ಬಹಳ ಸುಂದರವಾದ ನಗರ. ಇಲ್ಲಿ ದೇವತೆಗಳು ಮೊದಲಾದವರು ಸೂರ್ಯಪುತ್ರನಾದ ಯಮನ ಉಪಾಸನೆಯನ್ನು ಮಾಡುತ್ತಾರೆ. ಇದು ಸತ್ಯಸಂಧರಾದ ಪುಣ್ಯವಂತರಾದ ಜನರ ಸ್ಥಾನ.

ಸಂಯಮನೀ ಪುರಿಯ ಪಶ್ಚಿಮಭಾಗದಲ್ಲಿ ಮಹಾತ್ಮನಾದ ನಿರ್ಋತಿಯ ನಗರವಿದೆ. ಈ ನಗರಕ್ಕೆ ರಕ್ಷೋವತಿ ಎಂದು ಹೆಸರು. ಇಲ್ಲಿ ರಾಕ್ಷಸರು ವಾಸವಾಗಿದ್ದಾರೆ. ಈ ರಾಕ್ಷಸರು ನಿರ್ಋತಿಯ ಸೇವೆಯನ್ನು ಮಾಡುತ್ತಾರೆ. ತಾಮಸ ಮನೋಧರ್ಮಾಚರಣೆಯನ್ನು ಮಾಡುವ ಜನಗಳು ಈ ಲೋಕಕ್ಕೆ ಹೋಗುತ್ತಾರೆ.

ಇಲಾವೃತದ ಪಶ್ಚಿಮದಲ್ಲಿ ಇರುವ ವಿಪುಲಪರ್ವತದಲ್ಲಿ ವರುಣನ ಪಟ್ಟಣವಿದೆ. ಶುದ್ಧವತೀ ಎಂದು ಇದರ ಹೆಸರು. ಇಲ್ಲಿ ಎಲ್ಲ ಪದಾರ್ಥಗಳು ಸಮೃದ್ಧವಾಗಿವೆ. ಇಲ್ಲಿ ಅಪ್ಸರೆಯರು, ಸಿದ್ಧರು, ಅಮರರು ವರುಣನ ಸೇವೆಯನ್ನು ಮಾಡುತ್ತಿದ್ದಾರೆ. ಜಲದಾನ ವನ್ನು ಮಾಡಿದವರು ಈ ಲೋಕಕ್ಕೆ ಹೋಗುತ್ತಾರೆ.

ಉತ್ತರದಿಕ್ಕಿನಲ್ಲಿ ಇರುವ ಸೂಪಾರ್ಶ್ವ ಪರ್ವತದಲ್ಲಿ ವಾಯುದೇವನ ಪಟ್ಟಣವಿದೆ. ಇದಕ್ಕೆ ಗಂಧವತೀ ಎಂದು ಹೆಸರು. ಅಲ್ಲಿ ವಾಯುದೇವನಿದ್ದಾನೆ. ಅಪ್ಸರೆಯರು, ಗಂಧರ್ವರು ಇಲ್ಲಿ ವಾಯುದೇವನ ಸೇವೆಯನ್ನು ಮಾಡುತ್ತಾರೆ. ಪ್ರಾಣಾಯಾಮನಿರತರಾದ ವಿಪ್ರರು ಈ ಲೋಕಕ್ಕೆ ಹೋಗುತ್ತಾರೆ.

ಅರುಣೋದ ಎಂಬ ಸರೋವರದ (ಇದು ಎಲ್ಲಿದೆ ಎಂಬ ವಿವರ ಪುರಾಣದಲ್ಲಿ ಇಲ್ಲ. ಇದ್ದಕ್ಕಿದ್ದಂತೆ ಇದರ ಪ್ರಸ್ತಾಪ ಆಗಿದೆ) ಪೂರ್ವಭಾಗದಲ್ಲಿ ಕೇಸರ, ತ್ರಿಕೂಟ, ಸಶಿರ, ಪತಂಗ, ರುಚಕ, ನಿಷಧ, ವಸುಧರಾ, ಕಲಿಂಗ, ತ್ರಿಶಿಖ, ಸಮೂಲ, ವಸುವೇದಿ, ಕುರುರು, ತಾಮ್ರಾತ್, ವಿಶಾಲ, ಕುಮುದ, ವೇಣು, ಏಕಶೃಂಗ, ಮಹಾಶೈಲ, ಗಜಶೈಲ, ಪಿಂಜಕ, ಪಂಚಶೈಲ, ಕೈಲಾಸ, ಹಿಮವಾನ್ ಎಂಬ ಪರ್ವತಗಳಿವೆ. ಇಲ್ಲಿ ದೇವತೆಗಳು ಸಂಚರಿಸುತ್ತಾರೆ. ಮಹಾಭದ್ರ ಎಂಬ ಸರೋವರದ ದಕ್ಷಿಣದಲ್ಲಿ ಕೇಸರ, ಶಿಖಿವಾಸಸ್, ವೈಢೂರ್ಯ, ಕಪಿಲ, ಗಂಧಮಾದನ, ಜಾರುಧಿ, ಸುರಾಂಬು, ಸರ್ವಗಂಧ, ಸುಪಾರ್ಶ್ವ, ಸೂಪಕ್ಷ, ಕಂಕ, ಕಪಿಲ, ವಿರಜಸ್, ಭದ್ರ, ಸುಸಕ, ಮಹಾಬಲ, ಆಂಜನ, ಮಧೂಮಾನ್, ಚಿತ್ರಶೃಂಗ, ಮಹಾಲಯ, ಕುಮುದ, ಮುಕುಟ, ಪಾಂಡುರ, ಕೃಷ್ಣ, ಪಾರಿಜಾತ, ಮಹಾಶೈಲ, ಕಪಿಲ, ಸುಷೇಣ, ಪುಂಡರೀಕ, ಮಹಾಮೇಘ - ಈ ಶ್ರೇಷ್ಠಪರ್ವತಗಳು ಇವೆ. ಸಿದ್ಧರು, ಗಂಧರ್ವರು ಇಲ್ಲಿಯ ಸಮೃದ್ಧಿಯನ್ನು ಅನುಭವಿಸುತ್ತಾರೆ.

ಅಸಿತೋದ ಸರೋವರದ ಪಶ್ಚಿಮದಲ್ಲಿ ಕೇಸರ, ಶಂಖಕೂಟ, ವೃಷಭ, ಹಂಸ, ನಾಗ, ಕಾಲಾಂಜನ, ಶುಕ್ರಶೈಲ, ನೀಲ, ಕಮಲ, ಪಾರಿಜಾತ, ಮಹಾಶೈಲ, ಶೈಲ, ಕನಕ, ಪುಷ್ಪಕ,

ಸುಮೋಘ, ವಾರಾಹ, ವಿರಜಸ್, ಮಯೂರ, ಕಪಿಲ, ಮಹಾಕಪಿಲ ಎಂಬ ಪರ್ವತಗಳಿವೆ. ದೇವತೆಗಳು, ಗಂಧರ್ವರು, ಸಿದ್ಧರು, ಯಕ್ಷರು ಇಲ್ಲಿಯ ಸಮೃದ್ಧಿಯನ್ನು ಅನುಭವಿಸುತ್ತಾರೆ.

ಮಾನಸ ಸರೋವರದ ಉತ್ತರದಿಕ್ಕಿನಲ್ಲಿ ಕೇಶವ ಪರ್ವತವಿದೆ. ಈ ಶ್ರೇಷ್ಠ ಪರ್ವತಗಳ ನಡುವೆ ಅನೇಕ ಕಣಿವೆಗಳು, ಸರೋವರಗಳು, ವನಗಳು ಇವೆ. ಅಲ್ಲಿ ಸಿದ್ಧರೂ, ಪ್ರಸನ್ನರೂ, ರಜೋಗುಣವನ್ನು ಕಳೆದುಕೊಂಡಿರುವವರೂ, ಯಾವುದೇ ದುಃಖವಿಲ್ಲದವರೂ ಆದ ಬ್ರಹ್ಮಧ್ಯಾನವನ್ನು ಮಾಡುವ ಮುನಿಗಳು ವಾಸಮಾಡುತ್ತಾರೆ.

* * *

## ಅಧ್ಯಾಯ-೪೬

ಮೇರುಪರ್ವತದ ಮೇಲೆ ದೇವೋತ್ತಮನಾದ ಚತುರ್ಮುಖಬ್ರಹ್ಮದೇವರ ನಗರವಿದೆ. ಇದರ ವಿಸ್ತಾರ ಹದಿನಾಲ್ಕು ಸಾವಿರ ಯೋಜನೆ. ಯೋಗಿಶ್ರೇಷ್ಠರಾದ ಮುನಿಗಳು, ಉಪೇಂದ್ರನೂ, ಶಂಕರನೂ ಅಲ್ಲಿರುವ ಚತುರ್ಮುಖ ಬ್ರಹ್ಮದೇವರ ಸೇವೆಯನ್ನು ಮಾಡುತ್ತಾರೆ. ದೇವಶ್ರೇಷ್ಠನೂ, ಸೃಷ್ಟಿಕರ್ತನೂ, ವಿಶ್ವನಿಯಾಮಕನೂ ಆದ ಚತುರ್ಮುಖ ಬ್ರಹ್ಮದೇವರ ಉಪಾಸನೆಯನ್ನು ಸನತ್ಕುಮಾರನೂ, ಸಿದ್ಧರೂ, ಋಷಿಗಳೂ, ಗಂಧರ್ವರೂ, ದೇವತೆಗಳೂ ಮಾಡುತ್ತಾರೆ.

ಚತುರ್ಮುಖಬ್ರಹ್ಮದೇವರ ಮಂದಿರದ ಎದುರಿಗೆ ದೇವತೆಗಳ ಅಧಿದೇವನೂ, ಅಮಿತತೇಜಸ್ವಿಯೂ ಆದ ಶಂಭುವಿನ ಶುಭ್ರವಾದ ದೇವಾಲಯವಿದೆ. ದಿವ್ಯಕಾಂತಿಯನ್ನು ಹೊಂದಿದ ಈ ಮನೆಗೆ ಭವ್ಯವಾದ ನಾಲ್ಕು ದ್ವಾರಗಳಿವೆ. ಮಹರ್ಷಿಗಳು ಬ್ರಹ್ಮಜ್ಞಾನಿಗಳೂ ಇಲ್ಲಿಗೆ ಬರುತ್ತಿರುತ್ತಾರೆ. ಇಲ್ಲಿ ವಿಶ್ವೇಶನಾದ ಶಿವನು ಪಾರ್ವತಿಯ ಜೊತೆ ವಿಹರಿಸುತ್ತಿದ್ದಾನೆ. ಈ ದೇವನಿಗೆ ಚಂದ್ರ, ಸೂರ್ಯ, ಅಗ್ನಿಗಳೇ ನೇತ್ರಗಳಾಗಿದ್ದಾರೆ. ಪ್ರಮಥಗಳು ಇವನ ಸೇವೆಯನ್ನು ಮಾಡುತ್ತಾರೆ. ಇಲ್ಲಿ ವೇದಜ್ಞಾನಿಗಳೂ, ಶಾಂತರೂ, ಸತ್ಯವಾದಿಗಳೂ, ಬ್ರಹ್ಮಚಾರಿಗಳೂ ಆದ ಮುನಿಗಳು ಶಿವನನ್ನು ಆರಾಧಿಸುತ್ತಾರೆ.

ಮೇರುಪರ್ವತದ ಪೂರ್ವಭಾಗದಲ್ಲಿ ಭವ್ಯವಾದ ಅಮರಾವತಿ ಎಂಬ ನಗರವಿದೆ. ಇದು ಇಂದ್ರನ ನಗರ. ಇಲ್ಲಿ ಅಪ್ಸರೆಯರೂ, ಗಂಧರ್ವರೂ, ಸಿದ್ಧರೂ, ಚಾರಣರೂ ಇಂದ್ರನ ಸೇವೆಯನ್ನು ಮಾಡುತ್ತಿದ್ದಾರೆ. ಧರ್ಮಿಷ್ಠರೂ, ವೇದಜ್ಞರೂ ಆದ ಯಾಗ-ಹೋಮಗಳನ್ನು

ಮಾಡಿದ ಜನರು ಈ ಸ್ಥಾನವನ್ನು ಪಡೆಯುತ್ತಾರೆ. ಹೀಗಿಲ್ಲದವರಿಗೆ ಈ ಸ್ಥಾನವು ದೊರೆಯುವುದಿಲ್ಲ.

ಅಮರಾವತಿಯಿಂದ ದಕ್ಷಿಣಕ್ಕೆ ಅಮಿತ ತೇಜಸ್ವಿಯಾದ ಅಗ್ನಿದೇವನ ನಗರವಿದೆ. ಇದಕ್ಕೆ ತೇಜೋವತೀ ಎಂದು ಹೆಸರು. ದಿವ್ಯವಾದ ಅದ್ಭುತಗಳು ಇಲ್ಲಿ ಇವೆ. ಜಪನಿಷ್ಠರೂ, ಹೋಮನಿಷ್ಠರೂ ಆದ ಸಾಧಕರು ಈ ಸ್ಥಾನವನ್ನು ಪಡೆಯುತ್ತಾರೆ. ದಾನವರು ಇಲ್ಲಿಗೆ ಬರಲು ಸಾಧ್ಯವಿಲ್ಲ. ಜಂಬೂನದಿಯು ಇಲ್ಲಿ ಹರಿಯುತ್ತದೆ. ಇಲ್ಲಿಯ ನಿವಾಸಿಗಳೂ ಈ ನೀರನ್ನೇ ಕುಡಿಯುತ್ತಾರೆ. ಆದ್ದರಿಂದ ಅಲ್ಲಿಯ ಜನರು ಬೆವರುವುದಿಲ್ಲ. ಅವರ ಶರೀರದಲ್ಲಿ ದುರ್ಗಂಧವಿಲ್ಲ. ಮುಪ್ಪು, ಇಂದ್ರಿಯಕ್ಷೀಣತೆಗಳು ಇಲ್ಲ. ತಾಪವೂ ಇಲ್ಲ. ಸ್ವಚ್ಛ ಮನಸ್ಸಿನ ಆ ಜನಗಳಿಗೆ ಯಾವ ಅಸೌಖ್ಯವೂ ಇಲ್ಲ. ಜಂಬೂನದಿಯ ತೀರದ, ಜಂಬೂರಸಮಿಶ್ರಿತವಾದ ಮಣ್ಣು ಗಾಳಿಯಿಂದ ಒಣಗಿ ಬಂಗಾರವಾಗಿದೆ. ಇದಕ್ಕೆ ಜಾಂಬೂನದ ಎಂದು ಹೆಸರು. ದೇವತೆಗಳ ಆಭರಣಗಳು ಈ ಬಂಗಾರದಿಂದ ಮಾಡಲ್ಪಟ್ಟಿವೆ.

## ಮತ್ತಷ್ಟು ವರ್ಷಗಳು, ವನಗಳು, ಸರೋವರಗಳು :

ಮೇರುಪರ್ವತದ ಪೂರ್ವದಲ್ಲಿ ಭದ್ರಾಶ್ವವರ್ಷವೂ, ಪಶ್ಚಿಮದಲ್ಲಿ ಕೇತುಮಾಲವರ್ಷವೂ ಇವೆ. ಇವೆರಡರ ಮಧ್ಯೆ ಇಲಾವೃತ ವರ್ಷವಿದೆ. ಪೂರ್ವದಿಕ್ಕಿನಲ್ಲಿ ಚೈತ್ರರಥ ಎಂಬ ವನವೂ ದಕ್ಷಿಣದಲ್ಲಿ ಗಂಧಮಾದನ ವನವೂ ಇದೆ. ಪಶ್ಚಿಮದಲ್ಲಿ ವೈಭ್ರಾಜವನವೂ, ಉತ್ತರದಲ್ಲಿ ಸವಿತೃವನವೂ ಇವೆ.

ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಅರುಣೋದ, ಮಹಾಭದ್ರ, ಅಸಿತೋದ ಮತ್ತು ಮಾನಸ ಸರೋವರಗಳು ಇವೆ. ಇವೆಲ್ಲವೂ ಕೇವಲ ದೇವತೆಗಳ ಭೋಗಕ್ಕೆ ಸಾಧಕವಾಗಿವೆ. ಇದಲ್ಲದೆ ಸಿತಾಂತ, ಕುಮುದ್ವಾನ್, ಕುರುರೀ, ಮಾಲ್ಯವಾನ್, ವೈಕಂಕ, ಮಣಿಶೈಲ, ವೃಕ್ಷವಾನ್, ಮಹಾನೀಲ, ರುಚಕ, ಬಿಂದು, ಮಂದರ, ವೇಣುಮಾನ್, ಮೇಘ, ನಿಷಧ ಎಂಬ ಪರ್ವತಗಳೂ ಇಲ್ಲಿವೆ. ದೇವರಚಿತವಾದ ಇವುಗಳು ಸಿದ್ಧಪುರುಷರ ವಾಸಭೂಮಿಗಳು.

ತೇಜೋವತೀ ನಗರದ ಪೂರ್ವಭಾಗದಲ್ಲಿ ಕಾಂತಿಮತೀ ಎಂಬ ನಗರವಿದೆ. ಇದು ಚಂದ್ರನ ನಗರ. ಸ್ವಧರ್ಮ ಪಾಲನೆಯನ್ನು ಮಾಡುವವರು ಈ ಸ್ಥಾನವನ್ನು ಹೊಂದುತ್ತಾರೆ. ಇಲ್ಲಿ ನಾನಾ ವಿಧವಾದ ಭೋಗಸಾಮಗ್ರಿಗಳು ಇವೆ.

ಕಾಂತಿಮತೀನಗರದ ಪೂರ್ವಭಾಗದಲ್ಲಿ ಶಂಕರನ ಮಹಾನಗರವಿದೆ. ಇದಕ್ಕೆ ಯಶೋವತೀ ಎಂದು ಹೆಸರು. ಸಾಮಾನ್ಯರು ಇಲ್ಲಿಗೆ ಹೋಗಲು ಸಾಧ್ಯವಿಲ್ಲ. ದೇವದೇವನಾದ ಶಿವನು ಇಲ್ಲಿ ಭಕ್ತರ ವಿಹಾರ ಮೊದಲಾದವುಗಳಿಗಾಗಿ ನಿವಾಸವನ್ನು ಕಲ್ಪಿಸಿದ್ದಾನೆ.

## ಗಂಗಾನದೀ :

ವಿಷ್ಣುಪಾದದಿಂದ ಉಗಮಿಸಿದ ಗಂಗೆಯು ಚಂದ್ರಮಂಡಲದ ಮೂಲಕ ಹರಿದು ಚತುರ್ಮುಖಬ್ರಹ್ಮದೇವರ ನಗರವನ್ನು ತಲುಪುತ್ತದೆ. ಅಲ್ಲಿ ನಾಲ್ಕು ದಿಕ್ಕುಗಳಲ್ಲಿ ಬಿದ್ದು ನಾಲ್ಕು ಕವಲಾಗಿದೆ. ಸೀತಾ, ಅಲಕನಂದಾ, ಸುಚಕ್ಷುಷ್ ಮತ್ತು ಭದ್ರ -ಇವುಗಳು ಆ ಕವಲುಗಳ ಹೆಸರುಗಳು. ಪೂರ್ವಭಾಗದ ಸೀತೆಯು ಒಂದು ಪರ್ವತದಿಂದ ಇನ್ನೊಂದು ಪರ್ವತವನ್ನು ಸೇರುತ್ತಾ ಭದ್ರಾಶ್ವ ವರ್ಷವನ್ನು ತಲುಪಿ ಅಲ್ಲಿಂದ ಸಮುದ್ರವನ್ನು ಸೇರುತ್ತದೆ.

ಅಲಕನಂದೆಯು ದಕ್ಷಿಣಭಾಗದಿಂದ ಭಾರತವನ್ನು ತಲುಪಿ ಏಳು ಕವಲುಗಳಾಗಿ ಸಾಗರವನ್ನು ಸೇರುತ್ತದೆ. ಸುಚಕ್ಷುಷ್ ಎಂಬ ಕವಲು ಪಶ್ಚಿಮ ದಿಕ್ಕಿನ ಎಲ್ಲ ಗಿರಿಗಳನ್ನು ದಾಟಿ ಪಶ್ಚಿಮದ ಕೇತುಮಾಲ ವರ್ಷವನ್ನು ತಲುಪಿ ಅಲ್ಲಿಂದ ಸಮುದ್ರವನ್ನು ಸೇರುತ್ತದೆ. ಭದ್ರಾ ಎಂಬ ಕವಲು ಉತ್ತರದ ಎಲ್ಲ ಬೆಟ್ಟಗಳನ್ನೂ, ಕುರುಕ್ಷೇತ್ರವನ್ನೂ ದಾಟಿ ಉತ್ತರ ಸಮುದ್ರವನ್ನು ಸೇರುತ್ತದೆ.

## ಮೇರು ಪರ್ವತದ ಬಗ್ಗೆ ಮತ್ತಷ್ಟು ವಿವರಣೆ :

ಮೇರು ಪರ್ವತವು ಮಾಲ್ಯವಾನ್ ಪರ್ವತ ಮತ್ತು ಗಂಧಮಾದನ ಪರ್ವತಗಳ ಮಧ್ಯೆ ಇದೆ. ಆದ್ದರಿಂದ ಈ ಪರ್ವತವು ಲೋಕಕಮಲದ ಕರ್ಣಿಕೆಯಂತೆ ಇದೆ. ಮಾಲ್ಯವಾನ್ ಪರ್ವತವು ನೀಲ ಪರ್ವತದವರೆಗೆ ಮತ್ತು ಗಂಧಮಾದನವು ನಿಷಧ ಪರ್ವತದವರೆಗೆ ವ್ಯಾಪಿಸಿದೆ. ಭಾರತ, ಕೇತುಮಾಲ, ಭದ್ರಾಶ್ವ ಮತ್ತು ಕುರುವರ್ಷಗಳು ಲೋಕಕಮಲದ ದಳಗಳಾಗಿವೆ. ಇವುಗಳೇ ಮೇರುಪರ್ವತದ ಗಡಿಯಲ್ಲಿರುವ ಪರ್ವತಗಳ ಹೊರಗೆ ಇವೆ. ಜಠರ, ದೇವಕೂಟ, ಗಂಧಮಾದನ, ಕೈಲಾಸ, ನಿಷಧ, ಪಾರಿಯಾತ್ರ, ತ್ರಿಶೃಂಗ, ಜಾರುಧಿ -ಇವು ಮೇರುವಿನ ಮರ್ಯಾದಾಪರ್ವತಗಳು. ಇವುಗಳು ಮೇರುವಿನ ನಾಲ್ಕು ದಿಕ್ಕುಗಳಲ್ಲಿ ಇವೆ.

* * *

# ಕೇತುಮಾಲ ಮೊದಲಾದ ವರ್ಷಗಳ ಬಗ್ಗೆ ವಿವರಣೆ

ಅಧ್ಯಾಯ-೪೭

## ಸೂತ ಉವಾಚ :

ಕೇತುಮಾಲ ವರ್ಷದಲ್ಲಿ ಪುರುಷರ ಬಣ್ಣ ಕಪ್ಪು. ಸ್ತ್ರೀಯರು ನೀಲಕಮಲದ ಬಣ್ಣವನ್ನು ಹೊಂದಿದ್ದಾರೆ. ಹಲಸು ಅವರ ಆಹಾರ. ಹತ್ತುಸಾವಿರ ವರ್ಷ ಅವರ ಆಯುಷ್ಯ. ಭದ್ರಾಶ್ವ

ವರ್ಷದಲ್ಲಿ ಪುರುಷರ ಬಣ್ಣ ಬಿಳಿ. ಸ್ತ್ರೀಯರು ಚಂದ್ರಕಿರಣದ ಕಾಂತಿಯನ್ನು ಹೊಂದಿದ್ದಾರೆ. ಅನ್ನ ಅವರ ಆಹಾರ. ಹತ್ತುಸಾವಿರ ವರ್ಷ ಅವರ ಆಯುಷ್ಯ.

ರಮ್ಯಕವರ್ಷದಲ್ಲಿ ಪುರುಷರು-ಸ್ತ್ರೀಯರು ಬೆಳ್ಳಿಯ ಪ್ರಭೆಯನ್ನು ಹೊಂದಿದ್ದಾರೆ. ಹನ್ನೊಂದುವರೆ ಸಾವಿರ ವರ್ಷ ಅವರ ಆಯುಷ್ಯ. ಇಲ್ಲಿಯ ಜನರಲ್ಲಿ ಸತ್ವಗುಣವೇ ಪ್ರಧಾನವಾಗಿದೆ. ಆಲದ ಹಣ್ಣು ಇವರ ಆಹಾರ. ಹಿರಣ್ಮಯ ವರ್ಷದಲ್ಲಿ ಎಲ್ಲರೂ ಬಂಗಾರದ ಕಾಂತಿವುಳ್ಳವರು. ಶ್ರೀಫಲ ಅವರ ಆಹಾರ. ಹನ್ನೆರಡೂವರೆ ಸಾವಿರವರ್ಷ ಇವರ ಆಯುಷ್ಯ. ಇಲ್ಲಿಯ ಸ್ತ್ರೀ-ಪುರುಷರು ದೇವಲೋಕದ ನಿವಾಸಿಗಳಂತೆ ಭವ್ಯವಾಗಿ ಬದುಕುತ್ತಾರೆ. ಕುರುವರ್ಷದ ಜನರ ಬಣ್ಣ ಶ್ಯಾಮಲ. ಇವರ ಆಹಾರ ಹಾಲು. ಹದಿನಾಲ್ಕೂವರೆ ಸಾವಿರ ವರ್ಷ ಇವರ ಆಯುಷ್ಯ. ಎಲ್ಲರೂ ಮಿಥುನಕ್ರಿಯೆಯಿಂದ ಹುಟ್ಟಿದವರು. ಈ ವರ್ಷದಲ್ಲಿ ಇರುವ ಚಂದ್ರದ್ವೀಪದಲ್ಲಿ ನೆಲೆಗೊಂಡಿರುವ ಶಿವನನ್ನು ಯಾವಾಗಲೂ ಆರಾಧಿಸುತ್ತಾರೆ. ಕಿಂಪುರುಷಖಂಡದಲ್ಲಿ ಮಾನವರು ಬಂಗಾರದ ಕಾಂತಿವುಳ್ಳವರು. ಹತ್ತು ಸಾವಿರ ವರ್ಷ ಇವರ ಆಯುಷ್ಯ. ಪ್ಲಕ್ಷಫಲ ಇವರ ಆಹಾರ. ಧ್ಯಾನಮಗ್ನರಾಗಿ, ಭಕ್ತಿಯಿಂದ ನಾಲ್ಕುತಲೆ, ನಾಲ್ಕು ಭುಜಗಳಿರುವ ಪರಮಾತ್ಮನನ್ನು ಯಾವಾಗಲೂ ಪೂಜಿಸುತ್ತಾರೆ.

ಹರಿವರ್ಷದ ಜನರು ಶ್ರೇಷ್ಠಬೆಳ್ಳಿಯ ಕಾಂತಿವುಳ್ಳವರು. ಹತ್ತುಸಾವಿರ ವರ್ಷ ಇವರ ಆಯುಷ್ಯ. ಕಬ್ಬಿನರಸ ಇವರ ಆಹಾರ. ವಿಶ್ವಸೃಷ್ಟಿಕರ್ತನಾದ ನಾರಾಯಣನನ್ನು ಇಲ್ಲಿಯ ಜನರು ಉಪಾಸಿಸುತ್ತಾರೆ. ಇಲ್ಲಿಯ ಪಾರಿಜಾತವನದಲ್ಲಿ ಶ್ರೀಮನ್ನಾರಾಯಣ ಇರುವ ಪ್ರಾಸಾದ ಇದೆ. ಈ ಮಂದಿರ ಚಂದ್ರನ ಪ್ರಭೆಯನ್ನು ಹೊಂದಿದೆ. ಶುದ್ಧಸ್ಫಟಿಕದಂತೆ ಶುದ್ಧವಾಗಿದೆ. ಈ ಮಂದಿರಕ್ಕೆ ನಾಲ್ಕು ಬಾಗಿಲುಗಳು, ನಾಲ್ಕು ತೋರಣಗಳು ಇವೆ. ಹತ್ತು ಪ್ರಾಕಾರಗಳಿವೆ. ಇಲ್ಲಿಗೆ ಹೋಗುವುದು ಸುಲಭವಲ್ಲ. ಇದರ ಮೇಲೆ ಯಾವ ಅತಿಕ್ರಮಣವನ್ನೂ ಮಾಡಲು ಸಾಧ್ಯವಿಲ್ಲ. ಇಲ್ಲಿ ಸ್ಫಟಿಕದ ಮಂಟಪಗಳಿವೆ. ಸಾವಿರಾರು ಬಂಗಾರದ ಕಂಬಗಳಿವೆ. ಬಂಗಾರದ ಮೆಟ್ಟಿಲುಗಳಿಂದ ಕೂಡಿದ, ನಾನಾ ರತ್ನಗಳಿಂದ ಶೋಭಿಸುವ, ಎಲ್ಲ ವಿಧವಾದ ಶೋಭೆಯನ್ನೂ ಹೊಂದಿರುವ ಸಿಂಹಾಸನವು ಇಲ್ಲಿದೆ. ಮಧುರವಾದ ಪಾನೀಯದಿಂದ ತುಂಬಿರುವ ಸರೋವರಗಳು, ನದಿಗಳೂ ಇಲ್ಲಿವೆ. ಶುದ್ಧರೂ, ವೇದಾಧ್ಯಯನ ನಿರತರೂ, ಹರಿಭಕ್ತರೂ ಆದ ಯೋಗಿಗಳು ಮಂತ್ರಗಳಿಂದ ಶ್ರೀಹರಿಯನ್ನು ಸ್ತುತಿಸುತ್ತಾರೆ. ನಮಸ್ಕರಿಸುತ್ತಾರೆ. ಧ್ಯಾನಮಾಡುತ್ತಾರೆ. ಅಲ್ಲಿಯ ರಾಜರು ದೇವಾಧಿದೇವನಾದ ವಿಷ್ಣುವಿನ ಮಹಿಮೆಯನ್ನು ಯಾವಾಗಲೂ ಹಾಡುತ್ತಾರೆ. ವಿಲಾಸಿನಿಯರೂ, ಮನೋಹರರೂ ಆದ ತರುಣಿಯರು ಅಲಂಕೃತರಾಗಿ ಗಾನವನ್ನು ಮಾಡುತ್ತಾರೆ, ನರ್ತನ ಮಾಡುತ್ತಾರೆ.

ಇಲಾವೃತವರ್ಷದ ಜನರು ಪದ್ಮದ ಕಾಂತಿವುಳ್ಳವರು. ಜಂಬೂರಸ ಇವರ ಆಹಾರ. ಹದಿಮೂರು ಸಾವಿರ ವರ್ಷ ಇವರ ಆಯುಷ್ಯ.

ಭಾರತವರ್ಷದಲ್ಲಿ ಸ್ತ್ರೀಯರು, ಪುರುಷರು ನಾನಾ ವರ್ಣವುಳ್ಳವರು. ವಿವಿಧ ದೇವತೆಗಳನ್ನು ಪೂಜಿಸುತ್ತಾರೆ. ವಿವಿಧ ಕರ್ಮಗಳನ್ನು ಮಾಡುತ್ತಾರೆ. ನೂರು ವರ್ಷ ಇವರ ಗರಿಷ್ಠ ಆಯುಷ್ಯ. ಈ ವರ್ಷ (ಭಾರತವರ್ಷ) ಒಂಭತ್ತುಸಾವಿರ ಯೋಜನ ವಿಸ್ತಾರ ವುಳ್ಳದ್ದು. ಇದು ಅರ್ಹ ಜನಗಳ ಕರ್ಮಭೂಮಿ. ಇಲ್ಲಿ ಮಹೇಂದ್ರ, ಮಲಯ, ಸಹ್ಯ, ಶಕ್ತಿಮಾನ್, ಋಕ್ಷ, ವಿಂಧ್ಯ, ಪಾರಿಯಾತ್ರ ಎಂಬ ಏಳು ಪರ್ವತಗಳು ಕುಲಪರ್ವತ ಎಂದು ಪ್ರಸಿದ್ಧವಾಗಿವೆ. ಇಂದ್ರ, ಕಸೇರುಕ್ಮಾನ್, ತಾಮ್ರಪರ್ಣ, ಗಭಸ್ತಿಮಾನ್, ನಾಗ, ಸೌಮ್ಯ ಗಂಧರ್ವ, ವಾರುಣ ಎಂಬ ದ್ವೀಪಗಳು ಈ ವರ್ಷದಲ್ಲಿ ಇವೆ. ಜಂಬೂ ಈ ವರ್ಷದ ಒಂಭತ್ತನೆಯ ದ್ವೀಪ. ಈ ದ್ವೀಪ ದಕ್ಷಿಣೋತ್ತರ ದಿಕ್ಕುಗಳಲ್ಲಿ ಒಟ್ಟು ಒಂದು ಸಾವಿರ ಯೋಜನ ವಿಸ್ತಾರವುಳ್ಳದ್ದು. ಇದರ ಪೂರ್ವಭಾಗದಲ್ಲಿ ಕಿರಾತರೂ, ಪಶ್ಚಿಮದಲ್ಲಿ ಯವನರೂ ವಾಸಮಾಡುತ್ತಾರೆ. ಮಧ್ಯದಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಯಜ್ಞ, ಯುದ್ಧ, ವ್ಯಾಪಾರ, ಸೇವೆಗಳನ್ನು ಮಾಡುತ್ತಾ ವಾಸಮಾಡುತ್ತಿದ್ದಾರೆ.

ಪರ್ವತಗಳಲ್ಲಿ ಹುಟ್ಟುವ ಪವಿತ್ರ ನದಿಗಳು ಇಲ್ಲಿ ಹರಿಯುತ್ತವೆ. ಶತದ್ರು, ಚಂದ್ರಭಾಗಾ, ಸರಯೂ, ಯಮುನಾ, ಇರಾವತೀ, ವಿತಸ್ತಾ, ವಿಪಾಶಾ, ದೇವಿಕಾ, ಕುಹೂ, ಗೋಮತೀ, ಧೂತಪಾಪಾ, ಬಾಹುದಾ, ದೃಷದ್ವತೀ, ಕೌಶಕೀ, ಲೋಹಿನೀ ಇವುಗಳು ಹಿಮಾಲಯದ ಪ್ರಾಂತಭಾಗಗಳಲ್ಲಿ ಹುಟ್ಟಿ ಹರಿಯುವ ನದಿಗಳು. ವೇದಸ್ಮೃತಿ, ವೇದವತೀ, ವ್ರತಘ್ನೀ, ತ್ರಿದಿವಾ, ವರ್ಣಾಶಾ, ವೇತ್ರವತೀ -ಇವುಗಳು ಪಾರಿಯಾತ್ರ ಎಂಬ ಪರ್ವತದಲ್ಲಿ ಹುಟ್ಟಿ ಹರಿಯುವ ನದಿಗಳು. ನರ್ಮದಾ, ಸುರಸಾ, ಶೋಣಾ, ದಶಾರ್ಣಾ, ಮಹಾನದೀ, ಮಂದಾಕಿನೀ, ಚಿತ್ರಕೂಟಾ, ತಾಮಸೀ, ಪಿಶಾಚಿಕಾ, ಚಿತ್ರೋತ್ಪಲಾ, ವಿಶಾಲಾ, ಮಂಜುಲಾ, ವಾಲುವಾಹಿನೀ -ಇವುಗಳು ಋಕ್ಷವತ್ ಪರ್ವತದ ಪಾದದಲ್ಲಿ ಹುಟ್ಟಿ ಹರಿಯುವ ನದಿಗಳು. ತಾಪೀ, ಪಯೋಷ್ಣೀ, ನಿರ್ವಿಂಧ್ಯಾ, ಶೀಘ್ರೋದಾ, ಮಹಾನದೀ, ವಿನ್ನಾ, ವೈತರಣೀ, ಬಲಾಕಾ, ಕುಮುದ್ವತೀ, ಮಹಾಗೌರೀ, ದುರ್ಗಾ, ಅಂತಃಶಿಲಾ -ಇವುಗಳು ವಿಂಧ್ಯಪಾದ ದಲ್ಲಿ ಹುಟ್ಟಿ ಹರಿಯುವ ನದಿಗಳು. ಇವುಗಳು ಜನರ ಪಾಪಗಳನ್ನು ಪರಿಹರಿಸುತ್ತವೆ.

ಗೋದಾವರೀ, ಭೀಮರಥೀ, ಕೃಷ್ಣಾ, ವೇಣಾ, ನಶ್ಯತಾ, ತುಂಗಭದ್ರಾ, ಸುಪ್ರಯೋಗಾ, ಕಾವೇರಿ -ಇವುಗಳು ಸಹ್ಯಾದ್ರಿಯ ಪಾದದಲ್ಲಿ ಹುಟ್ಟಿ ಹರಿಯುವ ದಕ್ಷಿಣದೇಶದ ನದಿಗಳು. ಋತುಮಾಲಾ, ತಾಮ್ರಪರ್ಣೀ, ಪುಣ್ಯವತೀ, ಉತ್ಪಲಾವತೀ -ಇವುಗಳು ಮಲಯ ಪರ್ವತದಲ್ಲಿ ಹುಟ್ಟಿ ಹರಿಯುವ ನದಿಗಳು. ಋಷಿಕುಲ್ಯಾ, ಪಲಾಶಿನೀ, ಋಷೀಕಾ, ವಂಶಧಾರಿಣೀ -ಇವುಗಳು ಶುಕ್ತಿಮತ್ ಪರ್ವತದ ಪಾದದಲ್ಲಿ ಹುಟ್ಟಿದ ನದಿಗಳು. ಇವುಗಳು ಜನಗಳ ಪಾಪವನ್ನು ಪರಿಹರಿಸುತ್ತವೆ. ಈ ನದಿಗಳಿಗೆ ನೂರಾರು ಉಪನದಿಗಳು ಇವೆ. ಇವುಗಳಲ್ಲಿ ಸ್ನಾನ ಮಾಡಿ ದಾನ ಮೊದಲಾದ ಸತ್ಕರ್ಮವನ್ನು ಮಾಡುವ ಜನರ ಪಾಪಗಳನ್ನು ಈ ನದಿಗಳು ಪರಿಹರಿಸುತ್ತವೆ. ಈ ನದಿಗಳ ತೀರಗಳಲ್ಲಿ ಕುರು, ಪಾಂಚಾಲ ಮೊದಲಾದ

ಮಧ್ಯದೇಶ, ಕಾಮರೂಪ ಮೊದಲಾದ ಪೂರ್ವದೇಶಗಳು ಇವೆ. ಪುಂಡ್ರ, ಕಲಿಂಗ, ಮಗಧ ಮೊದಲಾದ ದಕ್ಷಿಣದೇಶಗಳು, ಸೌರಾಷ್ಟ್ರ, ಶೂದ್ರ, ಹೀನ, ಅರ್ಬುದ ಮೊದಲಾದ ಪಶ್ಚಿಮ ದೇಶಗಳು ಇವೆ. ಪಾರಿಯಾತ್ರ ಪರ್ವತದ ಸಮೀಪದಲ್ಲಿ ಮಲಕ, ಮಲಪ, ಸೌವೀರ, ಸೈಂಧವ, ಹೂಣ, ಮಾಲ್ಯ, ವಾಲ್ಯ ಮೊದಲಾದ ಪ್ರದೇಶಗಳಿವೆ. ಇವಲ್ಲದೆ ಮಾದ್ರ, ರಾಮ, ಆಂಧ್ರ, ಪಾರಸೀಕ ಮೊದಲಾದ ದೇಶಗಳು ಪ್ರಸಿದ್ಧವಾಗಿವೆ.

ಭಾರತದೇಶದಲ್ಲಿ ಕೃತ, ತ್ರೇತಾ, ದ್ವಾಪರ ಮತ್ತು ಕಲಿ ಎಂಬ ನಾಲ್ಕು ಯುಗಗಳ ವ್ಯವಸ್ಥೆ ಇದೆ. ಬೇರೆ ವರ್ಷಗಳಲ್ಲಿ ಈ ವ್ಯವಸ್ಥೆ ಇಲ್ಲ.

ಕಿಂಪುರುಷ ಮೊದಲಾದ ಎಂಟು ವರ್ಷಗಳಲ್ಲಿ ಶೋಕ, ಆಯಾಸ, ಉದ್ವೇಗ, ಹಸಿವು, ಭಯ -ಇವುಗಳು ಇಲ್ಲ. ಇಲ್ಲಿಯ ನಿವಾಸಿಗಳೆಲ್ಲರೂ ಯಾವುದೇ ವಿಧವಾದ ದುಃಖ ಇಲ್ಲದವರಾಗಿ, ಆತಂಕವಿಲ್ಲದೆ ಸ್ವಸ್ಥರಾಗಿದ್ದಾರೆ. ಇಲ್ಲಿಯ ನಿವಾಸಿಗಳ ಯೌವನ ನಾಶವಾಗುವುದಿಲ್ಲ. ವೃದ್ಧಾಪ್ಯ ಅವರನ್ನು ಬಾಧಿಸುವುದಿಲ್ಲ. ನಾನಾ ವಿಧವಾದ ವಿಷಯ ಪದಾರ್ಥಗಳನ್ನು ಅನುಭವಿಸುತ್ತಾ ವಿಹಾರಿಗಳಾಗಿದ್ದಾರೆ.

* * *

## ಅಧ್ಯಾಯ-೪೮

**ಸೂತ ಉವಾಚ**

ಹೇಮಕೂಟ ಪರ್ವತದ ಶಿಖರದಲ್ಲಿ ದೇವೋತ್ತಮನಾದ ಶಿವನ ಹಾರುವ ಭವನವಿದೆ. ಭವ್ಯವಾದ ಈ ಭವನವನ್ನು ಸ್ಫಟಿಕದಿಂದ ನಿರ್ಮಿಸಲಾಗಿದೆ. ಶ್ರೇಷ್ಠವಾದ ಶಿಖರಗಳು ಈ ಭವನಕ್ಕೆ ಇವೆ. ಇಲ್ಲಿ ಪ್ರತಿದಿನವೂ ದೇವತೆಗಳೂ, ಋಷಿಗಳೂ, ಸಿದ್ಧರೂ ನಿತ್ಯವೂ ಶಿವನ ಪೂಜೆಯನ್ನು ಮಾಡುತ್ತಾರೆ. ಶಿವನು ಪಿನಾಕಧಾರಿಯಾಗಿ ತನ್ನ ದೇವಿ ಪಾರ್ವತಿಯೊಂದಿಗೆ ಇಲ್ಲಿ ಯಾವಾಗಲೂ ವಿರಾಜಮಾನನಾಗಿದ್ದಾನೆ.

ಕುಬೇರನ, ಕೋಟಿಕೋಟಿ ಯಕ್ಷರ ನಿವಾಸಸ್ಥಾನವಾದ ಕೈಲಾಸಪರ್ವತಕ್ಕೆ ಸುಂದರವಾದ ಶಿಖರಗಳಿವೆ. ಈ ಪರ್ವತದಲ್ಲಿ ಶಿವನ ಭವ್ಯವಾದ ಮಂದಿರವಿದೆ; ನಿರ್ಮಲವಾದ ನೀರಿರುವ ಪುಣ್ಯವೂ, ರಮ್ಯವೂ ಆದ ಮಂದಾಕಿನೀ ನದಿಯು ಇಲ್ಲಿ ಹರಿಯುತ್ತದೆ. ನಾನಾ ವಿಧವಾದ ಕಮಲಗಳಿಂದ ನದಿಯು ಅಲಂಕೃತವಾಗಿದೆ. ದೇವತೆಗಳು, ದಾನವರು, ಯಕ್ಷರು, ರಾಕ್ಷಸರು,

ಗಂಧರ್ವರು, ಕಿನ್ನರರು ಈ ನದಿಯ ನೀರನ್ನು ನಿತ್ಯವೂ ಉಪಯೋಗಿಸುತ್ತಾರೆ. ಇನ್ನೂ ನೂರಾರು ನದಿಗಳು ಇಲ್ಲಿವೆ. ಸ್ವರ್ಣಕಮಲಗಳು, ಈ ನದಿಗಳನ್ನು ಅಲಂಕರಿಸಿವೆ. ಇವುಗಳ ತೀರದಲ್ಲಿ ಚತುರ್ಮುಖ ಬ್ರಹ್ಮನ ಮತ್ತು ಶ್ರೀಮನ್ನಾರಾಯಣನ ಸನ್ನಿಧಾನವಿರುವ ಸ್ಥಾನಗಳಿವೆ. ದೇವತೆಗಳು, ಋಷಿಗಳು ಈ ಸ್ಥಾನಗಳಲ್ಲಿ ಸಾಧನನಿರತರಾಗಿದ್ದಾರೆ.

ಕೈಲಾಸ ಪರ್ವತದ ಒಂದು ಶಿಖರದಲ್ಲಿ ಶುಭ್ರವಾದ ಪಾರಿಜಾತವನವಿದೆ. ಅಲ್ಲಿ ದೇವೇಂದ್ರನ ವಿಶಾಲವಾದ, ರತ್ನಾಲಂಕೃತವಾದ ಭವನವಿದೆ. ಸ್ಫಟಿಕದ ಸ್ತಂಭಗಳು ಮತ್ತು ಬಂಗಾರದ ಗೋಪುರವು ಭವನವನ್ನು ಅಲಂಕರಿಸಿವೆ. ಅದೇ ಸ್ಥಳದಲ್ಲಿ ದೇವೋತ್ತಮನೂ, ಸರ್ವ ನಿಯಾಮಕನೂ ಆದ ವಿಷ್ಣುವಿನ ಭವನವಿದೆ. ಇದು ಸರ್ವ ರತ್ನಾಲಂಕೃತವಾಗಿದೆ. ಇಲ್ಲಿ ಜಗದೊಡೆಯನಾದ ವಿಷ್ಣುವು ಲಕ್ಷ್ಮೀ ದೇವಿಯ ಜೊತೆ ವಾಸವಾಗಿದ್ದಾನೆ. ವಸುಧಾರ ಎಂಬ ಪ್ರದೇಶದಲ್ಲಿ ಅಷ್ಟ ವಸುಗಳ ರತ್ನಖಚಿತವಾದ ಮಂದಿರಗಳಿವೆ. ದೇವದ್ವೇಷಿಗಳು ಈ ಸ್ಥಳಕ್ಕೆ ಹೋಗಲಾರರು. ರತ್ನಧಾರ ಎಂಬ ಪರ್ವತದಲ್ಲಿ ಮಹಾತ್ಮರಾದ ಸಪ್ತರ್ಷಿಗಳ ಆಶ್ರಮಗಳಿವೆ. ಇದಲ್ಲದೆ ಸಿದ್ಧರ ಮಂದಿರಗಳೂ ಇಲ್ಲಿವೆ. ಇಲ್ಲಿ ಲಕ್ಷ್ಮೀಪುತ್ರನಾದ ಬ್ರಹ್ಮದೇವರ ಪವಿತ್ರವಾದ ಮಂದಿರವಿದೆ. ಇದು ಬಂಗಾರ, ವಜ್ರ, ನೀಲಮಣಿ ಮೊದಲಾದವುಗಳಿಂದ ಅಲಂಕೃತ ವಾಗಿದೆ. ನಾಲ್ಕು ಬಾಗಿಲುಗಳು ಇವೆ. ದೇವರ್ಷಿಗಳು, ವಿಪ್ರರು, ಸಿದ್ಧರು, ಬ್ರಹ್ಮರ್ಷಿಗಳು ದೇವ ದೇವನೂ, ಪಿತಾಮಹನೂ ಆದ ಬ್ರಹ್ಮದೇವರ ಉಪಾಸನೆಯನ್ನು ಮಾಡುತ್ತಾರೆ. ಎಲ್ಲರಿಂದಲೂ ಪೂಜಿತರಾದ ಚತುರ್ಮುಖಬ್ರಹ್ಮದೇವರು ತನ್ನ ದೇವಿಯೊಡನೆ ಜನಗಳಿಗೆ ಹಿತವುಂಟು ಮಾಡುತ್ತಾ ಇದ್ದಾರೆ. ಶಾಂತಮನಸ್ಸಿನ ಚೇತನಗಳಿಗೆಲ್ಲ ಈ ಬ್ರಹ್ಮದೇವರೇ ಅಂತಿಮ ಗತಿಯಾಗಿದ್ದಾರೆ.

ಆ ಪರ್ವತದ ಒಂದು ಶಿಖರದಲ್ಲಿ ಒಂದು ದೊಡ್ಡ ಸರೋವರವಿದೆ. ಈ ಸರೋವರದಲ್ಲಿ ದೊಡ್ಡ ಗಾತ್ರದ ಕಮಲಗಳಿವೆ. ನೀರು ಸ್ವಚ್ಛವೂ, ಅಮೃತ ತುಲ್ಯವೂ, ಪವಿತ್ರವೂ, ಸುಗಂಧಯುಕ್ತವೂ ಆಗಿದೆ. ಇದರ ತೀರದಲ್ಲಿ ಜೈಗೀಷವ್ಯ ಮುನಿಯ ಆಶ್ರಮವಿದೆ. ಇಲ್ಲಿ ಯೋಗೀಂದ್ರರು ತಪೋನಿರತರಾಗಿದ್ದಾರೆ. ಭಗವಾನ್ ಜೈಗೀಷವ್ಯರು ತಮ್ಮ ಶಿಷ್ಯರೊಡನೆ ಇಲ್ಲಿದ್ದಾರೆ. ಈ ಶಿಷ್ಯರು ತಮ್ಮ ಸಾಧನೆಯಿಂದ ದೋಷಗಳನ್ನು ಪರಿಹರಿಸಿಕೊಂಡಿದ್ದಾರೆ. ಎಲ್ಲರೂ ಬ್ರಹ್ಮಜ್ಞಾನಿಗಳು, ಮಹಾತ್ಮರು, ಶಂಖ, ಮನೋಹರ, ಕೌಶಿಕ, ಕೃಷ್ಣ ಸುಮನಸ್ ಮತ್ತು ವೇದವಾದ - ಈ ಶಿಷ್ಯರು ಆ ಜೈಗೀಷವ್ಯರ ಅನುಗ್ರಹದಿಂದ ಸಾಕ್ಷಾತ್ಕಾರದ ಎಲ್ಲ ಉಪಾಯಗಳಲ್ಲಿ ನಿರತರಾಗಿದ್ದಾರೆ. ಅವರು ಮನಸ್ಸು ಶಾಂತವಾಗಿದೆ. ಶರೀರಕ್ಕೆ ಭಸ್ಮವನ್ನು ಲೇಪಿಸಿಕೊಂಡಿರುವ ಇವರು ಬ್ರಹ್ಮವಿದ್ಯೆಯಲ್ಲಿ ಆಸಕ್ತರಾಗಿದ್ದಾರೆ. ಶಾಂತಮನಸ್ಸಿನ ಈ ಯತಿಗಳನ್ನು ಅನುಗ್ರಹಿಸುವುದಕ್ಕಾಗಿ ಮಹೇಶ್ವರನು ತನ್ನ ದೇವಿಯೊಂದಿಗೆ ಈ ಆಶ್ರಮದಲ್ಲಿ ಸನ್ನಿಹಿತನಾಗಿದ್ದಾನೆ.

ಆ ಶ್ರೇಷ್ಠವಾದ ರತ್ನಧಾರ ಪರ್ವತದಲ್ಲಿ ಏಕಾಗ್ರ ಮನಸ್ಸಿನ ಮುನಿಗಳ ಅನೇಕ ಆಶ್ರಮಗಳು ಇವೆ. ಸರೋವರಗಳೂ, ನದಿಗಳೂ ಅಲ್ಲಿ ಇವೆ. ಆ ಆಶ್ರಮಗಳಲ್ಲಿ ಸಾಕ್ಷಾತ್ಕಾರದ ಮಾರ್ಗದಲ್ಲಿ ಸಾಗುತ್ತಿರುವ, ಜಪಗಳನ್ನು ಮಾಡುತ್ತಿರುವ, ಇಂದ್ರಿಯಗಳನ್ನು ನಿಗ್ರಹಿಸಿರುವ, ಬ್ರಹ್ಮನಲ್ಲಿ ಮನಸ್ಸನ್ನು ದೃಢವಾಗಿ ಇಟ್ಟಿರುವ, ಜ್ಞಾನಾಸಕ್ತರಾದ ಯೋಗಿಗಳು ನೆಮ್ಮದಿಯಿಂದ ಇದ್ದಾರೆ. ಸರ್ವವ್ಯಾಪಿಯಾದ, ಶಿಖೆಯ ತುದಿಯಲ್ಲಿ ಇರುವ ಈಶಾನನನ್ನು ಏಕಾಗ್ರತೆಯಿಂದ ಧ್ಯಾನಿಸುತ್ತಾರೆ.

ಇದೇ ಪರ್ವತದಲ್ಲಿ ಸುಮೋಘ ಎಂಬ ದೇವೇಂದ್ರನ ವಾಸಸ್ಥಾನವಿದೆ. ಸಾವಿರ ಸೂರ್ಯರ ತೇಜಸ್ಸನ್ನು ಈ ಸ್ಥಾನವು ಹೊಂದಿದೆ. ಇಲ್ಲಿ ದೇವೇಂದ್ರನು ಶಚೀದೇವಿಯೊಂದಿಗೆ ಇದ್ದಾನೆ. ಗಜಪರ್ವತದಲ್ಲಿ ದುರ್ಗೆಯ ಮಣಿಗಳ ತೋರಣಗಳಿಂದ ಅಲಂಕೃತವಾದ ಭವನವಿದೆ. ಅಲ್ಲಿ ಮಹೇಶ್ವರೀ ದುರ್ಗೆಯು ಇದ್ದಾಳೆ. ನಾನಾ ವಿಧ ಶಕ್ತಿದೇವತೆಗಳು ಇಲ್ಲಿ ದುರ್ಗೆಯನ್ನು ಆರಾಧಿಸುತ್ತಿದ್ದಾರೆ. ನಾನಾ ವಿಧ ಧಾತುಗಳಿಂದ ಉಜ್ವಲವಾಗಿರುವ ಸುನೀಲ ಪರ್ವತದ ಶೃಂಗದಲ್ಲಿ ರಾಕ್ಷಸರ ನೂರಾರು ಪುರಗಳು, ಸರೋವರಗಳು ಇವೆ. ಶತಶೃಂಗ ಪರ್ವತದಲ್ಲಿ ಮಹಾಬಲಶಾಲಿಗಳಾದ ಯಕ್ಷರ ನೂರಾರು ಪುರಗಳಿವೆ. ಸ್ಫಟಿಕ ಸ್ತಂಭಗಳು ಈ ಪುರಗಳ ವಿಶೇಷ. ಶ್ವೇತೋದರ ಪರ್ವತದ ಶಿಖರದಲ್ಲಿ ಮಹಾತ್ಮನಾದ ಗರುಡನ ಪುರವಿದೆ. ಪ್ರಾಕಾರ, ಗೋಪುರ, ಮಣಿತೋರಣ - ಇವುಗಳಿಂದ ಈ ಪುರವು ಅಲಂಕೃತವಾಗಿದೆ. ಇಲ್ಲಿ ಗರುಡನು ಅವ್ಯಯನೂ, ಪರಮನೂ, ಜ್ಯೋತಿಸ್ವರೂಪನೂ ಆದ ಪರಮಾತ್ಮನನ್ನು ತನ್ನೊಳಗೇ ಧ್ಯಾನಿಸುತ್ತಾ ಎರಡನೆಯ ವಿಷ್ಣುವಿನಂತೆ ಕಂಗೊಳಿಸುತ್ತಿದ್ದಾನೆ.

ಶ್ರೀಶೃಂಗ ಎಂಬ ಪರ್ವತದಲ್ಲಿ ಶ್ರೀದೇವಿಯ ಭವನವಿದೆ. ಇದು ಸರ್ವ ರತ್ನಾಲಂಕೃತವೂ, ಸುವರ್ಣಮಯವೂ, ಮಣಿ ತೋರಣಗಳಿಂದ ಅಲಂಕೃತವೂ ಆಗಿದೆ. ಇಲ್ಲಿ ವಿಷ್ಣುವಿನ ಪರಮ ಶಕ್ತಿಸ್ವರೂಪಳಾದ, ಅತ್ಯಂತ ಮನೋಹರವಾಗಿರುವ, ಎಣೆಯಿಲ್ಲದ ವೈಭವವನ್ನು ಹೊಂದಿರುವ, ಜಗತ್ತನ್ನು ಸಂಮೋಹನಗೊಳಿಸುವ ಲಕ್ಷ್ಮೀದೇವಿಯು ಇದ್ದಾಳೆ. ಜಗನ್ಮಾತೆಯಾದ ಇವಳನ್ನು ದೇವತೆಗಳು, ಗಂಧರ್ವರೂ, ಸಿದ್ಧರೂ, ಚಾರಣರೂ ಆರಾಧಿಸುತ್ತಿದ್ದಾರೆ. ಇದೇ ಪರ್ವತದಲ್ಲಿ ದೇವೋತ್ತಮನಾದ ವಿಷ್ಣುವಿನ ಶ್ರೇಷ್ಠವಾದ ಮಂದಿರವಿದೆ. ವಿಚಿತ್ರ ಕಮಲಗಳ ಆಕರವಾಗಿರುವ ನಾಲ್ಕು ಸರೋವರಗಳು ಇಲ್ಲಿವೆ. ಸಹಸ್ರಶಿಖರ ಎಂಬ ಪರ್ವತದಲ್ಲಿ ವಿದ್ಯಾಧರರ ಎಂಟು ಪುರಗಳಿವೆ. ರತ್ನಗಳ ಮೆಟ್ಟಿಲುಗಳಿರುವ ಸರೋವರಗಳು ಇಲ್ಲಿವೆ. ನಿರ್ಮಲವಾದ ನೀರಿನ ನದಿಗಳು ಇಲ್ಲಿವೆ. ಈ ನದಿಗಳು ಸುಂದರವಾದ ನೀಲ ಕಮಲಗಳಿಗೆ ಆಶ್ರಯವಾಗಿವೆ. ದಿವ್ಯವಾದ ಒಂದು ಕರ್ಣಿಕಾರವನವೂ ಇಲ್ಲಿದೆ. ಅಲ್ಲಿ ಶಂಕರನು ಸನ್ನಿಹಿತನಾಗಿದ್ದಾನೆ. ಪಾರಿಜಾತ ಪರ್ವತದಲ್ಲಿ ಮಹಾಲಕ್ಷ್ಮಿಯ ಪುರವಿದೆ. ರಮ್ಯವಾದ ಉಪ್ಪರಿಗೆಯ ಭವನಗಳು ಇಲ್ಲಿವೆ. ಈ ಭವನಗಳು ಘಂಟೆಗಳಿಂದಲೂ, ಚಾಮರಗಳಿಂದಲೂ ಭೂಷಿತವಾಗಿವೆ. ನೃತ್ಯ ಕಲಾವಿದರಾದ ಅಪ್ಸರೆಯರು ಈ ಪುರದ

ಶೋಭೆಯಾಗಿದ್ದಾರೆ. ಗಂಧರ್ವರ, ಕಿನ್ನರರ ಮೃದಂಗ, ಪಣವಗಳ ಧ್ವನಿಯು, ವೇಣು, ವೀಣೆಗಳ ನಿನಾದವು ಇಲ್ಲಿ ಯಾವಾಗಲೂ ಶ್ರಾವ್ಯವಾಗಿದೆ. ಸಿದ್ಧಪುಂಗವರೂ ಇಲ್ಲಿ ವಾಸವಾಗಿದ್ದಾರೆ. ಮಹಾಗಣಾಧಿಪತಿಗಳು ಈ ಪುರದಲ್ಲಿ ಸೇವೆಯನ್ನು ಮಾಡುತ್ತಿದ್ದಾರೆ. ಇಲ್ಲಿ ಮೂರು ಕಣ್ಣಿನ ಮಹಾಲಕ್ಷ್ಮಿಯು ಶ್ರೇಷ್ಠವಾದ ತ್ರಿಶೂಲವನ್ನು ಧರಿಸಿ, ಸರ್ವಶಕ್ತಿಗಳ ನಿಧಿಯಾಗಿ, ಸರ್ವಶಕ್ತಿಸ್ವರೂಪಳಾಗಿ, ಯೋಗ ನಿರತಳಾಗಿ ಇದ್ದಾಳೆ. ಬ್ರಹ್ಮವಾದಿಗಳೂ, ಸಿದ್ಧರೂ ಆದ ಮುನಿಗಳು ಇಲ್ಲಿ ಮಹಾಲಕ್ಷ್ಮಿ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ಸುಪಾರ್ಶ್ವ ಪರ್ವತದ ಉತ್ತರಭಾಗದಲ್ಲಿ ಸರಸ್ವತಿಯ ಪುರವಿದೆ. ಸಿದ್ಧ ಪುರುಷರು ಆಶ್ರಯಿಸಿರುವ ಸರೋವರಗಳು ಇಲ್ಲಿವೆ. ಇವು ದೇವತೆಗಳ ಭೋಗಸ್ಥಾನಗಳೂ ಆಗಿವೆ.

ಪಾಂಡವರ ಪರ್ವತದ ಶೃಂಗದಲ್ಲಿ ಗಂಧರ್ವರ ನೂರಾರು ಪುರಗಳಿವೆ. ಇಲ್ಲಿ ವಿಚಿತ್ರವಾದ ಮರಗಳು ಸಮೃದ್ಧವಾಗಿವೆ. ದಿವ್ಯ ಸ್ತ್ರೀಯರು ಇಲ್ಲಿದ್ದಾರೆ. ಮದ ತುಂಬಿದ ನರರೂ, ನಾರಿಯರೂ ಭೋಗಾಸಕ್ತರಾಗಿ ನಾನಾ ವಿಲಾಸಗಳಿಂದ ವಿಹರಿಸುತ್ತಾರೆ. ಅಂಜನಗಿರಿಯ ಶೃಂಗದಲ್ಲಿ ಶ್ರೇಷ್ಠವಾದ ನಾರೀಪುರವಿದೆ. ರತಿಲಾಲಸರಾದ ರಂಭಾ ಮೊದಲಾದ ಅಪ್ಸರೆಯರು ಅಲ್ಲಿ ವಾಸ ಮಾಡುತ್ತಾರೆ. ಚಿತ್ರಸೇನಾ ಮೊದಲಾದವರು ಅಪ್ಸರೆಯರನ್ನರಸಿ ಇಲ್ಲಿಗೆ ಬರುತ್ತಾರೆ. ಈ ಪುರವು ಸರ್ವರತ್ನ ಸಮೃದ್ಧವಾಗಿದೆ. ಅನೇಕ ನದಿಗಳು ಇಲ್ಲಿ ಹರಿಯುತ್ತವೆ. ಕುಮುದ ಪರ್ವತದಲ್ಲಿ, ರಜೋಗುಣವನ್ನು ಕಳೆದು ಕೊಂಡಿರುವ, ಈಶ್ವರನಲ್ಲಿ ಮನಸ್ಸನ್ನು ಇಟ್ಟಿರುವ ರುದ್ರಗಣಗಳ ಅನೇಕ ಪುರಗಳು ಇವೆ. ಇಲ್ಲಿ ಮಹಾಯೋಗಿಗಳಾದ, ಶಿವನಲ್ಲೇ ಮನಸ್ಸನ್ನಿಟ್ಟಿರುವ ರುದ್ರಗಣಗಳು ವಾಸಮಾಡುತ್ತಾರೆ.

ಪಿಂಜರಗಿರಿಯ ಶೃಂಗದಲ್ಲಿ ಗಣಾಧಿಪತಿಗಳ ಮೂರು ಪುರಗಳಿವೆ. ನಂದೀಶ್ವರನ ಕಪಿಲಾ ಅವುಗಳಲ್ಲಿ ಒಂದು. ಅಲ್ಲಿ ಮಹಾಮತಿಯಾದ ನಂದೀಶ್ವರನು ಇದ್ದಾನೆ. ಜಾರಧಿಪರ್ವತದ ಶೃಂಗದಲ್ಲಿ ದೇವೋತ್ತಮನಾದ ಧೀಮಂತನಾದ, ಅಮಿತ ತೇಜಸ್ವಿನವನಾದ ಸೂರ್ಯನ ಪವಿತ್ರವಾದ ಬೆಳಗುವ ಮಂದಿರವಿದೆ. ಇದೇ ಪರ್ವತದ ಉತ್ತರದಿಕ್ಕಿನಲ್ಲಿ ಶ್ರೇಷ್ಠವಾದ ಚಂದ್ರನ ಮಂದಿರವಿದೆ. ಅಲ್ಲಿ ರಮಣೀಯನಾದ ಭಗವಾನ್ ಚಂದ್ರನು ವಾಸವಾಗಿದ್ದಾನೆ.

ಹಂಸಶೈಲದಲ್ಲಿ ಒಂದು ಸಾವಿರ ಯೋಜನ ವಿಸ್ತಾರವಾದ, ಸುವರ್ಣದ ಮತ್ತು ಮಣಿಗಳ ತೋರಣಗಳನ್ನು ಹೊಂದಿರುವ ದಿವ್ಯವಾದ ಭವನವಿದೆ. ಅಲ್ಲಿ ಚತುರ್ಮುಖ ಬ್ರಹ್ಮದೇವರು ಇದ್ದಾರೆ. ಸಿದ್ಧರ ಸಮುದಾಯವು ಅಲ್ಲಿ ಅವರ ಸ್ತೋತ್ರವನ್ನು ಮಾಡುತ್ತಿದೆ. ಬ್ರಹ್ಮದೇವರ ಜೊತೆ ಸಾವಿತ್ರಿಯೂ, ವಾಮದೇವ ಮೊದಲಾದ ಮಹರ್ಷಿಗಳೂ ಇದ್ದಾರೆ. ಹಂಸಶೈಲದ ದಕ್ಷಿಣಭಾಗದಲ್ಲಿ ಸಿದ್ಧರ ಪುರವಿದೆ. ಸನಂದನ ಮೊದಲಾದ ಮುನಿಪುಂಗವರು ಅಲ್ಲಿ ವಾಸಿಸುತ್ತಾರೆ. ಪಂಚಶೈಲದ ಶಿಖರದಲ್ಲಿ ದಾನವರ ಮೂರು ಪುರಗಳಿವೆ. ಅದರ ಹತ್ತಿರದಲ್ಲೇ ದೈತ್ಯಗುರುಗಳಾದ ಶುಕ್ರಾಚಾರ್ಯರ ಪುರವಿದೆ. ಸುಗಂಧ ಪರ್ವತದ ಶಿಖರದಲ್ಲಿ ನದಿಗಳಿಂದ ಶೋಭಿಸುವ ಕರ್ದಮರ ಪುಣ್ಯಾಶ್ರಮವಿದೆ. ಅಲ್ಲಿ ಭಗವಾನ್ ಕರ್ದಮರು ಇದ್ದಾರೆ. ಅದೇ

ಪರ್ವತದ ಆಗ್ನೇಯ ದಿಕ್ಕಿನಲ್ಲಿ ಇರುವ ಆಶ್ರಮದಲ್ಲಿ ಶ್ರೇಷ್ಠಬ್ರಹ್ಮಜ್ಞಾನಿಯಾದ ಸನತ್ಕುಮಾರರು ಇದ್ದಾರೆ.

ಮೇಲೆ ಹೇಳಿದ ಎಲ್ಲ ಪರ್ವತಗಳಲ್ಲಿ ಸರೋವರಗಳೂ, ವಿಮಲವಾದ ನದಿಗಳೂ, ದೇವಾಲಯಗಳೂ, ಮುನಿಗಳು ಪ್ರತಿಷ್ಠಾಪಿಸಿರುವ ಪವಿತ್ರವಾದ ಸಿದ್ಧಲಿಂಗಗಳೂ ಇವೆ. ಆ ಎಲ್ಲ ಮಂದಿರಗಳ ಗಣನೆಯನ್ನು ಮಾಡಿ ಹೇಳಲು ಸಾಧ್ಯವಿಲ್ಲ. ಇದು ಜಂಬೂದ್ವೀಪದ ಸಂಕ್ಷೇಪವಾದ ವರ್ಣನೆ. ವಿಸ್ತಾರವಾಗಿ ಹೇಳಲು ನೂರಾರು ವರ್ಷಗಳೂ ಸಾಕಾಗುವುದಿಲ್ಲ.

* * *

## ಪ್ಲಕ್ಷ ಮೊದಲಾದ ದ್ವೀಪಗಳ ವರ್ಣನೆ

**ಅಧ್ಯಾಯ-೪೯**

**ಸೂತ ಉವಾಚ :**

ಪ್ಲಕ್ಷ ದ್ವೀಪವು ಜಂಬೂದ್ವೀಪದ ಎರಡರಷ್ಟು ವಿಸ್ತಾರವಾಗಿದೆ. ಈ ದ್ವೀಪವು ಕ್ಷೀರ ಸಮುದ್ರದಲ್ಲಿದೆ. ದ್ವೀಪದಲ್ಲಿ ಏಳು ಕುಲ ಪರ್ವತಗಳಿವೆ. ಗೋಮೇದ, ಚಂದ್ರ, ನಾರದ, ದುಂದುಭಿ, ಮಣಿಮಾನ್, ಮೇಘನಿಸ್ವನ, ವೈಭ್ರಾಜ - ಇವು ಆ ಪರ್ವತಗಳ ಹೆಸರುಗಳು. ಏಳನೆಯ ವೈಭ್ರಾಜಪರ್ವತವು ಬ್ರಹ್ಮದೇವರಿಗೆ ಬಹಳ ಪ್ರಿಯವಾಗಿದೆ. ಇಲ್ಲಿ ದೇವತೆಗಳು, ಋಷಿಗಳು, ಗಂಧರ್ವರು, ಸಿದ್ಧರು, ಸರ್ವಾಂತರ್ಯಾಮಿಯೂ, ಸರ್ವಜ್ಞನೂ, ಸರ್ವಸಾಕ್ಷಿಯೂ ಆದ ಶ್ರೀಹರಿಯ ಉಪಾಸನೆಯನ್ನು ಮಾಡುತ್ತಾರೆ. ಅಲ್ಲಿಯ ಜನಪದಗಳು ಪುಣ್ಯಪ್ರದವಾಗಿವೆ. ಅಲ್ಲಿ ಮನೋರೋಗ, ದೇಹ ರೋಗಗಳು ಇಲ್ಲ. ಅಲ್ಲಿಯ ಜನರು ಪಾಪವನ್ನು ಮಾಡುವುದಿಲ್ಲ. ಈ ದ್ವೀಪದಲ್ಲಿ ಏಳು ವರ್ಷಗಳು ಮತ್ತು ಏಳು ನದಿಗಳು ಇವೆ. ವರ್ಷಗಳಲ್ಲಿ ಬ್ರಹ್ಮರ್ಷಿಗಳು ಯಾವಾಗಲೂ ಚತುರ್ಮುಖ ಬ್ರಹ್ಮದೇವರ ಉಪಾಸನೆಯನ್ನು ಮಾಡುತ್ತಾರೆ. ಅನುತಪ್ತಾ, ಶಿಖಾ, ವಿಪಾಪಾ, ತ್ರಿದಿವಾ, ಕೃತಾ, ಅಮೃತಾ, ಸುಕೃತಾ - ಇವು ನದಿಗಳ ಹೆಸರುಗಳು. ಇದಲ್ಲದೇ ಬಹಳ ಕ್ಷುದ್ರನದಿಗಳೂ, ಸರೋವರಗಳೂ ಇವೆ.

ಈ ದ್ವೀಪದ ವರ್ಷಗಳಲ್ಲಿ ಯುಗಧರ್ಮಗಳು ಇಲ್ಲ. ಜನಗಳು ಚಿರಂಜೀವಿಗಳು. ಇಲ್ಲಿಯ ಬ್ರಾಹ್ಮಣರಿಗೆ ಆರ್ಯಕ ಎಂದು ಕ್ಷತ್ರಿಯರಿಗೆ ಕುರುರ ಎಂದು, ವೈಶ್ಯರಿಗೆ ವಿದೇಹ ಎಂದು, ಶೂದ್ರರಿಗೆ ಭಾವಿ ಎಂದು ಹೆಸರು. ಈ ವರ್ಣದವರೆಲ್ಲರೂ ಶಿವನನ್ನು ಪೂಜಿಸುತ್ತಾರೆ. ಅವರಿಗೆ ಚಂದ್ರನ ಸಾಮ್ರಾಜ್ಯವೂ, ಸಾರೂಪ್ಯವೂ ದೊರೆಯುತ್ತದೆ. ಎಲ್ಲರೂ

ಸದಾ ಧರ್ಮದಲ್ಲಿ ಆಸಕ್ತರೂ, ಮನಸ್ಸಂತೋಷವುಳ್ಳವರೂ ಆಗಿದ್ದಾರೆ. ರೋಗರಹಿತರಾಗಿ ಐದು ಸಾವಿರ ವರ್ಷ ಜೀವಿಸುತ್ತಾರೆ.

## ಶಾಲ್ಮಲದ್ವೀಪ :

ಶಾಲ್ಮಲದ್ವೀಪದ ಅಳತೆಯು ಪ್ಲಕ್ಷದ್ವೀಪದ ಎರಡರಷ್ಟಿದೆ. ಇದು ಇಕ್ಷುರಸ (ಕಬ್ಬಿನ ರಸ) ಸಮುದ್ರದಲ್ಲಿದೆ. ಈ ಸಮುದ್ರದ ಅಳತೆಯು ಕ್ಷೀರೋದಸಮುದ್ರದ ಎರಡರಷ್ಟಿದೆ. ಈ ದ್ವೀಪದಲ್ಲೂ ಏಳು ವರ್ಷಗಳೂ, ಏಳು ಕುಲಪರ್ವತಗಳೂ, ಏಳು ನದಿಗಳೂ ಇವೆ. ನದಿಗಳು ದೀರ್ಘವೂ, ನೇರವೂ ಆಗಿವೆ. ಕುಮುದ, ಅನ್ನದ, ಬಲಾಹಕ, ದ್ರೋಣ, ಕಂಸ, ಮಹಿಷ, ಕಕುದ್ಮಾನ್ - ಇವು ಏಳು ಪರ್ವತಗಳು, ಯೋನೀ, ತೋಯಾ, ವಿತೃಷ್ಣಾ, ಚಂದ್ರಾ, ಶುಕ್ಲಾ, ವಿಮೋಚನೀ, ನಿವೃತ್ತಿ ಇವು ಮನುಷ್ಯರ ಪಾಪವನ್ನು ಪರಿಹರಿಸುವ ನದಿಗಳು. ಇಲ್ಲಿಯ ಜನರಲ್ಲಿ ಲೋಭ, ಕ್ರೋಧಗಳು ಇಲ್ಲ. ಇಲ್ಲಿ ಯುಗ ಧರ್ಮಗಳನ್ನು ಪಾಲಿಸಿ ಜನರು ರೋಗರಹಿತರಾಗಿ ಬಾಳುತ್ತಾರೆ. ಇಲ್ಲಿಯ ವರ್ಣದವರು ಸನಾತನನಾದ ವಾಯುದೇವನನ್ನು ಪೂಜಿಸುತ್ತಾರೆ. ಸಾರೂಪ್ಯ ಮುಕ್ತಿ ಮತ್ತು ಸಾಲೋಕ್ಯ ಮುಕ್ತಿಯನ್ನು ಅವರು ಹೊಂದುತ್ತಾರೆ. ಬ್ರಾಹ್ಮಣರಿಗೆ ಕಪಿಲ ಎಂದು ಕ್ಷತ್ರಿಯರಿಗೆ ಅರುಣ ಎಂದು, ವೈಶ್ಯರಿಗೆ ಪೀತ ಎಂದು, ಶೂದ್ರರಿಗೆ ಕೃಷ್ಣ ಎಂದೂ ಹೆಸರು.

## ಕುಶದ್ವೀಪ :

ಕುಶದ್ವೀಪ ಶಾಲ್ಮಲ ದ್ವೀಪಕ್ಕಿಂತ ಎರಡರಷ್ಟು ದೊಡ್ಡದು. ಇದರ, ಸುತ್ತಲೂ ಸುರಾಸಮುದ್ರವಿದೆ. ವಿದ್ರುಮ, ಹೋಮ, ದ್ಯುತಿಮಾನ್, ಪುಷ್ಪವಾನ್, ಕುಶೇಶಯ, ಹರಿ, ಮಂದರ - ಇವು ಈ ದ್ವೀಪದಲ್ಲಿರುವ ಪರ್ವತಗಳು. ಧೂತಪಾಪಾ, ಶಿವಾ, ಪವಿತ್ರಾ, ಸಮ್ಮಿತಾ, ವಿದ್ಯುತ್, ಪ್ರಭಾ, ರಾಮಾ - ಇವು ಮಹಾನದಿಗಳು. ಇವಲ್ಲದೆ ಬಹಳ ಸ್ವಚ್ಛವಾದ ನೀರಿನ ನೂರಾರು ನದಿಗಳು ಈ ದ್ವೀಪದಲ್ಲಿ ಇವೆ. ಈ ನದಿಗಳಲ್ಲಿ ನಾನಾವಿಧವಾದ ಮಣಿಗಳು ಇವೆ. ಈ ನದೀತೀರಗಳಲ್ಲಿ ದೇವತೆಗಳು ಮೊದಲಾದವರು ಸರ್ವೇಶ್ವರನಾದ ಬ್ರಹ್ಮನನ್ನು ಧ್ಯಾನಿಸುತ್ತಾರೆ. ಇಲ್ಲಿಯ ಬ್ರಾಹ್ಮಣರಿಗೆ ದ್ರವಿಣ ಎಂದು, ಕ್ಷತ್ರಿಯರಿಗೆ ಶುಷ್ಮಿ ಎಂದೂ, ವೈಶ್ಯರಿಗೆ ಸ್ತೋಭ ಎಂದು, ಶೂದ್ರರಿಗೆ ಮಂದೇಹ ಎಂದೂ ಹೆಸರು. ಇಲ್ಲಿಯ ಜನರೆಲ್ಲರೂ ಜ್ಞಾನಿಗಳು. ಮೈತ್ರಿ ಮೊದಲಿನ ಗುಣಗಳು ಇವರಲ್ಲಿ ಇವೆ. ಎಲ್ಲರೂ ನುಡಿದಂತೆ ನಡೆಯುವವರು. ಭೂತಹಿತದಲ್ಲಿ ಮನಸ್ಸಿರುವವರು. ನಾನಾವಿಧವಾದ ಯಜ್ಞಗಳಿಂದ ಬ್ರಹ್ಮದೇವನನ್ನು ಆರಾಧಿಸುತ್ತಾರೆ. ಇವರಿಗೆ ಬ್ರಹ್ಮದೇವರ ಸಾಯುಜ್ಯ, ಸಾರೂಪ್ಯ ಮತ್ತು ಸಾಲೋಕ್ಯಗಳು ದೊರೆಯುತ್ತವೆ.

## ಕ್ರೌಂಚದ್ವೀಪ :

ಕ್ರೌಂಚದ್ವೀಪ ಕುಶದ್ವೀಪಕ್ಕಿಂತ ಎರಡರಷ್ಟು ದೊಡ್ಡದು. ಇದರ ಸುತ್ತಲೂ ತುಪ್ಪದ ಸಮುದ್ರವಿದೆ. ಕ್ರೌಂಚ, ವಾಮನಕ, ಅಧಿಕಾರಿಕ, ದೇವಾಬ್ದ, ವಿವೇದ, ಪುಂಡರೀಕ,

ದುಂದುಭಿಸ್ವನ - ಇವು ಈ ದ್ವೀಪದ ಪರ್ವತಗಳು. ಗೌರೀ, ಕುಮುದ್ವತೀ, ಸಂಧ್ಯಾ, ರಾತ್ರಿ, ಮನೋಜವಾ, ಕೋಭಿ, ಪುಂಡರೀಕಾಕ್ಷಾ - ಇವು ಪ್ರಧಾನ ನದಿಗಳು. ಇಲ್ಲಿಯ ಬ್ರಾಹ್ಮಣರಿಗೆ ಪುಷ್ಕಲ ಎಂದು, ಕ್ಷತ್ರಿಯರಿಗೆ ಪುಷ್ಕರ ಎಂದು ವೈಶ್ಯರಿಗೆ ಧನ್ಯ ಎಂದು, ಶೂದ್ರರಿಗೆ ತಿಷ್ಯ ಎಂದೂ ಹೆಸರು. ಇವರು ಯಜ್ಞ, ದಾನ, ಶಮ ಮೊದಲಾದ ಗುಣಗಳು, ವಿವಿಧ ವ್ರತೋಪವಾಸಗಳು, ಹೋಮಗಳು, ಪಿತೃತರ್ಪಣ - ಇವುಗಳಿಂದ ಮಹಾದೇವನನ್ನು ಆರಾಧಿಸುತ್ತಾರೆ. ಇವರಿಗೆ ರುದ್ರ ಸಾಯುಜ್ಯ, ಸಾರೂಪ್ಯ, ಸಾಲೋಕ್ಯ, ಸಾಮೀಪ್ಯಗಳು ರುದ್ರದೇವರ ಅನುಗ್ರಹದಿಂದ ಲಭಿಸುತ್ತದೆ.

**ಶಾಕದ್ವೀಪ :**

ಶಾಕದ್ವೀಪ ಕ್ರೌಂಚದ್ವೀಪಕ್ಕಿಂತ ಎರಡರಷ್ಟು ದೊಡ್ಡದು. ಇದರ ಸುತ್ತಲೂ ದಧಿ ಸಮುದ್ರವಿದೆ. ಉದಯ, ರೈವತ, ಶ್ಯಾಮಾಕ, ಅಷ್ಟಗಿರಿ (ಶ್ಯಾಮ, ಕಾಷ್ಠಗಿರಿ), ಆಂಬಿಕೇಯ, ರಮ್ಯ, ಕೇಸರೀ, ಇವು ಈ ದ್ವೀಪದ ಪರ್ವತಗಳು. ಸುಕುಮಾರೀ ಕುಮಾರೀ, ನಲಿನೀ, ವೇಣಿಕಾ, ಇಕ್ಷುಕಾ, ಧೇನುಕಾ, ಗಭಸ್ತಿ ಎಂಬಿವುಗಳು ನದಿಗಳು. ಈ ನದಿಗಳ ನೀರನ್ನು ಕುಡಿದು ಜೀವಿಸುವ ಅಲ್ಲಿಯ ಜನಗಳು ರೋಗರಹಿತರೂ, ಶೋಕರಹಿತರೂ, ರಾಗದ್ವೇಷರಹಿತರೂ ಆಗಿದ್ದಾರೆ. ಇಲ್ಲಿಯ ಬ್ರಾಹ್ಮಣರಿಗೆ ಮೃಗ ಎಂದು ಕ್ಷತ್ರಿಯರಿಗೆ ಮಗಧ ಎಂದು, ವೈಶ್ಯರಿಗೆ ಮಾನಸ ಎಂದು, ಶೂದ್ರರಿಗೆ ಮಂದಗ ಎಂದೂ ಹೆಸರು. ಇವರು ಎಲ್ಲ ಲೋಕಗಳನ್ನೂ ನೋಡುವ ಸೂರ್ಯ ದೇವನನ್ನು ನಾನಾವಿಧ ವ್ರತ-ಉಪವಾಸಗಳಿಂದ ಆರಾಧಿಸುತ್ತಾರೆ. ಇವರಿಗೆ ಸೂರ್ಯ ಸಾಯುಜ್ಯ, ಸಾಮೀಪ್ಯ, ಸಾರೂಪ್ಯ, ಸಾಲೋಕ್ಯಗಳು ಸೂರ್ಯ ದೇವನ ಪ್ರಸಾದದಿಂದ ಲಭಿಸುತ್ತವೆ.

**ಶ್ವೇತದ್ವೀಪ :**

ಕ್ಷೀರೋದಸಾಗರವು ಶಾಕದ್ವೀಪವನ್ನು ಆವರಿಸಿದೆ. ಈ ಸಾಗರದಲ್ಲಿ ಶ್ವೇತದ್ವೀಪವಿದೆ. ಈ ದ್ವೀಪದಲ್ಲಿ ನಾರಾಯಣ ಭಕ್ತರಾದ, ನಾನಾ ಆಶ್ಚರ್ಯಗಳನ್ನು ಒಳಗೊಂಡಿರುವ ಪುಣ್ಯವಂತರಾದ ಜನರು ವಾಸಿಸುತ್ತಾರೆ. ಇವರಿಗೆ ಶ್ವೇತ ಎಂದೇ ಹೆಸರು. ಈ ಜನಗಳಿಗೆ ದೇಹವ್ಯಾಧಿ, ಮನೋವ್ಯಾಧಿಗಳು, ಜರಾ, ಮೃತ್ಯುಗಳು ಇಲ್ಲ. ಇವರಲ್ಲಿ ಕ್ರೋಧ, ಲೋಭ, ಮಾಯಾ, ಮಾತ್ಸರ್ಯ -ಈ ದೋಷಗಳು ಇಲ್ಲ. ನಿತ್ಯಪುಷ್ಟರೂ, ನಿರಾತಂಕರೂ, ನಿತ್ಯಾನಂದಶಾಲಿಗಳೂ, ಭೋಗಿಗಳು ನಾರಾಯಣನಂತೆಯೇ ಇದ್ದಾರೆ. ಕೆಲವರು ಜಿತೇಂದ್ರಿಯರಾಗಿ ಧ್ಯಾನಾಸಕ್ತರಾದ ಯೋಗಿಗಳಾಗಿದ್ದಾರೆ. ಕೆಲವರು ಜಪಾಸಕ್ತರಾಗಿದ್ದಾರೆ ಮತ್ತೆ ಕೆಲವರು ತಪಸ್ಸಿನಲ್ಲಿ ಆಸಕ್ತರಾಗಿದ್ದಾರೆ. ಕೆಲವರು ಜ್ಞಾನ ಮಾರ್ಗದಲ್ಲಿ ಆಸಕ್ತರಾಗಿದ್ದಾರೆ. ಇನ್ನೂ ಕೆಲವರು ಬಹಳ ಮೇಲ್ಮಟ್ಟದ ನಿರ್ವಿಕಲ್ಪಕ ಸಮಾಧಿಯಲ್ಲಿ ಪರಬ್ರಹ್ಮನಾದ ವಾಸುದೇವನ ಧ್ಯಾನವನ್ನು ಮಾಡುತ್ತಾರೆ.

ಏಕಾಂತಭಕ್ತರಾದ ಮಹಾಭಾಗವತರು ತಮೋಗುಣಾತೀತನಾದ (ಅರ್ಥಾತ್ ತ್ರಿಗುಣಾತೀತನಾದ) ಪರಬ್ರಹ್ಮನನ್ನು ಧ್ಯಾನಿಸುತ್ತಾರೆ. ಇವರೆಲ್ಲರಿಗೂ ನಾಲ್ಕು ಭುಜಗಳಿವೆ. ಶಂಖ, ಚಕ್ರ, ಗದೆಗಳನ್ನು ಧರಿಸಿದ್ದಾರೆ. ಎಲ್ಲರೂ ಪೀತಾಂಬರ ಧಾರಿಗಳು. ಎದೆಯಲ್ಲಿ ಶ್ರೀವತ್ಸವನ್ನು ಧರಿಸಿದ್ದಾರೆ.

ಇನ್ನು ಕೆಲವರು ಶಿವಭಕ್ತರಾಗಿದ್ದಾರೆ. ಇವರು ತಲೆಯಲ್ಲಿ ತ್ರಿಪುಂಡ್ರಗಳನ್ನು ಧರಿಸಿದ್ದಾರೆ. ಇವರು ಧ್ಯಾನಕ್ಕಾಗಿ ಭಸ್ಮವನ್ನು ಧರಿಸುತ್ತಾರೆ. ಗರುಡಾರೂಢರಾಗಿರುತ್ತಾರೆ.

ವಿಷ್ಣುವಿನ ಹತ್ತಿರವೇ ಇರುವವರೆಲ್ಲರೂ, ಶಕ್ತಿಸಂಪನ್ನರೂ, ನಿತ್ಯಾನಂದರೂ, ನಿರ್ಮಲರೂ ಆಗಿದ್ದಾರೆ.

ಈ ಶ್ವೇತದ್ವೀಪದಲ್ಲಿ ಶ್ರೀಮನ್ನಾರಾಯಣನ ಇನ್ನೊಂದು ಸ್ಥಾನವಿದೆ. ಇದು ದುರ್ಗಮ. ಇದನ್ನು ಅತಿಕ್ರಮಿಸಲು ಸಾಧ್ಯವಿಲ್ಲ. ಈ ಸ್ಥಾನಕ್ಕೆ ನಾರಾಯಣಪುರ ಎಂದು ಹೆಸರು. ಈ ಪುರವು ದೊಡ್ಡ, ದೊಡ್ಡ ಭವನಗಳಿಂದ ಅಲಂಕೃತವಾಗಿದೆ. ಈ ಪುರಕ್ಕೆ ಬಂಗಾರದ ಪ್ರಾಕಾರಗಳಿವೆ. ಸ್ಫಟಿಕ ಮಂಡಪಗಳು ಇಲ್ಲಿವೆ. ನಾನಾವಿಧವಾದ ಪ್ರಭೆಗಳಿಂದ ಅಲಂಕೃತವಾದ ಈ ಪುರ ಬಹಳ ಶೋಭೆಯನ್ನು ಹೊಂದಿದೆ. ಇದನ್ನು ಯಾರೂ ಆಕ್ರಮಿಸಲಾರರು. ನಾನಾ ರತ್ನಗಳಿಂದ ಶೋಭಿತವಾದ ಸಾವಿರಾರು ಬಂಗಾರದ ಗೋಪುರಗಳು, ಬಹಳ ಸುಂದರವಾದ, ಶುಭ್ರವಾದ ಹಾಸುಗಳು ಇಲ್ಲಿಯ ವೈಶಿಷ್ಟ್ಯಗಳು. ನಾನಾ ವಿಧವಾದ ವನಗಳು, ನದಿಗಳೂ, ಸರೋವರಗಳು ಇಲ್ಲಿವೆ. ವೀಣಾ-ವೇಣುಗಳ ನಿನಾದ ಇಲ್ಲಿ ಯಾವಾಗಲೂ ಶ್ರಾವ್ಯ. ಇಲ್ಲಿಯ ಮಂದಿರಗಳ ಮೇಲೆ ಹಾರುತ್ತಿರುವ ನಾನಾ ವಿಧವಾದ, ಸುಂದರವಾದ ಪತಾಕೆಗಳು ಈ ಪುರಕ್ಕೆ ಬಹಳ ಶೋಭೆಯನ್ನುಂಟು ಮಾಡಿವೆ. ರತ್ನ ಖಚಿತವಾದ ಸೋಪಾನಗಳು, ವೀಥಿಗಳು ಇಲ್ಲಿವೆ. ಹಂಸ, ಕಾರಂಡವ, ಚಕ್ರವಾಕ - ಈ ಹಕ್ಕಿಗಳ ದಿವ್ಯ ನಾದ ಭರಿತವಾದ ನೂರಾರು ನದಿಗಳು ಇಲ್ಲಿವೆ. ನಾಲ್ಕು ದ್ವಾರಗಳನ್ನು ಹೊಂದಿರುವ, ಅನುಪಮವಾದ ಈ ನಗರವು ದೇವದ್ವೇಷಿಗಳಿಗೆ ಅಗಮ್ಯವಾಗಿದೆ.

ಈ ನಗರದಲ್ಲಿ ನರ್ತಿಸುವ, ನಾನಾ ಗೀತ ವಿಧಾನಗಳನ್ನು ತಿಳಿದಿರುವ, ನಾನಾ ವಿಲಾಸಗಳನ್ನು ಅರಿತಿರುವ, ಕಾಮುಕಿಯರೂ, ಅತಿ ಕೋಮಲೆಯರೂ, ಆದ ಚಂದ್ರ ಮುಖಿಯರಾದ ಅಪ್ಸರೆಯರು ದೊಡ್ಡ ಸಂಖ್ಯೆಯಲ್ಲಿದ್ದಾರೆ. ಇವರ ಗೆಜ್ಜೆಗಳ ನಾದ, ಮುಗುಳ್ನಗೆ, ತೊಂಡೆಯ ಹಣ್ಣಿನಂತಹ ತುಟಿ, ಎಳೆ ಜಿಂಕೆಗಳ ಕಣ್ಣಿನಂತಹ ಕಣ್ಣುಗಳು, ತೆಳು ನಡು, ರಾಜಹಂಸಗಮನ, ಸುಂದರ ವಸ್ತ್ರಾಲಂಕಾರ, ಮಧುರಧ್ವನಿ, ಸಂಲಾಪ-ಆಲಾಪ ಕೌಶಲ, ಭಾರವಾದ ಸ್ತನಗಳಿಂದ ಸ್ವಲ್ಪ ಬಾಗಿದ ಬೆನ್ನು, ದಿವ್ಯಾಭರಣಾಲಂಕಾರ ಇವೆಲ್ಲವೂ ಆತ್ಮಾಕರ್ಷಕ. ಇಂತಹ ಅಪ್ಸರೆಯರೂ ದೇವತೆಗಳಿಗೂ ಸುಲಭವಲ್ಲ.

ಈ ಪುರದಲ್ಲಿ ಅಸಂಖ್ಯದೇವತೆಗಳಿದ್ದಾರೆ. ಈ ಶ್ರೀಪತಿಯ ಪುರದ ಮಧ್ಯದಲ್ಲಿ ಅತ್ಯಂತ ತೇಜಸ್ಸಂಪನ್ನವಾದ, ಎತ್ತರವಾದ ಪ್ರಾಕಾರ, ತೋರಣಗಳಿಂದ ಭವ್ಯವಾದ, ಯೋಗಿಗಳಿಗೆ ಸಿದ್ಧಿದಾಯಕವಾದ ವೈಷ್ಣವಸ್ಥಾನವಿದೆ. ಅಲ್ಲಿ ಜಗಜ್ಜನ್ಮಾದಿಕಾರಣನಾದ ಶ್ರೀಹರಿಯು ಆದಿಶೇಷನ ಮೇಲೆ ಮಲಗಿದ್ದಾನೆ. ಸನಂದನ ಮೊದಲಾದ ಯೋಗೀಂದ್ರರು ಈ ಶ್ರೀ ಹರಿಯನ್ನು ಧ್ಯಾನಿಸುತ್ತಿದ್ದಾರೆ. ತಮಸಃ ಪರನಾದ ಶ್ರೀ ಹರಿಯು ಪೀತಾಂಬರವನ್ನು ಧರಿಸಿದ್ದಾನೆ. ವಿಶಾಲಾಕ್ಷನೂ, ಮಹಾಮಾಯನೂ, ಮಹಾಭುಜನೂ ಆದ ಶ್ರೀ ಹರಿಯು ಸ್ವಾತ್ಮಾನಾಂದವನ್ನು ಅನುಭವಿಸುತ್ತಿದ್ದಾನೆ. ಕ್ಷೀರಸಾಗರಜಾತೆಯಾದ ಲೋಕವಂದ್ಯಳಾದ ಮಹಾಲಕ್ಷ್ಮಿಯು ಅವನ ಪದದ್ವಂದ್ವವನ್ನು ಸೇವಿಸುತ್ತಿದ್ದಾಳೆ. ಇವಳಿಗೆ ನಾರಾಯಣನೇ ಅಮೃತ. ಈ ಅಮೃತವನ್ನು ಪಾನಮಾಡುತ್ತಾ ಲಕ್ಷ್ಮಿಯು ಮೈ-ಮನಗಳನ್ನು ಮರೆತಿದ್ದಾಳೆ.

ಈ ಸ್ಥಾನಕ್ಕೆ ವೈಕುಂಠ ಎಂದು ಹೆಸರು. ಅಧಾರ್ಮಿಕರು ಇಲ್ಲಿಗೆ ಹೋಗಲಾರರು. ಈ ವೈಕುಂಠವನ್ನು ಸಮಗ್ರವಾಗಿ ವರ್ಣಿಸಲು ನನ್ನ ಪ್ರಜ್ಞೆಯು ಅಸಮರ್ಥ. ಇಷ್ಟನ್ನು ಮಾತ್ರ ಹೇಳಬಹುದು. ''ಇದು ನಾರಾಯಣಪುರ, ಸನಾತನನೂ, ಪರಬ್ರಹ್ಮನೂ ಆದ ವಾಸುದೇವನೇ ಇಲ್ಲಿದ್ದಾನೆ. ಇವನು ತನ್ನ ಮಾಯೆಯಿಂದ ಜಗತ್ತನ್ನೇ ಮೋಹಕ್ಕೊಳ ಪಡಿಸುವನು. ಈ ಜಗತ್ತು ನಾರಾಯಣನಿಂದಲೆ ಹುಟ್ಟಿದೆ. ಅವನಿಂದಲೇ ಇದೆ. ಕೊನೆಗೆ ಅವನಲ್ಲೇ ಲಯ ಹೊಂದುತ್ತದೆ. ಅವನೇ ಸರ್ವರಿಗೂ ಕೊನೆಯ ಆಶ್ರಯ''.

* * *

## ಪುಷ್ಕರದ್ವೀಪ

**ಅಧ್ಯಾಯ-೫೦**

**ಸೂತ ಉವಾಚ :**

ಪುಷ್ಕರದ್ವೀಪ ಶಾಕದ್ವೀಪದ ಎರಡರಷ್ಟು ದೊಡ್ಡದು. ಇದು ಕ್ಷೀರಸಮುದ್ರದಲ್ಲಿದೆ. ಈ ದ್ವೀಪದಲ್ಲಿ ಮಾನಸೋತ್ತರ ಎಂಬ ಒಂದೇ ಒಂದು ಪರ್ವತವಿದೆ. ಇದರ ಎತ್ತರ ಒಂದು ಸಾವಿರದ ಐವತ್ತು ಯೋಜನ. ವಿಸ್ತಾರವೂ ಅಷ್ಟೇ. ಈ ದ್ವೀಪದ ಅರ್ಧ ಭಾಗವನ್ನು ಮಾನಸೋತ್ತರಪರ್ವತವು ಆಕ್ರಮಿಸಿದೆ. ಆ ದ್ವೀಪದಲ್ಲಿ ಎರಡು ಜನಪದಗಳಿವೆ. ಇದಲ್ಲದೆ ಮಹಾವೀತ ಮತ್ತು ಧಾತಕೀ ಎಂಬ ಎರಡು ಖಂಡಗಳಿವೆ. ಪುಷ್ಕರದ್ವೀಪದ ಸುತ್ತಲೂ ಸ್ವಾದೂದಕವಿದೆ. ಆ ದ್ವೀಪದಲ್ಲಿ ದೊಡ್ಡ ನ್ಯಗ್ರೋಧವೃಕ್ಷವಿದೆ. ಇದನ್ನು ದೇವತೆಗಳು ಪೂಜಿಸುತ್ತಾರೆ. ಈ ದ್ವೀಪದಲ್ಲಿ ಬ್ರಹ್ಮದೇವನು ವಾಸವಾಗಿದ್ದಾನೆ.

ಈ ದ್ವೀಪದಲ್ಲಿ ಶಿವನಾರಾಯಣ ಮಂದಿರವೂ ಇದೆ. ಇಲ್ಲಿ ಹರಿಹರರು ಸನ್ನಿಹಿತ-ರಾಗಿದ್ದಾರೆ. ಬ್ರಹ್ಮಾದಿ ದೇವತೆಗಳೂ, ಸನತ್ಕುಮಾರಾದಿ ಯೋಗಿಗಳೂ ಹರಿಯನ್ನು ಪೂಜಿಸುತ್ತಾರೆ. ಗಂಧರ್ವರು, ಕಿನ್ನರರೂ, ಯಕ್ಷರೂ, ಕೃಷ್ಣಪಿಂಗಲನಾದ ಹರನನ್ನು ಪೂಜಿಸುತ್ತಾರೆ. ಅಲ್ಲಿ ಎಲ್ಲ ಪ್ರಜೆಗಳೂ, ತೇಜಸ್ವಿಗಳಾದ ಬ್ರಾಹ್ಮಣರೂ ಸ್ವಸ್ಥರಾಗಿದ್ದಾರೆ. ಎಲ್ಲರೂ ರೋಗರಹಿತರೂ, ಶೋಕರಹಿತರೂ, ರಾಗ-ದ್ವೇಷ ರಹಿತರೂ ಆಗಿದ್ದಾರೆ. ಇಲ್ಲಿ ಸತ್ಯ-ಅನೃತಗಳು, ಉತ್ತಮ-ಮಧ್ಯಮ-ಅಧಮ ಭಾವಗಳು ಇಲ್ಲ. ವರ್ಣಾಶ್ರಮ ಧರ್ಮಗಳಿಲ್ಲ. ನದಿಗಳಿಲ್ಲ. ಪರ್ವತಗಳಿಲ್ಲ. ಪುಷ್ಕರ ದ್ವೀಪದ ಹೊರಭಾಗದಲ್ಲಿ ಸ್ವಾದೂದಕ ಸಮುದ್ರವಿದೆ. ಅದರ ಆಚೆಗೆ ಲೋಕಗಳಿವೆ. ಅದು ಒಂದೇ ಬಂಡೆಯಂತಿರುವ ಸುವರ್ಣ ಭೂಮಿ. ಅದರ ಆಚೆಗೆ ಸೂರ್ಯ ಮಂಡಲದವರೆಗೆ ವ್ಯಾಪಿಸಿರುವ ಪರ್ವತವಿದೆ. ಈ ಪರ್ವತಕ್ಕೆ ಲೋಕಾಲೋಕ ಎಂದು ಹೆಸರು. ಇದರ ಒಂದು ಭಾಗ ಕಾಣಿಸುತ್ತದೆ. ಮತ್ತೊಂದು ಭಾಗ ಕಾಣಿಸುವುದಿಲ್ಲ. ಆದ್ದರಿಂದ ಈ ಹೆಸರು. ಇದರ ಎತ್ತರ ಹತ್ತು ಸಾವಿರ ಯೋಜನ. ಅಷ್ಟೇ ವಿಸ್ತಾರ. ಈ ಪರ್ವತದ ಎಲ್ಲ ಭಾಗದಲ್ಲೂ ಕತ್ತಲು ಆವರಿಸಿದೆ.

**ಸೂತ ಉವಾಚ :**

ಇಲ್ಲಿಯವರೆಗೆ ಬ್ರಹ್ಮಾಂಡದ ವಿಸ್ತಾರವನ್ನು ಸಂಕ್ಷೇಪವಾಗಿ ವರ್ಣಿಸಿದ್ದಾಯಿತು. ಇಂತಹ ಕೋಟಿ ಕೋಟಿ ಬ್ರಹ್ಮಾಂಡಗಳು ಇವೆ. ಈ ಎಲ್ಲ ಬ್ರಹ್ಮಾಂಡಗಳಲ್ಲಿ ಹದಿನಾಲ್ಕು ಲೋಕಗಳಿವೆ. ಎಲ್ಲ ಲೋಕಗಳಲ್ಲೂ ಚತುರ್ಮುಖ ಬ್ರಹ್ಮರು, ರುದ್ರರು, ನಾರಾಯಣರು, ಮೊದಲಾದವರು ಇದ್ದಾರೆ. ಪ್ರತಿಯೊಂದು ಬ್ರಹ್ಮಾಂಡಕ್ಕೂ ಏಳು ಆವರಣಗಳಿವೆ. ಹಿಂದಿನ ಆವರಣಕ್ಕಿಂತ ಮುಂದಿನ ಆವರಣ ಹತ್ತು ಪಟ್ಟು ದೊಡ್ಡದಾಗಿದೆ.

ಇಷ್ಟು ದೊಡ್ಡ ಜಗತ್ತಿನ ಮೂಲವಾದ ಪ್ರಕೃತಿಯು (ಅವ್ಯಕ್ತವು) ಅನಾದಿಯೂ ಅನಂತವೂ ಆಗಿದೆ. ಅನಂತವಾದ ಪ್ರಕೃತಿಯು ಬ್ರಹ್ಮನಿಗೆ ಅಧೀನವಾಗಿದೆ. ಈ ಬ್ರಹ್ಮ ಅನಂತ ಎಂದು ಎಲ್ಲ ಶಾಸ್ತ್ರಗಳೂ ಹೇಳುತ್ತವೆ. ಈ ಬ್ರಹ್ಮನ ಮಹಿಮೆಯನ್ನೂ ನಾನೂ ಕೂಡ ಈ ಹಿಂದೆ ವರ್ಣಿಸಿದ್ದೇನೆ. ಈ ಬ್ರಹ್ಮನು ಭೂಮಿ, ರಸಾತಲ, ಆಕಾಶ, ವಾಯು, ಅಗ್ನಿ, ಸಮುದ್ರ, ಅಂತರಿಕ್ಷ, ಅಂಧಕಾರ, ಸಕಲ ತತ್ತ್ವಗಳು - ಹೀಗೆ ಎಲ್ಲ ಸ್ಥಾನಗಳಲ್ಲಿಯೂ ವ್ಯಾಪಿಸಿ ಇದ್ದಾನೆ. ಎಲ್ಲ ಕಡೆ ಪೂಜಿಸಲ್ಪಡುತ್ತಾನೆ. ಈ ಪುರುಷೋತ್ತಮನು ತನ್ನ ಅನೇಕ ರೂಪಗಳಿಂದ ಅನೇಕ ರೀತಿಯಲ್ಲಿ ವಿಹರಿಸುತ್ತಾನೆ.

ಈ ಜಗತ್ತು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿದೆ. ಬ್ರಹ್ಮನು ಬ್ರಹ್ಮಾಂಡದಿಂದ ಹುಟ್ಟಿ ಬಂದಿದ್ದಾನೆ. ಬ್ರಹ್ಮಾಂಡವು ಅವ್ಯಕ್ತ (ಪ್ರಕೃತಿ) ದಿಂದ ಹುಟ್ಟಿದೆ. ಈ ಅವ್ಯಕ್ತವನ್ನೂ ಮೀರಿ ಅದರ ನಿಯಾಮಕನಾಗಿರುವವನು ಮಹೇಶ್ವರ.

* * *

## ಅಧ್ಯಾಯ-೫೧

**ಋಷಯ ಊಚು :**

ಸೂತರೇ! ಹಿಂದೆ ಆಗಿ ಹೋಗಿರುವ ಮತ್ತು ಮುಂದೆ ಬರಲಿರುವ ಮನ್ವಂತರಗಳ ಬಗ್ಗೆ ದಯವಿಟ್ಟು ತಿಳಿಸಿರಿ. ದ್ವಾಪರಯುಗದಲ್ಲಿ ಇದ್ದ ವ್ಯಾಸರನ್ನು ಮತ್ತು ವೇದ ಶಾಖೆಗಳನ್ನು ಏರ್ಪಡಿಸಿದ ಅವರ, ಧರ್ಮ-ಅರ್ಥಗಳನ್ನು ಉಪದೇಶಿಸುವ ಕಲಿಯುಗದ ಶಿಷ್ಯರ ಬಗ್ಗೆ ದಯವಿಟ್ಟು ತಿಳಿಸಿರಿ. ಆ ಶಿಷ್ಯರ ಸಂಖ್ಯೆಯನ್ನು ದಯವಿಟ್ಟು ತಿಳಿಸಬೇಕು.

**ಸೂತ ಉವಾಚ :**

ಸ್ವಾಯಂಭುವ ಮೊದಲನೆಯ ಮನು. ಎರಡನೆಯವನು ಸ್ವಾರೋಚಿಷ. ಉತ್ತಮ, ತಾಮಸ, ರೈವತ, ಚಾಕ್ಷುಷ - ಇವರು ಕ್ರಮವಾಗಿ ಮೂರು-ನಾಲ್ಕು ಐದು-ಆರನೆಯವರು. ಇವರುಗಳು ಆಗಿ ಹೋದ ಮನುಗಳು. ಈಗ ಸೂರ್ಯ ಸುತನಾದ ವೈವಸ್ವತ ಮನು. ಇವನ ಆಡಳಿತ ಈಗ ನಡೆದಿದೆ. ಸ್ವಾಯಂಭುವ ಮನ್ವಂತರವು ವಿವರವಾಗಿ ಈಗಾಗಲೇ ಹೇಳಲ್ಪಟ್ಟಿದೆ. ಈಗ ಸ್ವಾರೋಚಿಷ ಮನ್ವಂತರದ ಬಗ್ಗೆ ಹೇಳುವ ಕೇಳಿರಿ.

**ಸ್ವಾರೋಚಿಷ ಮನ್ವಂತರ :**

ಸ್ವಾರೋಚಿಷ ಮನ್ವಂತರದಲ್ಲಿ ಪಾರಾವತ ಮತ್ತು ತುಷಿತ ಎಂಬ ಹೆಸರಿನ ದೇವತೆಗಳಿದ್ದರು. ವಿಪಶ್ಚಿತ್ ಎನ್ನುವವನು ಆಗ ಅಸುರ ಮರ್ದನನಾಗಿ ದೇವರಾಜ ಪದವಿಯಲ್ಲಿದ್ದನು. ಊರ್ಜ, ಸ್ತಂಭ, ಪ್ರಾಣ, ದಾಂತ, ಋಷಭ, ತಿಮಿರ, ಉರ್ವರೀವಾನ್ - ಇವು ಆಗಿನ ಸಪ್ತರ್ಷಿಗಳ ಹೆಸರುಗಳು. ಚೈತ್ರ, ಕಿಂಪುರುಷ ಮೊದಲಾದವರು ಸ್ವಾರೋಚಿಷ ಮಕ್ಕಳು.

**ಉತ್ತಮ ಮನ್ವಂತರ :**

ಮೂರನೆಯ ಮನ್ವಂತರದ ಮನು ಉತ್ತಮ, ಸುಶಾಂತಿ ಎನ್ನುವವನು ಶತ್ರುನಾಶಕನಾಗಿ ದೇವೇಂದ್ರ ಪದವಿಯಲ್ಲಿದ್ದನು. ಸುಧಾಮ ಸತ್ಯ, ಶಿವ, ಪ್ರತರ್ದನ ಮತ್ತು ವಶವರ್ತಿ ಎಂಬ ಹೆಸರಿನ ಐದರ ಗಣಗಳು ಆಗ ಇದ್ದವು. ಒಂದೊಂದು ಗಣದಲ್ಲೂ ಹನ್ನೆರಡು ಸದಸ್ಯರಿದ್ದರು. ರಜಸ್, ಗಾತ್ರ, ಊರ್ಧ್ವ ಬಾಹು, ಸವನ, ಅನಘ, ಸುತಪಸ್, ಶಕ್ರ - ಇವುಗಳು ಆಗಿನ ಸಪ್ತರ್ಷಿಗಳ ಹೆಸರುಗಳು.

**ತಾಮಸ ಮನ್ವಂತರ :**

ತಾಮಸ ಮನ್ವಂತರದಲ್ಲಿ ಸುರಾಯಾಸ ಹರ, ಸತ್ಯ, ಸುಧಿಯ ಎಂಬ ದೇವಗಣಗಳು ಇದ್ದವು. ಒಂದೊಂದು ಗಣದಲ್ಲೂ ಇಪ್ಪತ್ತೇಳು ದೇವತೆಗಳು ಇದ್ದರು. ನೂರು ಅಶ್ವ ಯಜ್ಞಗಳನ್ನು ಮಾಡಿದ್ದ ಶಿಬಿ ಆಗ ಇಂದ್ರನಾಗಿದ್ದನು. ಇವನು ಶಿವಭಕ್ತನಾಗಿದ್ದನು. ಜ್ಯೋತಿಷ್,

ಧಾಮ, ಪೃಥಕ್ಕಲ್ಪ, ಚೈತ್ರ, ಅಗ್ನಿ, ವಸನ, ಪೀವರ - ಇವು ಈ ಮನ್ವಂತರದ ಸಪ್ತರ್ಷಿಗಳ ಹೆಸರುಗಳು.

## ರೈವತ ಮನ್ವಂತರ :

ಐದನೆಯ ಮನ್ವಂತರದಲ್ಲಿ ರೈವತ ಮನು. ವಿಭು ಎನ್ನುವವನು ಅಸುರ ಮರ್ದನನಾಗಿ ದೇವೇಂದ್ರ ಪದವಿಯಲ್ಲಿದ್ದನು. ಅಮಿತ, ಭೂತಿ, ವೈಕುಂಠ, ಸುರೋತ್ತಮ - ಎಂಬ ನಾಲ್ಕು ದೇವ ಗಣಗಳು ಆಗ ಇದ್ದವು. ಒಂದೊಂದು ಗಣದಲ್ಲೂ ಹದಿನಾಲ್ಕು ದೇವತೆಗಳು. ಹಿರಣ್ಯ-ರೋಮಾ, ವೇದಶ್ರೀ, ಊರ್ಧ್ವ ಬಾಹು, ವೇದಬಾಹು, ಸುಬಾಹು, ಪರ್ಜನ್ಯ, ಮಹಾಮುನಿ ಇವು ಆಗಿನ ಸಪ್ತರ್ಷಿಗಳ ಹೆಸರುಗಳು.

## ಚಾಕ್ಷುಷ ಮನ್ವಂತರ :

ಆರನೆಯ ಚಾಕ್ಷುಷ ಮನ್ವಂತರದಲ್ಲಿ ಚಾಕ್ಷುಷ ಎನ್ನುವವನು ಮನು. ಮನೋಜವ ಎನ್ನುವವನು ಇಂದ್ರ. ಆದ್ಯ, ಪ್ರಭೂತಭಾವ್ಯ, ಪ್ರಥನ, ಮಹಾನುಭಾವ, ಲೇಖ್ಯ - ಇವು ಐದು ದೇವ ಗಣಗಳು. ವಿರಜ, ಹವಿಷ್ಮಾನ್, ಸೋಮ, ಮನುಸಮ, ಅವಿ, ವಿಷ್ಣು (ಒಂದು ಹೆಸರು ತಪ್ಪಿಹೋಗಿದೆ) - ಇವು ಆಗಿನ ಸಪ್ತರ್ಷಿಗಳ ಹೆಸರುಗಳು.

## ವೈವಸ್ವತ ಮನ್ವಂತರ :

ಸೂರ್ಯನ ಮಗ ಶ್ರಾದ್ಧದೇವ ಏಳನೆಯ ಮನ್ವಂತರದ ಮನು. ಈ ಮನ್ವಂತರ ಈಗ ನಡೆದಿದೆ. ಆದಿತ್ಯ, ವಸು, ರುದ್ರ ಮತ್ತು ಮರುತ್ ಈ ಮನ್ವಂತರ ದೇವಗಣಗಳು. ಪುರಂದರ ಇಂದ್ರ. ವಸಿಷ್ಠ, ಕಶ್ಯಪ, ಅತ್ರಿ, ಜಮದಗ್ನಿ, ಗೌತಮ, ವಿಶ್ವಾಮಿತ್ರ, ಭರದ್ವಾಜ - ಇವರು ಸಪ್ತರ್ಷಿಗಳು. ಸತ್ವಗುಣಪ್ರಚುರವಾದ, ಅನುಪಮವಾದ ವಿಷ್ಣುಶಕ್ತಿಯು ಈ ಮನ್ವಂತರದಲ್ಲಿ ಜಗತ್ತನ್ನು ರಕ್ಷಿಸುತ್ತಿದೆ. ರಾಜರುಗಳೂ, ದೇವತೆಗಳೂ ವಿಷ್ಣುವಿನ ಅಂಶಸಹಿತರಾಗಿದ್ದಾರೆ.

ಸ್ವಾಯಂಭುವ ಮನ್ವಂತರದಲ್ಲಿ ವಿಷ್ಣುವು ರುಚಿಪ್ರಜಾಪ್ರತಿಯ ಮಾನಸಪುತ್ರನಾಗಿ ಜನಿಸಿದನು. ಸ್ವಾರೋಚಿಷಮನ್ವಂತರದಲ್ಲಿ ತುಷಿತಾದೇವಿಯಲ್ಲಿ ತುಷಿತ ಎಂಬ ಹೆಸರಿನ ದೇವತೆಗಳೊಡನೆ ಅವತರಿಸಿದನು. ಉತ್ತಮ ಮನ್ವಂತರದಲ್ಲಿ ಸತ್ಯಾ ಎನ್ನುವವಳಲ್ಲಿ ಸತ್ಯ ಎಂಬ ಹೆಸರಿನ ದೇವತೆಗಳೊಂದಿಗೆ ಸತ್ಯ ಎಂಬ ಹೆಸರಿನಿಂದ ಅವತರಿಸಿದನು. ತಾಮಸಮನ್ವಂತರದಲ್ಲಿ ಹರ್ಯಾ ಎಂಬುವವಳಲ್ಲಿ ಹರಿ ಎಂಬ ಹೆಸರಿನ ದೇವತೆಗಳೊಂದಿಗೆ ಹರಿ ಎಂಬ ಹೆಸರಿನಿಂದ ಅವತರಿಸಿದನು. ರೈವತ ಮನ್ವಂತರದಲ್ಲಿ ಮಾನಸ ಎಂಬ ದೇವತೆಗಳೊಂದಿಗೆ ಮಾನಸ ಎಂಬ ಹೆಸರಿನಿಂದ ಕೇವಲ ಸಂಕಲ್ಪದಿಂದಲೇ ಅವತರಿಸಿದನು. ಚಾಕ್ಷುಷಮನ್ವಂತರದಲ್ಲಿ ವಿಕುಂಠಾ-ದೇವಿಯಲ್ಲಿ ವೈಕುಂಠ ಎಂಬ ದೇವತೆಗಳೊಂದಿಗೆ ವೈಕುಂಠ ಎಂಬ ಹೆಸರಿನಿಂದ ಅವತರಿಸಿ-ದನು. ವೈವಸ್ವತ ಮನ್ವಂತರದಲ್ಲಿ ಕಶ್ಯಪ ಅದಿತಿಯರ ಮಗನಾಗಿ ವಾಮನ ಎಂಬ ಹೆಸರಿನಿಂದ

ಅವತರಿಸಿದನು. ಮೂರು ಹೆಜ್ಜೆಗಳಿಂದ ಮೂರೂ ಲೋಕಗಳನ್ನು ಗೆದ್ದು, ನಿಷ್ಕಂಟವಾದ ಈ ಲೋಕಗಳನ್ನು ಇಂದ್ರನಿಗೆ ಕೊಟ್ಟನು. ಹೀಗೆ ಏಳು ಮನ್ವಂತರಗಳಲ್ಲಿ ಏಳು ರೂಪಗಳಿಂದ ಅವತರಿಸಿದ ವಿಷ್ಣುವಿನ ವಾಮನ ರೂಪವು ದೈತ್ಯನಿಗ್ರಹವನ್ನು ಮಾಡಿದ್ದರಿಂದ ಈ ರೂಪವನ್ನು ಜನರು ಹೆಚ್ಚು ಸ್ಮರಿಸುತ್ತಾರೆ.

''ಈ ವಿಷ್ಣುವೇ ಕೇಶವ. ಇವನೇ ಸರ್ವಾಂತರ್ಯಾಮಿ, ಭಗವಾನ್ ನಾರಾಯಣ. ಇವನೇ ಜಗತ್ತನ್ನು ಸೃಷ್ಟಿಸುತ್ತಾನೆ. ರಕ್ಷಿಸುತ್ತಾನೆ ಮತ್ತು ಸಂಹರಿಸುತ್ತಾನೆ'' -ಎಂದು ಶ್ರುತಿಯು ಹೇಳುತ್ತದೆ. ನಾರಾಯಣನು ತನ್ನ ಒಂದು ಅಂಶದಿಂದ ಜಗತ್ತನ್ನು ವ್ಯಾಪಿಸಿದ್ದಾನೆ.

ಸರ್ವವ್ಯಾಪಿಯೂ, ಸಗುಣನೂ, ನಿರ್ಗುಣನೂ ಆದ ನಾರಾಯಣನ ನಾಲ್ಕು ರೂಪಗಳು ಪ್ರಸಿದ್ಧವಾಗಿವೆ :

೧. **ವಾಸುದೇವ** - ಇದು ನಿರ್ಗುಣ, ನಿರ್ದೋಷ

೨. **ಶಿವ** - ಇದಕ್ಕೆ ಕಾಲ ಎಂದೂ ಹೆಸರು. ಇದು ತಾಮಸ ಕಾರ್ಯಗಳ ಪ್ರಚೋದಕ, ಪ್ರಲಯಕಾಲದಲ್ಲಿ ಜಗತ್ತನ್ನು ಸಂಹಾರ ಮಾಡುವ ರೂಪ.

೩. **ಪ್ರದ್ಯುಮ್ನ** - ಇದು ಸಾತ್ವಿಕ ಕಾರ್ಯಗಳ ಪ್ರಚೋದಕ. ಈ ರೂಪ ಜಗತ್ತಿನ ಪಾಲನೆಯನ್ನು ಮಾಡುತ್ತದೆ.

೪. **ಬ್ರಹ್ಮ** - ಇದು ರಾಜಸ ಕಾರ್ಯಗಳ ಪ್ರಚೋದಕ. ಶ್ರೀಮನ್ನಾರಾಯಣನ ಬ್ರಹ್ಮರೂಪವು ಜಗತ್ತನ್ನು ಸೃಷ್ಟಿಸುತ್ತದೆ.

ಪ್ರದ್ಯುಮ್ನ ರೂಪವು ಜಗತ್ತಿಗೆ ಮೋಹವುಂಟು ಮಾಡುತ್ತದೆ. ಆದ್ದರಿಂದಲೇ ಈ ರೂಪಕ್ಕೆ ಪ್ರಕೃತಿ ಎಂದು ಹೆಸರು. ವಾಸುದೇವ ಸ್ವತಂತ್ರ; ನಿರ್ಗುಣ, ಪ್ರಧಾನ ಪುರುಷ ಕಾಲನಿಯಾಮಕ. ವಾಸುದೇವ ರೂಪನಾದ ಶ್ರೀಹರಿಯ ಜ್ಞಾನದಿಂದ ಮುಕ್ತಿಯು ಲಭಿಸುತ್ತದೆ. ವೇದಗಳನ್ನು ವಿಭಾಗ ಮಾಡಿದ ಕೃಷ್ಣದ್ವೈಪಾಯನರು ವಿಷ್ಣುವಿನ ಅವತಾರವೇ. ಇದು ವಿಷ್ಣುವಿನ ಪೂರ್ಣರೂಪ. ಸ್ವ-ಇಚ್ಛೆಯಿಂದ ತೆಗೆದುಕೊಂಡ ರೂಪ. ಅನಾದಿಯೂ, ಅನಂತನೂ ಆದ ಪರಬ್ರಹ್ಮನನ್ನು ದೇವತೆಗಳಾಗಲಿ, ಋಷಿಗಳಾಗಲಿ ತಿಳಿದಿಲ್ಲ. ವ್ಯಾಸರೊಬ್ಬರೇ ತಿಳಿದಿದ್ದಾರೆ. ಮುನಿಶ್ರೇಷ್ಠರೇ! ಇಲ್ಲಿಯವರೆಗೆ ಹೇಳಲ್ಪಟ್ಟ ವಿಷ್ಣುಮಹಿಮೆಯೆಲ್ಲವೂ ಸತ್ಯ, ಸತ್ಯ, ಸತ್ಯ. ಇದನ್ನು ತಿಳಿದವರಿಗೆ ಮೋಹವು ಉಂಟಾಗುವುದಿಲ್ಲ.

* * *

## ಅಧ್ಯಾಯ-೫೨

**ಸೂತ ಉವಾಚ :**

ವೈವಸ್ವತಮನ್ವಂತರದ ಪ್ರಥಮದ್ವಾಪರದಲ್ಲಿ ಸ್ವಾಯಂಭುವ ಮನುವು ವೇದವ್ಯಾಸನಾಗಿದ್ದನು. ಬ್ರಹ್ಮದೇವರ ಆಜ್ಞೆಯಂತೆ ವೇದವನ್ನು ಬಹುವಿಧವಾಗಿ ವಿಭಾಗಿಸಿದನು. ಎರಡನೆಯ ದ್ವಾಪರದಲ್ಲಿ ಬ್ರಹ್ಮದೇವರು ವೇದವ್ಯಾಸರಾಗಿದ್ದರು. ಮೂರನೆಯ ದ್ವಾಪರದಲ್ಲಿ ಶುಕ್ರಾಚಾರ್ಯರೂ, ನಾಲ್ಕನೆಯ ದ್ವಾಪರದಲ್ಲಿ ಬೃಹಸ್ಪತ್ಯಾಚಾರ್ಯರೂ, ಐದನೆಯದರಲ್ಲಿ ಸೂರ್ಯನೂ, ಆರನೆಯದರಲ್ಲಿ ಯಮನೂ, ಏಳನೆಯದರಲ್ಲಿ ಇಂದ್ರನೂ, ಎಂಟನೆಯದರಲ್ಲಿ ವಸಿಷ್ಠರೂ, ಒಂಭತ್ತನೆಯದರಲ್ಲಿ ಸಾರಸ್ವತನೂ, ಹತ್ತನೆಯದರಲ್ಲಿ ತ್ರಿಧಾಮಾ (ವಿಷ್ಣು) ಎಂಬ ಮುನಿಯೂ ವೇದವ್ಯಾಸರಾಗಿದ್ದರು.

ಹನ್ನೊಂದನೆಯ ದ್ವಾಪರದಲ್ಲಿ ಋಷಭ, ಹನ್ನೆರಡನೆಯ ದ್ವಾಪರದಲ್ಲಿ ಸುತೇಜಸ್, ಹದಿಮೂರನೆಯ ದ್ವಾಪರದಲ್ಲಿ ಧರ್ಮ, ಹದಿನಾಲ್ಕನೆಯ ದ್ವಾಪರದಲ್ಲಿ ಸುಚಕ್ಷುಸ್, ಹದಿನೈದನೆಯ ದ್ವಾಪರದಲ್ಲಿ ತ್ರಯ್ಯಾರುಣಿ, ಹದಿನಾರನೆಯ ದ್ವಾಪರದಲ್ಲಿ ಧನಂಜಯ, ಹದಿನೇಳನೆಯ ದ್ವಾಪರದಲ್ಲಿ ಕೃತಂಜಯ, ಹದಿನೆಂಟರ ದ್ವಾಪರದಲ್ಲಿ ಋತಂಜಯ, ಹತ್ತೊಂಬತ್ತನೆಯ ದ್ವಾಪರದಲ್ಲಿ ಭರದ್ವಾಜ, ಇಪ್ಪತ್ತನೆಯ ದ್ವಾಪರದಲ್ಲಿ ಗೌತಮ, ಇಪ್ಪತ್ತೊಂದನೆಯ ದ್ವಾಪರದಲ್ಲಿ ವಾಚಶ್ರವಸ್, ಇಪ್ಪತ್ತೆರಡನೆಯ ದ್ವಾಪರದಲ್ಲಿ ನಾರಾಯಣ, ಇಪ್ಪತ್ತಮೂರನೆಯ ದ್ವಾಪರದಲ್ಲಿ ತೃಣಬಿಂದು, ಇಪ್ಪತ್ತನಾಲ್ಕನೆಯ ದ್ವಾಪರದಲ್ಲಿ ವಾಲ್ಮೀಕಿ, ಇಪ್ಪತ್ತೈದನೆಯ ದ್ವಾಪರದಲ್ಲಿ ಪರಾಶರರ ಮಗ ಕೃಷ್ಣದ್ವೈಪಾಯನ ವೇದವ್ಯಾಸರಾಗಿದ್ದರು. ಈ ಕೃಷ್ಣದ್ವೈಪಾಯನರೇ ಸಕಲ ವೇದಗಳ, ಪುರಾಣಗಳ ಪ್ರವರ್ತಕರು. ಇವರು ತ್ರಿಲೋಚನನಾದ ಶಿವನನ್ನು ಆರಾಧಿಸಿ, ಸಾಕ್ಷಾತ್ಕರಿಸಿಕೊಂಡು ಅವನ ಅನುಗ್ರಹದಿಂದ ವೇದಗಳ ವಿಭಾಗವನ್ನು ಮಾಡಿದರು. ಈ ಕೃಷ್ಣದ್ವೈಪಾಯನರಿಗೆ ವೇದಪಾರಂಗತರಾದ ನಾಲ್ಕು ಜನ ಶಿಷ್ಯರು. ಜೈಮಿನಿ, ಸುಮಂತು, ವೈಶಂಪಾಯನ, ಪೈಲ -ಇವರೇ ಆ ನಾಲ್ವರು. ನಾನು (ಸೂತರು) ಅವರ ಐದನೆಯ ಶಿಷ್ಯ . ಇವರಲ್ಲಿ ಪೈಲರು ಋಗ್ವೇದ ಪ್ರವರ್ತಕರು. ವೈಶಂಪಾಯನರು ಯಜುರ್ವೇದ ಪ್ರವರ್ತಕರು. ಜೈಮಿನಿ ಮುನಿಗಳು ಸಾಮವೇದದ ಮತ್ತು ಸುಮಂತು ಮಹರ್ಷಿಗಳು ಅಥರ್ವವೇದದ ಪ್ರವರ್ತಕರು. ಇತಿಹಾಸ-ಪುರಾಣಗಳ ಪ್ರವಚವನ್ನು ಮಾಡಲು ನನಗೆ ಆಜ್ಞೆ ಮಾಡಿದರು.

ಪೂರ್ವದಲ್ಲಿ ಅಖಂಡವಾಗಿದ್ದ ಯಜುರ್ವೇದವನ್ನು ಕೃಷ್ಣದ್ವೈಪಾಯನರು ನಾಲ್ಕು ಭಾಗ ಮಾಡಿದರು. ಒಂದೊಂದು ಭಾಗದಿಂದ ಒಂದೊಂದರಂತೆ ನಾಲ್ಕು ಹೋತ್ರಕರ್ಮಗಳನ್ನು ಏರ್ಪಡಿಸಿದರು. ಈ ಕರ್ಮಗಳಿಂದ ಯಜ್ಞದ ಏರ್ಪಾಡು ಆಯಿತು. ಯಜುರ್ವೇದ ಮಂತ್ರಗಳಿಂದ ಅಧ್ವರ್ಯು ನಡೆಸುವ ಅಗ್ನಿಹೋತ್ರವನ್ನು, ಅಥರ್ವ ಮಂತ್ರಗಳಿಂದ ಬ್ರಹ್ಮನು

ನಡೆಸಬೇಕಾದ ಪ್ರಯೋಗವನ್ನು ಏರ್ಪಡಿಸಿದರು. ಅನಂತರ ಸತ್ರಯಾಗಕ್ಕಾಗಿ ಋಗ್-ಯಜುಸ್-ಸಾಮವೇದಗಳಿಂದ ಮಂತ್ರಗಳನ್ನು ಆಯ್ದು ತೆಗೆದು ಋಗ್-ಯಜುಸ್-ಸಾಮಮಂತ್ರಗಳನ್ನು ಏರ್ಪಡಿಸಿದರು.

ಋಗ್ವೇದವನ್ನು ಇಪ್ಪತ್ತೊಂದು ಶಾಖೆಗಳನ್ನಾಗಿ, ಯಜುರ್ವೇದವನ್ನು ನೂರು ಶಾಖೆಗಳನ್ನಾಗಿ, ಸಾಮವೇದವನ್ನು ಒಂದು ಸಾವಿರ ಶಾಖೆಗಳನ್ನಾಗಿ ಕೃಷ್ಣದ್ವೈಪಾಯನರು ವಿಭಜಿಸಿದರು. ಅಥರ್ವಣವೇದವನ್ನೂ ವಿಭಜಿಸಿದರು. (ಎಷ್ಟು ಶಾಖೆಗಳಾಗಿ ಎಂದು ಈ ಪುರಾಣದಲ್ಲಿ ಹೇಳಿಲ್ಲ. ಹನ್ನೆರಡು ಎಂದು ಪ್ರಸಿದ್ಧ) ಹದಿನೆಂಟು ಪುರಾಣಗಳನ್ನೂ ರಚಿಸಿದರು. ವಿಭಾಗಾನಂತರ ನಾಲ್ಕು ಭಾಗವಾಗಿರುವ ವೇದವು ಪುರಾತನಕಾಲದಲ್ಲಿ ಒಂದೇ ಆಗಿದ್ದಿತು.

ಸರ್ವದೋಷಗಳನ್ನೂ ಪರಿಹರಿಸುವ ಓಂಕಾರವು ಬ್ರಹ್ಮನಿಂದ ಹುಟ್ಟಿತು. ಸಮಸ್ತ ವೇದಗಳ ಜ್ಞಾನಿಯಾದ, ಸನಾತನನಾದ ಭಗವಾನ್ ವಾಸುದೇವನನ್ನು ವೇದಗಳು ಪ್ರತಿಪಾದಿಸುತ್ತವೆ. ಆದ್ದರಿಂದ ಭಗವಾನ್ ವಾಸುದೇವನನ್ನು ತಿಳಿದವನು ಸಮಸ್ತ ವೇದವನ್ನು ತಿಳಿದಂತೆಯೇ. ವಾಸುದೇವನು ವೇದಪ್ರತಿಪಾದ್ಯನಾದ ಪರಬ್ರಹ್ಮ. ಪರತರ. ಪರಂಜ್ಯೋತಿ. ವೇದಾಧ್ಯಯನ ನಿರತನಾದ ಮುನಿಯು ಮಾತ್ರ ವೇದಪ್ರತಿಪಾದ್ಯನಾದ ವಾಸುದೇವನನ್ನು ತಿಳಿಯಬಲ್ಲನು. ವೇದಾಧ್ಯಯನ ನಿರತನಾದವನು ಮಾತ್ರ ವೇದಭಿನ್ನವಾದ ಪುರಾಣ, ಇತಿಹಾಸ ಮೊದಲಾದವುಗಳನ್ನು ಸರಿಯಾಗಿ ತಿಳಿಯಬಲ್ಲನು. ಪರಾಶರಸುತರಾದ ಕೃಷ್ಣದ್ವೈಪಾಯನರೊಬ್ಬರೇ ಓಂಕಾರವನ್ನೂ, ವೇದಗಳನ್ನೂ, ಇತಿಹಾಸ-ಪುರಾಣಗಳನ್ನೂ ತಿಳಿದಿದ್ದಾರೆ. ವೇದವೇದ್ಯನಾದ ಭಗವಾನ್ ವಾಸುದೇವನನ್ನು ಆಶ್ರಯಿಸಿದವರು ಮಾತ್ರ ಮುಕ್ತಿಯನ್ನು ಪಡೆಯುತ್ತಾರೆ.

* * *

## ಅಧ್ಯಾಯ-೫೩

**ಸೂತ ಉವಾಚ :**

ವೈವಸ್ವತಮನ್ವಂತರದ ದ್ವಾಪರ ಯುಗಗಳಲ್ಲಿ ಆದ ವೇದವ್ಯಾಸರುಗಳನ್ನು ಹಿಂದೆ ವಿವರಿಸಲಾಯಿತು. ಇನ್ನುಮುಂದೆ ಇದೇ ಮನ್ವಂತರದ ಕಲಿಯುಗಗಳಲ್ಲಿ ಆದ ಮಹಾದೇವನ ಅವತಾರಗಳನ್ನು ಹೇಳುವೆ ಕೇಳಿರಿ.

ವೈವಸ್ವತಮನ್ವಂತರದ ಮೊದಲನೆಯ ಕಲಿಯುಗದಲ್ಲಿ ಬ್ರಾಹ್ಮಣರ ಹಿತಕ್ಕಾಗಿ ಮಹಾತೇಜಸ್ವಿಯೂ, ದೇವೋತ್ತಮನೂ ಆದ ಶಿವನು ಅವತರಿಸಿದನು. ಈ ಅವತಾರಕ್ಕೆ ಶ್ವೇತ

ಎಂದು ಹೆಸರು. ಪರ್ವತರಾಜನಾದ ಹಿಮಾಲಯದ ರಮ್ಯ ಶಿಖರದಲ್ಲಿ ಈ ಅವತಾರವು ಆಯಿತು. ಶ್ವೇತನಿಗೆ ಅಮಿತತೇಜಸ್ವಿಗಳಾದ ಶಿಷ್ಯರೂ, ಪ್ರಶಿಷ್ಯರೂ ಇದ್ದರು.

ಶ್ವೇತ, ಶ್ವೇತಶಿಖ, ಶ್ವೇತಾಸ್ಯ, ಶ್ವೇತಲೋಹಿತ - ಇವರು ಶ್ವೇತನ ಶಿಷ್ಯರು. ಇವರು ವೇದ-ಪಾರಂಗತರಾದ ಬ್ರಾಹ್ಮಣರು.

ಸುತಾರ, ಮದನ, ಸುಹೋತ್ರ, ಕಂಕಣ, ಲೋಕಾಕ್ಷಿ, ಇವರು ಕ್ರಮವಾಗಿ ಶಿವನ ಅವತಾರಗಳು. ಜೇಗೀಷವ್ಯ ಏಳನೇ ಕಲಿಯುಗದಲ್ಲಿ ಶಿವನ ಅವತಾರ. ದಧಿವಾಹ, ಋಷಭ, ಭೃಗು, ಉಗ್ರ, ಅತಿಸಮಾಖ್ಯಾತ, ಬಾಲಿ, ಗೌತಮ, ವೇದದರ್ಶಿ ಇವರುಗಳು ಕ್ರಮವಾಗಿ ಶಿವನ ಅವತಾರಗಳು. ಗೋಕರ್ಣ ಹದಿನಾರನೆಯ ಕಲಿಯುಗದ ಶಿವನ ಅವತಾರ. ಗುಹಾವಾಸ, ಶಿಖಂಡಧೃಕ್, ಯಜ್ಞಮಾಲಿ, ಅಟ್ಟಹಾಸ, ದಾರುಕ, ಉಗಲಿ ಇವರು ಮುಂದಿನ ಕಲಿಯುಗಗಳ ಅವತಾರಗಳು. ಮಹಾಯಾಮ, ಶೂಲೀ, ಡಿಂಡಮುಂಡೀಶ್ವರ, ಸಹಿಷ್ಣು ಸೋಮಶರ್ಮ, ನಕುಲೀಶ್ವರ - ಇವರು ಕ್ರಮವಾಗಿ ಮುಂದಿನ ಕಲಿಯುಗಗಳಲ್ಲಿ ಶಿವನ ಅವತಾರಗಳು.

ವೈವಸ್ವತ ಮನ್ವಂತರದಲ್ಲಿ ಪ್ರತಿಯುಗಚಕ್ರದ ಕೊನೆಯಲ್ಲಿ ಬರುವ ಕಲಿಯುಗಗಳಲ್ಲಿ ತ್ರಿಶೂಲಧರನಾದ ಶಿವನು ಇಪ್ಪತ್ತೆಂಟು ಅವತಾರಗಳನ್ನು ಮಾಡಿದ್ದಾನೆ. ಈ ಅವತಾರ ಸಂದರ್ಭದಲ್ಲಿ ಶಿವನಿಗೆ ಬಹಳ ಜನ ಶಿಷ್ಯರಿದ್ದರು. ಅವರ ಮನಸ್ಸು ಪ್ರಸನ್ನವಾಗಿತ್ತು. ಅವರಿಗೆ ಇಂದ್ರಿಯನಿಗ್ರಹವಿತ್ತು. ಶಿವನಲ್ಲಿ ಭಕ್ತಿಯಿತ್ತು. ಅವರು ಯೋಗವನ್ನು ಬಹಳ ಚೆನ್ನಾಗಿ ತಿಳಿದಿದ್ದರು.

ಅವರುಗಳು : ದುಂದುಭಿ, ಶತರೂಪ, ಋಚೀಕ, ಕೇತುಮಾನ್, ವಿಶೋಕ, ವಿಕೇತ, ವಿಶಾಖ, ಶಾತನಾಶನ, ಸುಮುಖ, ದುರ್ಮುಖ, ದುರ್ದಮ, ದುರತಿಕ್ರಮ, ಸನಕ, ಸನಾತನ, ಸನಂದನ, ಮಹಾಯೋಗಿಯಾದ ದಾಲ್ಭ್ಯ ದೊಡ್ಡಪ್ರಮಾಣದಲ್ಲಿ ಅಂತಸ್ಸತ್ವವುಳ್ಳ ಸುಧಾಮಾ, ವಿರಜಸ್, ಶಂಖಪಾಣಿ ಮತ್ತು ಅಜ. ಸಾರಸ್ವತ, ಮೋಘ, ಧನವಾಹ, ಸುವಾಹನ, ಕಪಿಲ, ಆಸುರಿ, ವೋಢು, ಪಂಚಶಿಖ, ಪರಾಶರ, ಗರ್ಗ, ಭಾರ್ಗವ, ಅಂಗೀರಸ, ಚಲಬಂಧು, ನಿರಾಮಿತ್ರ, ಕೇತುಶೃಂಗ, ಲಂಬೋದರ, ಲಂಬ, ವಿಕ್ರೋಶ, ಲಂಬಕ, ಶುಕ, ಸರ್ವಜ್ಞ, ಸಮಬುದ್ಧಿ, ಸಾಧ್ಯ, ಅಸಾಧ್ಯ, ಸುಧಾಮಾ, ಕಾಶ್ಯೇಪ, ವಸಿಷ್ಠ, ವಾರಿಜ, ಅತ್ರಿ, ಉಗ್ರ ಶ್ರವಣ ಸುವೈದ್ಯಕ, ಕುಣಿ, ಕುಣಿಬಾಹು, ಕುಶರೀರ, ಕುನೇತ್ರಕ, ಕಶ್ಯಪ, ಉಶನಸ್, ಚ್ಯವನ, ಬೃಹಸ್ಪತಿ, ಉಚ್ಚಾಸ್ಯ, ವಾಮದೇವ, ಮಹಾಕಾಲ, ಮಹಾನಿಲಿ, ವಾಚಶ್ರವಸ್, ಸುಕೇತ, ಶ್ಯಾವಾಶ್ವ ಸುಪಥೀಶ್ವರ ಹಿರಣ್ಯನಾಭ, ಕೌಶಿಲ್ಯ, ಆಕಾಕ್ಷು, ಕುದಭಿದ, ಸುಮಂತ್ರವರ್ಚಸ್, ಕಬಂಧ, ಕುಷಿಕಂಧರ, ಪ್ಲಕ್ಷ, ದರ್ವಾಯಣಿ, ಕೇತುಮಾನ್, ಗೌತಮ, ಭಲ್ಲಾಚಿ, ಮಧುಪಿಂಗ, ಶ್ವೇತಕೇತು, ತಪೋಧನ, ಉಷಿಧಾ, ಬೃಹದ್ರಕ್ಷ, ದೇವಲ, ಕವಿ, ಶಾಲಹೋತ್ರ, ಅಗ್ನಿವೇಶ್ಯ

ಯುವನಾಶ್ವ, ಶರದ್ವಸು, ಛಗಲ, ಕುಂಡಕರ್ಣ, ಪಂತ, ಪ್ರವಾಹಕ, ಉಲೂಕ, ವಿದ್ಯುತ್, ಶೂದ್ರಕ, ಆಶ್ವಲಾಯನ, ಅಕ್ಷಪಾದ, ಕುಮಾರ, ಉಲೂಕ, ವಸುವಾಹನ, ಕುಣಿಕ, ಗರ್ಗ, ಮಿತ್ರಕ, ರುರು - ಇವರುಗಳು ಶಿವನ ಎಲ್ಲ ಅವತಾರಗಳಲ್ಲಿ ಅವನ ಶಿಷ್ಯರು. ಇವರೆಲ್ಲರೂ ವಿಮಲರೂ, ಬ್ರಹ್ಮನಿಷ್ಠರೂ ಮತ್ತು ಜ್ಞಾನಯೋಗಪರಾಯಣರು. ಇವರು ಬ್ರಾಹ್ಮಣರ ಹಿತಕ್ಕಾಗಿ, ವೇದಸ್ಥಾಪನೆಯನ್ನು ಮಾಡುವುದಕ್ಕಾಗಿ ಅವತಾರ ಮಾಡುತ್ತಾರೆ. ಇವರನ್ನು ಸ್ಮರಿಸುವ, ನಮಸ್ಕರಿಸುವ, ಇವರಿಗೆ ತರ್ಪಣವನ್ನು ಕೊಡುವ ಜನರು ಬ್ರಹ್ಮವಿದ್ಯೆಯನ್ನು ಹೊಂದುತ್ತಾರೆ.

ಇಲ್ಲಿಯವರೆಗೆ ವೈವಸ್ವತ ಮನ್ವಂತರವನ್ನು ವಿಸ್ತಾರವಾಗಿ ವರ್ಣಿಸಲಾಯಿತು. ಮುಂದೆ ಸಾವರ್ಣ, ದಕ್ಷಸಾವರ್ಣ, ಬ್ರಹ್ಮಸಾವರ್ಣ, ಧರ್ಮಸಾವರ್ಣ, ರುದ್ರಸಾವರ್ಣ, ರೌಚ್ಯ, ಭೌತ್ಯ ಮನುಗಳು ಕ್ರಮವಾಗಿ ಮನ್ವಂತರಗಳ ಅಧಿಪತಿಗಳಾಗುತ್ತಾರೆ.

ಹಿಂದೆ ಆಗಿಹೋದ, ಈಗ ಇರುವ, ಮುಂದೆ ಆಗಲಿರುವ ಆಖ್ಯಾನಗಳಿಂದ ಪೋಷಿತವಾಗಿರುವ ಸೃಷ್ಟಿ, ಮನ್ವಂತರ ವಿಚಾರಗಳನ್ನು ಹಿಂದೆ ನಾರಾಯಣ ದೇವರು ಪ್ರವಚನ ಮಾಡಿದ್ದನು. ಅವನ್ನೇ ನಾನು ನಿಮಗೆ ಹೇಳಿದ್ದೇನೆ. ಇದನ್ನು ಓದುವ, ದ್ವಿಜೋತ್ತಮರಿಗೆ ಶ್ರವಣಮಾಡಿಸುವ ವ್ಯಕ್ತಿಯು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು ಬ್ರಹ್ಮಲೋಕದಲ್ಲಿ ಮಾನ್ಯಸ್ಥಾನವನ್ನು ಪಡೆಯುತ್ತಾನೆ. ಇದನ್ನು ದೇವಾಲಯದಲ್ಲಿ ಪಠಿಸಬೇಕು. ನದೀತೀರದಲ್ಲಿ ಸ್ನಾನಮಾಡಿ ಪಠಿಸಬೇಕು. ಪಠಿಸುವಾಗ, ಹೇಳುವಾಗ

**''ನಮೋ ದೇವಾದಿದೇವಾಯ ದೇವಾನಾಂ ಪರಮಾತ್ಮನೇ**
**ಪುರುಷಾಯ ಪುರಾಣಾಯ ವಿಷ್ಣವೇ ಪ್ರಭವಿಷ್ಣವೇ''**

ಎಂದು ಪುರುಷೋತ್ತಮನಾದ ನಾರಾಯಣನನ್ನು ಭಕ್ತಿಯಿಂದ ಪಠಿಸಬೇಕು.

* * *

## ಅಧ್ಯಾಯ-೫೪

**ಋಷಯ ಊಚುಃ :**

ಋಷಿಗಳು ಸೂತಪುರಾಣಿಕರನ್ನು ಕುರಿತು ಹೀಗೆ ಹೇಳಿದರು. ''ಪೂಜ್ಯರೇ! ಬ್ರಹ್ಮದೇವರ ಪ್ರಪಂಚ ಸೃಷ್ಟಿ, ಬ್ರಹ್ಮಾಂಡದ ವಿಸ್ತಾರ, ಮನ್ವಂತರಗಳ ವಿವರ -ಇವುಗಳನ್ನು ಚೆನ್ನಾಗಿ ಹೇಳಿರುವಿರಿ. ಧರ್ಮನಿಷ್ಠರಾದ, ಜ್ಞಾನಯೋಗದಲ್ಲಿ ಆಸಕ್ತರಾದ, ವರ್ಣಧರ್ಮನಿಷ್ಠರಾದ ಜನರಿಂದ ಜಗದೊಡೆಯನಾದ ಪರಮೇಶ್ವರನು ಆರಾಧಿಸಲ್ಪಡಬೇಕೆಂದೂ ಹೇಳಿರುವಿರಿ. ಸಂಸಾರದುಃಖವನ್ನು ನಿಶ್ಶೇಷವಾಗಿ ನಾಶಮಾಡುವ ಬ್ರಹ್ಮತತ್ವವನ್ನೂ ಉಪದೇಶಿಸಿರುವಿರಿ. ಈ ಉಪದೇಶದಿಂದ ಪರಬ್ರಹ್ಮನ ಸಾಕ್ಷಾತ್ಕಾರವನ್ನು ಸಾಧಿಸುವ ಭರವಸೆಯು ನಮಗೆ ಉಂಟಾಗಿದೆ. ನಾರಾಯಣನ ಸಾಕ್ಷಾದವತಾರವೇ ಆಗಿರುವ ಕೃಷ್ಣದ್ವೈಪಾಯನರಿಂದ ನೀವು ಎಲ್ಲ ಜ್ಞಾನವನ್ನು ಪಡೆದಿರುವಿರಿ. ಆದ್ದರಿಂದ ನಾವು ನಿಮ್ಮನ್ನು ಪುನಃ ಕೇಳುತ್ತೇವೆ.''

ಶೌನಕಾದಿ ಮುನಿಗಳ ಮಾತುಗಳನ್ನು ಕೇಳಿ ಸೂತರು ಏನನ್ನೋ ಹೇಳಲು ಹೊರಟರು. ಅಷ್ಟರಲ್ಲಿ ಭಗವಾನ್ ಕೃಷ್ಣದ್ವೈಪಾಯನರೇ ಅಲ್ಲಿಗೆ ಬಂದರು. ನೀಲಮೇಘದ ಕಾಂತಿಯನ್ನೂ, ಕಮಲಪತ್ರದಂತೆ ವಿಶಾಲವಾದ ಕಣ್ಣುಗಳನ್ನೂ ಹೊಂದಿದ್ದ ಜ್ಞಾನಿವರೇಣ್ಯರಾದ ವ್ಯಾಸರನ್ನು ನೋಡಿ ಆ ಮುನಿಗಳೆಲ್ಲರೂ ಎದ್ದು ನಿಂತು ನಮಸ್ಕರಿಸಿದರು. ರೋಮಹರ್ಷಣರೂ ಕೂಡ ಸಾಷ್ಟಾಂಗ ಪ್ರಣಾಮವನ್ನು ಮಾಡಿದರು. ವ್ಯಾಸರು ಅವರೆಲ್ಲರ ಕುಶಲವನ್ನು ವಿಚಾರಿಸಿದರು. ಅನಂತರ ಮುನಿಗಳು ವ್ಯಾಸರಿಗೆ ಯೋಗ್ಯವಾದ ಆಸನವನ್ನು ಏರ್ಪಡಿಸಿದರು. ಅನಂತರ ಸೂತರು ವ್ಯಾಸರಿಗೆ ನಮಸ್ಕರಿಸಿ ''ಈ ಮುನಿಗಳು ಶಾಂತರೂ, ತಪಸ್ವಿಗಳೂ, ಧರ್ಮನಿಷ್ಠರೂ ಆಗಿದ್ದಾರೆ. ಇವರಿಗೆ ಉಪದೇಶವನ್ನು ಕೇಳುವ ಅಪೇಕ್ಷೆ ಇದೆ. ಆದ್ದರಿಂದ ಹಿಂದೆ ವಿಷ್ಣು ಕೂರ್ಮರೂಪದಿಂದ ಮುನಿಗಳಿಗೆ ಉಪದೇಶಿಸಿದ, ನೀವು ನನಗೆ ಉಪದೇಶಿಸಿರುವ ವಿಮುಕ್ತಿಪ್ರದವಾದ ದಿವ್ಯವಾದ ತತ್ವವನ್ನು ದಯವಿಟ್ಟು ಈ ಶೌನಕಾದಿ ಮುನಿಗಳಿಗೆ ಉಪದೇಶಿಸಬೇಕು'' ಎಂದು ಪ್ರಾರ್ಥಿಸಿದರು. ಅನಂತರ ವ್ಯಾಸರು ರುದ್ರನನ್ನು ಶಿರಸಾ ನಮಿಸಿ ಮಾತನಾಡಿದರು.

**ವ್ಯಾಸ ಉವಾಚ :**

ಹಿಂದೆ ಯೋಗೀಶ್ವರರಾದ ಸನತ್ಕುಮಾರ ಮೊದಲಾದವರು ಪ್ರಾರ್ಥಿಸಿದಾಗ ಮಹಾರುದ್ರದೇವರು ಉಪದೇಶಿಸಿದ ತತ್ವವನ್ನೇ ನಾನು ನಿಮಗೆ ಉಪದೇಶಿಸುತ್ತೇನೆ. ಸನತ್ಕುಮಾರ ಮೊದಲಾದವರು ಶಿವನನ್ನು ಪ್ರಾರ್ಥಿಸಿದ ಸಂದರ್ಭ ಹೀಗಿದೆ :

ಸನತ್ಕುಮಾರ, ಸನಕ, ಸನಂದನ, ಅಂಗೀರಸ, ರುದ್ರ, ಭೃಗು, ಕಣಾದ, ಕಪಿಲ, ಗರ್ಗ, ವಾಮದೇವ, ಶುಕ್ರ, ವಸಿಷ್ಠ ಮನೋನಿಗ್ರಹವನ್ನು ಸಾಧಿಸಿದ್ದ ಇವರೆಲ್ಲರೂ ಒಮ್ಮೆ ಪರಸ್ಪರ ಚರ್ಚಿಸಿ, ತತ್ವಜ್ಞಾನವನ್ನು ಪಡೆಯುವ ಉದ್ದೇಶದಿಂದ ಪವಿತ್ರವಾದ ಬದರಿಕಾಶ್ರಮದಲ್ಲಿ

ಘೋರ ತಪಸ್ಸನ್ನು ಮಾಡಿದರು. ಆಗ ಅವರಿಗೆ ಯಮಧರ್ಮರಾಜನ ಮಗನೂ, ಮಹಾಯೋಗಿಯೂ ಆದ ನಾರಾಯಣಮುನಿಯ ಮತ್ತು ಅವರ ಜೊತೆ ಇದ್ದ ನರನ ದರ್ಶನವು ಆಯಿತು.

ಆಗ ಈ ಯೋಗಿಗಳು ವೇದೋಕ್ತವಾದ ಸ್ತುತಿಗಳಿಂದ ಯೋಗೀಶ್ವರನಾದ ನಾರಾಯಣನನ್ನು ಸ್ತುತಿಸಿ ಭಕ್ತಿಯಿಂದ ನಮಸ್ಕರಿಸಿದರು.

ಭಗವಾನ್ ನಾರಾಯಣ ಮುನಿಯು ಅವರ ಅಪೇಕ್ಷೆಯನ್ನು ತಿಳಿದು ಏಕೆ ತಪಸ್ಸನ್ನು ಮಾಡುತ್ತಿದ್ದೀರಿ ಎಂದು ವಿಚಾರಿಸಿದರು. ಸಂತುಷ್ಟರಾದ ಮುನಿಗಳು ವಿಶ್ವಾಂತರ್ಯಾಮಿಯೂ, ಸನಾತನನೂ ಆದ ನಾರಾಯಣದೇವರ ಆಗಮನ ಸಿದ್ಧಿಯ ಸೂಚಕವೆಂದು ಭಾವಿಸಿ ಹೀಗೆ ಮಾತನಾಡಿದರು.

''ಸಂಯಮವನ್ನು ಅಭ್ಯಾಸಮಾಡಿರುವ, ಬ್ರಹ್ಮವಾದಿಗಳಾದ ನಾವು ಪುರುಷೋತ್ತಮನಾದ ನಿನ್ನನ್ನೇ ನಂಬಿದ್ದೇವೆ, ಆಶ್ರಯಿಸಿದ್ದೇವೆ. ಪುರಾಣಪುರುಷನಾದ ನೀನು ಗುಹ್ಯವೂ, ಉತ್ತಮವೂ ಆದ ಎಲ್ಲವನ್ನೂ ತಿಳಿದಿರುವಿ. ಬೇರೆ ಯಾರೂ ತತ್ವಗಳನ್ನು ತಿಳಿದಿಲ್ಲ. ನೀನು ನಮ್ಮ ಸಂಶಯಗಳನ್ನು ದಯವಿಟ್ಟು ಪರಿಹರಿಸಬೇಕು.

ಈ ಇಡೀ ಜಗತ್ತಿನ ಕಾರಣ ಯಾರು ? ಯಾರು ಸದಾ ಸಂಸಾರಿಯಾಗಿದ್ದಾನೆ ? ಆತ್ಮಾ ಯಾರು ? ಯಾವುದು ಮುಕ್ತಿ ? ಸಂಸಾರಕ್ಕೆ ಏನು ಕಾರಣ ? ಸಂಸಾರದ ಸ್ವರೂಪ ಏನು ? ಎಲ್ಲವನ್ನೂ ನೋಡುವವನು ಯಾರು ? ಪರಬ್ರಹ್ಮ ಯಾರು ? ಈ ಪ್ರಶ್ನೆಗಳಿಗೆ ದಯವಿಟ್ಟು ಉತ್ತರವನ್ನು ತಿಳಿಸಬೇಕು''

-ಹೀಗೆ ಹೇಳಿ ಶೌನಕಾದಿಮುನಿಗಳು ಪುರುಷೋತ್ತಮನನ್ನು ನೋಡಿದಾಗ ಅವನು ತನ್ನ ತಾಪಸವೇಷವನ್ನು ಬಿಟ್ಟು ಎದೆಯಲ್ಲಿ ಶ್ರೀವತ್ಸವನ್ನೂ, ಕೈಗಳಲ್ಲಿ ಶಂಖ, ಚಕ್ರ, ಗದೆ, ಶಾರ್ಙ್ಗಗಳನ್ನೂ ಧರಿಸಿ, ಶುದ್ಧಬಂಗಾರದ ವರ್ಣವುಳ್ಳವನಾಗಿ, ಲಕ್ಷ್ಮೀಸಹಿತನಾಗಿ ಕಾಣಿಸಿದನು. ಅವನ ಜೊತೆಗಿದ್ದ ನರ ಆಗ ಅಲ್ಲಿ ಇರಲಿಲ್ಲ.

ಆಗ ಅಲ್ಲಿಗೆ ಚಂದ್ರಶೇಖರನಾದ ಶಿವನು ಪ್ರಸನ್ನಮುಖನಾಗಿ ಅಲ್ಲಿಗೆ ಬಂದನು. ಶಿವನನ್ನು ನೋಡಿ ಮುನಿಗಳು ಸಂತೋಷದಿಂದ, ಭಕ್ತಿಯಿಂದ ಅವನನ್ನು

ಜಯೇಶ್ವರ ಮಹಾದೇವ ಜಯ ಭೂತಪತೇ ಶಿವ ।
ಜಯಾಶೇಷ ಮುನೀಶಾನ ತಪಸಾಭಿಪ್ರಪೂಜಿತ
ಸಹಸ್ರಮೂರ್ತೇ ವಿಶ್ವಾತ್ಮನ್ ಜಗದ್ಯಂತ್ರಪ್ರವರ್ತಕ ।
ಜಯಾನಂತ ಜಗಜ್ಜನ್ಮತ್ರಾಣಸಂಹಾರಕಾರಕ ॥

ಸಹಸ್ರಚರಣೇಶಾನ ಶಂಭೋ ಯೋಗೀಂದ್ರವಂದಿತ ।
ಜಯಾಂಬಿಕಾಪತೇ ದೇವ ನಮಸ್ತೇ ಪರಮೇಶ್ವರ ॥

-ಎಂದು ಸ್ತುತಿಸಿದರು. ಭಕ್ತವತ್ಸಲನಾದ ಭಗವಾನ್ ತ್ರ್ಯಂಬಕನು ನಾರಾಯಣನನ್ನು ಆಲಿಂಗಿಸಿ ಹೀಗೆ ಕೇಳಿದನು.

''ಪುಂಡರೀಕಾಕ್ಷ! ಬ್ರಹ್ಮವಾದಿಗಳಾದ ಮುನೀಂದ್ರರು ಏಕೆ ಇಲ್ಲಿಗೆ ಬಂದಿದ್ದಾರೆ. ಇಲ್ಲಿ ನಾನು ಏನು ಮಾಡಬೇಕು.''

ನಾರಾಯಣನು ಹೇಳಿದನು- ''ದೇವ! ಈ ಮುನಿಗಳೆಲ್ಲರೂ ಕಲ್ಮಷವನ್ನು ದೂರಮಾಡಿಕೊಂಡಿರುವ ತಪಸ್ವಿಗಳು, ಯಥಾರ್ಥಜ್ಞಾನವನ್ನು ಬಯಸಿ ಬಂದಿರುವ ಇವರಿಗೆ ನೀನು ನನ್ನ ಸನ್ನಿಧಿಯಲ್ಲಿ ದಿವ್ಯತತ್ವಗಳನ್ನು ದಯವಿಟ್ಟು ಉಪದೇಶಿಸು. ಶಿವ! ನಿನ್ನ ನಿಜಸ್ವರೂಪವನ್ನು ನೀನೇ ತಿಳಿದಿರುವಿ. ಬೇರೆ ಯಾರೂ ತಿಳಿದಿಲ್ಲ. ಈ ಮುನಿಗಳಿಗೆ ನೀನೇ ನಿನ್ನ ಸ್ವರೂಪದ ಪ್ರದರ್ಶನವನ್ನು ಮಾಡಿಸು.'' ಹೀಗೆ ಹೇಳಿ ನಾರಾಯಣನು ಶಿವನನ್ನು ನೋಡುತ್ತಾ ಮುನಿಗಳಿಗೆ ಹೇಳಿದನು-

''ಶೂಲಧಾರಿಯಾದ ಶಿವನ ದರ್ಶನದಿಂದ ನೀವು ಕೃತಾರ್ಥರಾಗಿದ್ದೀರಿ. ನನ್ನ ಸನ್ನಿಧಿಯಲ್ಲಿ ಶಿವನು ನಿಮಗೆ ತತ್ವವನ್ನು ಉಪದೇಶಿಸುವನು.'' ನಾರಾಯಣನ ಮಾತನ್ನು ಕೇಳಿ ಸನತ್ಕುಮಾರ ಮೊದಲಾದ ಮುನಿಗಳು ಶಿವನನ್ನು ನಮಸ್ಕರಿಸಿ ಕೇಳಲು ಉದ್ಯುಕ್ತರಾದರು. ಆಗ ಒಂದು ಅದ್ಭುತ ನಡೆಯಿತು. ಆಕಾಶದಿಂದ ದಿವ್ಯವೂ, ವಿಮಲವೂ, ಅಚಿಂತ್ಯವೂ ಆದ ಆಸನವೊಂದು ಶಿವನಿಗಾಗಿ ಇಳಿದುಬಂದಿತು. ಶಿವನು ವಿಷ್ಣುವಿನ ಜೊತೆ ಆ ಆಸನದ ಮೇಲೆ ಕುಳಿತುಕೊಂಡನು. ಆಗ ಈ ಇಡೀ ಜಗತ್ತನ್ನು ತುಂಬುವಷ್ಟು ತೇಜಸ್ಸು ಶಿವನಿಂದ ಹೊರ-ಹೊಮ್ಮುತ್ತಿತ್ತು. ಆ ಆಸನದಲ್ಲಿ ವಿಷ್ಣುವಿನ ಜೊತೆ ಕುಳಿತಿದ್ದ ಶಿವನನ್ನು ಮುನಿಗಳೆಲ್ಲರೂ ನೋಡಿದರು. ತತ್ವದ ಬಗ್ಗೆ ಪ್ರಶ್ನಿಸಿದ ಆ ಮುನಿಗಳನ್ನು ಕುರಿತು ಶಿವನು ನಾರಾಯಣನನ್ನು ನೋಡುತ್ತಾ ಉಪದೇಶಿಸಿದನು. ಆ ಉಪದೇಶವನ್ನು ಈಗ ನಾನು ನಿಮಗೆ ಹೇಳುತ್ತೇನೆ. ಶಾಂತ ಮನಸ್ಸಿನಿಂದ ಕೇಳಿರಿ.

* * *

## ಅಧ್ಯಾಯ-೫೫

### ಈಶ್ವರ ಉವಾಚ :

ನಾನು ನಿಮಗೆ ಉಪದೇಶಿಸಲಿರುವ ತತ್ವಗಳು ಗುಹ್ಯ, ಸನಾತನ. ಇದು ಸಂಪೂರ್ಣವಾಗಿ ಹೇಳಲು ಆಗುವುದಿಲ್ಲ. ಮಹಾಪ್ರಯತ್ನ ಮಾಡುವ ದ್ವಿಜರೂ, ದೇವತೆಗಳೂ ಕೂಡ ಪೂರ್ಣವಾಗಿ ಇದನ್ನು ತಿಳಿಯುವುದಿಲ್ಲ. ಈ ತತ್ವಗಳನ್ನು ತಿಳಿದು ಆಶ್ರಯಿಸಿದ ಹಿಂದಿನ ಸಾಧಕರೂ ಬ್ರಹ್ಮನನ್ನು ತಲುಪಿದ್ದಾರೆ. ಅವರಿಗೆ ಪುನಃ ಸಂಸಾರವು ಸಂಭವಿಸಿಲ್ಲ. ಸಂಭವಿಸುವುದಿಲ್ಲ. ಈ ತತ್ವಗಳು ರಹಸ್ಯಗಳ ರಹಸ್ಯ. ಮಹಾಪ್ರಯತ್ನದಿಂದ ಇದನ್ನು ರಕ್ಷಿಸಬೇಕು. ಭಕ್ತರೂ ಬ್ರಹ್ಮವಾದಿಗಳೂ ಆದ ನಿಮಗೆ ಈಗ ಈ ತತ್ವಗಳನ್ನು ಉಪದೇಶಿಸುವೆ.

### ಉಪದೇಶ :

ಪರಮಾತ್ಮ ಸ್ವತಂತ್ರ, ಸ್ವಚ್ಛ, ಶುದ್ಧ, ಸೂಕ್ಷ್ಮ, ಸನಾತನ, ಸರ್ವಾಂತರ್ಯಾಮಿ, ಚಿತ್ಸ್ವರೂಪ. ತಮೋಗುಣವಿಲ್ಲದವನು. ಅವನೇ ಪುರುಷ ಅವನೇ ಪ್ರಾಣ. ಅವನೇ ಮಹೇಶ್ವರ. ಅವನೇ ಕಾಲ, ಅವನೇ ಪ್ರಕೃತಿ - ಹೀಗೆ ಶ್ರುತಿಯು ಹೇಳುತ್ತದೆ. (ಪ್ರಾಣ ಮೊದಲಾದ ಸಕಲರೂ ಪರಮಾತ್ಮನಿಗೆ ಅಧೀನ ಎಂದು ಮೇಲಿನ ಮಾತಿನ ಅರ್ಥ.)

ಈ ಪರಮಾತ್ಮನಿಂದಲೇ ಜಗತ್ತಿನ ಸೃಷ್ಟಿಯಾಗುತ್ತದೆ. ಅವನಿಂದಲೇ, ಅವನಲ್ಲೇ ಲಯವನ್ನೂ ಹೊಂದುತ್ತದೆ. ಮಾಯಾನಿಯಾಮಕನಾದದುದರಿಂದ ಅವನಿಗೆ ಮಾಯಾವಿ ಎಂದು ಹೆಸರು. ತನ್ನ ಇಚ್ಛೆಯಿಂದಲೇ ಅವನು ಅನೇಕ ರೂಪಗಳನ್ನು ಪಡೆದುಕೊಳ್ಳುತ್ತಾನೆ. ಇವನಿಗೆ ಸಂಸಾರವಿಲ್ಲ. ಇವನು ಪೃಥಿವೀ ಅಲ್ಲ, ಜಲ ಅಲ್ಲ, ತೇಜಸ್ ಅಲ್ಲ, ಪವನ ಅಲ್ಲ; ಆಕಾಶ ಅಲ್ಲ. ಪ್ರಾಣ ಅಲ್ಲ, ಮನಸ್ ಅಲ್ಲ, ಅವ್ಯಕ್ತ ಅಲ್ಲ, ಶಬ್ದ ಅಲ್ಲ, ಸ್ಪರ್ಶ ಅಲ್ಲ. ರೂಪ, ರಸ, ಗಂಧಗಳೂ ಅಲ್ಲ. ಅಹಂಕಾರವಲ್ಲ. ವಾಕ್ ಅಲ್ಲ. ಪಾಣಿ-ಪಾದಗಳು ಅಲ್ಲ. ಪಾಯು-ಉಪಸ್ಥಗಳು ಅಲ್ಲ. ಕರ್ತೃ ಅಲ್ಲ, ಭೋಕ್ತೃ ಅಲ್ಲ, ಪ್ರಕೃತಿ ಅಲ್ಲ, ಜೀವ ಅಲ್ಲ. ಮಾಯಾ ಅಲ್ಲ. ಪ್ರಕಾಶ-ಕತ್ತಲುಗಳಿಗೆ ಹೇಗೆ ಐಕ್ಯವಿಲ್ಲವೋ ಹಾಗೆ ಪ್ರಪಂಚ-ಪರಮಾತ್ಮರಿಗೆ ಐಕ್ಯವಿಲ್ಲ. ಬಿಸಿಲು-ನೆರಳುಗಳು ಹೇಗೆ ಪರಸ್ಪರ ಭಿನ್ನವೋ ಹಾಗೆ ಪ್ರಪಂಚ ಪರಮಾತ್ಮರು ಪರಸ್ಪರ ಭಿನ್ನರಾಗಿದ್ದಾರೆ.

ಪರಮಾತ್ಮನಿಗೆ ಸೃಷ್ಟಿಯಿಲ್ಲ. ಅವನಿಗೆ ಸೃಷ್ಟಿ ಇರುವುದಾದರೆ ಅವನಿಗೆ ವಿಕಾರವು ಸಂಭವಿಸಬೇಕಾಗುತ್ತದೆ. ವಿಕಾರಿಯಾದ ಅವನಿಗೆ ಮುಕ್ತಿಯು ಎಂದೂ ಆಗಲಾರದು. ಮುಕ್ತರಾದ ಮುನಿಗಳು ಪರಮಾತ್ಮನನ್ನು ವಿಕಾರಹೀನ, ದ್ವಂದ್ವಹೀನ, ಅಕ್ಷಯ ಎಂದು ಕಂಡಿದ್ದಾರೆ.

### ಜೀವಸ್ವರೂಪ :

ಜೀವನು ನಾನೇ ಕರ್ತೃ, ಸುಖೀ, ದುಃಖೀ, ನಾನು ಕೃಶ, ಸ್ಥೂಲ ಎಂದು ಭಾವಿಸಿದ್ದಾನೆ. ಜಡವಾದ ಮನಸ್ಸಿನ ಸಂಬಂಧ ಮತ್ತು ದೇಹಾತ್ಮ ಬುದ್ಧಿಯಿಂದ ಈ ಅನ್ಯಥಾಜ್ಞಾನವು

ಜೀವಾತ್ಮನಿಗೆ ಉಂಟಾಗಿದೆ. ಜೀವಾತ್ಮನ ಸ್ವರೂಪವು ವಸ್ತುತಃ ಅಪ್ರಾಕೃತ. ಅವನು ಭೋಕ್ತೃ ನಾಶರಹಿತ. ಜ್ಞಾನಸ್ವರೂಪ. ಆದ್ದರಿಂದ ದೇಹಧಾರಿಗಳಾದ ಜೀವಾತ್ಮರೆಲ್ಲರಿಗೂ ಅಜ್ಞಾನ-ದಿಂದಲೇ ಸಂಸಾರವು ಇದೆ. ಅಜ್ಞಾನ-ಅನ್ಯಥಾಜ್ಞಾನಗಳಿಂದ ಜ್ಞಾನಸ್ವರೂಪನಾದ ಆತ್ಮನಿಗೆ ಪ್ರಕೃತಿ ಸಂಬಂಧವು ಇದೆ. ಅಹಂಕಾರ ಮೂಲಕವಾದ ಅವಿವೇಕದಿಂದ ನಾನು ಸ್ವತಂತ್ರಕರ್ತೃ ಎಂದು ಭಾವಿಸಿದ್ದಾನೆ.

## ಜ್ಞಾನಿಗಳ ಅರಿವು :

ಜ್ಞಾನಿಗಳು ಕಾರ್ಯ-ಕಾರಣರೂಪದ, ವ್ಯಕ್ತ-ಅವ್ಯಕ್ತ ರೂಪದ ಪ್ರಕೃತಿಯನ್ನು ಜಗತ್ತಿನ ಕಾರಣ ಎಂದು ಕಂಡಿದ್ದಾರೆ. ಪುರುಷನನ್ನು ಕಾರಣ ಎಂದು ಕಂಡಿದ್ದಾರೆ. ಆಕಾಶದಂತೆ ನಿರ್ವಿಕಾರನಾದ ಪರಮಾತ್ಮನು ಸೃಷ್ಟಿಗಾಗಿ ಪ್ರಕೃತಿ ಸಂಬಂಧವನ್ನು ಹೊಂದಿದ್ದಾನೆ.

## ಅಜ್ಞಾನಿಗಳ ಸ್ಥಿತಿ :

ಇಂತಹ ಪರಮಾತ್ಮನನ್ನು ಜನರು ಸರಿಯಾಗಿ ತಿಳಿದಿರುವುದಿಲ್ಲ. ಇಂತಹವರು ಅನಾತ್ಮನನ್ನೇ ಆತ್ಮ ಎಂದು ತಿಳಿದಿರುತ್ತಾರೆ. ದೇಹವನ್ನೇ ಆತ್ಮ ಎಂದು ತಿಳಿದಿರುತ್ತಾರೆ. ಆದ್ದರಿಂದ ಸುಖ-ದುಃಖ ಮೊದಲಾದ ದ್ವಂದ್ವಗಳು ಇವರಿಗೆ ಸಂಭವಿಸಿವೆ. ರಾಗ-ದ್ವೇಷ ಮೊದಲಾದ ದೋಷಗಳು ಜೀವಾತ್ಮರಿಗೆ ಭ್ರಾಂತಿಯಿಂದ ಸಂಭವಿಸಿವೆ. ಪುಣ್ಯ-ಪಾಪ-ಕರ್ಮಗಳು ಜೀವಾತ್ಮರಿಗೆ ಇರುವ ದೊಡ್ಡ ದೋಷ. ಈ ದೋಷದಿಂದಲೇ ಎಲ್ಲ ಜೀವರಿಗೂ ದೇಹವು ಬಂದಿದೆ.

## ಪರಮಾತ್ಮ ಸ್ವರೂಪ :

ಆತ್ಮನು ಯಾವಾಗಲೂ ನಿರ್ವಿಕಾರ. ಅವನಲ್ಲಿ ದೋಷಗಳಿಲ್ಲ. ಆದ್ದರಿಂದ ಜ್ಞಾನಿಗಳು ಪರಮಾರ್ಥ ವಸ್ತು ಒಂದೇ ಎಂದು 'ಅದ್ವೈತಂ ಪರಮಾರ್ಥತಃ' ಎಂಬ ಮಾತಿನಿಂದ ಹೇಳುತ್ತಾರೆ. ಹೊಗೆಯ ಸಂಪರ್ಕದಿಂದ ಆಕಾಶವು ಮಲಿನವಾಗುವುದಿಲ್ಲವಷ್ಟೆ! ಹಾಗೆಯೇ ಪರಮಾತ್ಮನಿಗೆ ಜಗತ್ತಿನ ಸಂಬಂಧವಿದ್ದರೂ ಅದರಿಂದ ಏನೂ ಹಾನಿಯಾಗುವುದಿಲ್ಲ. ಯಾವುದೇ ಉಪಾಧಿಗಳ ಸಂಬಂಧವಿಲ್ಲದ ಸ್ಫಟಿಕಶಿಲೆಯು ತನ್ನದೇ ಪ್ರಭೆಯಿಂದ ಪ್ರಕಾಶಿಸುವಂತೆ ಉಪಾಧಿಸಂಬಂಧವಿಲ್ಲದ ಪರಮಾತ್ಮ ತನ್ನದೇ ಪ್ರಭೆಯಿಂದ ಪ್ರಕಾಶಿಸುತ್ತಾನೆ. ಸ್ವಭಾವತಃ ಕೂಟಸ್ಥನೂ, ನಿರ್ಗುಣನೂ, ವ್ಯಾಪಿಯೂ ಆದ ಪರಮಾತ್ಮನನ್ನು ಪ್ರಯೋಜನ ದೃಷ್ಟಿಯುಳ್ಳ ಜನರು ಸಗುಣನನ್ನಾಗಿ ಕಾಣುತ್ತಾರೆ. ಕೆಂಪುಬಣ್ಣದ ಪದಾರ್ಥದ ಸಂಬಂಧದಿಂದ ಶುದ್ಧವಾದ ಸ್ಫಟಿಕಶಿಲೆಯನ್ನೇ ಕೆಂಪು ಎಂದು ಕಾಣುವಂತೆ. ಮುಮುಕ್ಷುಗಳು ಪರಮಾತ್ಮನನ್ನು ಅಕ್ಷರ, ಶುದ್ಧ, ನಿತ್ಯ, ಅವ್ಯಯ ಎಂದು ಉಪಾಸಿಸಬೇಕು. ಈ ಉಪಾಸನೆಯ ಸಾಮರ್ಥ್ಯವನ್ನು ಶ್ರವಣ, ಮನನಗಳಿಂದ ಗಳಿಸಬೇಕು.

ಶ್ರದ್ಧಾವಂತನಾದ ಯೋಗಿಯ ಮನಸ್ಸಿನಲ್ಲಿ ಪರಮಾತ್ಮನ ದರ್ಶನವು ಯಾವಾಗಲೂ ಆಗುತ್ತಿದ್ದರೆ ಅಂತಹ ಯೋಗಿಯು ಪರಮ-ಆತ್ಮನೇ ಆಗುತ್ತಾನೆ. ಪರಮಾತ್ಮನು ಎಲ್ಲ ಭೂತಗಳಿಗೂ ಆಧಾರವೆಂದು, ಎಲ್ಲ ಭೂತಗಳಲ್ಲಿ ಪರಮಾತ್ಮನು ಇದ್ದಾನೆ ಎಂದೂ ಕಾಣಬಲ್ಲ ಯೋಗಿಗೆ ಬ್ರಹ್ಮ ಎಂದು ಹೆಸರು. ಸಮಾಧಿಸ್ಥನಾದ ಯೋಗಿಯು ಪರಮಾತ್ಮನನ್ನು ಮಾತ್ರ ಕಾಣುತ್ತಾ ಬೇರೆ ಏನನ್ನೂ ಕಾಣದಿದ್ದರೆ ಆಗ ಅವನು ಪರಮಾತ್ಮನೊಂದಿಗೆ ಒಂದಾಗಿದ್ದಾನೆ ಎಂದು ಹೇಳುತ್ತಾರೆ.

ಸಾಧಕನ ಹೃದಯದಲ್ಲಿರುವ ಕಾಮಗಳೆಲ್ಲವೂ ಹೊರಟುಹೋದಾಗ ಅವನು ಅಮೃತ ಆಗಿ ಕ್ಷೇಮವನ್ನು ಹೊಂದುತ್ತಾನೆ. ಅವನೇ ಪಂಡಿತ. ವಿಸ್ತಾರವಾದ ಈ ಭೂತಪ್ರಪಂಚವು ಬ್ರಹ್ಮನೊಬ್ಬನಲ್ಲೇ ಇದೆ ಎಂದು ತಿಳಿದವನು ಬ್ರಹ್ಮ ಎಂದು ಕರೆಸಿಕೊಳ್ಳಲು ಅರ್ಹ-ನಾಗುತ್ತಾನೆ. ಸರ್ವೋತ್ತಮ ವಸ್ತು ಪರಮಾತ್ಮನೊಬ್ಬನೇ ಎಂಬ ಅರಿವು ಬಂದಾಗ ಜಗತ್ತೆಲ್ಲವೂ ಅವನ (ಪರಮಾತ್ಮನ) ಇಚ್ಛೆಗೆ ಅಧೀನ ಎಂದು ತಿಳಿದು ಸಂತೋಷವನ್ನು ಪಡೆಯುತ್ತಾನೆ. ಜನ್ಮ, ಜರಾ, ದುಃಖ, ವ್ಯಾಧಿಗಳನ್ನು ಶಾಶ್ವತವಾಗಿ ಪರಿಹರಿಸುವ ಏಕೈಕ ಔಷಧ ಬ್ರಹ್ಮಜ್ಞಾನ. ಈ ಜ್ಞಾನವು ಯಾರಿಗೆ ಉಂಟಾಗುವುದೋ ಅವನಿಗೆ ಶಿವ ಎಂದು ಹೆಸರು. ಇಂತಹ ಜ್ಞಾನವು ಉಂಟಾದಾಗ ನದಿಗಳು-ನದಗಳು, ಸಮುದ್ರದೊಂದಿಗೆ ಸೇರಿಹೋಗುವಂತೆ ಜೀವಾತ್ಮನು ಪರಮಾತ್ಮನೊಂದಿಗೆ ಏಕತ್ವವನ್ನು ಹೊಂದುತ್ತಾನೆ= ಸೇರಿಹೋಗುತ್ತಾನೆ. ಅರ್ಥಾತ್ ತನ್ನ ಅಸ್ತಿತ್ವವನ್ನು ಪ್ರತ್ಯೇಕವಾಗಿ ತೋರಿಸಿಕೊಳ್ಳದೆ ಪರಮಾತ್ಮನಿಗೆ ಅಧೀನವಾಗಿ ಇರುತ್ತಾನೆ. ಆದ್ದರಿಂದ ಜ್ಞಾನವೇ ಮುಖ್ಯ, ಭೌತಪ್ರಪಂಚ ಅಲ್ಲ, ಲೋಕದಲ್ಲಿ ಅಜ್ಞಾನವು ವಿಜ್ಞಾನವನ್ನು ಆವರಿಸಿದೆ. ಆದ್ದರಿಂದ ಎಲ್ಲರಿಗೂ ಮೋಹ. ವಿಜ್ಞಾನವು ನಿರ್ಮಲ, ಸೂಕ್ಷ್ಮ, ಏಕವಿಧ, ವ್ಯತ್ಯಾಸರಹಿತ.

ನಿಮಗೆ ಇಲ್ಲಿಯವರೆಗೆ ಹೇಳಲ್ಪಟ್ಟ ವಿಷಯಗಳಿಗೆ ಸಾಂಖ್ಯ ಎಂದು ಹೆಸರು. ಇದು ವೇದಾಂತದ ಸಾರ. ಇದನ್ನು ತಿಳಿಯಲು ಚಿತ್ತೈಕಾಗ್ರತೆ ಮುಖ್ಯವಾದ ಸಾಧನ. ಅದೇ ಯೋಗ. ಈ ಯೋಗದಿಂದ ಜ್ಞಾನವು, ಜ್ಞಾನದಿಂದ ಈ ಯೋಗವು ಕ್ರಮವಾಗಿ ವೃದ್ಧಿಸುತ್ತವೆ. ಈ ಯೋಗ ಮತ್ತು ಜ್ಞಾನಗಳನ್ನು ಸಾಧಿಸಿದವನಿಗೆ ಸಾಧಿಸಬೇಕಾದದ್ದು ಇನ್ನೇನೂ ಇರುವುದಿಲ್ಲ. ಕೇವಲ ಯೋಗಿಗಳು ಯೋಗದಿಂದ ಏನನ್ನು ಪಡೆಯುತ್ತಾರೋ ಅದನ್ನು ಸಾಂಖ್ಯರು ಸಾಂಖ್ಯದಿಂದ ಪಡೆಯುತ್ತಾರೆ. ಸಾಂಖ್ಯ-ಯೋಗಗಳ ಗುರಿ ಒಂದೇ ಎಂದು ತಿಳಿದವನು ತತ್ವಜ್ಞಾನಿ.

ಸಾಂಖ್ಯಯೋಗವನ್ನು ಬಿಟ್ಟು ಅಣಿಮಾ ಮೊದಲಾದ ಯೋಗಸಿದ್ಧಿಗಳಿಂದ ಭೌತ-ಸಂಪತ್ತಿನ ಭೋಗದಲ್ಲಿ ಆಸಕ್ತಿ ಹೊಂದಿದವರು ಮಂದಮತಿಗಳು. ಅವರು ಅದರಲ್ಲೇ ಮುಳುಗುತ್ತಾರೆ. ಜ್ಞಾನಯೋಗದಲ್ಲಿ ಆಸಕ್ತರು ಭೌತ ಸಂಪತ್ತಿಗಿಂತ ಶ್ರೇಷ್ಠವಾದ ದಿವ್ಯವಾದ ಸಂಪತ್ತನ್ನು ಮುಕ್ತಿಯ ನಂತರ ಪಡೆಯುತ್ತಾರೆ.

ನಾನೇ ಈ ಪರಮಾತ್ಮ, ಮಾಯಾವೀ, ಪರಮೇಶ್ವರ, ಸರ್ವಾತ್ಮಾ, ಸರ್ವತೋಮುಖ ಎಂದು ಸಮಸ್ತ ವೇದಗಳೂ ಪ್ರತಿಪಾದಿಸುತ್ತವೆ. ನಾನು ಸರ್ವರೂಪ, ಸರ್ವರಸ, ಸರ್ವಗಂಧ, ಅಜರ, ಅಮರ, ನನ್ನ ಕೈಕಾಲುಗಳು ಎಲ್ಲ ಕಡೆ ವ್ಯಾಪಿಸಿವೆ. ಅರ್ಥಾತ್ ನನಗೆ ಅಗಮ್ಯವಾದ ಸ್ಥಳವಿಲ್ಲ. ಎಟುಕದ ವಸ್ತುವಿಲ್ಲ. ನಾನು ಸರ್ವಾಂತರ್ಯಾಮೀ, ಸನಾತನ. ನಾನು ಕೈ ಕಾಲುಗಳಿಲ್ಲದವನು. ಆದರೂ ವೇಗದಿಂದ ಸಾಗುತ್ತೇನೆ. ಎಲ್ಲವನ್ನು ತೆಗೆದುಕೊಳ್ಳುತೇನೆ. ಕಣ್ಣಿಲ್ಲದೆ ನೋಡುತ್ತೇನೆ. ಕಿವಿಯಿಲ್ಲದೆ ಕೇಳುತ್ತೇನೆ.

**ಅಪಾಣಿಪಾದೋ ಜವನೋ ಗೃಹೀತಾ ಹೃದಿಸಂಸ್ಥಿತಃ ।**
**ಅಚಕ್ಷುರಪಿ ಪಶ್ಯಾಮಿ ತಥಾಕರ್ಣಃ ಶೃಣೋಮ್ಯಹಮ್ ॥**

ಅರ್ಥಾತ್ ನಾನು ಯಾವ ಸಾಧನಗಳನ್ನು ಅವಲಂಬಿಸಿಲ್ಲ. ಸ್ವಯಂ ಎಲ್ಲವನ್ನು ಮಾಡಬಲ್ಲೆನು. ನಾನು ಎಲ್ಲವನ್ನೂ ತಿಳಿದಿದ್ದೇನೆ. ನನ್ನನ್ನು ಯಾರೂ ಪೂರ್ಣವಾಗಿ ತಿಳಿದಿಲ್ಲ. ತತ್ವಜ್ಞಾನಿಗಳು ನನ್ನನ್ನು ಪೂರ್ಣಪುರುಷ ಎಂದು ಹೇಳುತ್ತಾರೆ. ಸೂಕ್ಷ್ಮದರ್ಶಿಗಳು ನನ್ನ ನಿರ್ಗುಣವೂ, ಅಮಲವೂ ಆದ ಸ್ವರೂಪಕ್ಕೆ ನನ್ನ ಅತುಲವಾದ ಐಶ್ವರ್ಯವೇ ಕಾರಣ ಎಂದು ತಿಳಿದಿದ್ದಾರೆ. ದೇವತೆಗಳೂ ಕೂಡ ನನ್ನ ಮಾಯೆಯಿಂದ ಮೋಹಿತರಾಗಿ ಯಾವುದನ್ನು ತಿಳಿದಿಲ್ಲವೋ ಅದನ್ನು ಹೇಳುತ್ತೇನೆ. ಬ್ರಹ್ಮವಾದಿಗಳಾದ ನೀವೆಲ್ಲರೂ ಕೇಳಿರಿ.

ಮಾಯೆಯನ್ನು ಮೀರಿದ ನಾನು ಎಲ್ಲರಿಗೂ ಗೋಚರನಲ್ಲ. ಆದರೂ ನಾನು ಈ ಜಗತ್ತಿನ ಪ್ರೇರಕ. ತತ್ವಜ್ಞಾನಿಗಳು ಮಾತ್ರ ನನ್ನನ್ನು ಪ್ರವೇಶಿಸಿ ಸಾಯುಜ್ಯವನ್ನು ಪಡೆಯುತ್ತಾರೆ. ನನ್ನ ಮಾಯೆಯನ್ನು ದಾಟಿದವರಿಗೆ ಮುಕ್ತಿಯು ಲಭಿಸುತ್ತದೆ. ಅವರಿಗೆ ಪುನಃ ಎಂದೂ ಸಂಸಾರವಿಲ್ಲ. ಇದೇ ಯೋಗಸಹಿತವಾದ ಸಾಂಖ್ಯ. ಇದೇ ವಿಜ್ಞಾನ. ಬ್ರಹ್ಮವಾದಿಗಳು ಇದನ್ನು ಯೋಗಿಗಳಾದ ಪುತ್ರರಿಗೆ, ಶಿಷ್ಯರಿಗೆ ಉಪದೇಶಿಸಬೇಕು.

* * *

# ಬ್ರಹ್ಮ

ಅಧ್ಯಾಯ-೫೬

**ಈಶ್ವರ ಉವಾಚ :**

ಅವ್ಯಕ್ತನಾದ ಬ್ರಹ್ಮನಿಂದ ಕಾಲ, ಪ್ರಧಾನ ಮತ್ತು ಪುರುಷರ ಅಭಿವ್ಯಕ್ತಿಯಾಗಿದೆ. ಈ ಮೂರು ತತ್ತ್ವಗಳಿಂದ ಈ ಜಗತ್ತು ಹುಟ್ಟಿದೆ. ಆದ್ದರಿಂದ ಜಗತ್ತು ಬ್ರಹ್ಮಮಯ. ಈ ಬ್ರಹ್ಮನಿಗೆ ಎಲ್ಲ ಕಡೆಯೂ ಕೈ, ಕಾಲು, ಕಣ್ಣು, ತಲೆ, ಬಾಯಿ, ಕಿವಿಗಳು ಇವೆ. ಅಂದರೆ ಎಲ್ಲ ಇಂದ್ರಿಯಗಳ ಕೆಲಸವನ್ನು ಯಾವಾಗಲೂ ಎಲ್ಲ ಕಡೆಯೂ ಅವನು ಮಾಡುತ್ತಾನೆ. ಅವನು ವಿಶ್ವವನ್ನೇ ಆವರಿಸಿದ್ದಾನೆ. ಯಾವ ಇಂದ್ರಿಯಗಳೂ ಇಲ್ಲ. ಆದರೆ ಎಲ್ಲ ವಸ್ತುಗಳ ಜ್ಞಾನವೂ ಅವನಿಗೆ ಇದೆ. ಅವನು ಸರ್ವಾಧಾರ. ಸದಾನಂದ. ಅವ್ಯಕ್ತ. ಅವನಿಗೆ ಮಿಥ್ಯಾಜ್ಞಾನವಿಲ್ಲ. ಅವನಿಗೆ ಹೋಲಿಕೆಯೇ ಇಲ್ಲ. ಯಾವ ಪ್ರಮಾಣಗಳಿಗೂ ಅವನು ಪೂರ್ಣವಾಗಿ ಗೋಚರನಾಗುವುದಿಲ್ಲ. ಅವನ ಬಗ್ಗೆ ವಿರುದ್ಧ ಕಲ್ಪನೆಗಳೇನೂ ಇಲ್ಲ. ಅವನು ಎಲ್ಲದರಲ್ಲೂ ಇದ್ದಾನೆ. ಅವನು ಅಮೃತ ಸ್ವರೂಪ ಅವನಲ್ಲಿ ಅಂತರ್ಗತ ಭೇದಗಳಿಲ್ಲ. ವಿಭಿನ್ನ ಆಕಾರಗಳು ಅವನಿಗೆ ಇವೆ. ಅವನು ಶಾಶ್ವತ. ಅವ್ಯಯ. ಅವನು ನಿರ್ಗುಣ. ಪರಂಜ್ಯೋತಿ. ಅವನು ಜ್ಞಾನರೂಪ. ಹೀಗೆಂದು ಜ್ಞಾನಿಗಳು ತಿಳಿದಿದ್ದಾರೆ. ಅವನು ಸರ್ವಭೂತಾಂತರ್ಯಾಮಿ. ಎಲ್ಲದರ ಹೊರಗೂ ಅವನಿದ್ದಾನೆ. ಅವನೇ ನಾನು. ಶಾಂತ, ಜ್ಞಾನ ಸ್ವರೂಪ, ಪರಮೇಶ್ವರ. ನಾನು ಈ ಇಡೀ ಸ್ಥಾವರ-ಜಂಗಮ ಜಗತ್ತನ್ನು ವ್ಯಾಪಿಸಿದ್ದೇನೆ. ಎಲ್ಲ ಭೂತಗಳೂ ನನ್ನನ್ನೇ ಆಶ್ರಯಿಸಿವೆ.

**ಪ್ರಕೃತಿ ಮತ್ತು ತತ್ವಗಳು :**

ಮಹತ್ತತ್ವದಿಂದ ಆರಂಭಿಸಿ ಪೃಥಿವೀವರೆಗಿನ (ಮಹತ್ತತ್ವ, ಅಹಂಕಾರತತ್ವ, ಹನ್ನೊಂದು ಇಂದ್ರಿಯಗಳು, ಪಂಚ ತನ್ಮಾತ್ರಗಳು, ಪಂಚಭೂತಗಳು) ತತ್ವಗಳನ್ನು ಯಾವುದು ಸೃಷ್ಟಿಸುವುದೋ ಅದು ಪ್ರಕೃತಿ. ಈ ಪ್ರಕೃತಿ ಎಲ್ಲ ದೇಹಧಾರಿಗಳಿಗೂ ಮೋಹವನ್ನುಂಟು ಮಾಡುತ್ತದೆ. ಈ ಪ್ರಕೃತಿ ಇಪ್ಪತ್ತನಾಲ್ಕನೆಯ ತತ್ವ. ಪ್ರಕೃತಿ ಸಂಬಂಧದಿಂದ ಪ್ರಾಕೃತ ವಿಷಯ ಪದಾರ್ಥಗಳನ್ನು ಭೋಗಿಸುವ ಪುರುಷನೇ ಇಪ್ಪತ್ತೈದನೆಯ ತತ್ವ

ಪ್ರಕೃತಿಯಿಂದ ಉದ್ಭವವಾಗುವ ಮೊದಲನೆಯ ತತ್ವ ಮಹತ್ತತ್ವ, ಎರಡನೆಯದು ಅಹಂಕಾರತತ್ವ. ಜೀವಾತ್ಮ ಅಹಂಕಾರ ತತ್ವದ ಸಂಬಂಧದಿಂದ ಜನ್ಮ ಜನ್ಮಗಳಲ್ಲಿ ಸುಖ, ದುಃಖಗಳನ್ನು ಅನುಭವಿಸುತ್ತಾನೆ. ಈ ಜೀವನಿಗೆ ಮನಸ್ಸು ಸಾಧನ. ಈ ಮನಸ್ಸಿನ ಸಂಬಂಧದಿಂದಲೇ ಜೀವನಿಗೆ ಸಂಸಾರವು ಉಂಟಾಗಿದೆ. ಸಂಸಾರ ಎಂದರೆ ಅವಿವೇಕ. ಎಂದರೆ ತಾನು ಪ್ರಕೃತಿಯಿಂದ ವಿಲಕ್ಷಣ ಎಂಬ ತಿಳಿವಳಿಕೆಯ ಕೊರತೆ. ಎಲ್ಲಾ ಇಂದ್ರಿಯಗಳಿಗಿಂತ ಮನಸ್ಸು ಉತ್ಕೃಷ್ಟ. ಮನಸ್ಸಿಗಿಂತ ಅಹಂಕಾರ ದೊಡ್ಡದು. ಅಹಂಕಾರಕ್ಕಿಂತ ಮಹತ್ತತ್ವ ದೊಡ್ಡದು. ಮಹತ್ತತ್ವಕ್ಕಿಂತ ಅವ್ಯಕ್ತ ತತ್ವ ದೊಡ್ಡದು. ಅವ್ಯಕ್ತಕ್ಕಿಂತ ಪುರುಷ

ದೊಡ್ಡವನು. ಪುರುಷನಿಗಿಂತ ಪ್ರಾಣನು ದೊಡ್ಡವನು. ಈ ಇಡೀ ಜಗತ್ತು ಅವನಿಗೆ ಅಧೀನವಾಗಿದೆ. ಪ್ರಾಣಕ್ಕಿಂತ ದೊಡ್ಡದು ವ್ಯೋಮವೇ. ಇದಕ್ಕಿಂತ ದೊಡ್ಡವನು ಈಶ್ವರ. ಅವನೇ ನಾನು. ನಾನೇ ಬ್ರಹ್ಮ. ನಾನು ಅವ್ಯಯ ಶಾಂತ. ನನಗಿಂತ ಉತ್ತಮವಾದ ವಸ್ತು ಇಲ್ಲ. ನನ್ನನ್ನು ಹೀಗೆ ತಿಳಿದವರಿಗೆ ಸಂಸಾರ ಬಂಧನದಿಂದ ಮುಕ್ತಿಯಾಗುತ್ತದೆ. ಅವ್ಯಕ್ತನೂ, ವ್ಯೋಮರೂಪನೂ, ಮಹೇಶ್ವರನೂ ಆದ ನನ್ನನ್ನು ಬಿಟ್ಟು ಈ ಪ್ರಪಂಚವಿಲ್ಲ. ಈ ಪ್ರಪಂಚ ಸದಾ ನನಗೆ ಅಧೀನವಾಗಿದೆ. ನಾನೇ ಜಗತ್ತನ್ನು ಸೃಷ್ಟಿಸಿ ಸಂಹರಿಸುತ್ತೇನೆ. ಮಾಯೆಯು ನನಗೆ ಅಧೀನವಾದ್ದರಿಂದ ನಾನು ಮಾಯೀ, ಕಾಲವೂ ನನಗೇ ಅಧೀನ. ಮೇಲೆ ಹೇಳಿದ ಎಲ್ಲ ವಿಷಯಗಳನ್ನೂ ವೇದಗಳು ಪ್ರತಿಪಾದಿಸಿವೆ.

* * *

## ಅಧ್ಯಾಯ-೫೭

**ಈಶ್ವರ ಉವಾಚ :**

ಬ್ರಹ್ಮವಾದಿಗಳೇ, ಜಗತ್ತನ್ನು ನಡೆಸುವ, ದೇವೋತ್ತಮನಾದ ಮಹೇಶ್ವರನ ಮಹಿಮೆಯನ್ನು ಕೇಳುವೆನು. ನೀವೆಲ್ಲರೂ ಏಕಾಗ್ರತೆಯಿಂದ ಕೇಳಿರಿ.

ನಾನೇ ಮಹೇಶ್ವರ. ಭಕ್ತಿ ಇಲ್ಲದೆ ವಿವಿಧ ತಪಸ್ಸುಗಳಿಂದ ದಾನದಿಂದ, ಪೂಜೆಯಿಂದ ನನ್ನನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಶ್ರೇಷ್ಠವಾದ ಭಕ್ತಿಯೊಂದೇ ನನ್ನನ್ನು ತಿಳಿಯಲು ಸಾಧನೆ. ನಾನು ಎಲ್ಲ ವಸ್ತುಗಳ ಒಳಗಿದ್ದೇನೆ. ನಾನು ಸರ್ವಸಾಕ್ಷಿ. ಆದರೆ ಜನಗಳಿಗೆ ಈ ವಿಷಯ ತಿಳಿಯುವುದಿಲ್ಲ. ನನ್ನೊಳಗೆ ಇಡೀ ಜಗತ್ತು ಇದೆ. ಜಗತ್ತಿನೊಳಗೆ ನಾನು ಇದ್ದೇನೆ. ನಾನೇ ಸೃಷ್ಟಿಕರ್ತ. ನಾನೇ ಪಾಲಕ. ನಾನೇ ಸಂಹಾರಕ. ನಾನು ವಿಶ್ವತೋಮುಖ.

ಮುನಿಗಳು, ಪಿತೃಗಳು, ದೇವತೆಗಳು, ಬ್ರಹ್ಮ, ಮನು, ಇಂದ್ರ - ಇವರುಗಳೂ ತೇಜಸ್ವಿಗಳೆಂದು ಪ್ರಸಿದ್ಧರಾದ ಇತರರೂ ಕೂಡ ನನ್ನನ್ನು ಸಾಕ್ಷಾತ್ಕರಿಸಲಾರರು.

ವೇದಗಳು ನನ್ನ ಸ್ತೋತ್ರವನ್ನೇ ಹೇಳುತ್ತವೆ. ಬ್ರಾಹ್ಮಣರು ವಿವಿಧ ಯಜ್ಞಗಳಿಂದ ನನ್ನನ್ನೇ ಆರಾಧಿಸುತ್ತಾರೆ. ಯೋಗಿಗಳು ನನ್ನನ್ನೇ ಧ್ಯಾನಿಸುತ್ತಾರೆ. ನಾನೇ ಆಯಾಯಾ ದೇವತೆಗಳ ರೂಪದಿಂದ ಎಲ್ಲ ಹವಿಸ್ಸುಗಳ ಭೋಕ್ತಾ. ಹವಿಸ್ಸುಗಳನ್ನು ಅರ್ಪಿಸಿದವರಿಗೆ ಫಲವನ್ನು ಕೊಡುವವನೂ ನಾನೇ ವೇದವಾದಿಗಳೂ, ಧಾರ್ಮಿಕರೂ ಆದ ವಿದ್ವಾಂಸರು ನನ್ನ ದರ್ಶನವನ್ನು ಪಡೆಯಬಲ್ಲರು. ಯಾರು ನನ್ನ ಉಪಾಸನೆಯನ್ನು ನಿತ್ಯವೂ ಮಾಡುವರೋ

ಅವರಲ್ಲಿ ನನ್ನ ಸನ್ನಿಧಾನವಿರುತ್ತದೆ. ನನ್ನ ಉಪಾಸನೆಯನ್ನು ಮಾಡುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಆನಂದಮಯವಾದ ಪರಮಪದವನ್ನು ಕೊಡುವೆನು. ಸ್ವಧರ್ಮನಿಷ್ಠರಾದ ಭಕ್ತರಾದ ಶೂದ್ರ ಮೊದಲಾದವರೂ ಕೂಡ ಮುಕ್ತಿಯನ್ನು ಪಡೆಯುತ್ತಾರೆ. ನನ್ನ ಭಕ್ತರಿಗೆ ನಾಶವಿಲ್ಲ. ನನ್ನ ಭಕ್ತರಲ್ಲಿ ಕಲ್ಮಷವಿರುವುದಿಲ್ಲ. ನನ್ನ ಭಕ್ತರಿಗೆ ನಾಶವಿಲ್ಲ ಎಂದು ಮೊದಲಿನಿಂದಲೂ ನನ್ನ ಪ್ರತಿಜ್ಞೆ ಇದೆ. ನನ್ನ ಭಕ್ತರನ್ನು ನಿಂದಿಸಿದರೆ ನನ್ನನ್ನು ನಿಂದಿಸಿದಂತೆಯೇ. ಅವರ ಪೂಜೆಯೇ ನನ್ನ ಪೂಜೆ. ನನ್ನ ಆರಾಧನೆ ಎಂದು ಪತ್ರ, ಪುಷ್ಪ, ಫಲ, ನೀರು - ಇವುಗಳನ್ನು ಯಾರು ನನಗೆ ಅರ್ಪಿಸುತ್ತಾರೋ ಅವರು ನನ್ನ ಪ್ರಿಯಭಕ್ತರು.

ಸೃಷ್ಟಿಯ ಆರಂಭದಲ್ಲಿ ನಾನು ಬ್ರಹ್ಮದೇವರನ್ನು ಸೃಷ್ಟಿಸಿದೆನು. ಅವರಿಗೆ ವೇದಗಳನ್ನು ಉಪದೇಶಿಸಿದೆನು. ಎಲ್ಲ ಯೋಗಿಗಳಿಗೂ ನಾನೇ ಗುರು. ನಾನೇ ಎಲ್ಲ ಧಾರ್ಮಿಕರ ರಕ್ಷಕ. ವೇದದ್ವೇಷಿಗಳ ನಿಗ್ರಾಹಕ. ಸಂಸಾರ ರಹಿತನಾದ ನಾನೇ ಯೋಗಿಗಳಿಗೆ ಸಂಸಾರದಿಂದ ಮುಕ್ತಿಯನ್ನು ಕೊಡುವವನು. ಸಂಸಾರಿಗಳ ಸಂಸಾರಕ್ಕೂ ನಾನೇ ಕಾರಣ. ನಾನೇ ಜಗಜ್ಜನ್ಮಾದಿ ಕಾರಣ. ಲೋಕಕ್ಕೆ ಮೋಹವುಂಟುಮಾಡುವ ಮಾಯೆಯು ನನ್ನ ಅಧೀನವಾದ ಶಕ್ತಿ. ವಿದ್ಯೆಯೂ ಕೂಡ ನನ್ನದೇ ಆದ ಪರಶಕ್ತಿ. ಯೋಗಿಗಳ ಹೃದಯದಲ್ಲಿ ಇದ್ದು ಮೋಹಕವಾದ ಮಾಯೆಯನ್ನು ನಾನೇ ನಾಶಮಾಡುವೆನು. ಎಲ್ಲ ಶಕ್ತಿಗಳ ಪ್ರವರ್ತಕನೂ ನಾನೇ, ನಿವರ್ತಕನೂ ನಾನೇ. ನಾನು ಸರ್ವಾಧಾರ. ಅಮೃತ ನಿಧಿ. ನನ್ನನ್ನು ಆಶ್ರಯಿಸಿದ, ಸರ್ವಾಂತರವಾದ ನನ್ನ ಶಕ್ತಿಯೊಂದು ಬ್ರಹ್ಮರೂಪವನ್ನು ಪಡೆದು ವಿವಿಧವಾದ ಜಗತ್ತನ್ನು ಸೃಷ್ಟಿಸುತ್ತದೆ. ನನ್ನ ಇನ್ನೊಂದು ಶಕ್ತಿಯು ಅನಂತನಾದ ನಾರಾಯಣ ರೂಪವನ್ನು ಪಡೆದು ಜಗತ್ತನ್ನು ಪಾಲಿಸುತ್ತದೆ. ಕಾಲ ಎಂಬ ಹೆಸರನ್ನು ಹೊಂದಿರುವ, ತಾಮಸವಾದ ನನ್ನ ಮೂರನೆಯ ಶಕ್ತಿಯು ರುದ್ರರೂಪವನ್ನು ಪಡೆದು ಜಗತ್ತನ್ನು ಸಂಹಾರ ಮಾಡುತ್ತದೆ.

ಕೆಲವರು ಧ್ಯಾನದಿಂದ, ಮತ್ತೆ ಕೆಲವರು ಜ್ಞಾನದಿಂದ, ಮತ್ತೆ ಕೆಲವರು ಭಕ್ತಿಯಿಂದ, ಮತ್ತೆ ಕೆಲವರು ಕರ್ಮಯೋಗದಿಂದ ನನ್ನ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ನಾನಾ ವಿಧ ಭಕ್ತರಲ್ಲಿ ಜ್ಞಾನದಿಂದ ನನ್ನನ್ನು ನಿತ್ಯವೂ ಆರಾಧಿಸುವ ಭಕ್ತರು ನನಗೆ ಪ್ರಿಯತಮರು. ಹರಿಭಕ್ತಿಯಿಂದ ನನ್ನನ್ನು ಆರಾಧಿಸುವ ಭಕ್ತರೂ ಕೂಡ ನನ್ನನ್ನೆ ಹೊಂದುತ್ತಾರೆ. ಅವರಿಗೂ ಪುನರ್ಜನ್ಮ ಇಲ್ಲ. ಪ್ರಧಾನಪುರುಷಾತ್ಮಕವಾದ (ಚೇತನಾಚೇತನಾತ್ಮಕವಾದ) ಇಡೀ ಜಗತ್ತನ್ನು ನಾನು ವ್ಯಾಪಿಸಿದ್ದೇನೆ. ನನ್ನ ಪ್ರೇರಣೆಯಿಂದಲೇ ಈ ಜಗತ್ತು ನಡೆಯುತ್ತದೆ. ಈ ವಿಷಯವನ್ನು ತಿಳಿದವನು ಮುಕ್ತನಾಗುತ್ತಾನೆ. ನಾನು ಮಹಾಯೋಗೇಶ್ವರ. ಶಾಸ್ತ್ರಗಳು ನನ್ನನ್ನು ಮಾಯೀ ಎಂದು ಹೇಳುತ್ತವೆ. ನನ್ನನ್ನು ಹೀಗೆ ತಿಳಿದವನು ಅಸಂಪ್ರಜ್ಞಾತ ಸಮಾಧಿಸ್ಥಿತಿಯನ್ನು ತಲುಪಲು ಸಮರ್ಥನಾಗುತ್ತಾನೆ. ನಾನು ಸರ್ವ ಪ್ರೇರಕ. ಪರಮಾನಂದ ಪೂರ್ಣ.

ಈ ವಿಷಯಗಳನ್ನು ಎಲ್ಲ ವೇದಗಳೂ ಪ್ರತಿಪಾದಿಸುತ್ತವೆ. ಇದು ಅತ್ಯಂತ ಗುಹ್ಯವಾದ ವಿಷಯ. ನಿತ್ಯವೂ ಅಗ್ನಿಹೋತ್ರವನ್ನು ನಡೆಸುವ, ಧಾರ್ಮಿಕನಾದ ಪ್ರಸನ್ನ ಮನಸ್ಸಿನ ವ್ಯಕ್ತಿಗೆ ಮಾತ್ರ ಇದನ್ನು ಉಪದೇಶಿಸಬೇಕು.

*

## ಅಧ್ಯಾಯ-೫೮

**ವ್ಯಾಸ ಉವಾಚ :**

ಶಿವನು ಸನತ್ಕುಮಾರಾದಿ ಮುನಿಗಳಿಗೆ ಇಷ್ಟನ್ನು ಹೇಳಿ ನನ್ನ ಐಶ್ವರ್ಯಭಾವವನ್ನು ಪ್ರದರ್ಶಿಸುತ್ತಾ ನರ್ತನ ಮಾಡಿದನು. ಆಕಾಶದಲ್ಲಿ ವಿಷ್ಣುವಿನ ಜೊತೆ ನರ್ತನ ಮಾಡಿದ ತೇಜಸ್ಸಿನ ನಿಧಿಯಾದ ಶಿವನನ್ನು ಮುನಿಗಳೆಲ್ಲರೂ ನೋಡಿದರು. ಯೋಗತತ್ವವನ್ನು ತಿಳಿದ, ಮನೋ ನಿಗ್ರಹವನ್ನು ಸಾಧಿಸಿದ ಯೋಗಿಗಳು ಮಾತ್ರ ಯಾರನ್ನು ತಿಳಿಯಲು ಸಾಧ್ಯವೋ ಅಂತಹ ಯೋಗೀಶ್ವರನನ್ನು ಮುನಿಗಳು ಆಕಾಶದಲ್ಲಿ ನೋಡಿದರು. ಜಗತ್ತೆಲ್ಲವೂ ಯಾರ ಮಾಯೆಯಿಂದ ತುಂಬಿದೆಯೋ, ಯಾರು ಜಗತ್ತಿಗೆ ಪ್ರೇರಕನೋ ಅಂತಹ ಈಶನ ನರ್ತನ-ವನ್ನು ಮುನಿಗಳು ನೋಡಿದರು. ಯಾರ ಪಾದಕಮಲವನ್ನು ಸ್ಮರಿಸಿದರೆ ಅಜ್ಞಾನ ಮತ್ತು ಅದರಿಂದ ಹುಟ್ಟಿದ ಭಯಗಳೆಲ್ಲವೂ ನಾಶವಾಗುತ್ತವೆಯೋ ಅಂತಹ ಈಶನ ನೃತ್ಯವನ್ನು ಮುನಿಗಳು ನೋಡಿದರು. ಜಿತಶ್ವಾಸರೂ, ಶಾಂತರೂ, ಭಕ್ತಿ ಸಂಪನ್ನರೂ ಆದವರು ಮಾತ್ರ ಯಾವ ಜ್ಯೋತಿರ್ಮಯನನ್ನು ನೋಡಬಲ್ಲರೋ ಅಂತಹ ಈಶನನ್ನು ಮುನಿಗಳು ಆಕಾಶ-ದಲ್ಲಿ ನೋಡಿದರು. ಪ್ರಸನ್ನನಾದರೆ ಅಜ್ಞಾನವನ್ನೇ ಪರಿಹರಿಸಬಲ್ಲ ಭಕ್ತವತ್ಸಲನಾದ ಸರ್ವೋತ್ತಮನಾದ ರುದ್ರನನ್ನು ಮುನಿಗಳು ಆಕಾಶದಲ್ಲಿ ನೋಡಿದರು. ಮುನಿಗಳು ಕಂಡ ಶಿವನಿಗೆ ಸಾವಿರ ತಲೆಗಳು, ಸಾವಿರ ಕಾಲುಗಳು, ಸಾವಿರ ಬಾಹುಗಳು ಇದ್ದವು. ಅವನ ಜಟೆಗೆ ಅರ್ಧಚಂದ್ರ ಅಲಂಕಾರವಾಗಿತ್ತು. ವ್ಯಾಘ್ರ ಚರ್ಮವನ್ನು ಧರಿಸಿದ್ದ ಆ ಮೂರ್ತಿ ಕೈಗಳಲ್ಲಿ ಶೂಲ, ದಂಡಗಳನ್ನು ಹಿಡಿದಿದ್ದನು. ವೇದಗಳು, ಸೂರ್ಯ, ಚಂದ್ರ, ಅಗ್ನಿಗಳು ಅವನ ಕಣ್ಣುಗಳಾಗಿದ್ದವು. ಅವನ ತೇಜಸ್ಸು ಇಡೀ ಬ್ರಹ್ಮಾಂಡವನ್ನು ವ್ಯಾಪಿಸಿತ್ತು. ಕರಾಳವಾದ ಕೋರೆಹಲ್ಲುಗಳು ಅವನಿಗೆ ಇದ್ದವು. ಕೋಟಿ ಸೂರ್ಯರ ಕಾಂತಿ ಅವನಲ್ಲಿ ಇತ್ತು. ಬೆಂಕಿಯ ಜ್ವಾಲೆಗಳನ್ನು ಸೃಷ್ಟಿಸುತ್ತಿದ್ದ, ಇಡೀ ಜಗತ್ತನ್ನು ಸುಡುತ್ತಿದ್ದ ವಿಶ್ವಕರ್ಮನಾಗಿ ನರ್ತನ ಮಾಡುತ್ತಿದ್ದ ಶಿವ ಮೂರ್ತಿಯನ್ನು ಮುನಿಗಳು ನೋಡಿದರು.

ಮಹಾಯೋಗಗಳನ್ನು ತಿಳಿದವನೂ, ದೇವೋತ್ತಮನೂ, ಪಶುಪತಿಯೂ, ಆನಂದ ಸ್ವರೂಪನೂ, ಜ್ಯೋತಿಃಸ್ವರೂಪನೂ, ಪಿನಾಕಧಾರಿಯೂ, ವಿಶಾಲಾಕ್ಷನೂ, ಭವರೋಗ ವೈದ್ಯನೂ, ಕಾಲನಿಯಾಮಕನೂ, ಉಮಾಪತಿಯೂ, ವಿಶಾಲಾಕ್ಷನೂ, ಜ್ಞಾನವೈರಾಗ್ಯ-ನಿಧಿಯೂ, ಸನಾತನನೂ, ಶಾಶ್ವತ ಐಶ್ವರ್ಯ ವೈಭವವುಳ್ಳವನೂ, ಧರ್ಮಾಧಾರನೂ, ಅಜೇಯನೂ, ದೇವೇಂದ್ರ-ಉಪೇಂದ್ರರಿಂದ ನಮಸ್ಕರಿಸಲ್ಪಟ್ಟವನೂ, ಮಹರ್ಷಿ ಸಮುದಾಯದಿಂದ ನಮಸ್ಕರಿಸಲ್ಪಟ್ಟವನೂ, ಯೋಗಿಗಳ ಹೃದಯದಲ್ಲಿರುವವನೂ ಆಗಿ ಶಿವನು ನರ್ತನ ಮಾಡುತ್ತ ಆಕಾಶದಲ್ಲಿ ಆ ಮುನಿಗಳಗೆ ಕಾಣಿಸಿದನು. ಜಗಜ್ಜನ್ಮಾದಿ-ಕಾರಣನಾದ ನಾರಾಯಣನು ಶಿವನೊಂದಿಗೆ ಐಕ್ಯ ಹೊಂದಿದ ವಿದ್ಯಮಾನವನ್ನೂ ಕೂಡ ಆಗ ಮುನಿಗಳು ನೋಡಿದರು. ನಾರಾಯಣಾತ್ಮಕವಾದ ಆ ರುದ್ರರೂಪವನ್ನು ನೋಡಿ ಮುನಿಗಳು ಕೃತಾರ್ಥಭಾವವನ್ನು ಅನುಭವಿಸಿದರು.

ಸನತ್ಕುಮಾರ, ಸನಕ, ಭೃಗು, ಸನಾತನ, ಸನಂದನ, ರೈಭ್ಯ, ಅಂಗಿರಸ್, ವಾಮದೇವ, ಶುಕ್ರ, ಅತ್ರಿ, ಕಪಿಲ ಮರೀಚಿ ಈ ಮಹರ್ಷಿಗಳು ಪದ್ಮನಾಭ ಸಹಿತನಾದ (ಎಡಭಾಗದಲ್ಲಿ) ರುದ್ರರೂಪವನ್ನು ನೋಡಿ, ಧ್ಯಾನ ಮಾಡಿ, ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಹೃದಯ-ಸನ್ನಿಹಿತವಾದ ಆ ರೂಪವನ್ನೇ ಹೊರಗೆ ನೋಡುತ್ತ ತಲೆಯ ಮೇಲೆ ಕೈಗಳನ್ನು ಜೋಡಿಸಿ ಆನಂದ ತುಂಬಿದ ಮನಸ್ಸುಗಳಿಂದ, ವೇದವಚನಗಳಿಂದ ಸ್ತೋತ್ರ ಮಾಡಿದರು.

ಮುನಿಕೃತ ಸ್ತೋತ್ರ :

**ತ್ವಾಮೇಕಮೀಶಂ ಪುರುಷಂ ಪುರಾಣಂ**
**ಪ್ರಾಣೇಶ್ವರಂ ರುದ್ರಮನಂತಯೋಗಮ್ ।**
**ನಮಾಮ ಸರ್ವೇ ಹೃದಿ ಸನ್ನಿವಿಷ್ಟಂ**
**ಪ್ರಚೇತಸಂ ಬ್ರಹ್ಮಮಯಂ ಪವಿತ್ರಮ್ ॥**

ಅದ್ವಿತೀಯನೂ, ಸರ್ವೇಶ್ವರನೂ, ಪುರಾಣ ಪುರುಷನೂ, ಪ್ರಾಣೇಶ್ವರನೂ ರುದ್ರ-ಮೂರ್ತಿಯೂ, ಅನಂತ ಯೋಗಗಳುಳ್ಳವನೂ, ಹೃದಯದಲ್ಲಿ ವಾಸಿಸುವವನೂ, ಪ್ರಜ್ಞಾನ ಸ್ವರೂಪನೂ, ಪರಬ್ರಹ್ಮಸ್ವರೂಪನೂ ಪವಿತ್ರನೂ ಆದ ನಿನ್ನನ್ನು ವಂದಿಸುವೆನು.

**ಪಶ್ಯಂತಿ ತ್ವಾಂ ಮುನಯೋ ಬ್ರಹ್ಮಯೋನಿಂ**
**ದಾಂತಾಃ ಶಾಂತಾ ವಿಮಲಂ ರುಕ್ಮವರ್ಣಮ್ ।**
**ಧ್ಯಾತ್ವಾತ್ಮ ಸ್ವಪ್ರಚಲಂ ಸ್ವೇ ಶರೀರೆ**
**ಕವಿಂ ಪರೇಭ್ಯಃ ಪರಮಂ ಪರಂ ಚ ॥**

ಜಿತೇಂದ್ರಿಯರೂ, ಭಕ್ತರೂ, ಆದ ಮುನಿಗಳು ಮಾತ್ರ ನಿರ್ಮಲನೂ, ಸುವರ್ಣದಂತೆ ತೇಜಸ್ವಿಯೂ ಆತ್ಮಶಕ್ತಿಯಿಂದ ಚಲಿಸುವವನೂ, ಸರ್ವಜ್ಞನೂ, ಉತ್ತಮವಸ್ತುಗಳಿಗಿಂತ ಉತ್ತಮನೂ ಆದ ನಿನ್ನ ಸಾಕ್ಷಾತ್ಕಾರವನ್ನು ಪಡೆಯಲು ಸಮರ್ಥರು.

**ತ್ವತ್ತಃ ಪ್ರಸೂತಾ ಜಗತಃ ಪ್ರಸೂತಿಃ**
**ಸರ್ವಾನುಭೂಸ್ತ್ವಂ ಪರಮಾಣುಭೂತಃ ।**
**ಅಣೋರಣೀಯಾನ್ ಮಹತೋ ಮಹೀಯಾನ್**
**ತ್ವಾಮೇವ ಸರ್ವಂ ಪ್ರವದಂತಿ ಸಂತಃ ॥**

ಜಗಜ್ಜನನಿಯು ನಿನ್ನಿಂದಲೇ ಹುಟ್ಟಿದ್ದಾಳೆ. ನೀನು ಸರ್ವಜ್ಞ. ನೀನು ಅತಿಸೂಕ್ಷ್ಮ. ಅಣುವಿಗಿಂತ ಅಣು. ಮಹತ್‌ಗಿಂತ ಮಹತ್. ನಿನ್ನನ್ನು ಸರ್ವ ಎಂದು ಜ್ಞಾನಿಗಳು ಹೇಳುತ್ತಾರೆ.

**ಹಿರಣ್ಯಗರ್ಭೋ ಜಗದಂತರಾತ್ಮಾ**
**ತ್ವತ್ತೋಽಸ್ತಿ ಜಾತಃ ಪುರುಷಃ ಪುರಾಣಃ ।**

ಸಂಜಯಮಾನೋ ಭವತಾ ನಿಸೃಷ್ಟೋ
ಯಥಾವಿಧಾನಂ ಸಕಲಂ ಸ ಸದ್ಯಃ ॥

ಜಗತ್ತಿನ ಅಂತರಾತ್ಮನೂ, ಪುರಾಣಪುರುಷನೂ ಆದ ಹಿರಣ್ಯಗರ್ಭನು (ಚತುರ್ಮುಖ ಬ್ರಹ್ಮ) ನಿನ್ನಿಂದಲೇ ಹುಟ್ಟಿರುವನು. ಅನಂತರ ನೀನು ಅವನಿಗೆ ಎಲ್ಲವನ್ನೂ ಉಪದೇಶಿಸಿದಿ.

ತ್ವತ್ತೋ ವೇದಾಃ ಸಕಲಾಃ ಪ್ರಸೂತಾ-
ಸ್ತ್ವಯ್ಯೇವಾಂತೇ ಸಂಸ್ಥಿತಿಂ ಲಭಂತೇ ।
ಪಶ್ಯಾಮಸ್ತ್ವಾಂ ಜಗತೋ ಹೇತುಭೂತಂ
ನೃತ್ಯಂತಂ ಸ್ವೇ ಹೃದಯೇ ಸನ್ನಿವಿಷ್ಟಮ್ ॥

ನಿನ್ನಿಂದಲೇ ಸಕಲ ವೇದಗಳ ಆವಿರ್ಭಾವ ಆಗಿದೆ. ಪ್ರಳಯದಲ್ಲಿ ಅವು ನಿನ್ನಲ್ಲೇ ಇರುತ್ತವೆ. ನಮ್ಮ ಹೃದಯದಲ್ಲಿ ಇರುವ, ಜಗತ್ತಿನ ಸೃಷ್ಟಿಗೆ ಕಾರಣನಾದ ನಿನ್ನ ನರ್ತನವನ್ನು ನಾವು ನೋಡುತ್ತಿದ್ದೇವೆ.

ತ್ವಯ್ಯೈವೇದಂ ಭ್ರಾಮ್ಯತೇ ಬ್ರಹ್ಮಚಕ್ರಂ
ಮಾಯಾವೀ ತ್ವಂ ಜಗತಾಮೇಕನಾಥಃ ।
ನಮಾಮಸ್ತ್ವಾಂ ಶರಣಂ ಸಂಪ್ರಪನ್ನಾ
ಯೋಗಾತ್ಮಾನಂ ನೃತ್ಯಂತಂ ದಿವ್ಯನೃತ್ಯಮ್ ॥

ನೀನೇ ಈ ದೊಡ್ಡ ಜಗತ್‌ಚಕ್ರವನ್ನು ತಿರುಗಿಸುತ್ತಿರುವಿ. ನೀನು ಜಗತ್ತಿನ ಏಕೈಕ ಅಧಿಪತಿ. ಮಾಯಾವಿ. ಯೋಗಸ್ವರೂಪನಾದ, ದಿವ್ಯ ನೃತ್ಯವನ್ನು ಮಾಡುತ್ತಿರುವ ನಿನಗೆ ನಮ್ಮ ನಮಸ್ಕಾರ. ನಾವು ನಿನಗೆ ಶರಣಾಗತರಾಗುತ್ತೇವೆ.

ಪಶ್ಯಾಮಸ್ತ್ವಾಂ ಪರಮಾಕಾಶಮಧ್ಯೆ
ನೃತ್ಯಂತಂ ತೇ ಮಹಿಮಾನಂ ಸ್ಮರಾಮಃ ।
ಸರ್ವಾತ್ಮಾನಂ ಬಹುಧಾ ಸನ್ನಿವಿಷ್ಟಂ
ಬ್ರಹ್ಮಾನಂದಮನುಭೂಯಾನುಭೂಯ ॥

ಮಹಾನಂದವನ್ನು ಅನುಭವಿಸುತ್ತಾ, ಸರ್ವಾಂತರ್ಯಾಮಿಯಾಗಿರುವ, ನಾನಾ ರೂಪಗಳನ್ನು ಹೊಂದಿರುವ, ಆಕಾಶದ ಮಧ್ಯದಲ್ಲಿ ನರ್ತನ ಮಾಡುತ್ತಿರುವ ನಿನ್ನ ಮಹಿಮೆಯನ್ನು ಸ್ಮರಿಸುತ್ತೇವೆ.

ಓಂಕಾರಸ್ತೇ ವಾಚಕೋ ಮುಕ್ತಿಬೀಜಂ
ತ್ವಮಕ್ಷರಂ ಪ್ರಕೃತೌ ಗೂಢರೂಪಮ್ ।
ತತ್ತ್ವಾಂ ಸತ್ಯಂ ಪ್ರವದಂತೀಹ ಸಂತಃ
ಸ್ವಯಂಪ್ರಭಂ ಭವತೋ ಯತ್ಪ್ರಭಾವಮ್ ॥

ಮುಕ್ತಿಬೀಜವಾದ ಓಂಕಾರವು ನಿನ್ನನ್ನೇ ಪ್ರತಿಪಾದಿಸುತ್ತದೆ. ನೀನು ಅಕ್ಷರ. ನೀನು ಪ್ರಕೃತಿಯಲ್ಲಿ ಅಡಗಿರುವಿ. ಜ್ಞಾನಿಗಳು ನಿನ್ನನ್ನು ಸತ್ಯ ಎಂದೂ, ಸ್ವಪ್ರಕಾಶ ಎಂದೂ ಹೇಳುತ್ತಾರೆ.

ಸ್ತುವಂತಿ ತ್ವಾಂ ಸತತಂ ಸರ್ವವೇದಾ
ನಮಂತಿ ತ್ವಾಮೃಷಯಃ ಕ್ಷೀಣದೋಷಾಃ ।
ಶಾಂತಾತ್ಮಾನಃ ಸತ್ಯಸಂಧಂ ವರಿಷ್ಠಂ
ವಿಶಂತಿ ತ್ವಾಂ ಯತಯೋ ಬ್ರಹ್ಮನಿಷ್ಠಾಃ ॥

ವೇದಗಳು ಯಾವಾಗಲೂ ನಿನ್ನನ್ನು ಸ್ತುತಿಸುತ್ತವೆ. ದೋಷಗಳನ್ನು ಕಳೆದುಕೊಂಡ ಋಷಿಗಳು ನಿನ್ನನ್ನು ನಮಸ್ಕರಿಸುತ್ತಾರೆ. ವಿರಕ್ತರೂ, ಬ್ರಹ್ಮನಿಷ್ಠರೂ ಆದ ಯತಿಗಳೂ ವರಿಷ್ಠನೂ, ಸತ್ಯಸಂಧನೂ ಆದ ನಿನ್ನನ್ನು ಹೊಂದುತ್ತಾರೆ.

ಭುವೋ ನಾಶೋ ನಾದಿಮಾನ್ ವಿಶ್ವರೂಪೋ
ಬ್ರಹ್ಮಾ ವಿಷ್ಣುಃ ಪರಮೇಷ್ಠೀ ವರಿಷ್ಠಃ ।
ಸ್ವಾತ್ಮಾನಂದಮನುಭೂಯ ವಿಶಂತೇ
ಸ್ವಯಂಜ್ಯೋತಿರಚಲಾ ನಿತ್ಯಮುಕ್ತಾಃ ॥

ನೀನು ಜಗತ್ಸಂಹಾರಕ. ಅನಾದಿ. ವಿಶ್ವರೂಪವುಳ್ಳವನು ನೀನೇ ಬ್ರಹ್ಮಾ. ನೀನೇ ವಿಷ್ಣು. ನೀನೇ ಪರಮೇಷ್ಠಿ, ನಿತ್ಯಮುಕ್ತರು ಸ್ವಾತ್ಮಾನಂದವನ್ನು ಅನುಭವಿಸಿ ಸ್ವಪ್ರಕಾಶನಾದ ನಿನ್ನನ್ನು ಪ್ರವೇಶಿಸುತ್ತಾರೆ.

ಏಕೋ ರುದ್ರಸ್ತ್ವಂ ಕರೋಷೀಹ ವಿಶ್ವಂ
ತ್ವಂ ಪಾಲಯಸ್ಯಖಿಲಂ ವಿಶ್ವರೂಪಮ್ ।
ತ್ವಮೇವಾಂತೇ ನಿಲಯಂ ವಿಂದತೀದಂ
ನಮಾಮಸ್ತ್ವಾಂ ಶರಣಂ ಪ್ರಪನ್ನಾಃ ॥

ನೀನೊಬ್ಬನೇ ಈ ಜಗತ್ತನ್ನು ಸೃಷ್ಟಿಸುವಿ. ಪಾಲಿಸುವಿ. ಕೊನೆಗೆ ನೀನೇ ಸಂಹಾರ ಮಾಡುವಿ. ನಾವು ನಿನಗೆ ಶರಣಾಗತರಾಗಿ ನಮಸ್ಕರಿಸುತ್ತೇವೆ.

ಏಕೋ ವೇದೋ ಬಹುಶಾಖೋಹ್ಯನಂತ-
ಸ್ತ್ವಾಮೇವೈಕಂ ಬೋಧಯತ್ಯೇಕರೂಪಮ್ ।
ವಂದ್ಯಂ ತ್ವಾಂ ಯೇ ಶರಣಂ ಸಂಪ್ರಪನ್ನಾ
ಮಾಯಾಮೇತಾಂ ತೇ ತರಂತೀಹ ವಿಪ್ರಾಃ ॥

ಬಹುಶಾಖೆಗಳನ್ನು ಹೊಂದಿರುವ ಅನಂತವಾದ ವೇದವು ನಿನ್ನನ್ನೊಬ್ಬನನ್ನೇ ಬೋಧಿಸುತ್ತದೆ. ನಿನ್ನನ್ನು ನಿರ್ವಿಕಾರನೆಂದು ಬೋಧಿಸುತ್ತದೆ. ವಂದ್ಯನಾದ ನಿನಗೆ ಶರಣಾಗತರಾದವರು ಬಂಧಕವಾದ ಮಾಯೆಯಿಂದ ಬಿಡುಗಡೆಯನ್ನು ಪಡೆಯುತ್ತಾರೆ.

ತ್ವಾಮೇಕಮಾಹುಃ ಕವಿಮೇಕರುದ್ರಂ
ಬ್ರಹ್ಮ ಗೃಣಂತಿ ಹರಿಮಗ್ನಿಮೀಶಮ್ ।
ರುದ್ರಂ ನಿತ್ಯಮನಿಲಂ ಚೇಕಿತಾನಂ
ಧಾತಾರ ಮಾದಿತ್ಯಮನೇಕ ರೂಪಮ್ ॥

ನಿನ್ನನ್ನು ಅದ್ವಿತೀಯ, ಸರ್ವಜ್ಞ, ರುದ್ರ, ಬ್ರಹ್ಮ, ಹರಿ, ಅಗ್ನಿ, ಈಶ, ನಿತ್ಯ, ಅನಿಲ, ಧಾತೃ ಆದಿತ್ಯ ಮೊದಲಾದ ಅನೇಕ ರೂಪವುಳ್ಳವನೆಂದು ವರ್ಣಿಸುತ್ತಾರೆ.

ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋತ್ತಮೋಽಸಿ ॥

ನೀನು ಅಕ್ಷರ. ತಿಳಿಯಲ್ಪಡಬೇಕಾದವರಲ್ಲಿ ಅತಿಶ್ರೇಷ್ಠ. ನೀನು ಈ ವಿಶ್ವದ ಶ್ರೇಷ್ಠ ನಿಧಿ. ನೀನು ಅವ್ಯಯ ಸನಾತನ ಧರ್ಮದ ರಕ್ಷಕ. ಸನಾತನ ಪುರುಷೋತ್ತಮ.

ತ್ವಮೇವ ವಿಷ್ಣುಶ್ಚತುರಾನನಸ್ತ್ವಂ
ತ್ವಮೇವ ರುದ್ರೋ ಭಗವಾನಪೀಶಃ ।
ತ್ವಂ ವಿಶ್ವನಾಥಃ ಪ್ರಕೃತಿಃ ಪ್ರತಿಷ್ಠಾ
ಸರ್ವೇಶ್ವರಸ್ತ್ವಂ ಪರಮೇಶ್ವರೋಽಸಿ ॥

ನೀನು ವಿಷ್ಣು. ನೀನು ಚತುರ್ಮುಖ. ನೀನೇ ರುದ್ರ. ನೀನೇ ಭಗವಾನ್ ಈಶ. ನೀನು ವಿಶ್ವನಾಥ. ನೀನು ಪ್ರಕೃತಿ. ನೀನು ಆಶ್ರಯ. ನೀನು ಸರ್ವೇಶ್ವರ. ನೀನು ಪರಮೇಶ್ವರ.

ತ್ವಾಮೇಕಮಾಹುಃ ಪುರುಷಂ ಪುರಾಣ-
ಮಾದಿತ್ಯವರ್ಣಂ ತಮಸಃ ಪರಸ್ತಾತ್ ।
ಚಿನ್ಮಾತ್ರಮವ್ಯಕ್ತಮನಂತರೂಪಂ
ಖಂ ಬ್ರಹ್ಮ ಶೂನ್ಯಂ ಪ್ರಕೃತಿರ್ಗುಣಾಶ್ಚ ॥

ನೀನೊಬ್ಬನೇ ಪುರಾಣಪುರುಷ, ಆದಿತ್ಯವರ್ಣ, ತಮಸ್ಸನ್ನು ಮೀರಿದವನು, ಚಿನ್ಮಾತ್ರ, ಅವ್ಯಕ್ತ, ಅನಂತರೂಪ, ಆಕಾಶ, ಬ್ರಹ್ಮ, ಶೂನ್ಯ, ಪ್ರಕೃತಿ, ಗುಣ, ಎಂದು ತಿಳಿದವರು ಹೇಳುತ್ತಾರೆ.

ಯದಂತರಾ ಸರ್ವಮಿದಂ ವಿಭಾತಿ
ಯದವ್ಯಯಂ ನಿರ್ಮಲಮೇಕರೂಪಮ್ ।

ಕಿಮಪ್ಯಚಿಂತ್ಯಂ ತವ ರೂಪಮೇತ-
ತ್ತದಂತರಾ ಯತ್ಪ್ರತಿಭಾತಿ ತತ್ತ್ವಮ್ ॥

ಯಾವುದರ ಒಳಗೆ ಇದಲ್ಲವೋ ಪ್ರಕಾಶಿಸುತ್ತಿದೆಯೋ, ಯಾವುದು ಅವ್ಯಯವೋ ನಿರ್ಮಲವೋ, ಏಕರೂಪವೋ ಅಚಿಂತ್ಯವೋ ಅದೇ ಈ ನಿನ್ನ ರೂಪ. ಅದರೊಳಗೆ ಎಲ್ಲ ತತ್ವಗಳೂ ಶೋಭಿಸುತ್ತವೆ.

ಯೋಗೇಶ್ವರಂ ಭದ್ರಮನಂತಶಕ್ತಿಂ
ಪರಾಯಣಂ ಬ್ರಹ್ಮತನುಂ ಪುರಾಣಮ್ ।
ನಮಾಮ ಸರ್ವೇ ಶರಣಾರ್ಥಿನಸ್ತ್ವಾಂ
ಪ್ರಸೀದ ಭೂತಾಧಿಪತೇ ಮಹೇಶ ॥

ಓ! ಭೂತಾಧಿಪತಿಯೇ! ಮಹೇಶ್ವರನೇ! ಯೋಗೇಶ್ವರನೂ, ಭದ್ರನೂ, ಅನಂತ-ಶಕ್ತಿಯೂ, ಪರಾಯಣನೂ, ಬ್ರಹ್ಮರೂಪನೂ ಅನಾದಿಯೂ ಆದ ನಿನಗೆ ನಮಸ್ಕಾರ. ನಾವು ನಿನ್ನ ರಕ್ಷಣೆಯನ್ನು ಬಯಸುತ್ತಿದ್ದೇವೆ. ದಯವಿಟ್ಟು ಪ್ರಸನ್ನನಾಗು.

ತ್ವತ್ಪಾದಪದ್ಮಸ್ಮರಣಾದಶೇಷ-
ಸಂಸಾರಬೀಜಂ ನಿಲಯಂ ಪ್ರಯಾತಿ ।
ಮನೋ ನಿಯಮ್ಯ ಪ್ರಣಿಧಾಯ ಕಾಯಂ
ಪ್ರಸಾದಯಾಮೋ ವಯಮೇಕಮೀಶಮ್ ॥

ನಿನ್ನ ಪಾದಕಮಲದಸ್ಮರಣೆಯಿಂದ ಸಂಸಾರದ ಮೂಲಕಾರಣವೇ ನಾಶವಾಗುತ್ತದೆ. ಆದ್ದರಿಂದ ಮನಸ್ಸನ್ನು ನಿಯಂತ್ರಿಸಿ, ದೇಹವನ್ನು ಸ್ಥಿರವಾಗಿಟ್ಟು ಒಬ್ಬನೇ ಈಶನಾದ ನಿನ್ನನ್ನು ನಾವು ಒಲಿಸುತ್ತೇವೆ.

ನಮೋ ಭವಾಯಾಥ ಭವೋದ್ಭವಾಯ
ಕಾಲಾಯ ಸರ್ವಾಯ ಹರಾಯ ತುಭ್ಯಮ್ ।
ನಮೋಽಸ್ತು ರುದ್ರಾಯ ಕಪರ್ದಿನೇ ತೇ
ನಮೋಗ್ನಯೇ ದೇವ ನಮಃ ಶಿವಾಯ ॥

ಓ! ಭವ! ನಿನಗೆ ನಮಸ್ಕಾರ. ಸಂಸಾರಕಾರಣನಾದ, ಸಂಹಾರಕನಾದ, ಪೂರ್ಣನಾದ, ಹರನಾದ ನಿನಗೆ ನಮಸ್ಕಾರ. ಜಟಾಜೂಟಧರನೇ! ರುದ್ರನೇ! ನಿನಗೆ ನಮಸ್ಕಾರ. ಅಗ್ನಿಸ್ವರೂಪನೇ! ಶಿವನೇ! ನಿನಗೆ ನಮಸ್ಕಾರ.

ಸ್ತೋತ್ರವು ಮುಗಿದನಂತರ ಪ್ರೀತನಾದ, ನಂದಿವಾಹನನಾದ ಶಿವನು ತನ್ನ ಅದ್ಭುತ-ರೂಪವನ್ನು ಉಪಸಂಹರಿಸಿ ಮೂಲ ರೂಪದಲ್ಲಿ ಕಾಣಿಸಿಕೊಂಡನು. ಹಿಂದಿನಂತೆ ಆದ.

ನಾರಾಯಣನೇ ಆದ ಆ ದೇವನನ್ನು ನೋಡಿ ಮುನಿಗಳು ಹೇಳಿದರು. 'ಭಗವಾನ್! ಭೂತಭವ್ಯೇಶ! ನಂದೀಶ್ವರನಿಂದ ಅಂಕಿತವಾದ ಶಾಸನವುಳ್ಳವನೇ! ನಿನ್ನ ಅದ್ಭುತ ರೂಪವನ್ನು ನೋಡಿ ನಾವು ಸಂತುಷ್ಟರಾಗಿದ್ದೇವೆ. ನಿನ್ನ ಅನುಗ್ರಹದಿಂದ ಪರಮೇಶ್ವರನಾದ ನಿನ್ನ ಮೇಲೆ ನಮಗೆ ಅಚಲವಾದ ಭಕ್ತಿಯು ಉಂಟಾಗುತ್ತಿದೆ. ಶಂಕರ! ನಿನ್ನ ಮತ್ತಷ್ಟು ಮಹಿಮೆಯನ್ನು ನಾವು ಕೇಳಬಯಸುತ್ತೇವೆ.'

ಯೋಗಿಗಳಿಗೆ ಯೋಗಸಿದ್ಧಿಯನ್ನು ಕೊಡುವ ಶಿವನು ಅವರ ಮಾತನ್ನು ಕೇಳಿ. ಮಾಧವನನ್ನು ನೋಡುತ್ತಾ ಗಂಭೀರವಾದ ವಾಣಿಯಿಂದ ಮಾತನಾಡಿದನು.

* * *

## ಅಧ್ಯಾಯ-೩೯

**ಈಶ್ವರ ಉವಾಚ :**

ವೇದವನ್ನು ತಿಳಿದವರು (ವೈದಿಕರು) ತಿಳಿದಿರುವ ಶಿವನ ಮಹಿಮೆಯನ್ನು ಹೇಳುವೆನು. ಕೇಳಿರಿ :

ಸನಾತನನಾದ ನಾನೇ ಸಕಲ ಲೋಕಗಳ ಸೃಷ್ಟಿಕರ್ತೃ. ನಾನೇ ರಕ್ಷಕ. ನಾನೇ ಸಂಹಾರಕ. ನಾನು ಸರ್ವನಿಯಾಮಕ. ಸರ್ವವಸ್ತುಗಳ ಒಳಗೆ ಇದ್ದೇನೆ. ನೀವು ನನ್ನ ಅದ್ಭುತ ರೂಪವನ್ನು ನೋಡಿದಿರಿ. ಇದು ನನ್ನ ಮಾಯೆ. ಈ ಮಾಯೆಗೆ ಇದೇ ಉಪಮಾನ. ಬೇರೆ ಉಪಮಾನವಿಲ್ಲ. ಇದು ನನ್ನ ಕ್ರಿಯಾಶಕ್ತಿ. ನಾನು ಎಲ್ಲ ಪದಾರ್ಥಗಳ ಒಳಗಿದ್ದು ಇಡೀ ಜಗತ್ತಿಗೆ ಪ್ರೇರಣೆಯನ್ನು ಕೊಡುವೆ. ನನ್ನಿಂದಲೇ ಈ ಜಗತ್ತಿಗೆ ಚಲನೆ. ನನ್ನ ಇಚ್ಛೆಯಂತೆ ಈ ಜಗತ್ತು ನಡೆಯುತ್ತದೆ. ನಾನು ಕಾಲ. ಕಾಲ ರೂಪನಾಗಿ ಜಗತ್ತಿಗೆ ಪ್ರೇರಣೆಯನ್ನು ಕೊಡುವೆ.

**ಈಶಪ್ರೇರಣೆಯ ವಿಶ್ವರೂಪ :**

ಆದಿ-ಮಧ್ಯ-ಅಂತಗಳಿಲ್ಲದ, ಮಾಯಾ ತತ್ವದ ಪ್ರವರ್ತಕನಾದ ನಾನು ಸೃಷ್ಟಿಯ ಆದಿಯಲ್ಲಿ ಪ್ರಧಾನ ಮತ್ತು ಪುರುಷರಿಗೆ ಚಾಲನೆಯನ್ನು ಕೊಡುವೆ. ಪರಸ್ಪರ ಸಂಯುಕ್ತರಾದ ಅವರಿಬ್ಬರಿಂದ ಮಹತ್ತತ್ವದಿಂದ ಆರಂಭವಾಗಿ ಕ್ರಮವಾಗಿ ಸೃಷ್ಟಿಯಾಗುತ್ತದೆ. ಇಡೀ ಪ್ರಪಂಚವನ್ನು ನೋಡುವ, ಕಾಲಚಕ್ರ ಪ್ರವರ್ತಕನಾದ ಹಿರಣ್ಯಗರ್ಭನು ನನ್ನಿಂದಲೇ ಹುಟ್ಟಿದವನು. ಕಲ್ಪದ ಆದಿಯಲ್ಲಿ ಆ ಹಿರಣ್ಯಗರ್ಭನಿಗೆ ನಾಲ್ಕು ವೇದಗಳನ್ನು ನಾನು

ಉಪದೇಶಿಸಿದೆನು. ನನ್ನಲ್ಲಿ ಭಕ್ತಿಯಿಂದ ಸುಸಂಸ್ಕೃತನಾದ ಬ್ರಹ್ಮದೇವನು ನನ್ನ ದಿವ್ಯವಾದ ಸಾಮರ್ಥ್ಯವನ್ನು ಚೆನ್ನಾಗಿ ತಿಳಿದಿದ್ದಾನೆ. ಇಂತಹ ಚತುರ್ಮುಖನು ನನ್ನ ಆಜ್ಞೆಯಿಂದ ಜಗತ್ತನ್ನು ಸೃಷ್ಟಿಸುತ್ತಾನೆ.

ಜಗತ್ತಿನ ಪಾಲನೆಯನ್ನು ಮಾಡುವ ನಾರಾಯಣನೂ ಕೂಡ ನನ್ನದೇ ಒಂದು ರೂಪ. ಸಂಹಾರ ಮಾಡುವ ರುದ್ರನೂ ನನ್ನ ಒಂದು ರೂಪ. ದೇವತೆಗಳಿಗೆ ಹವಿಸ್ಸನ್ನು, ಪಿತೃಗಳಿಗೆ ಕವ್ಯವನ್ನೂ ತಲುಪಿಸುವ, ಪದಾರ್ಥಗಳಲ್ಲಿ ಪಾಕವನ್ನು ಉಂಟು ಮಾಡುವ ಅಗ್ನಿಯೂ ನನ್ನ ಶಕ್ತಿಯಿಂದ ಪ್ರೇರಿತನಾಗಿ ಈ ಕೆಲಸಗಳನ್ನು ಮಾಡುತ್ತಾನೆ. ವೈಶ್ವಾನರಾಗ್ನಿಯು ನನ್ನ ಆಜ್ಞೆಗೆ ವಶನಾಗಿ ದೇಹಧಾರಿಗಳು ತಿನ್ನುವ ಆಹಾರದ ಪಚನಕ್ರಿಯೆಯನ್ನು ನಡೆಸುತ್ತಾನೆ. ಜಲತತ್ವದ ಒಡೆಯನಾದ ವರುಣನೂ ಕೂಡ ನನ್ನ ಪ್ರೇರಣೆಯಿಂದಲೇ ಎಲ್ಲವಸ್ತುಗಳಿಗೂ ಆಪ್ಯಾಯನ-ವನ್ನು ಉಂಟು ಮಾಡುವನು. ಎಲ್ಲ ವಸ್ತುಗಳ ಒಳಗೂ, ಹೊರಗೂ ಇರುವ ವಾಯು ತತ್ವದ ಒಡೆಯನಾದ ವಾಯುದೇವನು ನನ್ನ ಆಜ್ಞೆಯಿಂದಲೇ ಎಲ್ಲ ದೇಹಧಾರಿಗಳ ದೇಹದ ಪೋಷಕನಾಗಿದ್ದಾನೆ. ಮನುಷ್ಯರಿಗೂ, ದೇವತೆಗಳಿಗೂ ಚೈತನ್ಯವನ್ನು ನೀಡುತ್ತಿರುವ ಅಮೃತನಿಧಿಯಾದ ಚಂದ್ರನು ನನ್ನ ಆಜ್ಞೆಯಿಂದಲೇ ಈ ಕೆಲಸವನ್ನು ಮಾಡುತ್ತಿದ್ದಾನೆ. ತನ್ನಲ್ಲಿರುವ ತೇಜಸ್ಸಿನಿಂದ ಜಗತ್ತನ್ನೇ ಬೆಳಗುತ್ತಿರುವ, ಜಗತ್ತಿಗೆ ಮಳೆ-ಬೆಳೆಯನ್ನು ತರುತ್ತಿರುವ ಸೂರ್ಯನೂ ಕೂಡ ನನ್ನ ಪ್ರೇರಣೆಯಿಂದ ಈ ಕೆಲಸಗಳನ್ನು ಮಾಡುತ್ತಿದ್ದಾನೆ.

ಅಖಿಲಜಗತ್ತಿನ ಶಾಸಕನಾದ, ಎಲ್ಲ ದೇವತೆಗಳ ನಾಯಕನಾದ, ಯಜ್ಞದ ಫಲಗಳನ್ನು ಕೊಡುವ ದೇವೇಂದ್ರನು ನನ್ನ ಆಜ್ಞೆಯಿಂದ ಈ ಕೆಲಸಗಳನ್ನು ಮಾಡುತ್ತಿದ್ದಾನೆ. ಸೂರ್ಯ ಪುತ್ರನಾದ ಯಮನೂ ಕೂಡ ದೇವೋತ್ತಮನಾದ ನನ್ನ ಆಜ್ಞೆಯಿಂದ ದುಷ್ಟರನ್ನು ಶಿಕ್ಷಿಸುವ ಕೆಲಸವನ್ನು ತಪ್ಪದೇ ಮಾಡುತ್ತಿದ್ದಾನೆ. ಧನಾಧ್ಯಕ್ಷನಾದ ಕುಬೇರನೂ ಕೂಡ ನನ್ನ ಆಜ್ಞೆಯಿಂದಲೇ ಧನವಿತರಣೆಯನ್ನು ಮಾಡುತ್ತಿದ್ದಾನೆ. ತಾಮಸಕರ್ಮಗಳಿಗೆ ಫಲವನ್ನು ಕೊಡುವ, ಎಲ್ಲ ರಾಕ್ಷಸರ ಅಧಿಪತಿಯಾದ ನಿಋತಿಯೂ ನನ್ನ ಶಾಸನಕ್ಕೆ ಒಳಪಟ್ಟಿದ್ದಾನೆ. ವೇತಾಲಗಳಿಗೆ, ಭೂತಗಳಿಗೆ ನಿಯಾಮಕನಾದ, ಭಕ್ತರಿಗೆ ಭೋಗವನ್ನು ಕೊಡುವ ಈಶಾನನೂ ನನ್ನ ಶಾಸನಕ್ಕೆ ಒಳಪಟ್ಟಿದ್ದಾನೆ. ಅಂಗೀರಸ ಮುನಿಗಳ ಶಿಷ್ಯನಾದ, ರುದ್ರಗಣಗಳ ನಾಯಕನಾದ, ಯೋಗಿಗಳ ರಕ್ಷಕನಾದ ವಾಮದೇವನೂ ನನ್ನ ಶಾಸನಕ್ಕೆ ಒಳಪಟ್ಟಿದ್ದಾನೆ. ವೇತಾಲಗಳಿಗೆ, ಭೂತಗಳಿಗೆ ನಿಯಾಮಕನಾದ, ಭಕ್ತರಿಗೆ ಭೋಗವನ್ನು ಕೊಡುವ ಈಶಾನನೂ ನನ್ನ ಶಾಸನಕ್ಕೆ ಒಳಪಟ್ಟಿದ್ದಾನೆ.

ಮರೀಚಿ ಮೊದಲಾದ ಪ್ರಜಾಪತಿಗಳೂ ಕೂಡ ನನ್ನ ಶಾಸನದಿಂದಲೇ ಸೃಷ್ಟಿಯನ್ನು ಮಾಡುತ್ತಾರೆ. ಎಲ್ಲರಿಗೂ ಸಂಪತ್ತನ್ನು ಕೊಡುವ, ಶ್ರೀಮನ್ನಾರಾಯಣನ ಪತ್ನಿಯಾದ ಲಕ್ಷ್ಮೀದೇವಿಯೂ ಕೂಡ ನನ್ನ ಅನುಗ್ರಹ ಬಲದಿಂದಲೇ ಈ ಕಾರ್ಯವನ್ನು ಮಾಡುತ್ತಾಳೆ. ಸಮೃದ್ಧವಾದ ಮಾತಿನ ಸಾಮರ್ಥ್ಯವನ್ನು ಕೊಡುವ ಸರಸ್ವತಿಯು ನನ್ನ ಆಜ್ಞೆಯಿಂದಲೇ ಈ

ಕೆಲಸವನ್ನು ಮಾಡುತ್ತಾಳೆ. ಸಾವಿತ್ರಿಯು ನನ್ನ ಆಜ್ಞೆಯಿಂದಲೇ ಜನರನ್ನು ನರಕದಿಂದ ದಾಟಿಸುತ್ತಾಳೆ. ಶ್ರೇಷ್ಠಳಾದ ಪಾರ್ವತೀದೇವಿಯೂ ಕೂಡ ನನ್ನ ಆಜ್ಞೆಯಿಂದಲೇ ಬ್ರಹ್ಮವಿದ್ಯೆಯನ್ನು ಕೊಡುತ್ತಾಳೆ. ಎಲ್ಲ ದೇವತೆಗಳ ಪ್ರಭುವಾದ, ಅನಂತಮಹಿಮನಾದ ಶೇಷನು ನನ್ನ ಆಜ್ಞೆಯಿಂದಲೇ ಲೋಕಗಳನ್ನು ತಲೆಯ ಮೇಲೆ ಹೊತ್ತಿದ್ದಾನೆ.

ಸಮುದ್ರದಲ್ಲಿ ವಡವಾ ಎಂಬ ಹೆಸರಿನಿಂದ ಇರುವ ಸಂವರ್ತಕ ಎಂಬ ವಿನಾಶಕಾರೀ ಅಗ್ನಿಯು ನನ್ನ ಆಜ್ಞೆಯಿಂದಲೇ ಇಡೀ ಸಮುದ್ರವನ್ನು ಕುಡಿಯುತ್ತಾನೆ. ಪ್ರಸಿದ್ಧ ಮಹಿಮರಾದ ಮನುಗಳು ಹದಿನಾಲ್ಕು ಲೋಕಗಳಲ್ಲಿ ಇರುವ ಎಲ್ಲ ಪ್ರಜೆಗಳನ್ನು ನನ್ನ ಆಜ್ಞೆಗನುಗುಣವಾಗಿ ಪಾಲಿಸುತ್ತಿದ್ದಾರೆ. ಆದಿತ್ಯರು, ವಸುಗಳು, ರುದ್ರರು, ಮರುತ್‌ಗಳು, ಅಶ್ವಿನಿ ದೇವತೆಗಳು, ಬೇರೆ ದೇವತೆಗಳು ನನ್ನ ಶಾಸನಕ್ಕೆ ಒಳಪಟ್ಟಿದ್ದಾರೆ. ಗಂಧರ್ವರು, ಗರುಡ ಮೊದಲಾದವರು, ಸಿದ್ಧರು, ಸಾಧ್ಯರು, ಚಾರಣರು, ಯಕ್ಷರು, ರಾಕ್ಷಸರು, ಪಿಶಾಚಿಗಳು ನನ್ನಿಂದಲೇ ಸೃಷ್ಟಿಸಲ್ಪಟ್ಟಿದ್ದಾರೆ. ಕಲಾ, ಕಾಷ್ಠಾ, ನಿಮೇಷ, ಮುಹೂರ್ತ, ದಿವಸ, ರಾತ್ರಿ, ಋತುಗಳು, ಪಕ್ಷಗಳು, ಮಾಸಗಳು ನನ್ನ ಶಾಸನಕ್ಕೆ ಒಳಪಟ್ಟಿವೆ. ಯುಗಗಳು, ಮನ್ವಂತರಗಳು, ಪರ ಕಾಲ, ಪರಾರ್ಧ ಕಾಲ ವಿಭಾಗಗಳು ಕೂಡ ನನ್ನ ಶಾಸನಕ್ಕೆ ಒಳಪಟ್ಟಿವೆ.

ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ ಎಂಬ ನಾಲ್ಕು ವಿಧ ಭೂತಗಳು, ಎಲ್ಲ ಸ್ಥಾವರಗಳೂ, ಜಂಗಮಗಳು ಪರಮಾತ್ಮನಾದ ನನ್ನ ಶಾಸನಕ್ಕೆ ಒಳಪಟ್ಟಿವೆ. ಹಿಂದೆ ಆಗಿಹೋದ, ಮುಂದೆ ಆಗಲಿರುವ ಎಲ್ಲ ಬ್ರಹ್ಮಾಂಡಗಳು ಅವುಗಳಲ್ಲಿರುವ ಪ್ರತಿಯೊಂದು ಪದಾರ್ಥವೂ ನನಗೆ ಅಧೀನವಾಗಿವೆ. ಭೂಮಿ, ಅಗ್ನಿ, ನೀರು, ವಾಯು, ಆಕಾಶ, ಮನಸ್ಸು, ಬುದ್ಧಿ, ಭೂತಗಳ ಮೂಲವಾದ ಆದಿ ಪ್ರಕೃತಿ - ಇವೆಲ್ಲವೂ ನನ್ನ ಶಾಸನಕ್ಕೆ ಒಳಪಟ್ಟಿವೆ. ಜಗತ್ತಿಗೆ ಸೃಷ್ಟಿಗೆ ಕಾರಣಳಾದ, ಎಲ್ಲ ದೇಹಧಾರಿಗಳಿಗೂ ಮೋಹವನ್ನುಂಟುಮಾಡುವ ಮಾಯೆಯೂ ನನ್ನ ಶಾಸನಕ್ಕೆ ಒಳಪಟ್ಟಿದೆ. ದೇಹಧಾರಿಗಳೆಲ್ಲರ ನಿಯಾಮಕನಾದ ಪರಮಪುರುಷನೂ ನನ್ನ ಶಾಸನಕ್ಕೆ ಒಳಪಟ್ಟಿದ್ದಾನೆ. ಮೋಹವನ್ನು ನಿವಾರಿಸಿಕೊಂಡು ಪರಮೇಶ್ವರನ ಸ್ವರೂಪವನ್ನು ತಿಳಿಯಲು ಸಾಧನವಾದ ಬುದ್ಧಿಯೂ ನನಗೆ ವಶವಾಗಿದೆ.

ಹೆಚ್ಚು ಮಾತು ಏಕೆ? ಇಡೀ ಜಗತ್ತು ನನ್ನ ಶಕ್ತಿಯಿಂದಲೇ ತುಂಬಿಹೋಗಿದೆ. ನನ್ನ ಪ್ರೇರಣೆಯಿಂದಲೇ ಎಲ್ಲ ಕ್ರಿಯೆಗಳೂ ನಡೆಯುತ್ತಿವೆ. ಕೊನೆಗೆ ನನ್ನಲ್ಲೇ ಲಯವನ್ನು ಹೊಂದುತ್ತದೆ. ನಾನು ಭಗವಾನ್ ಈಶ; ಸ್ವಯಂಜ್ಯೋತಿ, ಸನಾತನ, ಪರಮಾತ್ಮಾ, ಪರಂಬ್ರಹ್ಮ, ನನಗಿಂತ ಉತ್ತಮನಾದವನು ಬೇರೆ ಯಾರೂ ಇಲ್ಲ. ಹೀಗೆ ಶ್ರೇಷ್ಠವಾದ ಪ್ರಮೇಯವು ನಿಮಗೆ ನನ್ನಿಂದ ಹೇಳಲ್ಪಟ್ಟಿದೆ. ಇದನ್ನು ತಿಳಿದವನು ಸಂಸಾರ ಬಂಧನದಿಂದ ಮುಕ್ತಿಯನ್ನು ಪಡೆಯುತ್ತಾನೆ.

* * *

## ಅಧ್ಯಾಯ-೬೦

**ಈಶ್ವರ ಉವಾಚ :**

ಮುನಿಗಳೇ! ಪರಮೇಶ್ವರನ ಪ್ರಭಾವವನ್ನು ಕೇಳಿರಿ. ಇದನ್ನು ತಿಳಿದವನು ಮುಕ್ತಿಯನ್ನು ಪಡೆಯುತ್ತಾನೆ. ಪುನಃ ಸಂಸಾರಕ್ಕೆ ಬರುವುದಿಲ್ಲ. ನಾನು ನಿತ್ಯಾನಂದನೂ, ನಿರ್ವಿಕಲ್ಪನೂ, ಶಾಶ್ವತನೂ ಆದ ಪರಬ್ರಹ್ಮ.

**ಶಿವನ ವಿಭೂತಿಗಳು★ :**

ನಾನು ಬ್ರಹ್ಮಜ್ಞಾನಿಗಳಲ್ಲಿ ಬ್ರಹ್ಮದೇವನೇ ಆಗಿದ್ದೇನೆ. (ಬ್ರಹ್ಮಜ್ಞಾನಿಗಳಲ್ಲಿ ಚತುರ್ಮುಖಬ್ರಹ್ಮನೇ ಶ್ರೇಷ್ಠ . ಈ ಶ್ರೇಷ್ಠತೆಗೆ ಕಾರಣ ಬ್ರಹ್ಮದೇವನಲ್ಲಿ ಇರುವ ನನ್ನ ಒಂದು ರೂಪ ಎಂದು ಈ ಮಾತಿನ ಅರ್ಥ. ಮುಂದಿನ ಮಾತುಗಳ ಅಭಿಪ್ರಾಯವೂ ಇದೇ.)

ಮಾಯಾವಿಗಳಲ್ಲಿ ಪುರಾಣ ಪುರುಷನಾದ ಹರಿಯೇ ಆಗಿದ್ದೇನೆ. ನಾನು ಯೋಗಿಗಳಲ್ಲಿ ಶಂಭು. ಸ್ತ್ರೀಯರಲ್ಲಿ ಪಾರ್ವತೀ. ಆದಿತ್ಯರಲ್ಲಿ ವಿಷ್ಣು. ವಸುಗಳಲ್ಲಿ ಪಾವಕ. ರುದ್ರರಲ್ಲಿ ಶಂಕರ. ಪಕ್ಷಿಗಳಲ್ಲಿ ಗರುಡ. ಗಜಗಳಲ್ಲಿ ಐರಾವತ. ಶಸ್ತ್ರಧಾರಿಗಳಲ್ಲಿ ಪರಶುರಾಮ. ಋಷಿಗಳಲ್ಲಿ ವಸಿಷ್ಠ. ದೇವತೆಗಳಲ್ಲಿ ದೇವೇಂದ್ರ. ಶಿಲ್ಪಿಗಳಲ್ಲಿ ವಿಶ್ವಕರ್ಮ. ಅಸುರರಲ್ಲಿ ಪ್ರಹ್ಲಾದ. ಮುನಿಗಳಲ್ಲಿ ವ್ಯಾಸ. ಗಣಾಧಿಪರಲ್ಲಿ ವಿನಾಯಕ. ವೀರರಲ್ಲಿ ವೀರಭದ್ರ. ಸಿದ್ಧರಲ್ಲಿ ಕಪಿಲ ಮುನಿ. ಪರ್ವತಗಳಲ್ಲಿ ಮೇರು. ನಕ್ಷತ್ರಗಳಲ್ಲಿ ಚಂದ್ರ. ಆಯುಧಗಳಲ್ಲಿ ವಜ್ರ. ವ್ರತಗಳಲ್ಲಿ ಸತ್ಯ. ಸರ್ಪಗಳಲ್ಲಿ ಅನಂತಶೇಷ.

ಸೇನಾನಿಗಳಲ್ಲಿ ಷಣ್ಮುಖ. ಆಶ್ರಮಗಳಲ್ಲಿ ಗೃಹಸ್ಥಾಶ್ರಮ. ಈಶ್ವರರಲ್ಲಿ ಮಹೇಶ್ವರ. ಕಲ್ಪಗಳಲ್ಲಿ ಮಹಾಕಲ್ಪ. ಯುಗಗಳಲ್ಲಿ ಕೃತ. ಯಕ್ಷರಲ್ಲಿ ಕುಬೇರ. ಹುಲ್ಲುಗಳಲ್ಲಿ ವೀರುಧ್.(ಇದೊಂದು ವಿಧವಾದ ಹುಲ್ಲು). ಪ್ರಜಾಪತಿಗಳಲ್ಲಿ ದಕ್ಷ. ರಾಕ್ಷಸರಲ್ಲಿ ನಿಋತಿ. ಬಲಶಾಲಿಗಳಲ್ಲಿ ವಾಯು. ದ್ವೀಪಗಳಲ್ಲಿ ಪುಷ್ಕರ. ಮೃಗೇಂದ್ರಗಳಲ್ಲಿ ಸಿಂಹ. ಯಂತ್ರಗಳಲ್ಲಿ ಬಿಲ್ಲು. ವೇದಗಳಲ್ಲಿ ಸಾಮವೇದ. ಯಜುರ್ವೇದ ಮಂತ್ರಗಳಲ್ಲಿ ಶತರುದ್ರಿಯ. ಜಪಯೋಗ್ಯವಾದ ಮಂತ್ರಗಳಲ್ಲಿ ಗಾಯತ್ರಿ. ರಹಸ್ಯ ಮಂತ್ರಗಳಲ್ಲಿ ಓಂಕಾರ.

---

★ ಈ ಅಧ್ಯಾಯದಲ್ಲಿ ಇರುವ ವಿವರಣೆ ಭಗವದ್ಗೀತೆಯಲ್ಲಿರುವ ಶ್ರೀಕೃಷ್ಣನ ವಿಭೂತಿರೂಪಗಳ ವರ್ಣನೆಯಂತೆಯೇ ಇದೆ. ಆದರೆ ಇದು ಶಿವನ ವಿಭೂತಿರೂಪದ ವರ್ಣನೆ ಎಂದು ಈ ಅಧ್ಯಾಯದಲ್ಲಿ ಹೇಳಿಲ್ಲ. ವಿಭೂತಿ ಎಂದರೆ ಮಹತ್ವ ಅಥವಾ ವಿವಿಧರೂಪಗಳು ಎಂದು ಅರ್ಥ. ಜಗತ್ತಿನಲ್ಲಿ ಒಂದು ಗುಂಪಿಗೆ ಸೇರಿದ ವಸ್ತುಗಳಲ್ಲಿ ಯಾವುದು ಶ್ರೇಷ್ಠವೋ, ಅದರ ಶ್ರೇಷ್ಠತೆಗೆ ಆ ವಸ್ತುವಿನಲ್ಲಿ ಇರುವ ಭಗವಂತನ ಒಂದು ರೂಪವೇ ಕಾರಣ. ಭಗವಂತನೇ ಒಂದು ರೂಪದಿಂದ ಆ ವಸ್ತುವಿನಲ್ಲಿ ಇರುವುದರಿಂದ ಆ ವಸ್ತು ಬೇರೆ ವಸ್ತುಗಳಿಗಿಂತ ಶ್ರೇಷ್ಠವಾಗಿದೆ. ಈ ರೂಪಕ್ಕೆ ವಿಭೂತಿರೂಪ ಎಂದು ಹೆಸರು. ಇಂತಹ ವಸ್ತುಗಳು, ವ್ಯಕ್ತಿಗಳು ವಿಪುಲವಾಗಿರುವುದರಿಂದ ಭಗವಂತನ ವಿಭೂತಿರೂಪಗಳೂ ವಿಪುಲವಾಗಿವೆ.

ಸೂಕ್ತಗಳಲ್ಲಿ ಪುರುಷಸೂಕ್ತ. ಸಾಮಗಳಲ್ಲಿ ಜ್ಯೇಷ್ಠಸಾಮ. ಸಕಲವೇದಾರ್ಥಗಳನ್ನು ತಿಳಿದವರಲ್ಲಿ ಸ್ವಾಯಂಭುವ ಮನು. ದೇಶಗಳಲ್ಲಿ ಬ್ರಹ್ಮಾವರ್ತ. ಕ್ಷೇತ್ರಗಳಲ್ಲಿ ಅವಿಮುಕ್ತಕ್ಷೇತ್ರ. ವಿದ್ಯೆಗಳಲ್ಲಿ ಆತ್ಮವಿದ್ಯೆ. ಜ್ಞಾನಗಳಲ್ಲಿ ಈಶ್ವರಜ್ಞಾನ, ಭೂತಗಳಲ್ಲಿ ಆಕಾಶ, ತತ್ವಗಳಲ್ಲಿ ಮೃತ್ಯು, ಪಾಶಗಳಲ್ಲಿ ಮಾಯಾಪಾಶ, ನಾಶ ಮಾಡುವ ವಸ್ತು ಅಥವಾ ವ್ಯಕ್ತಿಗಳಲ್ಲಿ ಕಾಲ, ಹೊಂದಬೇಕಾದ ಸ್ಥಿತಿಗಳಲ್ಲಿ ಮುಕ್ತಿ.

ಲೋಕದಲ್ಲಿ ಯಾವ ವಸ್ತು ತೇಜಸ್ಸು ಮತ್ತು ಬಲಗಳಿಂದ ಅಧಿಕವಾಗಿದೆಯೋ ಆ ಎಲ್ಲ ವಸ್ತುಗಳೂ ನನ್ನ ತೇಜಸ್ಸಿನಿಂದಲೇ ವಿಜೃಂಭಿಸುತ್ತಿವೆ. ಸಂಸಾರದಲ್ಲಿರುವ ಆತ್ಮಗಳಿಗೆ ಪಶು ಎಂದು ಹೆಸರು. ನಾನು ಅವರ ಪತಿ. ಆದ್ದರಿಂದ ನನ್ನನ್ನು ಪಂಡಿತರು ಪಶುಪತಿ ಎನ್ನುತ್ತಾರೆ. ನಾನು ಸಂಸಾರಿಗಳನ್ನು ಮಾಯಾಪಾಶದಿಂದ ಕಟ್ಟುತ್ತೇನೆ. ಸ್ವೇಚ್ಛೆಯಿಂದಲೇ ಹೀಗೆ ಮಾಡುತ್ತೇನೆ. ಈ ಪಶುಗಳಿಗೆ ಬಿಡುಗಡೆಯನ್ನು ಕೊಡುವವನೂ ನಾನೇ. ಹೀಗೆಂದು ವೇದವಾದಿಗಳು ಹೇಳುತ್ತಾರೆ. ಮಾಯಾಪಾಶದಿಂದ ಬದ್ಧರನ್ನು ಭೂತಾಧಿಪತಿಯಾದ ಪರಮಾತ್ಮನಾದ ನಾನು ಮಾತ್ರ ಬಿಡಿಸಬಲ್ಲೆ. ಇನ್ನಾರೂ ಬಿಡಿಸಲಾರರು.

## ಇಪ್ಪತ್ತುನಾಲ್ಕು ತತ್ವಗಳು ಮತ್ತು ಪಾಶಗಳು :

ಇಪ್ಪತ್ತನಾಲ್ಕು ತತ್ವಗಳು, ಮಾಯೆ, ಕರ್ಮ, ಸತ್ವ-ರಜಸ್-ತಮೋಗುಣಗಳು, ಕ್ಲೇಶಗಳು - ಇವುಗಳು ಸಂಸಾರಿ ಆತ್ಮಗಳನ್ನು ಕಟ್ಟಲು ಪರಮೇಶ್ವರನು ಉಪಯೋಗಿಸುವ ಪಾಶಗಳು.

ಮನಸ್ಸು (೧) ಬುದ್ಧಿ (೨) ಅಹಂಕಾರ (೩) ಆಕಾಶ (೪) ವಾಯು (೫) ಅಗ್ನಿ (೬) ನೀರು (೭) ಭೂಮಿ (೮) - ಈ ಎಂಟು ಪ್ರಕೃತಿಗಳು. ಶ್ರೋತ್ರ (೯) ತ್ವಕ್ (೧೦) ಚಕ್ಷುಷ್ (೧೧) ಜಿಹ್ವಾ (೧೨) ಘ್ರಾಣ (೧೩) ವಾಯು (೧೪) ಉಪಸ್ಥ (೧೫) ಕರ (೧೬) ಪಾದ (೧೭) ವಾಕ್ (೧೮) ಶಬ್ದ (೧೯) ಸ್ಪರ್ಶ (೨೦) ರೂಪ (೨೧) ರಸ (೨೨) ಗಂಧ (೨೩) - ಈ ಹದಿನೈದು ವಿಕೃತಿಗಳು.

ಸತ್ವ-ರಜಸ್-ತಮೋ ಗುಣಗಳನ್ನು ಲಕ್ಷಣವಾಗಿ ಹೊಂದಿರುವ ಅವ್ಯಕ್ತವು ಇಪ್ಪತ್ತನಾಲ್ಕನೆಯ ತತ್ವ. ಇದಕ್ಕೆ ಆದಿ, ಮಧ್ಯ, ಅಂತಗಳಿಲ್ಲ. ಇದು ಜಗತ್ ಸೃಷ್ಟಿಗೆ ಕಾರಣ. (ಪರಿಣಾಮ ಹೊಂದುವ ಕಾರಣ). ಸತ್ವ-ರಜಸ್-ತಮೋಗುಣಗಳ ಸಾಮ್ಯಾವಸ್ಥೆಗೆ ಅವ್ಯಕ್ತ ಪ್ರಕೃತಿ ಎಂದು ಹೆಸರು. ಈ ಗುಣಗಳ ವಿಷಮಸ್ಥಿತಿಯಿಂದ ಬುದ್ಧಿಯು ವಿಷಮವಾಗುತ್ತದೆ. ಬುದ್ಧಿಯ ವೈಷಮ್ಯಕ್ಕನುಗುಣವಾಗಿ ಜ್ಞಾನವು ಸಾತ್ವಿಕ, ರಾಜಸ, ತಾಮಸ ಎಂದು ಮೂರು ವಿಧವಾಗಿರುತ್ತದೆ. ಇದು ಜ್ಞಾನಿಗಳ ಅಭಿಪ್ರಾಯ. ಧರ್ಮ-ಅಧರ್ಮ ಇವುಗಳಿಗೆ ಕರ್ಮ ಎಂದು ಹೆಸರು. ಪಾಶ ಎಂದೂ ಹೆಸರು. ಕರ್ಮಗಳನ್ನು ನನಗೆ ಅರ್ಪಿಸಿದರೆ ಅರ್ಪಿಸಿದವನು ಮುಕ್ತಿಯನ್ನು ಪಡೆಯುತ್ತಾನೆ. ಅವುಗಳು ಅವನಿಗೆ ಬಂಧಕವಾಗುವುದಿಲ್ಲ.

ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶ - ಈ ಐದು ಕ್ಲೇಶಗಳು. ಇವುಗಳು ಬಂಧನ ಪಾಶಗಳು. ಈ ಕ್ಲೇಶಗಳಿಗೆ ಕಾರಣ ಮಾಯೆ. ಅವ್ಯಕ್ತವಾದ ಮೂಲ ಪ್ರಕೃತಿಯೇ ಮಾಯೆ. ಇದು ನನಗೆ ಅಧೀನ. ಮೂಲ ಪ್ರಕೃತಿಯ ಮಹತ್ತತ್ವ ಮೊದಲಾದ ಎಲ್ಲ ವಿಕೃತಿಗಳಲ್ಲಿ ಪರಮಪುರುಷನಾದ ಪರಮೇಶ್ವರನ ಅನುಪ್ರವೇಶ ಇದ್ದೇ ಇದೆ. ಈ ಅರ್ಥದಲ್ಲಿ ಅವೆಲ್ಲವೂ ಅವನ ರೂಪಗಳೇ. ಈ ಪರಮಪುರುಷನೇ ಬಂಧ. ಇವನೇ ಬಂಧಕ. ಇವನೇ ಪಾಶ. ಇವನೇ ಪಾಶಧಾರಿ. ಇವನೊಬ್ಬನೇ ಎಲ್ಲವನ್ನೂ ತಿಳಿದಿದ್ದಾನೆ. ಇವನನ್ನು ಪೂರ್ಣವಾಗಿ ತಿಳಿದವನು ಯಾರೂ ಇಲ್ಲ. ಇವನನ್ನೇ ಪುರಾಣಪುರುಷ ಎಂದು ಶಾಸ್ತ್ರಗಳು ಹೇಳುತ್ತವೆ. ಜ್ಞಾನಿಗಳು ಹೇಳುತ್ತಾರೆ.

* * *

## ಅಧ್ಯಾಯ-೬೧

**ಈಶ್ವರ ಉವಾಚ :**

ಬ್ರಾಹ್ಮಣ ಶ್ರೇಷ್ಠರೇ! ನಿಮಗೆ ಇನ್ನೊಂದು ರಹಸ್ಯ ಪ್ರಮೇಯವನ್ನು ಉಪದೇಶಿಸುತ್ತೇನೆ. ಈ ಪ್ರಮೇಯವನ್ನು ತಿಳಿದವರು ಘೋರವಾದ ಸಂಸಾರ ಸಾಗರವನ್ನು ದಾಟುತ್ತಾರೆ.

ನಾನು ಪರಮೇಶ್ವರ. ನನ್ನನ್ನು ಪೂರ್ಣ, ಶಾಂತ, ಶಾಶ್ವತ, ನಿರ್ಮಲ, ಅವ್ಯಯ, ಸ್ವತಂತ್ರ ಭಗವಾನ್ ಎಂದು ತಿಳಿದವರು ಹೇಳುತ್ತಾರೆ. ಮಹದ್ಬ್ರಹ್ಮ ಎಂದು ಪ್ರಸಿದ್ಧಳಾದ ಮಹಾದೇವಿಯು ನನ್ನ ಪತ್ನಿ. ನಾನು ಅವಳಲ್ಲಿ ಮೂಲ, ಮಾಯಾ ಎಂಬ ಹೆಸರಿನ ಗರ್ಭವನ್ನು ಇಡುತ್ತೇನೆ. ಅವಳ ಗರ್ಭದಿಂದ ಈ ಜಗತ್ತು ಹುಟ್ಟಿದೆ. ಜಗತ್ತು ಹುಟ್ಟಿದೆ ಎಂದರೆ ಪ್ರಧಾನ, ಪುರುಷ, ಆತ್ಮಾ, ಮಹತ್ತತ್ವ, ಅಹಂಕಾರ ತತ್ವ ತನ್ಮಾತ್ರಗಳು, ಮನಸ್ಸು, ಭೂತಗಳು, ಇಂದ್ರಿಯಗಳು - ಇವುಗಳು ಹುಟ್ಟಿವೆ ಎಂದು ಅರ್ಥ. ಇವುಗಳಿಂದ ಬಂಗಾರದ, ಕೋಟಿ ಸೂರ್ಯರ ಪ್ರಭೆಯನ್ನು ಹೊಂದಿರುವ ಬ್ರಹ್ಮಾಂಡದ ರಚನೆಯಾಯಿತು. ಈ ಬ್ರಹ್ಮಾಂಡ-ದಲ್ಲಿ ಮಹಾಬ್ರಹ್ಮ(ಚತುರ್ಮುಖ ಬ್ರಹ್ಮ)ನು ಜನಿಸಿದನು. ಅವನು ನನ್ನ ಶಕ್ತಿಯಿಂದ ಬೆಳೆದಿದ್ದಾನೆ.

ಜಗತ್ತಿನ ಜೀವಸಮುದಾಯಕ್ಕೆ ಈ ಬ್ರಹ್ಮನೇ ಅಧಿಪತಿ. ನನ್ನ ಮಾಯೆಯಿಂದ ಮೋಹಿತರಾದ ಈ ಜೀವರು ನನ್ನನ್ನು ತಮ್ಮ ಜನಕ ಎಂದು ತಿಳಿದಿಲ್ಲ. ಯಾರು ನನ್ನನ್ನು ಜನಕ, ಪ್ರಭು ಎಂದು ತಿಳಿಯುತ್ತಾರೋ ಅವನೇ ಶ್ರೇಷ್ಠ ಪುರುಷ. ಅವನಿಗೆ

ಮತ್ತೆಂದೂ ಮೋಹವು ಉಂಟಾಗುವುದಿಲ್ಲ. ನಾನು ಎಲ್ಲ ವಿದ್ಯೆಗಳ ನಿಯಾಮಕ. ಎಲ್ಲ ಭೂತಗಳ ಈಶ್ವರ. ಓಂಕಾರ ಪ್ರತಿಪಾದ್ಯ. ಹೀಗಿರುವ ನಾನೇ ಬ್ರಹ್ಮ. ನಾನೇ ಪ್ರಜಾಪತಿ. ನಾನು ಎಲ್ಲ ಭೂತಗಳ ಬಗ್ಗೆ ಸಮವಾಗಿ ನಡೆದುಕೊಳ್ಳುತ್ತೇನೆ. ನಾಶವಾಗುವ ವಸ್ತುಗಳಲ್ಲಿ ಇರುವ ನಾನು ನಾಶವಾಗುವುದಿಲ್ಲ. ಹೀಗೆ ನನ್ನನ್ನು ತಿಳಿದವನು ಜ್ಞಾನಿ. ಈಶ್ವರನು ಎಲ್ಲ ಕಡೆಯೂ ಸಮನಾಗಿದ್ದಾನೆ ಎಂದು ತಿಳಿಯುವವನ ಮನೋದೋಷಗಳು ಪರಿಹಾರವಾಗುತ್ತವೆ. ಆದ್ದರಿಂದ ತನ್ನ ದುಃಖಗಳೂ ದೂರವಾಗುತ್ತವೆ. ಅನಂತರ ಮುಕ್ತಿಯನ್ನು ಪಡೆಯುತ್ತಾನೆ.

ಏಳು ಸೂಕ್ಷ್ಮಗಳನ್ನು, ಆರು ಅಂಗಗಳಿಂದ ಸಹಿತನಾದ ಮಹೇಶ್ವರನನ್ನು, ಪ್ರಕೃತಿ-ಕಾರ್ಯವನ್ನು ತಿಳಿದವನು ಪರಬ್ರಹ್ಮನನ್ನು ಹೊಂದುತ್ತಾನೆ. ಸರ್ವಜ್ಞತ್ವ, ತೃಪ್ತಿ, ಅನಾದಿಜ್ಞಾನ, ಸ್ವಚ್ಛಂದತೆ (ತನ್ನ ಇಚ್ಛೆಯಂತೆಯೇ ನಡೆಯುವ ಸಾಮರ್ಥ್ಯ), ಎಂದೂ ಲೋಪವಾಗದ ಶಕ್ತಿ, ಅನಂತಶಕ್ತಿ - ಇವು ಮಹೇಶ್ವರನ ಆರು ಅಂಗಗಳು. ಪಂಚ ತನ್ಮಾತ್ರಗಳು (ರೂಪ, ರಸ, ಗಂಧ, ಸ್ಪರ್ಶ, ಶಬ್ದ - ಇವುಗಳ ಸೂಕ್ಷ್ಮರೂಪ) ಮನಸ್ಸು ಮತ್ತು ಆತ್ಮ ಇವು ಏಳು ಸೂಕ್ಷ್ಮ-ಗಳು. ಉತ್ಪನ್ನವಾಗುವ ಜಡವಸ್ತುಗಳ ಉಪಾದಾನ (ಪರಿಣಾಮ ಹೊಂದುವ) ಕಾರಣವೇ ಪ್ರಕೃತಿ. ಈ ಪ್ರಕೃತಿಯೇ ಪ್ರಧಾನ. ಇದರ ಪರಿಣಾಮದಿಂದಲೇ ನಾನಾ ವಿಧವಾದ ಬಂಧವು ಉಂಟಾಗುತ್ತದೆ.

ಪರಮೇಶ್ವರನೇ ಜಗತ್ತಿನ ಮೊದಲ ತತ್ತ್ವ. ಅವನ ಶಕ್ತಿ ಪ್ರಕೃತಿಯಲ್ಲಿ ಅಂತರ್ಗತವಾಗಿದೆ ಎಂದೂ, ಚತುರ್ಮುಖ ಬ್ರಹ್ಮ ಅವನಿಂದಲೇ ಆವಿರ್ಭವಿಸುತ್ತಾನೆ ಎಂದೂ ವೇದಗಳು ಹೇಳುತ್ತವೆ. ಅವನು ಸತ್ಯರೂಪ. ಅವನೇ ಪರಮ ಆತ್ಮ. ಆಕಾಶದಂತೆ ಮತ್ತು ಆಕಾಶದಲ್ಲಿ ವ್ಯಾಪಿಸಿರುವನು. ಅವನೇ ರುದ್ರ, ಅವನೇ ಜಗಜ್ಜನ್ಮಾದಿ ಕಾರಣ. ಅವನಿಗೆ ಒಂದೇ ರೂಪ ಎಂದು ಕೆಲವರು, ಅನೇಕ ರೂಪ ಎಂದು ಮತ್ತೆ ಕೆಲವರೂ ಹೇಳುತ್ತಾರೆ. ಅವನೇ ಜೀವಾತ್ಮಾ ಎಂದು ಕೆಲವರು, ಅವನು ಜೀವಾತ್ಮನಿಂದ ಭಿನ್ನ ಎಂದು ಮತ್ತೆ ಕೆಲವರೂ ಹೇಳುತ್ತಾರೆ. ಅವನು ಅಣುವಿಗಿಂತ ಅಣು, ಮಹತ್‌ಗಿಂತ ಮಹತ್. ಅವನಿಗೆ ವಿಶ್ವರೂಪವಿದೆ. ಸರ್ವರ ಹೃದಯ ಗುಹೆಯಲ್ಲಿ ಅವನು ಇದ್ದಾನೆ. ಅವನು ಸರ್ವರ ಪ್ರಭು. ಪುರಾಣ ಪುರುಷ. ಹಿರಣ್ಮಯ, ಜ್ಞಾನಿಗಳ ಕೊನೆಯ ಗಮ್ಯಸ್ಥಾನ. ಅವನನ್ನು ಯಾರೂ ಪೂರ್ಣವಾಗಿ ತಿಳಿಯಲಾರರು. ಹೀಗೆ ತಿಳಿದವನೇ ಜ್ಞಾನಿ.

* * *

## ಅಧ್ಯಾಯ-೬೨

**ಋಷಯ ಊಚುಃ :**

ಮಹಾದೇವ! ನೀವು ನಿರವಯವ, ನಿರ್ಮಲ, ನಿತ್ಯ, ನಿಷ್ಕ್ರಿಯ. ಇಂತಹ ನಿಮಗೆ ವಿಶ್ವರೂಪ ಹೇಗೆ ಸಾಧ್ಯ? ದಯವಿಟ್ಟು ತಿಳಿಸಬೇಕು.

**ಈಶ್ವರ ಉವಾಚ :**

ನನಗೆ ವಿಶ್ವರೂಪವಿಲ್ಲ. ನನ್ನನ್ನು ಬಿಟ್ಟು ಈ ವಿಶ್ವವೂ ಇಲ್ಲ. ನಾನೊಬ್ಬನೇ ಇದ್ದೇನೆ. ಮಾಯೆಯಿಂದಾಗಿ ಈ ವಿಶ್ವವು ಇದೆ. ಆ ಮಾಯೆಯಾದರೂ ನನ್ನ ಅಧೀನವಾಗಿದೆ. ಮಾಯೆ ಆದಿ, ಅಂತ್ಯಗಳಿಲ್ಲದ ಶಕ್ತಿ. ಅದರ ಪ್ರಭಾವದಿಂದ ಅವ್ಯಕ್ತದಿಂದ ಈ ಜಗತ್ತು ಹುಟ್ಟುತ್ತದೆ. ಅವ್ಯಕ್ತವು ಕಾರಣ. ನಾನೇ ಆನಂದ ರೂಪನೂ, ಜ್ಯೋತಿಃ ಸ್ವರೂಪನೂ ಆದ ಪರಬ್ರಹ್ಮ. ನನ್ನನ್ನು ಬಿಟ್ಟು ಬೇರೆ ಯಾವುದೂ ಇಲ್ಲ. ವಿಶ್ವಕ್ಕೆ ಕಾರಣವಾದ ಮಾಯಾ ಮತ್ತು ಅವ್ಯಕ್ತಗಳು ನನ್ನ ಅಧೀನವಾದ್ದರಿಂದ ನನ್ನನ್ನು ವಿಶ್ವರೂಪ ಎಂದು ಬ್ರಹ್ಮವಾದಿಗಳೂ ಹೇಳುತ್ತಾರೆ. ನಾನು ಪರಮಬ್ರಹ್ಮ, ಸನಾತನನಾದ ಪರಮಾತ್ಮ. ನನ್ನ ಅಸ್ತಿತ್ವಕ್ಕೆ ಯಾವ ಕಾರಣವೂ ಇಲ್ಲ. ನನ್ನಲ್ಲಿ ಯಾವ ದೋಷವೂ ಇಲ್ಲ.

ಮಾಯೆಯ ಶಕ್ತಿಗೆ ಅನಂತ ಮುಖಗಳಿವೆ. ಅವು ಅವ್ಯಕ್ತವಾಗಿವೆ. ಉತ್ಪತ್ತಿ-ನಾಶಗಳಿಲ್ಲದ, ಸನಾತನನಾದ ಪರಬ್ರಹ್ಮನು ವಸ್ತುತಃ ಅಭಿನ್ನನಾಗಿದ್ದರೂ ಮಾಯಾ ಸಂಬಂಧದಿಂದ ಭಿನ್ನ ಎಂದು ಹೇಳಲ್ಪಡುತ್ತಾನೆ. ಈ ಪರಬ್ರಹ್ಮ ಅವ್ಯಕ್ತ. ಇವನು ತೇಜಸ್ಸಿನ ರಾಶಿ. ಅಕ್ಷರ. ಪರಂಜ್ಯೋತಿ. ಇವನೇ ವಿಷ್ಣು. ಇವನಲ್ಲಿ ಇಡೀ ಜಗತ್ತು ಓತಪ್ರೋತವಾಗಿದೆ. ಹೀಗೆ ಪರಬ್ರಹ್ಮನನ್ನು ಜಗತ್ತನ್ನು ತಿಳಿದವನು ಮುಕ್ತನಾಗುತ್ತಾನೆ. ಈ ಪರಬ್ರಹ್ಮನನ್ನು ಯಾವ ಮಾತುಗಳೂ ಪೂರ್ಣವಾಗಿ ತಿಳಿಸುವುದಿಲ್ಲ. ಇವನು ಯಾರ ಮನಸ್ಸಿಗೂ ಪೂರ್ಣವಾಗಿ ನಿಲುಕುವುದಿಲ್ಲ. ಈ ಪರಬ್ರಹ್ಮನ ಆನಂದವನ್ನು ತಿಳಿದವನಿಗೆ ಯಾವ ಭಯವೂ ಉಂಟಾಗುವುದಿಲ್ಲ. ಪರಬ್ರಹ್ಮನನ್ನು ತಿಳಿದವರು ಬ್ರಹ್ಮನ ಆಶ್ರಯದಲ್ಲಿದ್ದು ನಿತ್ಯಸುಖಿಗಳಾಗುತ್ತಾರೆ. ಈ ಪರಬ್ರಹ್ಮನಿಗಿಂತ ಉತ್ತಮವಸ್ತು ಇಲ್ಲ. ಉತ್ತಮವಲ್ಲದ ವಸ್ತುಗಳು ಇವೆ. ಈ ಪರಬ್ರಹ್ಮ ನಾನೇ. ನನ್ನನ್ನು ಅಮೃತ, ವಿಶ್ವಧಾಮ ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ. ಆಕಾಶನಿವಾಸಿಯಾದ, ನಿರ್ಮಲನಾದ, ಹೊಳೆಯುವ ಪರಬ್ರಹ್ಮನನ್ನು ಜ್ಞಾನಿಗಳು ನೋಡಬಲ್ಲರು.

ಪರಬ್ರಹ್ಮ ಸ್ವತಂತ್ರದೇವತೆ. ಎಲ್ಲ ವಸ್ತುಗಳಲ್ಲೂ ಅವ್ಯಕ್ತವಾಗಿ ಇದ್ದಾನೆ. ಇವನು ಸರ್ವವ್ಯಾಪಿ. ಇವನನ್ನು ತಿಳಿಯುವ ಜ್ಞಾನಿಗಳಿಗೆ ಶಾಶ್ವತಶಾಂತಿಯು ಲಭಿಸುತ್ತದೆ. ಬೇರೆಯವರಿಗೆ ಇಲ್ಲ. ಪರಬ್ರಹ್ಮ ಎಲ್ಲರ ಹೃದಯ ಗುಹೆಯಲ್ಲಿದ್ದಾನೆ. ಸರ್ವವ್ಯಾಪಿಯಾಗಿದ್ದಾನೆ. ಇಂತಹ ದೇವ ಮತ್ತೊಬ್ಬನಿಲ್ಲ. ಮುನಿಶ್ರೇಷ್ಠರೇ! ನಾನು ನಿಮಗೆ ಈಶ್ವರನ ಬಗ್ಗೆ ಬಹಳ

ಗೋಪ್ಯವಾದ, ಶ್ರೇಷ್ಠವಾದ ವಿಷಯಗಳನ್ನು ತಿಳಿಸಿದ್ದೇನೆ. ಇದನ್ನು ಎಚ್ಚರದಿಂದ ರಕ್ಷಿಸಬೇಕು. ಇದು ಜ್ಞಾನ ಯೋಗಿಗಳಿಗೂ ಸುಲಭವಾಗಿ ದೊರೆಯುವುದಿಲ್ಲ.

* * *

## ಅಧ್ಯಾಯ-೬೩

**ಈಶ್ವರ ಉವಾಚ :**

ಸ್ವಯಂಜ್ಯೋತಿಯಾದ, ಆಕಾಶದಲ್ಲಿ ವ್ಯಾಪಿಸಿರುವ ಪರತತ್ವವೇ ಬ್ರಹ್ಮ. ಈ ಬ್ರಹ್ಮನನ್ನು ಯುಕ್ತಿಯಿಂದ ತಿಳಿಯಲು ಸಾಧ್ಯವಿಲ್ಲ. ಸ್ವತಂತ್ರವಾದ ಮತ್ತು ಅದ್ವಿತೀಯವಾದ ಈ ತತ್ವವನ್ನು ತಿಳಿಸುವ ಗುರುಗಳು ಯಾವಾಗಲೂ ಅವ್ಯಕ್ತವಾಗಿರುತ್ತವೆ. ಈ ಪರತತ್ವವು ಅವ್ಯಕ್ತ, ಜಗಜ್ಜನ್ಮಾದಿಕಾರಣ, ಅಕ್ಷರ, ಸರ್ವೋತ್ತಮವಾದ ಗಮ್ಯಸ್ಥಾನ ಎಂದು ಜ್ಞಾನಿಗಳು ಕಂಡಿದ್ದಾರೆ. ಮನಸ್ಸಿನಲ್ಲಿರುವ ಸಂಕಲ್ಪಗಳನ್ನೂ ದೂರಮಾಡಿಕೊಂಡಿರುವ, ಸದಾ ಬ್ರಹ್ಮಚಿಂತನೆಯನ್ನು ಮಾಡಿ ಸಂಸ್ಕಾರ ಹೊಂದಿದವರು ಪರಬ್ರಹ್ಮನನ್ನು ಕಾಣುತ್ತಾರೆ. ಮುನಿಶ್ರೇಷ್ಠರೇ! ಹೀಗೆ ಸಾಧನೆ ಮಾಡದವರು ನನ್ನ ಸಾಕ್ಷಾತ್ಕಾರವನ್ನು ಪಡೆಯಲು ಸಾಧ್ಯವೇ ಇಲ್ಲ. ಸರ್ವೋತ್ತಮ ಗಮ್ಯಸ್ಥಾನವಾದ ಪರಬ್ರಹ್ಮನನ್ನು ಅನೇಕ ಎಂದು ಕಾಣುವವರು, ಪರಮನಿಷ್ಠೆಯಿಂದ ಒಂದು ಎಂದು ಕಾಣುವವರು ಭಕ್ತಿಯಿಂದ ನನ್ನ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ಪರಬ್ರಹ್ಮನ ಸಾಕ್ಷಾತ್ಕಾರವನ್ನು ಪಡೆದವರು ಪರಮಾನಂದವನ್ನು ಪಡೆಯು-ತ್ತಾರೆ. ಇದೇ ಸಾಯುಜ್ಯಮುಕ್ತಿ. ಬ್ರಹ್ಮನೊಂದಿಗೆ ಐಕ್ಯವೇ ನಿರ್ವಾಣ ಎಂದು ಜ್ಞಾನಿಗಳು ಹೇಳುತ್ತಾರೆ.

ಆದಿ, ಮಧ್ಯ, ಅಂತಗಳಿಲ್ಲದ, ಅದ್ವಿತೀಯನಾದ ಪರಶಿವನೇ ಮಹಾದೇವ. ಈ ದೇವನ ತೇಜಸ್ಸಿನ ಮುಂದೆ ಸೂರ್ಯ, ಚಂದ್ರ, ನಕ್ಷತ್ರಗಳು ಮೊದಲಾದ ಯಾವ ತೇಜಸ್ಸೂ ಹೊಳೆಯುವುದಿಲ್ಲ. ಎಲ್ಲವೂ ಮಂಕಾಗುತ್ತವೆ. ಅವನ ತೇಜಸ್ಸಿನಿಂದಲೇ ಸೂರ್ಯಾದಿ-ಗಳೆಲ್ಲರೂ ಹೊಳೆಯುತ್ತಾರೆ. ಈ ಪರಮ ಪುರುಷನನ್ನು ಸರ್ವವೇದಗಳೂ ನಿತ್ಯಾನಂದ, ಅಮೃತ, ಸತ್ಯರೂಪ, ಶುದ್ಧ ಎಂದು ಪ್ರತಿಪಾದಿಸುತ್ತವೆ. ಹೀಗೆ ವೇದಗಳಿಂದ ತಿಳಿದವರು ಪ್ರಾಣನಾಯಕನಾದ ಪರಮ ಪುರುಷನ ಉಪಾಸನೆಯನ್ನು ಮಾಡುತ್ತಾರೆ. ವಿಶ್ವದ ಆಕಾಶದಲ್ಲಿ ದೇವನಾದ ಶಿವನೊಬ್ಬನೇ ಪ್ರಕಾಶಿಸುತ್ತಾನೆ. ಭೂತತತ್ವ, ಜಲತತ್ವ, ಮನಸ್ಸು, ಅಗ್ನಿತತ್ವ, ಪ್ರಾಣತತ್ವ, ವಾಯುತತ್ವ, ಆಕಾಶತತ್ವ, ಬುದ್ಧಿತತ್ವ ಮತ್ತು ಬೇರೆ ಯಾವುದೇ ಚೇತನವು ಅವನಿಲ್ಲದೆ ಶೋಭಿಸುವುದಿಲ್ಲ.

ಇವೆಲ್ಲವೂ ಸಕಲವೇದಗಳಲ್ಲಿ ಹೇಳಲ್ಪಟ್ಟ ವಿಷಯಗಳು. ಪರಮ ರಹಸ್ಯ. ಯೋಗಿಯಾದವನು ಮಾತ್ರ ನಿರ್ಜನ ಪ್ರದೇಶದಲ್ಲಿ ಈ ವಿಷಯಗಳನ್ನು ತಿಳಿಯಬಲ್ಲನು. ಆದ್ದರಿಂದ ಇಂದ್ರಿಯ ನಿಗ್ರಹದಿಂದ ನಿರಂತರವಾಗಿ ಯೋಗನಿರತನಾಗಿರಬೇಕು.

* * *

## ಅಧ್ಯಾಯ-೬೪

**ಈಶ್ವರ ಉವಾಚ :**

ಇನ್ನು ಮುಂದೆ ಬಹಳ ದುರ್ಲಭವಾದ ಯೋಗವನ್ನು ನಿಮಗೆ ಉಪದೇಶಿಸುತ್ತೇನೆ. ಈ ಯೋಗದಿಂದ ಸೂರ್ಯನನ್ನು ಕಾಣುವಂತೆ ಪರಮೇಶ್ವರನನ್ನು ಕಾಣಬಹುದು.

ಯೋಗವು ಪಾಪರಾಶಿಯನ್ನು ಸಂಪೂರ್ಣವಾಗಿ ಬೇಗನೆ ಸುಟ್ಟುಬಿಡುವ ಅಗ್ನಿ. ಇದರಿಂದ ಮೋಕ್ಷವನ್ನೇ ಸಂಪಾದಿಸಿಕೊಡುವ ಸ್ವಚ್ಛವಾದ ಜ್ಞಾನವು ಉಂಟಾಗುತ್ತದೆ. ಯೋಗ- ಮತ್ತು ಜ್ಞಾನಗಳು ಪರಸ್ಪರ ಪೂರಕ. ಯೋಗದಿಂದ ಜ್ಞಾನವು ದೃಢವಾಗುತ್ತದೆ. ಜ್ಞಾನದಿಂದ ಯೋಗವು ದೃಢವಾಗುತ್ತದೆ. ಇವೆರಡನ್ನೂ ಸಾಧಿಸಿದವವನನ್ನು ಪರಮೇಶ್ವರನು ಅನುಗ್ರಹಿಸುತ್ತಾನೆ. ಪ್ರತಿದಿನ ಒಂದು ಸಲ ಅಥವಾ ಎರಡು ಸಲ ಅಥವಾ ಮೂರು ಸಲ ಯಾರು ಮಹಾಯೋಗದ ಅನುಷ್ಠಾನವನ್ನು ಮಾಡುತ್ತಾರೋ ಅವರಿಗೆ ಮಹೇಶ್ವರ ಎಂದು ಹೆಸರು. ಯೋಗ ಎರಡು ವಿಧ. ಒಂದನೆಯದು ಅಭಾವಯೋಗ. ಎರಡನೆಯದು ಮಹಾಯೋಗ. ಇದು ಉತ್ತಮೋತ್ತಮ ಯೋಗ.

ಯಾವುದೇ ಅಭಾಸಗಳಿಲ್ಲದ, (ವಸ್ತುತಃ ಇಲ್ಲದ, ಇರುವಂತೆ ತೋರುವ ಸಂಗತಿಗಳಿಗೆ ಆಭಾಸ ಎಂದು ಹೆಸರು) ಶೂನ್ಯ ಸ್ವರೂಪದ ಚಿಂತನೆಗೆ ಅನುಕೂಲವಾದ ಉಪಾಯವೇ ಅಭಾವಯೋಗ. ಈ ಯೋಗದಿಂದ ಆತ್ಮಸಾಕ್ಷಾತ್ಕಾರವಾಗುತ್ತದೆ. ಮಹಾಯೋಗದಿಂದ ನಿತ್ಯಾನಂದ ಸ್ವರೂಪನೂ, ನಿರಂಜನನೂ ಆದ ಆತ್ಮನ ಸಾಕ್ಷಾತ್ಕಾರವಾಗುತ್ತದೆ. ಐಕ್ಯದ ಅನುಭವವೂ ಆಗುತ್ತದೆ. ಬೇರೆ ಬೇರೆ ಯೋಗಗಳು ಈ ಬ್ರಹ್ಮಯೋಗದ (ಮಹಾಯೋಗದ) ಹದಿನಾರನೇ ಒಂದು ಭಾಗದ ಅರ್ಹತೆಯನ್ನೂ ಹೊಂದಿಲ್ಲ. ಯಾವ ಯೋಗದ ಅನುಷ್ಠಾನದಿಂದ ಮುಕ್ತಿಯನ್ನು ಪಡೆದು ಈಶ್ವರಸಾಕ್ಷಾತ್ಕಾರವನ್ನು ಪಡೆಯಲು ಸಾಧ್ಯವೋ ಅದು ಪರಮಯೋಗ. ಯೋಗಗಳ ಯೋಗ. ಈಶ್ವರ ಭಾವನೆಯಿಲ್ಲದೆ ಮನೋನಿಗ್ರಹವನ್ನು ಸಾಧಿಸಿರುವ ಯೋಗಿಗಳಿಗೆ ನನ್ನ ಸಾಕ್ಷಾತ್ಕಾರ ಆಗುವುದೆ ಇಲ್ಲ. ಬೇರೆ

ವಿಷಯಗಳಲ್ಲಿ ಮನಸ್ಸಿನ ಹರಿದಾಟವನ್ನು ತಡೆದು ನನ್ನಲ್ಲೇ ಅದನ್ನು ನಿಲ್ಲಿಸುವುದು ಯೋಗ ಈ ಯೋಗಕ್ಕೆ ಯಮ-ನಿಯಮ-ಆಸನ-ಪ್ರಾಣಾಯಾಮ ಪ್ರತ್ಯಾಹಾರ-ಧಾರಣಾ-ಧ್ಯಾನ-ಸಮಾಧಿ - ಇವು ಎಂಟು ಅಂಗಗಳು. ಇವುಗಳನ್ನು ಸಾಧಿಸುವ ಅನೇಕ ಕ್ರಮಗಳೂ ಇವೆ.

**ಯಮ :**

ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಇವು ಯಮ. ಇದರ ಅನುಷ್ಠಾನದಿಂದ ಚಿತ್ತಶುದ್ಧಿಯಾಗುತ್ತದೆ. ಮಾತಿನಿಂದ, ಕ್ರಿಯೆಯಿಂದ ಯಾರಿಗೂ ಕ್ಲೇಶವನ್ನುಂಟು ಮಾಡದಿರುವುದು ಮತ್ತು ಕ್ಲೇಶವನ್ನುಂಟು ಮಾಡುವ ಆಲೋಚನೆಯನ್ನೇ ಮಾಡದಿರುವುದು ಅಹಿಂಸಾ ಎಂದು ಜ್ಞಾನಿಗಳು ಹೇಳುತ್ತಾರೆ. ಅಹಿಂಸೆಗಿಂತ ಶ್ರೇಷ್ಠವಾದ ಧರ್ಮ ಯಾವುದೂ ಇಲ್ಲ. ಅಹಿಂಸೆಗಿಂತ ಶ್ರೇಷ್ಠವಾದ ಸುಖವಿಲ್ಲ. ಆದರೆ ಶಾಸ್ತ್ರವಿಧಿಯಂತೆ ನಡೆಸುವ ಹಿಂಸೆ ತಪ್ಪಲ್ಲ. ಅದೂ ಅಹಿಂಸೆ ಎಂದೇ ಜ್ಞಾನಿಗಳು ಹೇಳುತ್ತಾರೆ.

ಯಥಾರ್ಥವನ್ನು ನುಡಿಯುವುದೇ ಸತ್ಯ. ಈ ಸತ್ಯದಲ್ಲೇ ಎಲ್ಲವೂ ಇದೆ. ಸತ್ಯದಿಂದಲೇ ಎಲ್ಲವನ್ನೂ ಪಡೆಯುತ್ತಾನೆ. ಚೌರ್ಯದಿಂದ ಅಥವಾ ಬಲಾತ್ಕಾರವಾಗಿ ಪರರ ದ್ರವ್ಯವನ್ನು ಅಪಹರಿಸುವುದೇ ಸ್ತೇಯ. ಇದನ್ನು ಮಾಡದಿರುವುದು ಅಸ್ತೇಯ. ಎಲ್ಲ ಅವಸ್ಥೆಗಳಲ್ಲೂ ಮೈಥುನವನ್ನೂ ಮಾಡದಿರುವುದು ಅದರ ಬಗ್ಗೆ ಮಾತನ್ನೇ ಆಡದಿರುವುದು ಮತ್ತು ಅದರ ಆಲೋಚನೆಯನ್ನೇ ಮಾಡದಿರುವುದು - ಇದು ಮೈಥುನ ತ್ಯಾಗ. ಇದೇ ಬ್ರಹ್ಮಚರ್ಯ. ಆಪತ್ಕಾಲದಲ್ಲಿ ಕೂಡ ಬೇರೆಯವರಿಂದ ದ್ರವ್ಯವನ್ನು ಸ್ವೀಕರಿಸದಿರುವುದೇ ಅಪರಿಗ್ರಹ. ಇದನ್ನು ಪ್ರಯತ್ನದಿಂದ ಪಾಲಿಸಬೇಕು.

**ನಿಯಮ :**

ತಪಸ್ಸು, ಸ್ವಾಧ್ಯಾಯ, ಸಂತೋಷ, ಶೌಚ, ಈಶ್ವರಪೂಜನ ಇವು ನಿಯಮ. ಇದರ ಅನುಷ್ಠಾನವು ಸಿದ್ಧಿಯನ್ನು ಉಂಟುಮಾಡುತ್ತದೆ.

ಉಪವಾಸ, ಚಾಂದ್ರಾಯಣ, ಪರಾಕ, ಕೃಚ್ಛ್ರ ಮೊದಲಾದವುಗಳಿಂದ ಶರೀರ-ಶೋಷಣೆಯೇ ತಪಸ್ಸು, ಹೀಗೆಂದು ಜ್ಞಾನಿಗಳು ಹೇಳುತ್ತಾರೆ. ಸತ್ವಗುಣದ ಉತ್ಕರ್ಷ-ವನ್ನುಂಟುಮಾಡುವ ವೇದಾಂತದ ಅಧ್ಯಯನ, ಶತರುದ್ರೀಯ, ಪ್ರಣವ ಮೊದಲಾದವುಗಳ ಜಪ - ಇವುಗಳನ್ನು ಸ್ವಾಧ್ಯಾಯ ಎಂದು ಹೇಳುತ್ತಾರೆ. ಸ್ವಾಧ್ಯಾಯ ಮೂರು ವಿಧ. (೧) ವಾಚಿಕ (೨) ಉಪಾಂಶು (೩) ಮಾನಸ, ವಾಚಕಕ್ಕಿಂತ ಉಪಾಂಶು ಉತ್ತಮ. ಉಪಾಂಶುಗಿಂತ ಮಾನಸ ಇನ್ನೂ ಉತ್ತಮ. ಹೀಗೆಂದು ವೇದಾರ್ಥ ಜ್ಞಾನಿಗಳು ಹೇಳುತ್ತಾರೆ.

ಬೇರೆಯವರಿಗೆ ಸ್ಫುಟವಾಗಿ ಶಬ್ದಗಳು ಕೇಳುವಂತೆ ಮಂತ್ರಗಳ ಉಚ್ಚಾರಣೆ ವಾಚಕ. ಬೇರೆಯವರಿಗೆ ಕೇಳಿಸದಂತೆ ತುಟಿಗಳನ್ನು ಚಲಿಸುತ್ತಾ ಮಾಡುವ ಉಚ್ಚಾರಣೆ ಉಪಾಂಶು.

ಇದು ವಾಚಿಕ ಜಪಕ್ಕಿಂತ ಒಳ್ಳೆಯದು. ಚಲನೆಯಿಲ್ಲದೆ ಎಲ್ಲ ಶಬ್ದಗಳ ಚಿಂತನೆಯೇ ಮಾನಸ ಸ್ವಾಧ್ಯಾಯ. ಭಗವದಿಚ್ಛೆಯಿಂದ, ವಿಶೇಷವಾದ ಸ್ವಪ್ರಯತ್ನವಿಲ್ಲದೆ ಲಭಿಸಿದ ಸಂಪತ್ತಿನ ಬಗ್ಗೆ ಸಾಕು ಎಂಬ ಪ್ರಶಸ್ತವಾದ ಭಾವನೆಯೇ ಸಂತೋಷ

ಶೌಚ ಎರಡು ವಿಧ. ಬಾಹ್ಯ ಮತ್ತು ಅಭ್ಯಂತರ. ಮಣ್ಣು ಮತ್ತು ನೀರುಗಳಿಂದ ಮಾಡಿಕೊಳ್ಳುವ ಶುದ್ಧಿ ಬಾಹ್ಯ ಶುದ್ಧಿ. ಮನಸ್ಸಿನ ಶುದ್ಧಿಯೇ ಆಭ್ಯಂತರ ಶುದ್ಧಿ. ಮಾತು, ಮನಸ್ಸು ಮತ್ತು ಶರೀರಗಳಿಂದ ಕ್ರಮವಾಗಿ ಸ್ತೋತ್ರ, ಚಿಂತನೆ ಮತ್ತು ಪೂಜೆ - ಈ ಮೂಲಕ ಶಿವನಲ್ಲಿ ನಿಶ್ಚಲವಾದ ಭಕ್ತಿಯೇ ಈಶಪೂಜೆ.

**ಪ್ರಾಣಾಯಾಮ :**

ದೇಹದಲ್ಲಿ ಸಂಚರಿಸುವ ವಾಯು ಪ್ರಾಣ. ಆಯಾಮ ಎಂದರೆ ನಿರೋಧ. ಉತ್ತಮ, ಮಧ್ಯಮ ಮತ್ತು ಅಧಮ ಹೀಗೆ ಪ್ರಾಣಾಯಾಮವು ಮೂರು ವಿಧ. ಸಗರ್ಭ ಮತ್ತು ಅಗರ್ಭ ಎಂದೂ ಎರಡು ವಿಧ. ಮೂವತ್ತಾರು ಮಾತ್ರಾ ಕಾಲದಷ್ಟು ದೀರ್ಘವಾಗಿ ಮಾಡಲ್ಪಡುವ ಪ್ರಾಣಾಯಾಮವು ಉತ್ತಮ. ಇಪ್ಪತ್ತನಾಲ್ಕು ಮಾತ್ರಾಕಾಲದಲ್ಲಿ ಮಾಡಲ್ಪಡುವ ಪ್ರಾಣಾಯಾಮವು ಮಧ್ಯಮ. ಹನ್ನೆರಡು ಮಾತ್ರಾಕಾಲದಲ್ಲಿ ಮಾಡಲ್ಪಡುವ ಪ್ರಾಣಾಯಾಮವು ಅಧಮ. ಬೆವರನ್ನು ಉಂಟುಮಾಡುವ ಪ್ರಾಣಾಯಾಮ ಅಧಮ. ಶರೀರ ಕಂಪನವನ್ನು ಉಂಟುಮಾಡುವ ಪ್ರಾಣಾಯಾಮ ಮಧ್ಯಮ. ಉಚ್ಛ್ವಾಸವನ್ನು ಉಂಟು-ಮಾಡುವ ಪ್ರಾಣಾಯಾಮ ಅಧಮ.★

ಪ್ರಣವ, ವ್ಯಾಹೃತಿ, ಗಾಯತ್ರಿ ಮತ್ತು ಗಾಯತ್ರೀಶಿರಸ್ - ಇವುಗಳನ್ನು ಮೂರು ಸಲ ಜಪಿಸಿದರೆ ಒಂದು ಪ್ರಾಣಾಯಾಮವಾಗುತ್ತದೆ. ರೇಚಕ, ಪೂರಕ, ಕುಂಭಕ - ಇವು ಪ್ರಾಣಾಯಾಮದ ಮೂರು ಹಂತಗಳು. ಉಸಿರನ್ನು ಹೊರಗೆ ಬಿಡುವುದು ರೇಚಕ. ವಾಯುವನ್ನು ಒಳಗೆ ತೆಗೆದುಕೊಳ್ಳುವುದು ಪೂರಕ. ರೇಚಕ-ಪೂರಕಗಳಿಲ್ಲದೆ ವಾಯುವನ್ನು ತಡೆಯುವುದು ನಿರೋಧ.

**ಪ್ರತ್ಯಾಹಾರ :** ಸಹಜವಾಗಿ ವಿಷಯಗಳ ಕಡೆ ಹರಿಯುವ ಇಂದ್ರಿಯಗಳ ನಿಗ್ರಹವೇ ಪ್ರತ್ಯಾಹಾರ.

**ಧಾರಣಾ :** ಹೃದಯ ಕಮಲ, ನಾಭಿ, ಶಿರಸ್ಸು, ಪರ್ವ ಮೊದಲಾದ ಅವಯವಗಳಲ್ಲಿ ಚಿತ್ತವನ್ನು ನಿಲ್ಲಿಸುವುದು ಧಾರಣಾ.

**ಧ್ಯಾನ :** ಒಂದೇ ವಿಷಯದ ಬಗ್ಗೆ ನಿರಂತರವಾಗಿ ಹುಟ್ಟುವ ವೃತ್ತಿಯೇ ಧ್ಯಾನ.

★ ಸಗರ್ಭ ಮತ್ತು ಅಗರ್ಭ ಪ್ರಾಣಾಯಾಮದ ಬಗ್ಗೆ ವಿವರಣೆ ಮೈಸೂರಿನ ಅರಮನೆಯವರು ಮುದ್ರಿಸಿದ ಪುರಾಣದಲ್ಲಿ ಇಲ್ಲ.

**ಸಮಾಧಿ** : ವಿಷಯವನ್ನು ಅವಲಂಬಿಸದ ಒಂದೇ ಆಕಾರದ ಚಿತ್ತವೃತ್ತಿಯೇ ಸಮಾಧಿ.

ಒಂದು ಧಾರಣೆಯು ಹನ್ನೆರಡು ಪ್ರಾಣಾಯಾಮಗಳಿಗೆ ಸಮಾನ. ಒಂದು ಸಲ ನಡೆಸಲ್ಪಡುವ ಧ್ಯಾನವು ಹನ್ನೆರಡು ಧಾರಣೆಗೆ ಸಮಾನ. ಒಂದು ಸಲ ತಲುಪಲ್ಪಟ್ಟ ಸಮಾಧಿ ಸ್ಥಿತಿಯು ಹನ್ನೆರಡು ಧ್ಯಾನಕ್ಕೆ ಸಮಾನ.

**ಆಸನ** : ಆಸನವು ಮೂರು ವಿಧ. (೧) ಸ್ವಸ್ತಿಕಾಸನ (೨) ಪದ್ಮಾಸನ (೩) ಅರ್ಧಾಸನ. ಎಲ್ಲಾ ಸಾಧನಗಳ ಅನುಷ್ಠಾನಕ್ಕೂ ಇದು ಆವಶ್ಯಕ.

ತೊಡೆಗಳ ಮೇಲೆ ಪಾದಗಳನ್ನು ಇಟ್ಟು ಕುಳಿತುಕೊಳ್ಳುವ ಭಂಗಿ ಪದ್ಮಾಸನ. ಎರಡು ಪಾದತಲಗಳನ್ನು ಮಂಡಿ ಮತ್ತು ತೊಡೆಗಳ ಮಧ್ಯದಲ್ಲಿ ಇಟ್ಟು ಕುಳಿತುಕೊಳ್ಳುವ ಭಂಗಿ ಸ್ವಸ್ತಿಕಾಸನ. ಒಂದು ಪಾದವನ್ನು ಎದೆಯ ಒಂದು ಭಾಗದ ಮೇಲಿಟ್ಟು ಕುಳಿತುಕೊಳ್ಳುವ ಭಂಗಿಯು ಅರ್ಧಾಸನ.

### ಯೋಗಾಭ್ಯಾಸನಕ್ಕೆ ಅರ್ಹವಲ್ಲದ ದೇಶ-ಕಾಲ-ಸಂಗತಿಗಳು :

ಅನುಚಿತವಾದ ದೇಶದಲ್ಲಿ ಮತ್ತು ಕಾಲದಲ್ಲಿ ಯೋಗಾಭ್ಯಾಸವನ್ನು ಮಾಡಬಾರದು. ಮಾಡಿದರೆ ಸಿದ್ಧಿಯಾಗುವುದಿಲ್ಲ. ಅಗ್ನಿಯ ಹತ್ತಿರದಲ್ಲಿ, ನೀರಿನಲ್ಲಿ, ಒಣಗಿದ ಎಲೆಗಳ ರಾಶಿಯ ಮೇಲೆ ಯೋಗಾಭ್ಯಾಸವನ್ನು ಮಾಡಬಾರದು. ಬಹಳ ಪ್ರಾಣಿಗಳಿರುವ ಸ್ಥಳದಲ್ಲಿ, ಶ್ಮಶಾನದಲ್ಲಿ, ಪಾಳುಬಿದ್ದ ಗೋಶಾಲೆಯಲ್ಲಿ, ನಾಲ್ಕು ರಸ್ತೆಗಳು ಸೇರುವ ಜಾಗದಲ್ಲಿ, ಶಬ್ದಮಯ ಪ್ರದೇಶದಲ್ಲಿ, ಚೈತ್ಯಸ್ಥಳದಲ್ಲಿ, ಹುತ್ತಗಳಿರುವ ಪ್ರದೇಶದಲ್ಲಿ, ದುರ್ಜನರಿರುವ ಪ್ರದೇಶದಲ್ಲಿ ನೊಣ ಮೊದಲಾದವುಗಳು ಇರುವ ಪ್ರದೇಶದಲ್ಲಿ ಯೋಗಾಭ್ಯಾಸವನ್ನು ಮಾಡಬಾರದು. ದೇಹಬಾಧೆಯಿದ್ದಾಗ, ಮನಸ್ಸು ಕ್ಷೋಭೆಗೆ ಒಳಗಾಗಿದ್ದಾಗ ಯೋಗಾಭ್ಯಾಸವನ್ನು ಮಾಡಬಾರದು.

### ಯೋಗಾನುಷ್ಠಾನಕ್ಕೆ ಯೋಗ್ಯ ಸ್ಥಳಗಳು :

ಸುರಕ್ಷಿತವಾದ, ಬಹಳ ಮಂಗಳಕರವಾದ ಸ್ಥಳದಲ್ಲಿ, ಪರ್ವತದ ಗುಹೆಯಲ್ಲಿ ನದೀತೀರದಲ್ಲಿ, ಪುಣ್ಯಕ್ಷೇತ್ರದಲ್ಲಿ, ದೇವಮಂದಿರದಲ್ಲಿ, ಪವಿತ್ರವಾದ ಮನೆಯಲ್ಲಿ, ಪ್ರಾಣಿಗಳಿಲ್ಲದ ನಿರ್ಜನ ಪ್ರದೇಶದಲ್ಲಿ ಯೋಗಾನುಷ್ಠಾನವನ್ನು ಮಾಡಬೇಕು.

ಯೋಗಾಭ್ಯಾಸಿಯು ಯೋಗೀಂದ್ರರನ್ನೂ, ಅವರ ಶಿಷ್ಯರನ್ನೂ, ಗಣೇಶನನ್ನೂ, ಗುರುಗಳನ್ನೂ, ನನ್ನನ್ನು (ಶಿವನನ್ನು) ನಮಸ್ಕರಿಸಿ ಯೋಗಾನುಷ್ಠಾನವನ್ನು ಆರಂಭಿಸಬೇಕು. ಆರಂಭಿಸುವವನ ಮನಸ್ಸು ಶಾಂತವಾಗಿರಬೇಕು.

ಸ್ವಸ್ತಿಕಾಸನದಲ್ಲಿ ಅಥವಾ ಪದ್ಮಾಸನದಲ್ಲಿ ಅಥವಾ ಅರ್ಧಾಸನದಲ್ಲಿ ಕುಳಿತು, ಕಣ್ಣನ್ನು ಸ್ವಲ್ಪ ತೆರೆದುಕೊಂಡು ಮೂಗಿನ ತುದಿಯನ್ನು ಸಮದೃಷ್ಟಿಯಿಂದ ನೋಡುತ್ತಾ, ಭಯವನ್ನು

ಬಿಟ್ಟು, ಶಾಂತನಾಗಿ, ಮಾಯಾಮಯವಾದ ಜಗತ್ತನ್ನು ಮರೆತು ತನ್ನಲ್ಲೇ ಇರುವ ಪರಮೇಶ್ವರನನ್ನು ಚಿಂತಿಸಬೇಕು.

**ಎರಡು ಧ್ಯಾನಗಳು :**

(೧) ಹನ್ನೆರಡು ಅಂಗುಲ ಉದ್ದದ ಶಿಖೆಯ ತುದಿಯಲ್ಲಿ ಧರ್ಮವೆಂಬ ಬೀಜದಿಂದ ಹುಟ್ಟಿದ, ಜ್ಞಾನವೆಂಬ ನಾಳವುಳ್ಳ ಕಮಲವನ್ನು ಕಲ್ಪಿಸಬೇಕು. ಈ ಕಮಲಕ್ಕೆ ಎಂಟು ಐಶ್ವರ್ಯಗಳೇ ಎಂಟು ದಳಗಳು. ವೈರಾಗ್ಯವೆಂಬ ಕರ್ಣಿಕೆಯೂ ಇರಬೇಕು. ಈ ಕರ್ಣಿಕದಲ್ಲಿ ಬಂಗಾರದ ಕೋಶವನ್ನು ಚಿಂತಿಸಬೇಕು. ಈ ಕೋಶವು ಸರ್ವಶಕ್ತಿಗಳಿಂದ ಪೂರ್ಣ, ದಿವ್ಯ ಹಾಗೂ ಅವ್ಯಯ ಎಂದು ಜ್ಞಾನಿಗಳು ಹೇಳುತ್ತಾರೆ. ಈ ಕೋಶದಲ್ಲಿ ಓಂಕಾರ ವಾಚ್ಯನೂ ಅವ್ಯಕ್ತನೂ ತೇಜೋಮಯನೂ, ಪರಂಜ್ಯೋತಿಯೂ ಆದ, ವಿಮಲನಾದ ಅಕ್ಷರನನ್ನು = ಪರಬ್ರಹ್ಮನನ್ನು ಚಿಂತಿಸಬೇಕು. ಅನಂತರ ಈ ಪರಬ್ರಹ್ಮನಲ್ಲಿ ಜಗತ್ತಿನ ಪರಮಕಾರಣನಾದ ಈಶನನ್ನು ಚಿಂತಿಸಬೇಕು. ಬೇರೆ ಏನನ್ನೂ ಚಿಂತಿಸಬಾರದು. ಇದು ಅತ್ಯಂತ ರಹಸ್ಯ ವಿಷಯ.

(೨) ಹಿಂದೆ ವರ್ಣಿಸಲ್ಪಟ್ಟ ಕಮಲವನ್ನು ಹೃದಯದಲ್ಲಿ ಚಿಂತಿಸಬೇಕು. ಆ ಕಮಲದ ಮಧ್ಯದಲ್ಲಿ ಬೆಂಕಿಯ ಜ್ವಾಲೆಯ ಆಕಾರವುಳ್ಳ, ಇಪ್ಪತ್ತೈದನೆಯ ತತ್ವವಾಗಿರುವ ಪುರುಷನನ್ನು ಚಿಂತಿಸಬೇಕು. ಈ ಪುರುಷನಲ್ಲಿ ನಿರ್ವಿಕಾರನಾದ ಪರಮಾತ್ಮನನ್ನು ಚಿಂತಿಸಬೇಕು. ಈ ಪರಮಾತ್ಮ ಓಂಕಾರ ವಾಚ್ಯ , ಶಾಶ್ವತ. ಇದೇ ಶಿವ. ಈ ತತ್ವ ಅವ್ಯಕ್ತ. ಇದು ಪ್ರಕೃತಿಯಲ್ಲಿ ಅಡಗಿದೆ. ಇದು ಪರಂಜ್ಯೋತಿ. ಸರ್ವೋತ್ತಮ ತತ್ವ, ನಿರ್ವಿಕಾರನಾದ ಈ ಮಹೇಶ್ವರನನ್ನು ಯಾವಾಗಲೂ ತನ್ಮಯನಾಗಿ ಧ್ಯಾನಿಸಬೇಕು.

**ಪಾಶುಪತಯೋಗ :**

ಎಲ್ಲ ತತ್ವಗಳನ್ನು ವಿಮರ್ಶೆಯಿಂದ ತಿಳಿದುಕೊಳ್ಳಬೇಕು. ಈ ಜ್ಞಾನದಿಂದ ದೇಹವನ್ನು ಶುದ್ಧಿಗೊಳಿಸಬೇಕು. ಓಂಕಾರದ ಅರ್ಥದ ಅನುಸಂಧಾನದಿಂದ ನನ್ನಲ್ಲೇ ಮನಸ್ಸನ್ನು ನಿಲ್ಲಿಸಬೇಕು. ಅಗ್ನಿಹೋತ್ರದ ಭಸ್ಮವನ್ನು ಎಲ್ಲ ಅಂಗಗಳಿಗೂ ಹಚ್ಚಿಕೊಳ್ಳಬೇಕು. ಅನಂತರ ಪರಂಜ್ಯೋತಿಸ್ವರೂಪನಾದ ಪರಮೇಶ್ವರನ ಧ್ಯಾನವನ್ನು ಮಾಡಬೇಕು. ಇದು ಪಾಶುಪತ-ಯೋಗ. ಇದರಿಂದ ಹುಟ್ಟು-ಸಾವುಗಳ ಬಂಧನಕ್ಕೆ ಒಳಗಾಗಿರುವ ಜೀವರು ಈ ಬಂಧನ-ದಿಂದ ಬಿಡುಗಡೆಯನ್ನು ಪಡೆಯುತ್ತಾರೆ. ಎಲ್ಲ ವೇದಾಂತಗಳೂ ಈ ಮಾರ್ಗವನ್ನು ಹೇಳುತ್ತವೆ. ಈ ಧ್ಯಾನ ಮಾರ್ಗವು ಅತ್ಯುತ್ತಮ ಎಂದು ಪ್ರಸಿದ್ಧವಾಗಿದೆ. ಇದು ಅತ್ಯಂತ ಶ್ರೇಷ್ಠವಾದ, ರಹಸ್ಯ ಮಾರ್ಗ. ಈ ದಾರಿಯಲ್ಲಿ ಸಾಗುವವರಿಗೆ ನನ್ನ ಸಾಯುಜ್ಯವೇ ಲಭಿಸುತ್ತದೆ. ಬ್ರಹ್ಮಚರ್ಯ ದೀಕ್ಷೆ ಇರುವ, ಭಕ್ತರಾದ ದ್ವಿಜರು ಈ ಮಾರ್ಗದಲ್ಲಿ ಅನುಷ್ಠಾನವನ್ನು ಮಾಡಲು ಅರ್ಹರು.

## ಶಿವವ್ರತ ಮತ್ತು ಶಿವಭಕ್ತರು :

ಬ್ರಹ್ಮಚರ್ಯ, ಅಹಿಂಸಾ, ಕ್ಷಮಾ, ಶೌಚ, ತಪಸ್ಸು, ದಯ, ಸಂತೋಷ, ಸತ್ಯ, ಆಸ್ತಿಕ್ಯ ಇವುಗಳನ್ನು ಶಿವದೀಕ್ಷಾವಂತನು ಆಚರಿಸಬೇಕು. ಇವುಗಳಲ್ಲಿ ಯಾವುದಾದರೂ ಒಂದರ ಲೋಪವಾದರೂ ವ್ರತಕ್ಕೆ ಹಾನಿಯಿಲ್ಲ. ಆದ್ದರಿಂದ ಈ ಗುಣಗಳನ್ನು ರೂಢಿಸಿಕೊಂಡು ನನ್ನ (ಶಿವ)ವ್ರತವನ್ನು ಆಚರಿಸಬೇಕು. ರಾಗ, ಭಯ, ಕ್ರೋಧಗಳನ್ನು ತೊಡೆದು ಹಾಕಿದ, ನನ್ನ ವಿಚಾರದಲ್ಲೆ ತನ್ಮಯರಾದ, ನನ್ನನ್ನೇ ಆಶ್ರಯಿಸಿದ ಬಹಳ ಜನರು ಈ ಯೋಗದಿಂದ ಪವಿತ್ರರಾಗಿದ್ದಾರೆ. ನನ್ನನ್ನು ಯಾರು ಹೇಗೆ ಭಜಿಸುವರೋ ನಾನೂ ಅವರನ್ನೂ ಹಾಗೆಯೇ ಭಜಿಸುತ್ತೇನೆ. ಆದ್ದರಿಂದ ಪರಮೇಶ್ವರನಾದ ನನ್ನನ್ನು ಜ್ಞಾನಯೋಗ ಅಥವಾ ಭಕ್ತಿಯೋಗ-ದಿಂದ ತೀವ್ರವಾದ ವೈರಾಗ್ಯದಿಂದ ಆರಾಧಿಸಬೇಕು.

ಜ್ಞಾನಪೂರ್ವಕವಾದ ಮನಸ್ಸಿನಿಂದ ನನ್ನನ್ನು, ಯಾವಾಗಲೂ ಶುಚಿಯಾಗಿದ್ದು ಪೂಜಿಸಬೇಕು. ಎಲ್ಲ ಲೋಕ ವ್ಯಾಪಾರಗಳನ್ನು ಬಿಡಬೇಕು. ಭಿಕ್ಷಾನ್ನದಿಂದ ದೇಹವನ್ನು ರಕ್ಷಿಸಬೇಕು. ಯಾರಿಂದಲೂ ಯಾವುದೇ ಪದಾರ್ಥವನ್ನು ದಾನವಾಗಿ ಸ್ವೀಕರಿಸಬಾರದು. ಈ ವ್ರತವನ್ನು ಆಚರಿಸುವವನು ನನ್ನ ಸಾಯುಜ್ಯವನ್ನು ಪಡೆಯುತ್ತಾನೆ. ಯಾರನ್ನು ದ್ವೇಷಿಸದ, ಮಿತ್ರಭಾವ ಮತ್ತು ಕರುಣೆ - ಈ ಗುಣಗಳನ್ನು ಹೊಂದಿರುವ, ನನ್ನದು, ನನ್ನದು ಎಂಬ ಅಭಿಮಾನವಿಲ್ಲದಿರುವ, ನಾನು ಮಾಡುತ್ತೇನೆ ಎಂದು ಭಾವವಿಲ್ಲದಿರುವ ನನ್ನ ಭಕ್ತ ನನಗೆ ಪ್ರಿಯ. ಯಾವಾಗಲೂ ಸಂತುಷ್ಟನೂ, ಯೋಗಿಯೂ ಮನೋನಿಗ್ರಹವುಳ್ಳವನೂ, ದೃಢನಿಶ್ಚಯವುಳ್ಳವನೂ, ಮನಸ್ಸು-ಬುದ್ಧಿಗಳನ್ನು ನನಗೆ ಅರ್ಪಿಸಿದವನೂ ಆದ ನನ್ನ ಭಕ್ತ ನನಗೆ ಪ್ರಿಯ. ಯಾರು ಜನರನ್ನು ಉದ್ವೇಗಕ್ಕೆ ಒಳಪಡಿಸುವುದಿಲ್ಲವೋ ಮತ್ತು ಯಾರು ಲೋಕದಿಂದ (ಜನರಿಂದ) ಉದ್ವೇಗಕ್ಕೆ ಒಳಗಾಗುವುದಿಲ್ಲವೋ, ಹರ್ಷ, ಕೋಪ, ಭಯ, ಉದ್ವೇಗಗಳು ಯಾರಿಗೆ ಇಲ್ಲವೋ ಅಂತಹ ಭಕ್ತ ನನಗೆ ಪ್ರಿಯ. ಆಸೆಗಳಿಲ್ಲದವನೂ, ಶುಚಿಯೂ, ದಕ್ಷನೂ, ಉದಾಸೀನನೂ, ವ್ಯಥೆಗೆ ಒಳಗಾಗದವನೂ, ಎಲ್ಲ ಲೋಕ ವ್ಯಾಪಾರ-ಗಳನ್ನು ತ್ಯಜಿಸಿದವನೂ ಆದ ಭಕ್ತ ನನಗೆ ಪ್ರಿಯ. ನಿಂದೆಯನ್ನೂ ಸ್ತುತಿಯನ್ನೂ ಸಮವಾಗಿಯೇ ಕಾಣುವ, ಎಲ್ಲ ಸ್ಥಿತಿಗಳಲ್ಲೂ ಸಂತೋಷವಾಗಿರುವ, ತನಗಾಗಿ ಯಾವ ಆಶ್ರಯವನ್ನು ಮಾಡಿಕೊಳ್ಳದ, ಸ್ಥಿರಬುದ್ಧಿಯ ಭಕ್ತನು ನನ್ನ ದರ್ಶನ ಅನುಗ್ರಹವನ್ನು ಪಡೆಯುತ್ತಾನೆ. ನನ್ನಲ್ಲಿ ಮನಸ್ಸನ್ನು ಇಟ್ಟು ಎಲ್ಲ ಕರ್ಮಗಳನ್ನು ಮಾಡುವ ಭಕ್ತನು ನನ್ನ ಅನುಗ್ರಹದಿಂದ ಶಾಶ್ವತವಾದ ಪರಮಪದವನ್ನು ಪಡೆಯುವನು. ಆಸೆಗಳಿಲ್ಲದೆ, ಮಮಕಾರವಿಲ್ಲದೆ, ಸಕಲಕರ್ಮಗಳೂ ನನಗೆ ಅಧೀನ ಎಂದು ಭಾವಿಸಿ, ಕರ್ಮದ ಫಲದಲ್ಲಿ ಆಸಕ್ತಿಯಿಲ್ಲದೆ, ನಿತ್ಯತೃಪ್ತನೂ, ಪರಾವಲಂಬಿಯಲ್ಲದವನೂ ಆದವನು ಕರ್ಮಗಳಲ್ಲಿ ತೊಡಗಿದರೂ ಅದರ ಬಂಧನಕ್ಕೆ ಒಳಗಾಗುವುದಿಲ್ಲ, ಇಂತಹವನು ಪರಮಪದವನ್ನು ಪಡೆಯುವನು. ಭಗವಂತನ ಇಚ್ಛೆಯಿಂದ ಲಭಿಸಿದ ವಸ್ತುಗಳಿಂದಲೇ ತೃಪ್ತನಾದ,

ದ್ವಂದ್ವವನ್ನು ಮೀರಿದ, ನನ್ನ ಅನುಗ್ರಹಕ್ಕಾಗಿ ವಿಹಿತ ಕರ್ಮಗಳನ್ನು ಮಾಡುವ ಸಾಧಕನ ಸಂಸಾರವು ಜ್ಞಾನ- ಮರಣಗಳ ದುಃಖಕರವಾದ ಚಕ್ರವು ನಾಶವಾಗುವುದು.

ಯೋಗಿಶ್ರೇಷ್ಠನು ನನ್ನನ್ನು ಪರಮೇಶ್ವರ ಎಂದು ತಿಳಿದುಕೊಂಡು ನನ್ನ ಉಪಾಸನೆಯನ್ನು ಮಾಡುತ್ತಾನೆ. ನನ್ನಲ್ಲೇ ನನ್ನನ್ನೇ ಉದ್ದೇಶಿಸಿ ಯಜ್ಞಗಳನ್ನು ಮಾಡುತ್ತಾನೆ. ನನ್ನನ್ನೇ ಪೂರ್ಣವಾಗಿ ನಂಬುತ್ತಾನೆ. ಜ್ಞಾನಿಗಳು ಒಬ್ಬರಿಗೊಬ್ಬರು ಬೋಧನೆಯನ್ನು ಮಾಡುತ್ತಾ ನನ್ನನ್ನೇ ಪರಂಜ್ಯೋತಿ ಎಂದು ಹೇಳುತ್ತಾರೆ. ಯಾವಾಗಲೂ ನನ್ನ ವಿಚಾರವನ್ನೇ ಹೇಳುತ್ತಾ ನನ್ನ ಸಾಯುಜ್ಯವನ್ನು ಹೊಂದುವರು. ನನ್ನಲ್ಲಿ ಶ್ರದ್ಧಾಪೂರ್ವಕವಾದ ನಿಷ್ಠೆಯನ್ನು ಯಾರು ಹೊಂದಿದ್ದಾರೋ ಅವರಿಗೆ ಉಜ್ವಲವಾದ ಜ್ಞಾನವನ್ನು ಕೊಟ್ಟು ಅಜ್ಞಾನವನ್ನು ಸಂಪೂರ್ಣ-ವಾಗಿ ನಾಶ ಮಾಡುತ್ತೇನೆ. ಅವರ ಯೋಗ-ಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ. ಭೋಗಪದಾರ್ಥಗಳ ಪ್ರಾಪ್ತಿಗಾಗಿ ಬೇರೆ ದೇವತೆಗಳನ್ನು ಪೂಜಿಸಿದರೆ, ಈ ಪೂಜೆಯಿಂದ ಲಭಿಸುವ ಫಲಗಳು ಶಾಶ್ವತವಲ್ಲ. ಕೇವಲ ತಾತ್ಕಾಲಿಕ. ನನ್ನಲ್ಲಿ ಭಕ್ತಿಯಿದ್ದವರು, ಬೇರೆ ದೇವತೆಗಳ ಪೂಜೆಯನ್ನು ಮಾಡಿದರೂ ಮುಕ್ತಿಯನ್ನು ಹೊಂದುತ್ತಾರೆ. ಆದ್ದರಿಂದ ನಶ್ವರ ಫಲಗಳನ್ನು ಕೊಡುವ ಅನ್ಯದೇವತೆಗಳ ಪೂಜೆಯನ್ನು ಬಿಟ್ಟು ನನ್ನನ್ನೇ ಆಶ್ರಯಿಸಬೇಕು. ಹೀಗೆ ಮಾಡುವವರು ಪರಮಪದವನ್ನು ಹೊಂದುತ್ತಾರೆ.

ಪುತ್ರ ವಿತ್ತ, ಭಾರ್ಯಾ - ಇವರಲ್ಲಿರುವ ಸ್ನೇಹವನ್ನು ತ್ಯಜಿಸಿ, ಯಾರಿಂದಲೂ ಏನನ್ನೂ ತೆಗೆದುಕೊಳ್ಳದೆ, ವಿರಕ್ತನಾಗಿ ಮರಣದವರೆಗೆ ಪರಮೇಶ್ವರ ಲಿಂಗವನ್ನು ಪೂಜಿಸಬೇಕು. ಹೀಗೆ ಪೂಜಿಸುವವರಿಗೆ ಒಂದೇ ಜನ್ಮದ ಸಾಧನೆಯಿಂದ ಪರಮಪದವನ್ನು ಕೊಡುತ್ತೇನೆ.

## ಲಿಂಗಾರ್ಚನೆ :

ಪರಮೇಶ್ವರನ ಲಿಂಗವು ಜ್ಞಾನರೂಪ. ಸರ್ವಗತ. ಯೋಗಿಗಳು ತಮ್ಮ ಹೃದಯದಲ್ಲಿ ಯಾವಾಗಲೂ ಅದನ್ನು ಧ್ಯಾನಿಸುತ್ತಾರೆ. ಬೇರೆ ಭಕ್ತರು ವಿಧಿಗನುಗುಣವಾಗಿ ನೀರಿನಲ್ಲಿ ಅಗ್ನಿಯಲ್ಲಿ, ಆಕಾಶದಲ್ಲಿ ಸೂರ್ಯನಲ್ಲಿ, ರತ್ನಗಳಲ್ಲಿ ಶಿವಲಿಂಗದ ಆವಾಹನೆಯನ್ನು ಮಾಡಿ ಅದನ್ನು ಪೂಜಿಸುತ್ತಾರೆ. ಈ ಪ್ರಪಂಚವೆಲ್ಲವೂ ಲಿಂಗಮಯ. ಎಲ್ಲವೂ ಲಿಂಗಕ್ಕೆ ಅಧೀನವಾಗಿದೆ. ಆದ್ದರಿಂದ ಯಾವುದಾದರೊಂದು ಲಿಂಗದಲ್ಲಿ ಶಾಶ್ವತನಾದ ಶಿವನನ್ನು ಪೂಜಿಸಬೇಕು. ಯಜ್ಞಾದಿಕರ್ಮಗಳಲ್ಲಿ ನಿರತರಾದವರು ಅಗ್ನಿಯಲ್ಲಿ, ಜ್ಞಾನಿಗಳು ನೀರು, ಆಕಾಶ, ಸೂರ್ಯ - ಇವರಲ್ಲಿ, ಮೂರ್ಖರು ಮರದ ಪದಾರ್ಥ ಮೊದಲಾದವುಗಳಲ್ಲಿ ಲಿಂಗವನ್ನು ಅರ್ಚಿಸುತ್ತಾರೆ. ಯೋಗಿಗಳು ಹೃದಯದಲ್ಲಿ ಲಿಂಗವನ್ನು ಅರ್ಚಿಸುತ್ತಾರೆ.

## ಅಜ್ಞಾನಿಗಳ ಸಾಧನಕ್ರಮ :

ಪರಮೇಶ್ವರನ ಜ್ಞಾನವನ್ನು ಸಂಪಾದಿಸಲು ಆಗದಿದ್ದರೆ ವಿರಕ್ತನೂ, ಪ್ರೀತಿಯುಕ್ತನೂ ಆಗಿ ಜೀವವಿರುವವರೆಗೆ ಪ್ರಣವಮಂತ್ರವನ್ನು (ಓಂಕಾರವನ್ನು) ಜಪಿಸಬೇಕು ಅಥವಾ

ಶತರುದ್ರಿಯವನ್ನು ಏಕಾಕಿಯಾಗಿ ಜಿತೇಂದ್ರಿಯನಾಗಿ ಮರಣಪರ್ಯಂತ ಜಪಿಸಬೇಕು. ಹೀಗೆ ಮಾಡುವವನು ಪರಮಪದವನ್ನು ಹೊಂದುತ್ತಾನೆ. ಜಿತೇಂದ್ರಿಯನೂ, ಜಿತಮನಸ್ಕನೂ ಆಗಿ ಭಕ್ತನು ಮರಣಪರ್ಯಂತ ಕಾಶಿಯಲ್ಲಿ ವಾಸಿಸಬೇಕು. ಅಲ್ಲಿದ್ದವರಿಗೆ ಮರಣ-ಕಾಲದಲ್ಲಿ ಈಶ್ವರನು ಶ್ರೇಷ್ಠವಾದ ಜ್ಞಾನವನ್ನು ಕೊಡುತ್ತಾನೆ. ಈ ಜ್ಞಾನದಿಂದ ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಪರಮೇಶ್ವರನ ಪ್ರಸಾದದಿಂದ ಪರಮಪದವನ್ನು ಹೊಂದುತ್ತಾನೆ. ವರ್ಣ ಮತ್ತು ಆಶ್ರಮಗಳ ಧರ್ಮವನ್ನು ಸಮಗ್ರವಾಗಿ ಪಾಲಿಸುತ್ತಾ, ನನ್ನನ್ನೇ ನಂಬಿ ಬದುಕುವವನು ಅದೇ ಜನ್ಮದಲ್ಲಿ ಮುಕ್ತಿಯನ್ನು ಪಡೆಯುತ್ತಾನೆ.

ಕಾಶಿಯಲ್ಲಿ ವಾಸ ಮಾಡುವ, ಹೀನ ಜನ್ಮವನ್ನು ಪಡೆದಿರುವ ಚೇತನಗಳೂ ಕೂಡ ಈಶ್ವರನ ಅನುಗ್ರಹದಿಂದ ಸಂಸಾರವನ್ನು ದಾಟುತ್ತಾರೆ. ಆದರೆ ಇಂತಹವರಿಗೆ ವಿಘ್ನಗಳು ಉಂಟಾಗುತ್ತವೆ.

**ಉಪಸಂಹಾರ :**

ಬ್ರಾಹ್ಮಣರೇ! ಮುಕ್ತಿಯನ್ನು ಪಡೆಯುವುದಕ್ಕಾಗಿ ಧರ್ಮ ಮಾರ್ಗವನ್ನೇ ಅವಲಂಬಿಸಬೇಕು. ಇದು ವೇದಗಳ ರಹಸ್ಯ. ಅರ್ಹರಲ್ಲದವರಿಗೆ ಇದನ್ನು ಉಪದೇಶಿಸ-ಬಾರದು. ಭಕ್ತನೂ, ಬ್ರಹ್ಮನಿಷ್ಠನೂ ಆದ ಧಾರ್ಮಿಕನಿಗೆ ಮಾತ್ರ ಇದನ್ನು ಉಪದೇಶಿಸಬೇಕು.

**ವ್ಯಾಸ ಉವಾಚ :**

ಭಗವವಾನ್ ಶಿವನು ಉತ್ತಮವಾದ ಯೋಗವನ್ನು ಹೀಗೆ ಉಪದೇಶಿಸಿ ಪಕ್ಕದಲ್ಲೇ ಕುಳಿತಿದ್ದ ನಾರಾಯಣನಿಗೆ ಹೇಳಿದನು. 'ಬ್ರಹ್ಮವಾದಿಗಳಿಗೆ ಹಿತಕರವಾದ ವಿಚಾರಗಳನ್ನು ನಾನು ಹೇಳಿದ್ದೇನೆ. ಶಾಂತ ಮನಸ್ಸಿನ ಶಿಷ್ಯರಿಗೆ ಅದನ್ನು ಉಪದೇಶಿಸಬೇಕು.' ಅನಂತರ ಅಲ್ಲಿದ್ದ ಯೋಗೀಂದ್ರರಿಗೆ ಹೀಗೆ ಹೇಳಿದನು.

'ದ್ವಿಜಶ್ರೇಷ್ಠರೇ! ಎಲ್ಲ ಭಕ್ತರ ಹಿತಕ್ಕಾಗಿ ನೀವುಗಳು ಈ ವಿಚಾರಗಳನ್ನು ನಿಮ್ಮ ಶಿಷ್ಯರಿಗೆ ವಿಧಿಗೆ ಅನುಗುಣವಾಗಿ ಉಪದೇಶಿಸಬೇಕು. ಎಲ್ಲ ಭಕ್ತರಿಗೆ ಉಪದೇಶಿಸಬೇಕು.'

'ಈ ನಾರಾಯಣನು ಪರಮೇಶ್ವರನೇ, ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಶಿವ-ನಾರಾಯಣರಲ್ಲಿ ಭೇದವನ್ನು ಕಾಣದವರಿಗೆ ಮಾತ್ರ ಈ ವಿಷಯಗಳನ್ನು ಉಪದೇಶಿಸಬೇಕು. ನಾರಾಯಣ ಎಂಬ ಹೆಸರಿನ ನನ್ನ ಈ ಶ್ರೇಷ್ಠಮೂರ್ತಿಯು ಸರ್ವ ಭೂತಾಂತರ್ಯಾಮಿಯಾಗಿದೆ. ಶಾಂತವಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ತಿಳಿಯುವವರು ಅಜ್ಞಾನಿಗಳು. ಅವರಿಗೆ ಮುಕ್ತಿಯಾಗುವುದಿಲ್ಲ. ಅವರು ಪುನಃ ಪುನಃ ಹುಟ್ಟುತ್ತಾರೆ. ಅವ್ಯಕ್ತ-ನಾದ ಈ ವಿಷ್ಣುವನ್ನು ಮತ್ತು ಮಹೇಶ್ವರನಾದ ನನ್ನನ್ನು ಒಂದೇ ಎಂದು ಭಾವಿಸುವವರಿಗೆ ಪುನರ್ಜನ್ಮವಿಲ್ಲ. ಆದ್ದರಿಂದ ನನ್ನನ್ನು ಆದಿ-ನಿಧನಗಳಿಲ್ಲದ ಅವ್ಯಯನಾದ, ವ್ಯಾಪ್ತನಾದ

ವಿಷ್ಣು ಎಂದು ತಿಳಿಯಿರಿ. ಹಾಗೆಯೇ ಪೂಜಿಸಿರಿ.' 'ನನ್ನನ್ನೂ, ವಿಷ್ಣುವನ್ನೂ ಬೇರೆ ಬೇರೆ ಎಂದು ಯಾರು ತಿಳಿಯುತ್ತಾರೋ ಅವರಿಗೆ ನನ್ನ ಅನುಗ್ರಹವಿಲ್ಲ. ಅವರು ಘೋರ ನರಕಗಳಿಗೆ ಹೋಗುತ್ತಾರೆ. ನನ್ನನ್ನು ಆಶ್ರಯಿಸಿದವನಿಗೆ ಅವನು ಮೂರ್ಖನಾಗಿರಲಿ ಅಥವಾ ಪಂಡಿತನಾಗಿರಲಿ, ಶ್ವಪಚನಾಗಿರಲಿ, ನಾನು ಮುಕ್ತಿಯನ್ನು ಕೊಡುತ್ತೇನೆ. ಆದರೆ ನಾರಾಯಣನನ್ನು ನಿಂದಿಸುವವರಿಗೆ ಕೊಡುವುದಿಲ್ಲ. ಆದ್ದರಿಂದ ಮಹಾ ಯೋಗಿಯಾದ, ಪುರುಷೋತ್ತಮನನ್ನು ನನ್ನ ಭಕ್ತರೆಲ್ಲರೂ ಪೂಜಿಸಬೇಕು. ನಮಸ್ಕರಿಸಬೇಕು. ಹೀಗೆ ಮಾಡಿದರೆ ನನಗೆ ಸಂತೋಷವಾಗುತ್ತದೆ.' ಪಿನಾಕಧಾರಿಯಾದ ಶಿವನು ಹೀಗೆ ಹೇಳಿ ನಾರಾಯಣನನ್ನು ಆಲಿಂಗಿಸಿ ಎಲ್ಲರೂ ನೋಡುತ್ತಿದ್ದಂತೆಯೇ ಅಂತರ್ಧಾನನಾದನು.

## ನಾರಾಯಣದೇವರ ಉಪಸಂಹಾರವಚನ :

ನಾರಾಯಣದೇವರೂ ಕೂಡ ತಾಪಸವೇಷವನ್ನು ಸ್ವೀಕರಿಸಿ ಮುನಿಗಳಿಗೆ ಹೇಳಿದರು. ''ನೀವು ಪರಮೇಶ್ವರನ ಅನುಗ್ರಹದಿಂದ ಸಂಸಾರಬಂಧನವನ್ನು ನಾಶ ಮಾಡುವ ಜ್ಞಾನವನ್ನು ಪಡೆದಿರುವಿರಿ. ನೀವೆಲ್ಲರೂ ಆತಂಕವಿಲ್ಲದೆ ನಿಮ್ಮ ಸ್ಥಾನಗಳಿಗೆ ಮರಳಿ ಹೋಗಿ. ನೀವು ಪಡೆದ ಜ್ಞಾನವನ್ನು ಧರ್ಮಿಷ್ಠರಾದ ನಿಮ್ಮ ಶಿಷ್ಯರಿಗೆ ಉಪದೇಶಿಸಿರಿ. ಭಕ್ತನೂ, ವಿರಕ್ತನೂ, ಧಾರ್ಮಿಕನೂ, ವಿಹಿತವಾದ ಹೋಮವನ್ನು ಮಾಡುವವನೂ ಆದ ಪುರುಷನಿಗೆ ಇದನ್ನು ಉಪದೇಶಿಸಿರಿ.'' ಹೀಗೆ ಹೇಳಿ ಮಹಾಯೋಗಿಯೂ, ವಿಶ್ವಾಂತರ್ಯಾಮಿಯೂ ಆದ ನಾರಾಯಣದೇವರು ಅಂತರ್ಧಾನರಾದರು. ಆ ಋಷಿಗಳೂ ದೇವೋತ್ತಮನಾದ ಮಹೇಶ್ವರನನ್ನು ಮತ್ತು ಜಗದಾದಿಕಾರಣನಾದ ನಾರಾಯಣನನ್ನು ನಮಸ್ಕರಿಸಿ ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗಿದನು. ಅನಂತರ ಭಗವಾನ್ ಸನತ್ಕುಮಾರರು ಸಂವರ್ತ ಎಂಬ ಶಿಷ್ಯನಿಗೆ ಉಪದೇಶವನ್ನು ಮಾಡಿದನು. ಅವನು ಸತ್ಯವ್ರತನಿಗೆ ಉಪದೇಶ ಮಾಡಿದನು. ಯೋಗೀಂದ್ರರಾದ ಸನಂದನರು ಪುಲಹಮಹರ್ಷಿಗೆ ಉಪದೇಶಿಸಿದರು. ಪುಲಹರು ಗೌತಮರಿಗೆ ಉಪದೇಶಿಸಿದರು. ಆಂಗೀರಸರು ವೇದಜ್ಞರಾದ ಭಾರದ್ವಾಜರಿಗೆ ಉಪದೇಶಿಸಿದರು. ಕಪಿಲ ಮಹರ್ಷಿಗಳು ಜೈಗೀಷವ್ಯ ಮತ್ತು ಪಂಚಶಿಖ ಎಂಬ ಮುನಿಗಳಿಗೆ ಉಪದೇಶಿಸಿದರು. ಸನಕ ಮುನಿಗಳು ಸರ್ವತತ್ತ್ವವಿಧರಾದ ಪರಾಶರರಿಗೆ ಉಪದೇಶಿಸಿದರು. ಅವರು ವಾಲ್ಮೀಕಿಗೆ ಉಪದೇಶ ಮಾಡಿದರು. ನನಗೆ (ವೇದವ್ಯಾಸರಿಗೆ) ವಾಮದೇವ ಎಂಬ ರುದ್ರನು ಉಪದೇಶಿಸಿದನು. ವಾಮದೇವ ಸಾಕ್ಷಾತ್ ಶಿವನೇ, ನಾರಾಯಣ ದೇವಕೀಪುತ್ರನಾದ ಭಗವಾನ್ ಕೃಷ್ಣನೇ ಶ್ರೀಕೃಷ್ಣನು ಅರ್ಜುನನಿಗೆ ಈ ಜ್ಞಾನವನ್ನು ಉಪದೇಶಿಸಿದನು. ನಾನು ವಾಮದೇವನಿಂದ ಜ್ಞಾನ ಪಡೆದಾಗಿನಿಂದಲೂ ನನಗೆ ಶಿವನ ಮೇಲೆ ವಿಶೇಷವಾದ ಭಕ್ತಿಯು ಉಂಟಾಯಿತು. ಆಶ್ರಯ ಕೊಡಲು ಸಮರ್ಥನಾದ ಶಿವನನ್ನು ನಾನು ವಿಶೇಷವಾಗಿ ಆಶ್ರಯಿಸಿದ್ದೇನೆ. ಭೂತೇಶನೂ, ಗಿರೀಶನೂ, ನಿರ್ವಿಕಾರನೂ, ತ್ರಿಶೂಲಧಾರಿಯೂ ವೃಷಭವಾಹನನೂ ಆದ ಶಿವನನ್ನು ನೀವೂ ಕೂಡ ಪತ್ನೀ-ಪುತ್ರ ಸಹಿತರಾಗಿ ಆಶ್ರಯಿಸಿರಿ. ಕರ್ಮಯೋಗದಿಂದ ಅವನನ್ನು ಆರಾಧಿಸಿರಿ. ಅವನ ಅನುಗ್ರಹದಿಂದ ಬದುಕಿರಿ.

ವ್ಯಾಸರ ಈ ಉಪದೇಶವನ್ನು ಕೇಳಿ ಶೌನಕಾದಿ ಮಹರ್ಷಿಗಳು ಶಿವನನ್ನು, ವ್ಯಾಸರನ್ನೂ ನಮಸ್ಕರಿಸಿ ಹೇಳಿದರು.

'ನಿಮ್ಮ ಅನುಗ್ರಹದಿಂದ ಶರಣ್ಯ(ಆಶ್ರಯಿಸಲು ಯೋಗ್ಯ)ನಾದ ವೃಷಭವಾಹನನ ಮೇಲೆ ನಮಗೆ ಈಗ ಭಕ್ತಿಯು ಉಂಟಾಗುತ್ತಿದೆ. ಈ ಭಕ್ತಿಯೂ ದೇವತೆಗಳಿಗೂ ದುರ್ಲಭ. ಮುನಿಶ್ರೇಷ್ಠ! ಮುಕ್ತಿಯನ್ನು ಬಯಸುವವರು ಭಗವಾನ್ ಶಿವನನ್ನು ಆರಾಧಿಸಲು ಉಪಯುಕ್ತವಾದ ಕರ್ಮಯೋಗವನ್ನು ದಯವಿಟ್ಟು ಉಪದೇಶಿಸಿರಿ. ಈ ಸೂತರೂ ನಿಮ್ಮಿಂದ ಪ್ರವಚನವನ್ನು ಕೇಳಲಿ. ಇದಲ್ಲದೆ, ಅಮೃತ ಮಥನ ಕಾಲದಲ್ಲಿ ಕೂರ್ಮ ರೂಪವನ್ನೂ ಧರಿಸಿದ್ದ ವಿಷ್ಣುವು ಉಪದೇಶಿಸಿದ, ಸರ್ವರಿಗೂ ಉಪಯುಕ್ತವಾದ ಧರ್ಮ ಸಂಗ್ರಹವನ್ನು ದಯವಿಟ್ಟು ಉಪದೇಶಿಸಿರಿ.'

ಮುನಿಗಳ ಮಾತನ್ನು ಕೇಳಿ ವ್ಯಾಸರು ಹೀಗೆ ಹೇಳಿದರು : 'ಶಿವ ಮತ್ತು ಸನತ್ಕುಮಾರಾದಿ ಮುನಿಗಳ ಸಂವಾದವನ್ನು ಯಾರು ಪ್ರತಿದಿನ ಓದುತ್ತಾರೋ, ಶುದ್ಧರೂ, ಬ್ರಹ್ಮಜ್ಞಾನ-ನಿರತರೂ ಆದ ಬ್ರಾಹ್ಮಣರಿಗೆ ಪ್ರವಚನ ಮಾಡುತ್ತಾರೋ ಅವರು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾರೆ. ಯಾರು ಈ ಸಂವಾದದ ಅರ್ಥದ ಜಿಜ್ಞಾಸೆಯನ್ನು ಮಾಡುತ್ತಾರೋ ಅವರು ಪರಮಗತಿಯನ್ನು ಹೊಂದುತ್ತಾರೆ. ಭಕ್ತಿಯಿಂದ ಪ್ರತಿದಿನ ಕೇಳುವವರು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು ಬ್ರಹ್ಮಲೋಕದಲ್ಲಿ ಮಾನಿತ-ರಾಗುತ್ತಾರೆ. ಆದ್ದರಿಂದ ಮನೀಷಿಗಳು (ಬುದ್ಧಿ ಇರುವವರು) ಪ್ರಯತ್ನಪಟ್ಟು ಈ ಉಪದೇಶವನ್ನು ಕೇಳಬೇಕು. ಮನನ ಮಾಡಬೇಕು.

* * *

## ಅಧ್ಯಾಯ-೬೫

**ವ್ಯಾಸ ಉವಾಚ :**

ಋಷಿಗಳೇ! ನಾನು ನಿಮಗೆ ಕರ್ಮಯೋಗವನ್ನು ಹೇಳುವೆ. ಇದು ಬ್ರಹ್ಮಾನ್ವೇಷಿಗಳಿಗೆ ತಪ್ಪದೇ ಉಪಯುಕ್ತವಾಗುವ ಯೋಗ. ಇದು ವೇದಗಳು ತಿಳಿಸಿರುವ ಯೋಗ. ಈ ಯೋಗವನ್ನು ಹಿಂದೆ ಮನುಪ್ರಜಾಪತಿಯು ಋಷಿಗಳಿಗೆ ಹೇಳಿದ್ದನು. ಋಷಿಗಳು ಅನುಷ್ಠಾನ ಮಾಡಿದ್ದರು. ಇದರ ಅನುಷ್ಠಾನದಿಂದ ಎಲ್ಲ ಪಾಪಗಳ ಪರಿಹಾರವಾಗುತ್ತದೆ. ನೀವೆಲ್ಲರೂ ಶಾಂತಚಿತ್ತರಾಗಿ ಕೇಳಿರಿ.

## ಕರ್ಮಯೋಗ :

### (೧) ಉಪವೀತ :

ಗರ್ಭಾಷ್ಟಮ ಅಥವಾ ಅಷ್ಟಮ ವರ್ಷದಲ್ಲಿ ಅವರವರ ವೇದಶಾಖೆಗೆ ಸಂಬಂಧಿಸಿದ ಗೃಹ್ಯಸೂತ್ರಗಳಲ್ಲಿ ಹೇಳಿರುವ ವಿಧಾನದಿಂದ ಉಪನಯನವನ್ನು ಮಾಡಬೇಕು. ಉಪವೀತ-ನಾದ ಹುಡುಗ ವೇದಗಳ ಅಧ್ಯಯನವನ್ನು ಮಾಡಬೇಕು. ದಂಡ, ಮೇಖಲ, ಉಪವೀತ ಮತ್ತು ಕೃಷ್ಣಾಜಿನಗಳನ್ನು ಧರಿಸಬೇಕು. ಭಿಕ್ಷಾನ್ನವನ್ನು ಊಟ ಮಾಡಬೇಕು.

ಬ್ರಹ್ಮನು ಪದಾರ್ಥಗಳನ್ನು ಸೃಷ್ಟಿಸುತ್ತಿದ್ದಾಗ ಉಪವೀತಕ್ಕಾಗಿ ಹತ್ತಿಯನ್ನು ಸೃಷ್ಟಿ ಮಾಡಿದನು. ದ್ವಿಜನು ಯಜ್ಞೋಪವೀತವನ್ನು ಯಾವಾಗಲೂ ಧರಿಸಿರಬೇಕು. ಯಾವಾಗಲೂ ಶಿಖೆಯನ್ನು ಕಟ್ಟಿಕೊಂಡಿರಬೇಕು. ಹೀಗಿಲ್ಲದೆ ಆಚರಿಸಲ್ಪಟ್ಟ ಕರ್ಮಗಳು ವ್ಯರ್ಥ. ಹತ್ತಿಯ ಬಟ್ಟೆಯನ್ನು, ಅದು ಇದ್ದಂತೆಯೇ, ಧರಿಸಬೇಕು. ಅದಕ್ಕೆ ಯಾವ ವಿಕೃತಿ-ಯನ್ನೂ ಉಂಟುಮಾಡಬಾರದು. ಕಾವಿವಸ್ತ್ರವನ್ನು ಧರಿಸಬಹುದು. ಹರಿಯದ ಸ್ವಚ್ಛವಾದ ಹತ್ತಿಬಟ್ಟೆಯನ್ನು ಉತ್ತರೀಯವಾಗಿ ಧರಿಸಬೇಕು. ಕೃಷ್ಣಾಜಿನವನ್ನು ಉತ್ತರೀಯವಾಗಿ ಧರಿಸುವುದು ಉತ್ತಮ ಎಂದು ತಿಳಿದವರ ಅಭಿಪ್ರಾಯ. ಅದು ಸಿಗದಿದ್ದಾಗ ರುರು ಮೃಗದ ಚರ್ಮವನ್ನು ಧರಿಸುವುದು ಒಳ್ಳೆಯದು. ಸೂತ್ರವನ್ನು ಬಲಗೈಯನ್ನು ಎತ್ತಿ ಎಡಭುಜದ ಮೇಲೆ ಹಾಕಿಕೊಂಡರೆ ಅದು ಉಪವೀತವಾಗುತ್ತದೆ. ಕುತ್ತಿಗೆಗೆ ಹಾಕಿಕೊಂಡರೆ ಅದು ನಿವೀತವಾಗುತ್ತದೆ. ಎಡಗೈಯನ್ನು ಎತ್ತಿ ಬಲಭುಜದ ಮೇಲೆ ಹಾಕಿಕೊಂಡರೆ ಪ್ರಾಚೀನಾ-ವೀತಿ. ಪಿತೃಶ್ರಾದ್ಧವನ್ನು ಮಾಡುವಾಗ ಹೀಗೆ ಹಾಕಿಕೊಳ್ಳಬೇಕು.

ಅಗ್ನಿಶಾಲೆಯಲ್ಲಿ, ಗೋಶಾಲೆಯಲ್ಲಿ ಕೆಲಸ ಮಾಡುವವನು, ಹೋಮ ಮಾಡುವಾಗ, ಜಪವನ್ನು ಮಾಡುವಾಗ ವೇದಾಧ್ಯಯನವನ್ನು ಮಾಡುವಾಗ, ಭೋಜನ ಸಮಯದಲ್ಲಿ ಬ್ರಾಹ್ಮಣರ ಸನ್ನಿಧಾನದಲ್ಲಿರುವಾಗ, ಗುರುಸೇವೆಯನ್ನು ಮಾಡುವಾಗ, ಸಂಧ್ಯಾ-ವಂದನೆಯನ್ನು ಮಾಡುವಾಗ, ಸಜ್ಜನರ ಸಮಾಗಮ ಕಾಲದಲ್ಲಿ ತಪ್ಪದೇ ಉಪವೀತವನ್ನು ಧರಿಸಬೇಕು. ಇದು ಸನಾತನವಿಧಿ.

### (೨) ಮೇಖಲಾ :

ಮೂರು ಎಳೆಗಳಿರುವ, ಸಮವಾಗಿರುವ, ಸ್ವಚ್ಛವಾದ ಮುಂಜ ಎಂಬ ಹುಲ್ಲಿನ ಅಥವಾ ದರ್ಭೆಯ ಮೇಖಲೆಯನ್ನು (ಉಡಿದಾರವನ್ನು) ಬ್ರಾಹ್ಮಣನು ಧರಿಸಬೇಕು. ಅದಕ್ಕೆ ಒಂದು ಅಥವಾ ಮೂರು ಗಂಟುಗಳು ಇರಬೇಕು.

### (೩) ದಂಡ :

ಬಿಲ್ವ ಅಥವಾ ಮುತ್ತುಗದ ದಂಡವನ್ನು ದ್ವಿಜರು ಧರಿಸಬೇಕು. ಅದು ಇಡೀ ಶರೀರದ ಅಳತೆಯಷ್ಟು ಇರಬೇಕು. ಅಥವಾ ಸೌಮ್ಯವಾಗಿರುವ ಗಾಯಗೊಳಿಸದ ಯಜ್ಞದಲ್ಲಿ ಉಪಯೋಗಿಸಲು ಯೋಗ್ಯವಾದ ಯಾವುದೇ ಮರದ ದಂಡವನ್ನು ಧರಿಸಬಹುದು.

## (೪) ಸಂಧ್ಯಾವಂದನೆ ಇತ್ಯಾದಿ. :

ದ್ವಿಜರು ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಸಂಧ್ಯಾವಂದನೆಯನ್ನು ಮಾಡಬೇಕು. ಕಾಮ, ಲೋಭ, ಭಯ ಅಥವಾ ಮೋಹಗಳಿಂದ ಸಂಧ್ಯಾವಂದನೆಯನ್ನು ಬಿಡಬಾರದು. ಬಿಟ್ಟವನು ಪತಿತ. ಎರಡು ಕಾಲಗಳಲ್ಲೂ ಅಗ್ನಿಕಾರ್ಯವನ್ನು ಮಾಡಬೇಕು. ದೇವ, ಋಷಿ, ಪಿತೃಗಳಿಗೆ ತರ್ಪಣವನ್ನು ಕೊಡಬೇಕು. ಪುಷ್ಪ, ಪತ್ರ ಮತ್ತು ನೀರು -ಇವುಗಳಿಂದ ದೇವತಾರ್ಚನೆಯನ್ನು ಮಾಡಬೇಕು.

- ಹಿರಿಯರಿಗೆ ಅಭಿವಾದನವನ್ನು ಮಾಡಬೇಕು. ನಾಮ ಗೋತ್ರಗಳನ್ನು ಹೇಳಿ ನಮಸ್ಕರಿಸಬೇಕು. ನಮಸ್ಕರಿಸುವಾಗ ದ್ರವ್ಯ ಮೊದಲಾದವುಗಳ ಲಾಭವನ್ನು ಬಯಸದೆ ಆಯುಷ್ಯ ಆರೋಗ್ಯಗಳ ಸಿದ್ಧಿಯಾಗಲಿ ಎಂದು ಬಯಸಬೇಕು. ಹಿರಿಯರು 'ಆಯುಷ್ಮಾನ್ ಭವ ಸೌಮ್ಯ' ಎಂದು ಹೇಳಬೇಕು. ಇದು ಪ್ರತ್ಯಭಿವಾದನ. ಪ್ರತ್ಯಭಿವಾದನವನ್ನು ಮಾಡದ ಹಿರಿಯರಿಗೆ ಅಭಿವಾದನವನ್ನು ಮಾಡಬಾರದು. ನಮಸ್ಕರಿಸುವಾಗ ಎಡಗೈಯಿಂದ ಎಡಪಾದವನ್ನೂ, ಬಲಗೈಯಿಂದ ಬಲಪಾದವನ್ನು ಮುಟ್ಟಬೇಕು. ಲೌಕಿಕ, ವೈದಿಕ ಮತ್ತು ಆಧ್ಯಾತ್ಮಿಕ ಜ್ಞಾನವನ್ನು ಯಾರಿಂದ ಪಡೆದಿರುತ್ತಾನೋ ಆ ಗುರುವಿಗೆ ಮೊದಲು ನಮಸ್ಕಾರ ಮಾಡಬೇಕು. ದೇವಕಾರ್ಯ, ಪಿತೃಕಾರ್ಯಗಳನ್ನು ಮುಗಿಸದೆ ನೀರು, ಭಿಕ್ಷಾನ್ನ, ಪುಷ್ಪ, ಸಮಿತ್‌ಗಳನ್ನು ಉಪಯೋಗಿಸಬಾರದು.

ಕುಶಲಪ್ರಶ್ನೆಯನ್ನು ಮಾಡುವಾಗ ಬ್ರಾಹ್ಮಣನನ್ನು 'ಕುಶಲವೇ' ಎಂದು ಕೇಳಬೇಕು. ಕ್ಷತ್ರ ಬಂಧುವನ್ನು 'ಅನಾಮಯವೇ' ಎಂದು ಕೇಳಬೇಕು. ವೈಶ್ಯನನ್ನು 'ಕ್ಷೇಮವೇ' ಎಂದು ಕೇಳಬೇಕು. ಶೂದ್ರರನ್ನು 'ಆರೋಗ್ಯವೇ' ಎಂದು ಕೇಳಬೇಕು.

ಉಪಾಧ್ಯಾಯ, ತಂದೆ, ಹಿರಿಯಣ್ಣ, ರಾಜ, ಸೋದರಮಾವ, ಮಾವ, ತಾಯಿಯ ತಂದೆ, ತಂದೆಯ ತಂದೆ, ಉತ್ತಮವರ್ಣದವರು, ಮತ್ತು ಚಿಕ್ಕಪ್ಪ - ಇಷ್ಟು ಜನರು ಗುರುಗಳು. ತಾಯಿ, ತಾಯಿಯ ತಾಯಿ, ತಂದೆ-ತಾಯಿಯರ ಸೋದರಿಯರು, ಅತ್ತೆ, ತಂದೆಯ ತಾಯಿ, ಅತ್ತಿಗೆ ಇವರು ಗುರುಸ್ತ್ರೀಯರು. ಇವರುಗಳನ್ನು ಕಾಯೇನ-ವಾಚಾ ಮನಸಾ ಅನುಸರಿಸಬೇಕು. ಹಿರಿಯರು ಎದುರಾದಾಗ ಎದ್ದುನಿಲ್ಲಬೇಕು. ಅಭಿವಾದನವನ್ನು ಮಾಡಿ ಕೈಮುಗಿದುಕೊಂಡು ನಿಲ್ಲಬೇಕು. ಇವರ ಜೊತೆ ಕುಳಿತುಕೊಳ್ಳಬಾರದು. ಸಂಪತ್ತಿಗಾಗಿ ಇವರ ಜೊತೆ ವಿವಾದವನ್ನು ಮಾಡಬಾರದು. ಜೀವನಕ್ಕೋಸ್ಕರವೂ ವಿವಾದವನ್ನು ಮಾಡಬಾರದು. ದ್ವೇಷದಿಂದ ಮಾತನಾಡಬಾರದು. ಗುರುದ್ವೇಷವನ್ನು ಮಾಡುವವನು, ಬೇರೆ ಎಷ್ಟೇ ಸದ್ಗುಣ ಸಂಪನ್ನನಾಗಿದ್ದರೂ, ಪತನ ಹೊಂದುತ್ತಾನೆ.

ಮೇಲೆ ಹೇಳಿದ ಗುರುಸಮುದಾಯದಲ್ಲಿ ಐದು ಜನರು ವಿಶೇಷವಾಗಿ ಪೂಜ್ಯರು. ತಂದೆ, ತಾಯಿ, ವಿದ್ಯೆಯನ್ನು ಉಪದೇಶಮಾಡಿದ ಗುರು, ಹಿರಿಯಣ್ಣ ಮತ್ತು ರಕ್ಷಣೆ ಮಾಡಿದವನು

ಈ ಐದು ಜನ ವಿಶೇಷವಾಗಿ ಪೂಜ್ಯರಾದ ಗುರುಗಳು. ಇವರನ್ನು ಸರ್ವವಿಧವಾದ ಪ್ರಯತ್ನಗಳಿಂದ ಪೂಜಿಸಬೇಕು. ಅದಕ್ಕಾಗಿ ಪ್ರಾಣತ್ಯಾಗವನ್ನು ಕೂಡ, ಅವಶ್ಯಕತೆ ಇದ್ದರೆ, ಮಾಡಬೇಕು. ಹೀಗೆ ಪೂಜಿಸುವವರಿಗೆ ವಿಶೇಷವಾದ ಅಭ್ಯುದಯವಾಗುವುದು.

ತಂದೆ - ತಾಯಿಯವರು ಸ್ವಸ್ಥರಾಗಿ ಇರುವವರೆಗೆ ತನ್ನ ಎಲ್ಲ ಆಸಕ್ತಿಗಳನ್ನು ಬಿಟ್ಟು ಅವರಿಗೆ ನಿಷ್ಠನಾಗಿರಬೇಕು. ಪುತ್ರನ ಗುಣಗಳಿಂದ ತಂದೆ-ತಾಯಿಗಳು ಸುಪ್ರೀತರಾದರೆ ಅಂತಹ ಪುತ್ರನು ಎಲ್ಲ ಧರ್ಮಫಲವನ್ನು ಹೊಂದುತ್ತಾನೆ. ತಾಯಿಗೆ ಸಮನಾದ ದೇವತೆಯಿಲ್ಲ. ತಂದೆಗೆ ಸಮನಾದ ಗುರು ಇಲ್ಲ.

ಪಿತಾ ಮಾತಾ ಚ ಸುಪ್ರೀತೌ ಸ್ಯಾತಾಂ ಪುತ್ರಗುಣೈರ್ಯದಿ ।
ಸ ಪುತ್ರಃ ಸಕಲಂ ಧರ್ಮಮಾಪ್ನುಯಾತ್ತೇನ ಕರ್ಮಣಾ ।
ನಾಸ್ತಿ ಮಾತೃಸಮೋ ದೇವೋ ನಾಸ್ತಿ ತಾತಸಮೋ ಗುರುಃ ।

ಅವರು ಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರವೇ ಇಲ್ಲ. ಆದ್ದರಿಂದ ಮನಸ್ಸು-ಮಾತು-ಕೃತಿಗಳಿಂದ ಅವರಿಗೆ ಪ್ರಿಯವಾಗುವಂತೆ ನಡೆದುಕೊಳ್ಳಬೇಕು. ಅವರ ಅನುಮತಿಯಿಲ್ಲದೆ ಬೇರೆ ಯಾವ ಧರ್ಮಾಚರಣೆಯನ್ನು ಮಾಡಬಾರದು. ಮುಕ್ತಿಸಾಧನವಾದ ಕರ್ಮಗಳನ್ನು ಮತ್ತು ನಿತ್ಯ-ನೈಮಿತ್ತಿಕ ಕರ್ಮಗಳನ್ನು ಮಾಡಲು ಅವರ ಅನುಮತಿ ಬೇಕಿಲ್ಲ. ಏಕೆಂದರೆ ಮರಣಾನಂತರ ಅನಂತಫಲವನ್ನು ಕೊಡುವ ಧರ್ಮವೇ ಶ್ರೇಷ್ಠವಾದ ಧರ್ಮ. ಮುಕ್ತಿ-ಸಾಧನಕರ್ಮಗಳು ಮತ್ತು ನಿತ್ಯ-ನೈಮಿತ್ತಿಕ ಕರ್ಮಗಳು ಇಂತಹ ಕರ್ಮಗಳು.

ಗುರುಗಳ ಸೇವೆಯನ್ನು ಚೆನ್ನಾಗಿ ಮಾಡಿ ಅವರ ಅನುಮತಿಯನ್ನು ಪಡೆದು ಗುರುಕುಲದಿಂದ ಹೊರಬಂದವನು ತಾನು ಗಳಿಸಿದ ವಿದ್ಯೆಯ ಫಲವನ್ನು ಅನುಭವಿಸುತ್ತಾನೆ. ಮರಣಾನಂತರ ಸ್ವರ್ಗದಲ್ಲೂ ಪೂಜಿತನಾಗುತ್ತಾನೆ. ತಂದೆಗೆ ಸಮಾನನಾದ ಹಿರಿಯಣ್ಣನನ್ನು ಅವಮಾನಿಸುವವನು ಮರಣಾನಂತರ ಘೋರನರಕಕ್ಕೆ ಹೋಗುತ್ತಾನೆ. ಪೂಜ್ಯಸ್ಥಾನದಲ್ಲಿರುವ ರಕ್ಷಕನೂ ಕೂಡ ಜನಗಳಿಗೆ ಹಿತವಾಗುವಂತೆ ನಡೆದುಕೊಳ್ಳಬೇಕು. ಇಂತಹ ಸ್ವಾಮಿಯ ಋಣವನ್ನು ತೀರಿಸುವುದಕ್ಕಾಗಿ ಯಾರು ಪ್ರಾಣವನ್ನು ಅವಶ್ಯಕತೆಯಿದ್ದರೆ, ಕೊಡುತ್ತಾರೋ ಅವರಿಗೆ ಅಕ್ಷಯಲೋಕಗಳ ಪ್ರಾಪ್ತಿಯಾಗುವುದೆಂದು ಮನು ಹೇಳಿದ್ದಾನೆ.

ಸೋದರಮಾವ, ಚಿಕ್ಕಪ್ಪ, ಮಾವ, ಋತ್ವಿಜರು - ಈ ಹಿರಿಯರು ಎದುರಾದಾಗ ಎದ್ದು ನಿಂತು ಗೋತ್ರ-ಪ್ರವರನಾಮಗಳನ್ನು ಹೇಳಿ ಅಭಿವಾದನವನ್ನು ಮಾಡಬೇಕು. ಯಜ್ಞ-ದೀಕ್ಷೆಯನ್ನು ಪಡೆದವರು, ಚಿಕ್ಕವರಾದರೂ, ಅವರ ಹೆಸರನ್ನು ಕರೆಯಬಾರದು. ಭೋ ಎಂದು ಅಥವಾ ಭವಾನ್ ಎಂದು ಅವರನ್ನು ಸಂಬೋಧಿಸಿ ಮಾತನಾಡಿಸಬೇಕು. ಶ್ರೇಯಸ್ಸನ್ನು ಬಯಸುವ ಕ್ಷತ್ರಿಯ ಮೊದಲಾದವರು ಬ್ರಾಹ್ಮಣರಿಗೆ ತಲೆಯನ್ನು ಬಾಗಿಸಿ

ಅಭಿವಾದನವನ್ನು ಮಾಡಬೇಕು. ಜ್ಞಾನ-ಕರ್ಮ-ಗುಣಗಳನ್ನು ಹೊಂದಿ ಯಜ್ಞವನ್ನು ಮಾಡುವ ಬ್ರಾಹ್ಮಣರು ಕ್ಷತ್ರಿಯ ಮೊದಲಾದವರಿಗೆ ಹೀಗೆ ಅಭಿವಾದನವನ್ನು ಮಾಡಬಾರದು. ಬ್ರಾಹ್ಮಣರು ಸರ್ವವರ್ಣದವರಿಗೂ ಮಂಗಳವನ್ನುಂಟು ಮಾಡಲು ಸಮರ್ಥರು ಎಂದು ಶ್ರುತಿಯು ಹೇಳುತ್ತದೆ. ಬ್ರಾಹ್ಮಣರಿಗೆ ಅಗ್ನಿಯು ಗುರು. ಕ್ಷತ್ರಿಯಾದಿ ವರ್ಣದವರಿಗೆ ಬ್ರಾಹ್ಮಣನು ಗುರು. ಸ್ತ್ರೀಯರಿಗೆ ಪತಿಯೇ ಗುರು. ಅಭ್ಯಾಗತರು ಎಲ್ಲರಿಗೂ ಗುರು. ವಿದ್ಯೆ, ಆಚಾರ, ತಪಸ್ಸು, ಬಂಧು, ಸಂಪತ್ತು - ಈ ಐದು ಮಾನ್ಯಸ್ಥಾನಗಳು. ಇವುಗಳಲ್ಲಿ ಕ್ರಮವಾಗಿ ಮೊದಲಿನವುಗಳು ಮುಂದಿನವುಗಳಿಗಿಂತ ಹೆಚ್ಚು ಮಾನ್ಯ. ಇವುಗಳು, ಮೂರು, ವರ್ಣದವರಲ್ಲಿ, ಯಾರಲ್ಲಿ ಉತ್ಕೃಷ್ಟವಾಗಿ ಹೆಚ್ಚಾಗಿ ಇರುತ್ತವೋ ಅವರು ಗೌರವಾರ್ಹರು. ವೃದ್ಧನಾದ ಶೂದ್ರನೂ ಗೌರವಾರ್ಹ.

ಬ್ರಾಹ್ಮಣನಿಗೆ, ಸ್ತ್ರೀಯರಿಗೆ, ರಾಜನಿಗೆ, ಅಂಧನಿಗೆ, ವೃದ್ಧರಿಗೆ, ಭಾರವನ್ನು ಹೊತ್ತವರಿಗೆ, ರೋಗಿಗಳಿಗೆ ಮತ್ತು ದುರ್ಬಲರಿಗೆ ಉಳಿದವರು ದಾರಿಯನ್ನು ಬಿಟ್ಟು ಕೊಡಬೇಕು. ಬ್ರಹ್ಮಚಾರಿಯು ಪ್ರತಿದಿನವೂ ನಿಯಮಗಳನ್ನು ಪಾಲಿಸುತ್ತಾ ಶಿಷ್ಟರ ಮನೆಗಳಿಂದ ಭಿಕ್ಷೆಯನ್ನು ತರಬೇಕು. ಅದನ್ನು ಗುರುಗಳಿಗೆ ಒಪ್ಪಿಸಿ ಅವರ ಅನುಮತಿಯನ್ನು ಪಡೆದು ಊಟ ಮಾಡಬೇಕು. ಬ್ರಾಹ್ಮಣವಟುವು '*ಭವತಿ ಭಿಕ್ಷಾಂದೇಹಿ*' ಎಂದು ಭಿಕ್ಷೆಯನ್ನು ಕೇಳಬೇಕು. ಕ್ಷತ್ರಿಯವಟುವು '*ಭಿಕ್ಷಾಂ ಭವತಿ ದೇಹಿ*' ಎಂದು ಭಿಕ್ಷೆಯನ್ನು ಕೇಳಬೇಕು. ವೈಶ್ಯನು '*ಭಿಕ್ಷಾಂ ದೇಹಿ ಭವತಿ*' ಎಂದು ಭಿಕ್ಷೆಯನ್ನು ಕೇಳಬೇಕು. ಪ್ರಥಮ ಭಿಕ್ಷೆಯನ್ನು ತಾಯಿ, ತಂಗಿ, ಚಿಕ್ಕಮ್ಮ - ಇವರಲ್ಲಿ ಕೇಳಬೇಕು. ಅನಾದರವನ್ನು ತೋರಿಸದ ಸ್ತ್ರೀಯರಲ್ಲಿ ಭಿಕ್ಷೆಯನ್ನು ಕೇಳಬೇಕು. ಭಿಕ್ಷೆಯನ್ನು ಸ್ವಜಾತೀಯರ ಮನೆಗಳಲ್ಲಿ ಅಥವಾ ಎಲ್ಲ ವರ್ಣದವರ ಮನೆಗಳಲ್ಲಿ ಕೇಳಬಹುದು. ಆ ಮನೆಯವರು ವೇದಗಳನ್ನು, ಯಜ್ಞಗಳನ್ನು ತ್ಯಾಗಮಾಡಿರಬಾರದು. ಪತಿತರಾಗಿರಬಾರದು. ಸ್ವಕರ್ಮನಿಷ್ಠರಾಗಿರಬೇಕು. ಗುರುಗಳ ಮನೆಯಲ್ಲಿ ಮತ್ತು ಕುಲಬಾಂಧವರ ಮನೆಗಳಲ್ಲಿ ಭಿಕ್ಷೆಯನ್ನು ಕೇಳಬಾರದು. ಬೇರೆ ಮನೆಗಳಲ್ಲಿ ಭಿಕ್ಷೆಯು ದೊರೆಯದಿದ್ದರೆ ಕುಲಬಾಂಧವರ ಮನೆಯಲ್ಲಿ ಕೇಳಬಹುದು. ಅಲ್ಲಿಯೂ ಸಿಗದಿದ್ದಾಗ ಗುರುಗಳ ಮನೆಯಲ್ಲಿ ಕೇಳಬಹುದು. ಮೇಲೆ ಹೇಳಿದ ಯಾವ ಮನೆಗಳಲ್ಲೂ ಸಿಗದಿದ್ದಾಗ ಗ್ರಾಮದಲ್ಲಿ ಯಾರ ಮನೆಯಲ್ಲಾದರೂ ಕೇಳಬಹುದು. ಜಿತೇಂದ್ರಿಯನಾಗಿ, ಮಾತನಾಡದೆ, ಸುತ್ತಲೂ ನೋಡದೆ ಭಿಕ್ಷೆಯನ್ನು ತಂದು, ಗುರುಗಳಿಗೆ ಒಪ್ಪಿಸಿ, ಅವರ ಅನುಮತಿಯಿಂದ ಮೌನದಿಂದ ಭುಂಜಿಸಬೇಕು. ಭಿಕ್ಷಾವೃತ್ತಿ ಉಪವಾಸಕ್ಕೆ ಸಮಾನ. ಅನ್ನವನ್ನು ಆದರದಿಂದ ಭುಂಜಿಸಬೇಕು. ಅದನ್ನು ನಿಂದಿಸಬಾರದು.

ಅತಿಭೋಜನದಿಂದ ಆರೋಗ್ಯ ಹಾನಿ, ಆಯುಷ್ಯ ಹಾನಿಯಾಗುತ್ತದೆ. ನರಕಪ್ರಾಪ್ತಿಯಾಗುತ್ತದೆ. ಅತಿ ಭೋಜನವನ್ನು ಜನ ಮೆಚ್ಚುವುದಿಲ್ಲ. ಆದ್ದರಿಂದ ಅತಿ ಭೋಜನವನ್ನು ಮಾಡಬಾರದು. ಪೂರ್ವಾಭಿಮುಖವಾಗಿ ಅಥವಾ ಸೂರ್ಯಾಭಿಮುಖವಾಗಿ ಕುಳಿತು ಊಟ

ಮಾಡಬೇಕು. ಉತ್ತರದಿಕ್ಕಿಗೆ ಅಭಿಮುಖವಾಗಿ ಕುಳಿತು ಊಟವನ್ನು ಮಾಡಲೇಬಾರದು. ಕೈ-ಕಾಲುಗಳನ್ನು ತೊಳೆದು, ಎರಡು ಸಲ ಆಚಮನವನ್ನು ಮಾಡಿ ಶುಚಿಯಾದ ಸ್ಥಳದಲ್ಲಿ ಕುಳಿತು ಊಟ ಮಾಡಬೇಕು. ಊಟವಾದನಂತರ ಎರಡು ಸಲ ಆಚಮನವನ್ನು ಮಾಡಬೇಕು.

* * *

## ಅಧ್ಯಾಯ-೬೬

**ವ್ಯಾಸ ಉವಾಚ :**

**ಆಚಮನ ವಿಧಿ :**

ಭೋಜನ, ಪಾನ, ನಿದ್ರೆ, ಸ್ನಾನ, ರಸ್ತೆಯಲ್ಲಿ ಓಡಾಟ, ವಸ್ತ್ರಧಾರಣೆ -ಇವುಗಳನ್ನು ಮಾಡಿದಾಗ ಆಚಮನವನ್ನು ಮಾಡಬೇಕು. ರೇತಸ್ಸು, ಮೂತ್ರ, ಮಲ -ಇವುಗಳ ವಿಸರ್ಜನೆ-ಯನ್ನು ಮಾಡಿದಾಗ, ಅನುಚಿತ ಮಾತುಗಳನ್ನು ಆಡಿದಾಗ, ಉಗುಳಿದಾಗ, ಕೆಮ್ಮಿದಾಗ, ಅಧ್ಯಯನ ಆರಂಭದಲ್ಲಿ ಆಚಮನವನ್ನು ಮಾಡಬೇಕು. ಮಾರ್ಗಚಾತಕ್ಕೆ, ಸ್ಮಶಾನಕ್ಕೆ ಹೋದಾಗ ಆಚಮನವನ್ನು ಮಾಡಬೇಕು. ಎರಡು ಸಂಧ್ಯಾಕಾಲಗಳಲ್ಲಿ ಸಂಧ್ಯೆಯನ್ನು ಆಚರಿಸುವಾಗ ಮೊದಲು ಆಚಮನವನ್ನು ಮಾಡಿದ್ದರೂ ಆಚಮನವನ್ನು ಮಾಡಬೇಕು.

ಚಂಡಾಲರ ಜೊತೆ, ಮ್ಲೇಚ್ಛರ ಜೊತೆ ಮಾತನಾಡಿದಾಗ, ಊಟಮಾಡಿ ಶುದ್ಧಿ ಮಾಡಿಕೊಳ್ಳದ ಪುರುಷನ ಜೊತೆ ಮಾತನಾಡಿದಾಗ, ಎಂಜಲು ಪದಾರ್ಥಗಳನ್ನು ಮುಟ್ಟಿದಾಗ ಆಚಮನವನ್ನು ಮಾಡಬೇಕು. ಕಣ್ಣೀರನ್ನು ಹರಿಸಿದಾಗ, ರಕ್ತವು ದೇಹದಿಂದ ಹೊರಬಿದ್ದಾಗ, ಆಚಮನವನ್ನು ಮಾಡಬೇಕು. ಅಗ್ನಿಯನ್ನು ಆರಿಸಿದಾಗ, ಗೋವಧೆಯನ್ನು ಮಾಡಿದಾಗ ಆಚಮನವನ್ನು ಮಾಡಬೇಕು. ಸ್ತ್ರೀಸ್ಪರ್ಶವಾದಾಗ, ಉತ್ತರೀಯವನ್ನು ಧರಿಸಿದಾಗ ಜಲವನ್ನು ಅಥವಾ ಹಸಿ ಹುಲ್ಲನ್ನು ಅಥವಾ ಭೂಮಿಯನ್ನು ಮುಟ್ಟಬೇಕು.

ತನ್ನ ಕೂದಲಿನ ಸ್ಪರ್ಶವಾದಾಗ, ತೊಳೆಯದ ವಸ್ತ್ರಗಳ ಸ್ಪರ್ಶವಾದಾಗ ಆಚಮನವನ್ನು ಮಾಡಬೇಕು. ಶೌಚ(ಶುದ್ಧಿ)ವನ್ನು ಬಯಸುವವನು ಪೂರ್ವ ಅಥವಾ ಉತ್ತರದಿಕ್ಕಿಗೆ ಅಭಿಮುಖವಾಗಿ ಕುಳಿತು ಆಚಮನವನ್ನು ಮಾಡಬೇಕು.

**ಆಚಮನ ನಿಷೇಧ :**

ಆಚಮನಕ್ಕೆ ಉಪಯೋಗಿಸಲ್ಪಡುವ ನೀರು ಬಿಸಿಯಾಗಿರಬಾರದು. ಅದರಲ್ಲಿ ನೊರೆ ಇರಬಾರದು. ಶುದ್ಧವಾಗಿರಬೇಕು. ತಲೆಗೆ, ಕಂಠಕ್ಕೆ ವಸ್ತ್ರವನ್ನು ಸುತ್ತಿ ಆಚಮನವನ್ನು

ಮಾಡಬಾರದು. ಕಚ್ಚೆ, ಶಿಖೆಗಳನ್ನು ಬಿಚ್ಚಿಕೊಂಡು ಆಚಮನವನ್ನು ಮಾಡಬಾರದು. ಕಾಲುಗಳನ್ನು ತೊಳೆದುಕೊಳ್ಳದೆ ಆಚಮನ ಮಾಡಿದರೆ ಶುದ್ಧಿಯಾಗುವುದಿಲ್ಲ. ಚಪ್ಪಲಿಯನ್ನು ಧರಿಸಿಕೊಂಡು, ನೀರಿನಲ್ಲಿ ಇದ್ದು, ಪೇಟವನ್ನು ಧರಿಸಿ ಆಚಮನವನ್ನು ಮಾಡಬಾರದು. ಮಳೆಯಧಾರೆಯನ್ನು ಹಿಡಿದು ಆಚಮನವನ್ನು ಮಾಡಬಾರದು. ಕೈಯಲ್ಲಿ ಉಳಿದ ನೀರಿನಿಂದ ಆಚಮನವನ್ನು ಮಾಡಬಾರದು. ಯಜ್ಞೋಪವೀತವಿಲ್ಲದೆ ಆಚಮನವನ್ನು ಮಾಡಬಾರದು. ಕೈಯನ್ನು ಮಂಡಿಯಿಂದ ಹೊರಗೆ ಮಾಡಿಕೊಂಡು ಆಚಮನವನ್ನು ಮಾಡಬಾರದು. ವೈಶ್ಯರು-ಶೂದ್ರರು ಮುಟ್ಟಿದ ನೀರಿನಿಂದ ಆಚಮನವನ್ನು ಮಾಡಬಾರದು.

ಬೆರಳುಗಳಿಂದ ಆಚಮನವನ್ನು ಮಾಡಬಾರದು. ಬಣ್ಣವಿರುವ ಕೆಟ್ಟಿರುವ ನೀರಿನಿಂದ ಆಚಮನವನ್ನು ಮಾಡಬಾರದು. ಕೈಯಿಂದ ಕಲಕಿದ ನೀರಿನಿಂದ ಆಚಮನವನ್ನು ಮಾಡಬಾರದು. ಬ್ರಾಹ್ಮಣನು ಆಚಮನ ಮಾಡಿದ ನೀರು ಅವನ ಎದೆಯನ್ನು ಸೇರಿದಾಗ ಅವನು ಶುದ್ಧನಾಗುತ್ತಾನೆ. ಕ್ಷತ್ರಿಯನು ಕಂಠವನ್ನು ಸೇರಿದಾಗ ಶುದ್ಧನಾಗುತ್ತಾನೆ. ಪ್ರಾಶನ ಮಾತ್ರದಿಂದ ವೈಶ್ಯನು ಶುದ್ಧನಾಗುತ್ತಾನೆ. ಸ್ತ್ರೀಯರು - ಶೂದ್ರರು ನೀರಿನ ಸ್ಪರ್ಶದಿಂದ ಶುದ್ಧರಾಗುತ್ತಾರೆ.

**ಬ್ರಾಹ್ಮ ಮೊದಲಾದ ತೀರ್ಥಗಳು :**

ಹೆಬ್ಬೆರಳಿನ ಮೂಲರೇಖೆಯು ಬ್ರಾಹ್ಮತೀರ್ಥ ಎಂದು ಹೇಳುತ್ತಾರೆ. ತೋರುಬೆರಳಿನ ಮೂಲ ಪಿತೃತೀರ್ಥ. ಕನಿಷ್ಠ ಬೆರಳಿನ ಮೂಲ ಪ್ರಾಜಾಪತ್ಯತೀರ್ಥ. ಬೆರಳುಗಳ ತುದಿ ದೇವತೀರ್ಥ. ಬೆರಳುಗಳ ಮೂಲವೂ ದೇವತೀರ್ಥ ಎಂದೂ ಹೇಳುತ್ತಾರೆ. ಬೆರಳುಗಳ ಮಧ್ಯ ಅಗ್ನಿತೀರ್ಥ ಎಂದೂ ಹೇಳುತ್ತಾರೆ. ಈ ತೀರ್ಥಕ್ಕೆ ಸೌಮಿಕತೀರ್ಥ ಎಂದೂ ಹೆಸರು.

ಬ್ರಾಹ್ಮಣನು ಯಾವಾಗಲೂ ಬ್ರಾಹ್ಮತೀರ್ಥದಿಂದಲೇ ಆಚಮನವನ್ನು ಮಾಡಬೇಕು. ದೇವತೀರ್ಥದಿಂದಲೂ ಮಾಡಬಹುದು.

ಆಚಮನವನ್ನು ಮೂರುಸಲ ಮಾಡಬೇಕು. ಮುಚ್ಚಿಕೊಂಡ ಅಂಗುಷ್ಠದ ಮೂಲದಿಂದ ಮುಖವನ್ನು ಮುಟ್ಟಬೇಕು. ಅಂಗುಷ್ಠ ಮತ್ತು ಅನಾಮಿಕ ಬೆರಳುಗಳಿಂದ ಎರಡು ಕಣ್ಣುಗಳನ್ನು ಮುಟ್ಟಬೇಕು. ತರ್ಜನೀ ಮತ್ತು ಅಂಗುಷ್ಠಗಳಿಂದ ನಾಸಿಕಾಪುಟವನ್ನು ಮುಟ್ಟಬೇಕು. ಕನಿಷ್ಠ ಮತ್ತು ಅಂಗುಷ್ಠಗಳಿಂದ ಎರಡು ಕಿವಿಗಳನ್ನು ಮುಟ್ಟಬೇಕು. ಎಲ್ಲ ಬೆರಳುಗಳಿಂದ ಬಾಹುಗಳನ್ನು, ಹಸ್ತತಲದಿಂದ ಹೃದಯವನ್ನು, ನಾಭಿಯನ್ನು ಮತ್ತು ತಲೆಯನ್ನು, ಎಲ್ಲ ಬೆರಳುಗಳಿಂದ ಅಥವಾ ಅಂಗುಷ್ಠದಿಂದ ಮುಟ್ಟಬೇಕು.

ನೀರನ್ನು ಮೂರು ಸಲ ಕುಡಿಯಬೇಕು. ಇದೇ ಆಚಮನ. ಹೀಗೆ ಕುಡಿಯುವುದರಿಂದ ಬ್ರಹ್ಮ, ವಿಷ್ಣು, ಮಹೇಶ್ವರರು ಪ್ರೀತರಾಗುತ್ತಾರೆ ಎಂದು ನಾವು ಪ್ರಾಜ್ಞರ ಮಾತನ್ನು ಕೇಳಿದ್ದೇವೆ.

ಕೈಯನ್ನು ತೊಳೆದುಕೊಳ್ಳುವುದರಿಂದ ಗಂಗೆ-ಯಮುನೆಯರು ಪ್ರೀತರಾಗುತ್ತಾರೆ. ಕಣ್ಣುಗಳನ್ನು ಮುಟ್ಟುವುದರಿಂದ ಚಂದ್ರ-ಸೂರ್ಯರು ಪ್ರೀತರಾಗುತ್ತಾರೆ. ಮೂಗಿನ ಎರಡು ಪುಟಗಳನ್ನು (ಪಾರ್ಶ್ವಗಳನ್ನು) ಮುಟ್ಟುವುದರಿಂದ ಅಶ್ವಿನೀದೇವತೆಗಳು ಪ್ರೀತರಾಗುತ್ತಾರೆ. ಎರಡು ಕಿವಿಗಳನ್ನು ಮುಟ್ಟುವುದರಿಂದ ವಾಯು-ಅಗ್ನಿಗಳಿಗೆ ಸಂತೋಷವಾಗುತ್ತದೆ. ಹೃದಯವನ್ನು ಮುಟ್ಟಿದರೆ ಎಲ್ಲ ದೇವತೆಗಳೂ ಪ್ರೀತರಾಗುತ್ತಾರೆ. ತಲೆಯನ್ನು ಮುಟ್ಟುವುದ-ರಿಂದ ಪುರುಷನಾಮಕನಾದ ಪರಮಾತ್ಮನು ಪ್ರೀತನಾಗುತ್ತಾನೆ.

## ಮಲ-ಮೂತ್ರ ವಿಸರ್ಜನೆಯ ನಿಯಮಗಳು :

ನೀರಿಲ್ಲದ (ನೀರು ಸಿಗದ) ಅರಣ್ಯದಲ್ಲಿ, ರಾತ್ರಿಯಲ್ಲಿ, ಕಳ್ಳರು, ಹುಲಿ ಮೊದಲಾದ ಅಪಾಯಕರ ಪ್ರಾಣಿಗಳು ಇರುವ ದಾರಿಯಲ್ಲಿ ಕೈಯಲ್ಲಿ ಪದಾರ್ಥಗಳನ್ನು ಹಿಡಿದು ಮಲ-ಮೂತ್ರಗಳನ್ನು ವಿಸರ್ಜಿಸುವುದು ತಪ್ಪಲ್ಲ. ಬಲಕಿವಿಗೆ ಜನಿವಾರವನ್ನು ಹಾಕಿಕೊಂಡು ಉತ್ತರಾಭಿಮುಖನಾಗಿ ಹಗಲಿನಲ್ಲಿ ಮೂತ್ರವನ್ನು ವಿಸರ್ಜಿಸಬೇಕು. ರಾತ್ರಿಯಲ್ಲಿ ದಕ್ಷಿಣಾಭಿಮುಖನಾಗಿ. ಮಲವನ್ನು ಯಾವ ಸ್ಥಳದಲ್ಲಿ ವಿಸರ್ಜಿಸಲಾಗುವುದೋ ಆ ಸ್ಥಳವನ್ನು ಕಾಷ್ಠಗಳಿಂದ, ಅಥವಾ ಎಲೆಗಳಿಂದ ಅಥವಾ ಮಣ್ಣಿನ ಹೆಂಟೆಗಳಿಂದ ಅಥವಾ ಹುಲ್ಲಿನಿಂದ ಮುಚ್ಚಬೇಕು. ತಲೆಯನ್ನು ಬಟ್ಟೆಯಿಂದ ಮುಚ್ಚಿಕೊಂಡು ಮಲ ವಿಸರ್ಜನೆಯನ್ನು ಮಾಡಬೇಕು.

ನೆರಳು, ಭಾವಿ, ನದಿ, ಗೋಶಾಲೆ, ಶೂನ್ಯಮಂದಿರಗಳು, ದಾರಿ, ಬೂದಿ -ಈ ಸ್ಥಳಗಳಲ್ಲಿ ಮಲ-ಮೂತ್ರ ವಿಸರ್ಜನೆಯನ್ನು ಮಾಡಬಾರದು. ಅಗ್ನಿಶಾಲೆ, ಸ್ಮಶಾನಗಳಲ್ಲೂ ಮಾಡ-ಬಾರದು. ಗೋವುಗಳ ದಾರಿಯಲ್ಲಿ, ಕೃಷಿ ಮಾಡಿದ ಭೂಮಿಯಲ್ಲಿ ದೊಡ್ಡಮರದ ಕೆಳಗೆ ಮತ್ತು ಹುಲ್ಲು ಬೆಳೆದ ಪ್ರದೇಶದಲ್ಲಿ ಮಲ-ಮೂತ್ರಗಳನ್ನು ವಿಸರ್ಜಿಸಬಾರದು. ಪರ್ವತ-ಶಿಖರದಲ್ಲಿ, ಜೀರ್ಣದೇವಾಲಯದಲ್ಲಿ, ಹುತ್ತದಲ್ಲಿ, ಪ್ರಾಣಿಗಳಿರುವ ಸ್ಥಳದಲ್ಲಿ, ಹೊಟ್ಟು, ಅಂಗಾರ, ಕಪಾಲಗಳು ಇರುವ ಪ್ರದೇಶದಲ್ಲಿ, ರಾಜಮಾರ್ಗದಲ್ಲಿ, ಪವಿತ್ರ ಕ್ಷೇತ್ರ, ಪವಿತ್ರತೀರ್ಥ, ನಾಲ್ಕು ದಾರಿಗಳು ಸೇರುವ ಸ್ಥಳ ಇವುಗಳಲ್ಲಿ, ಉದ್ಯಾನದಲ್ಲಿ, ಬಂಜರು ಭೂಮಿಯಲ್ಲಿ, ಬೇರೆಯವರು ವಿಸರ್ಜಿಸಿದ ಸ್ಥಳದಲ್ಲಿ ಮಲ-ಮೂತ್ರ ವಿಸರ್ಜನೆಯನ್ನು ಮಾಡಬಾರದು. ನಿಂತು ಮೂತ್ರವಿಸರ್ಜನೆಯನ್ನು ಮಾಡಬಾರದು. ದಿಗಂಬರನಾಗಿಯೂ ಮಾಡಬಾರದು. ಪಾದರಕ್ಷೆಯನ್ನು ಅಥವಾ ಪಾದುಕೆಯನ್ನು ಹಾಕಿಕೊಂಡು ಮಾಡಬಾರದು. ವಾಹನದಲ್ಲಿದ್ದು ಅಂತರಿಕ್ಷದಲ್ಲಿದ್ದು ಮಾಡಬಾರದು. ಸ್ತ್ರೀಯರಿಗೆ, ಹಿರಿಯನಿಗೆ, ಬ್ರಾಹ್ಮಣರಿಗೆ ಎದುರಾಗಿ ಮಾಡಬಾರದು. ನದಿಯಲ್ಲಿ ದೇವಾಲಯದಲ್ಲಿ ಮಲ-ಮೂತ್ರ ವಿಸರ್ಜನೆಯನ್ನು ಮಾಡಬಾರದು. ದೀಪಗಳನ್ನು ನೋಡುತ್ತಾ, ನೀರಿಗೆ ಎದುರಾಗಿ ಕೂಡದು. ಸೂರ್ಯ, ಚಂದ್ರ, ಅಗ್ನಿಗೆ ಎದುರಾಗಿ ಕೂಡದು.

ನದೀತೀರದಿಂದ ಲೇಪ ಮತ್ತು ವಾಸನೆಯನ್ನು ದೂರ ಮಾಡುವ ಮೃತ್ತಿಕೆಯನ್ನು ತಂದು ಶುದ್ಧವಾದ, ಪಾತ್ರೆಯಲ್ಲಿ ತಂದುಕೊಂಡ ನೀರಿನಿಂದ ಶುದ್ಧಿಯನ್ನು ಮಾಡಿಕೊಳ್ಳಬೇಕು. ಧೂಳನ್ನು, ಕೆಸರನ್ನು ಉಪಯೋಗಿಸಬಾರದು. ದಾರಿಯ ಮಣ್ಣನ್ನು, ಬಂಜರು ಭೂಮಿಯ ಮಣ್ಣನ್ನು, ಶೌಚಕ್ಕೆ ಬೇರೆಯವರು ಉಪಯೋಗಿಸಿ ಉಳಿದ ಮಣ್ಣನ್ನು ಉಪಯೋಗಿಸಬಾರದು. ದೇವಲಯದ, ಭಾವಿಯ ಮತ್ತು ನೀರಿನ ಒಳಗಿನ ಮಣ್ಣನ್ನು ಉಪಯೋಗಿಸಬಾರದು. ಶೌಚವು ಮುಗಿದನಂತರ ವಿಧ್ಯುಕ್ತವಾದ ಆಚಮನವನ್ನು ಮಾಡಬೇಕು.

* * *

## ಅಧ್ಯಾಯ-೬೭

ವ್ಯಾಸ ಉವಾಚ :

ಹಿಂದಿನ ಅಧ್ಯಾಯಗಳಲ್ಲಿ ಹೇಳಿದಂತೆ ಆಚಾರವನ್ನು ನಡೆಸುತ್ತಾ ಬ್ರಹ್ಮಚಾರಿಯು ಗುರುಗಳ ಹತ್ತಿರ ಇರಬೇಕು. ಅವರು ಪಾಠಕ್ಕೆ ಕರೆದಾಗ ಹೋಗಬೇಕು. ಅವರ ಮುಖವನ್ನು ನೋಡುತ್ತ ಅಧ್ಯಯನವನ್ನು ಮಾಡಬೇಕು. ಸಂಧ್ಯಾವಂದನೆಯನ್ನು ತಪ್ಪದೆ ಮಾಡಬೇಕು. ಗುರುಗಳು 'ಕುಳಿತುಕೋ' ಎಂದು ಹೇಳಿದರೆ ಅವರಿಗೆ ಅಭಿಮುಖವಾಗಿ ಕುಳಿತುಕೊಳ್ಳಬೇಕು. ಗುರುಗಳು ಹೇಳುವ ಮಾತನ್ನು ಕೇಳಬೇಕು. ಮಲಗಿಕೊಂಡು ಅವರ ಜೊತೆ ಸಂಭಾಷಣೆಯನ್ನು ಮಾಡಬಾರದು. ಕುಳಿತುಕೊಂಡು, ಮುಖ ತಿರುಗಿಸಿಕೊಂಡು ಅವರ ಜೊತೆ ಸಂಭಾಷಣೆ ಮೊದಲಾದವುಗಳನ್ನು ಮಾಡಬಾರದು. ನಿಂತುಕೊಂಡೇ ಮಾತನಾಡಬೇಕು. ಗುರುಗಳ ಹತ್ತಿರ ಮಲಗಬಾರದು. ಕುಳಿತುಕೊಳ್ಳಲೂಬಾರದು. ಗುರುಗಳ ಕಣ್ಣಿಗೆ ಕಾಣಿಸುವಂತೆ ಇಷ್ಟಬಂದಭಂಗಿಯಲ್ಲಿ ಕುಳಿತುಕೊಳ್ಳಬಾರದು. ಗುರುಗಳ ಹೆಸರನ್ನು ಉಚ್ಚರಿಸಬಾರದು. ಪರೋಕ್ಷವಾಗಿಯೂ ಉಚ್ಚರಿಸಬಾರದು. ಅವರ ಗಮನ-ಮಾತು-ಕ್ರಿಯೆಗಳನ್ನು ಅನುಕರಿಸಬಾರದು. ಗುರುಗಳ ಮೇಲೆ ಅಪವಾದವನ್ನು ಹೊರಿಸುವವರ ಮಧ್ಯೆ, ಅವರ ನಿಂದೆಯನ್ನು ಮಾಡುವವರ ಹತ್ತಿರ ಇರಲೇಬಾರದು. ಅಂತಹ ಕಡೆ ಕಿವಿಯನ್ನು ಮುಚ್ಚಿಕೊಳ್ಳಬೇಕು. ಬೇರೆ ಕಡೆ ಹೊರಟು ಹೋಗಬೇಕು.

ಗುರುಗಳನ್ನು ದೂರದಿಂದ ಪೂಜಿಸಬಾರದು. ಕುಪಿತನಾಗಿ ಗುರುಗಳನ್ನು ಪೂಜಿಸಬಾರದು. ಅವರಿಗೆ ಪ್ರತಿ ಹೇಳಬಾರದು. ಅವರು ನಿಂತಿರುವಾಗ ಕುಳಿತುಕೊಳ್ಳಬಾರದು. ಗುರುಗಳಿಗೆ ಜಲಕುಂಭವನ್ನು ದರ್ಭೆಗಳನ್ನು, ಹೂಗಳನ್ನು, ಸಮಿತ್‌ಗಳನ್ನು ತಂದುಕೊಡಬೇಕು. ಅವರ ಶರೀರಕ್ಕೆ ಮಾರ್ಜನ, ಲೇಪನ ಮೊದಲಾದವುಗಳನ್ನು ಮಾಡಬೇಕು. ಗುರುಗಳ

ಹಾಸಿಗೆ, ಪಾದುಕೆ, ಚಪ್ಪಲಿ, ಆಸನ - ಇವುಗಳನ್ನು ತುಳಿಯಬಾರದು. ಅವರ ನೆರಳನ್ನೂ ತುಳಿಯಬಾರದು. ಅವರಿಗೆ ದಂತಕಾಷ್ಠ ಮೊದಲಾದವುಗಳನ್ನು ತಂದು ಕೊಡಬೇಕು. ಅವರು ಹೇಳಿದ ಕೆಲಸಗಳನ್ನು ಮಾಡಿ ಅವರಿಗೆ ತಿಳಿಸಬೇಕು. ಅವರ ಅನುಮತಿಯಿಲ್ಲದೆ ಎಲ್ಲಿಗೂ ಹೋಗಬಾರದು. ಅವರಿಗೆ ಪ್ರಿಯವಾದ, ಅವರಿಗೆ ಹಿತವಾಗುವ ಕೆಲಸವನ್ನು ಮಾಡುವು-ದರಲ್ಲಿ ನಿರತನಾಗಿರಬೇಕು. ಅವರ ಹತ್ತಿರದಲ್ಲಿ ಕಾಲನ್ನು ಚಾಚಬಾರದು. ಆಕಳಿಸಬಾರದು. ನಗಬಾರದು. ಆರ್ಭಟದ ಮಾತುಗಳನ್ನು ಆಡಬಾರದು. ಗುರುಗಳ ಮನಸ್ಸು ಬೇರೆ ಕಡೆ ಹೋಗದಿರುವವರೆಗೆ ಅಧ್ಯಯನವನ್ನು ಮಾಡಬೇಕು.

ಗುರುಗಳು ಹೇಳಿದರೆ ಅವರ ಆಸನ, ಶಯನ, ಯಾನಗಳಲ್ಲಿ ಕುಳಿತುಕೊಳ್ಳಬಹುದು. ಒಬ್ಬನೇ ಕುಳಿತುಕೊಳ್ಳಬಾರದು. ಗುರುಗಳು ಓಡಿದರೆ ಅವರ ಹಿಂದೆಯೇ ಓಡಬೇಕು. ಅವರು ಹೋಗುತ್ತಿದ್ದರೆ ಅವರನ್ನು ಹಿಂಬಾಲಿಸಬೇಕು. ಎತ್ತು, ಕುದುರೆ, ಒಂಟೆ, ಗಾಡಿ, ಚಾಪೆ, ಶಿಲಾಫಲಕ, ನಾವೆ - ಇವುಗಳಲ್ಲಿ ಗುರುಗಳ ಜೊತೆ ಕುಳಿತುಕೊಳ್ಳಬಾರದು. ಯಾವಾಗಲೂ ಜಿತೇಂದ್ರಿಯನಾಗಿರಬೇಕು. ಕೋಪಗೊಳ್ಳಬಾರದು. ಶುಚಿಯಾಗಿರಬೇಕು. ಮಧುರವಾದ, ಹಿತವಾದ ಮಾತನ್ನೇ ಯಾವಾಗಲೂ ಹೇಳಬೇಕು. ಗಂಧ, ಮಾಲೆ, ಸ್ವಾದುರಸ, ಬಿಳಿಬಣ್ಣ ಇವುಗಳನ್ನು ಉಪಯೋಗಿಸಬಾರದು. ಪ್ರಾಣಿ ಹಿಂಸೆಯನ್ನು ಮಾಡಬಾರದು. ಅಭ್ಯಂಗವನ್ನು ಮಾಡಬಾರದು. ಅಂಜನವನ್ನು, ಛತ್ರಿಯನ್ನು, ಚಪ್ಪಲಿ-ಯನ್ನು ಉಪಯೋಗಿಸಬಾರದು. ಕಾಮ, ಲೋಭ, ಭಯ, ನಿದ್ರೆ, ಗೀತ, ವಾದ್ಯ, ನರ್ತನ, ದ್ಯೂತ, ಹೆಣ್ಣುಗಳನ್ನು ನೋಡುವುದು, ಜಿಪುಣತನ - ಇವುಗಳನ್ನು ಪ್ರಯತ್ನಪಟ್ಟು ಬಿಡ-ಬೇಕು. ಜನಗಳ ಬಗ್ಗೆ ಅಪವಾದದ ಮಾತುಗಳನ್ನು ಆಡಬಾರದು. ಪರರಿಗೆ ತೊಂದರೆ-ಯಾಗುವಂತೆ ನಡೆದುಕೊಳ್ಳಬಾರದು.

ಪ್ರತಿದಿನ ಭಿಕ್ಷೆಯನ್ನು ತರಬೇಕು. ಉಪ್ಪು ಹಾಕಿದ ಪದಾರ್ಥಗಳನ್ನು ತಿನ್ನಬಾರದು. ಹಳಸಿದ ಪದಾರ್ಥಗಳನ್ನು ತಿನ್ನಬಾರದು. ನೃತ್ಯವನ್ನು ನೋಡಬಾರದು. ಗಾಯನ ಮೊದಲಾದವುಗಳಲ್ಲಿ ಆಸಕ್ತನಾಗಬಾರದು. ಸೂರ್ಯನನ್ನು ನೋಡಬಾರದು. ಅಲಂಕಾರ-ಕ್ಕಾಗಿ ಹಲ್ಲುಗಳನ್ನು ತೊಳೆಯಬಾರದು. ಅಶುದ್ಧ ಸ್ತ್ರೀಯರೊಡನೆ, ಶೂದ್ರ ಮೊದಲಾದವರ ಜೊತೆ ಮಾತನಾಡಬಾರದು. ಗುರುಗಳು ಹೇಳಿದಾಗ ಅವರಿಗೆ ಇಷ್ಟವೆಂದು ದಂತಧಾವನ ಮೊದಲಾದವುಗಳನ್ನು ಮಾಡಬಹುದು. ಸ್ವ-ಇಚ್ಛೆಯಿಂದ ಮಾಡಬಾರದು. ಶರೀರದ ಕೊಳೆಯನ್ನು ಪರಿಹರಿಸಿಕೊಳ್ಳುವುದಕ್ಕೋಸ್ಕರ ಸ್ನಾನವನ್ನು ಮಾಡಲೇಬೇಕು. ಗುರುಗಳನ್ನು ಬಿಟ್ಟುಹೋಗುವ ಆಲೋಚನೆಯನ್ನು ಮಾಡಬಾರದು. ಮೋಹದಿಂದ ಅಥವಾ ಲೋಭದಿಂದ ಗುರುಗಳನ್ನು ಬಿಟ್ಟವನು ಪತಿತನಾಗುವನು.

ಲೌಕಿಕ, ವೈದಿಕ ಮತ್ತು ಆಧ್ಯಾತ್ಮಿಕ ಜ್ಞಾನವನ್ನು ಯಾರಿಂದ ಪಡೆಯುವನೋ ಅವರಿಗೆ ಎಂದೂ ದ್ರೋಹವನ್ನು ಮಾಡಬಾರದು. ಅಹಂಕಾರಿಯಾದ, ಕರ್ತವ್ಯ-ಅಕರ್ತವ್ಯಗಳನ್ನು

ತಿಳಿಯದ, ದಾರಿತಪ್ಪಿ ನಡೆಯುವ ಗುರುಗಳನ್ನು ಬಿಡಬೇಕೆಂದು ಮನು ಹೇಳಿದ್ದಾನೆ. ಗುರುಗಳ ಗುರುಗಳು ಬಂದಾಗ ಅವರನ್ನು ಗುರುಗಳನ್ನು ಸತ್ಕರಿಸುವಂತೆಯೇ ಸತ್ಕರಿಸಬೇಕು. ತಂದೆ-ತಾಯಿಗಳನ್ನು ಅಧರ್ಮ ಮಾರ್ಗವನ್ನು ಬಿಡಿಸಿ, ಸನ್ಮಾರ್ಗಕ್ಕೆ ತಂದವರನ್ನು, ಹಿತೋಪ-ದೇಶವನ್ನು ಮಾಡುವವರನ್ನು ಗೌರವದಿಂದ ಕಾಣಬೇಕು. ಗುರುಪುತ್ರ, ಗುರುಪತ್ನಿ ಮತ್ತು ಗುರುಬಂಧುಗಳನ್ನು ಗೌರವದಿಂದ ಕಾಣಬೇಕು. ಮಾನಾರ್ಹರನ್ನು ಮಾನಿಸುವ ಹುಡುಗನೂ ಕೂಡ ಗೌರವಾರ್ಹ. ಹಾಗೆಯೇ ಯಜ್ಞದಲ್ಲಿ ಗುರುವಿನ ಜೊತೆ ಭಾಗವಹಿಸುವ ಶಿಷ್ಯನೂ ಸತ್ಕಾರಾರ್ಹ. ಅಧ್ಯಾಪನ ವೃತ್ತಿಯನ್ನು ನಡೆಸುವ ಗುರುಪುತ್ರನೂ ಗುರುವಿನಂತೆ ಸತ್ಕಾರಾರ್ಹ.

ಗುರುಪುತ್ರನ ಲಿಂಗದರ್ಶನ, ಅವನಿಗೆ ಸ್ನಾನ ಮಾಡಿಸುವುದು ಅವನು ಊಟ ಮಾಡಿ ಉಳಿದ ಅನ್ನವನ್ನು ಊಟ ಮಾಡುವುದು, ಅವನ ಪಾದಪ್ರಕ್ಷಾಲನ - ಇವುಗಳನ್ನು ಮಾಡ-ಬಾರದು. ಸವರ್ಣರಾದ ಗುರುಪತ್ನಿಯರನ್ನು ಗುರುಗಳನ್ನು ಗೌರವಿಸುವಂತೆಯೇ ಗೌರವಿಸಬೇಕು. ಅಸವರ್ಣ ಗುರುಪತ್ನಿಯರನ್ನು ಎದ್ದು ನಿಂತು, ಅಭಿವಾದನವನ್ನು ಮಾಡಿ ಗೌರವಿಸಬೇಕು. ಅಭ್ಯಂಜನ, ಸ್ನಾನಮಾಡಿಸುವುದು, ಅಂಗಮರ್ದನ, ಕೇಶಾಲಂಕಾರ - ಇವುಗಳನ್ನು ಗುರುಪತ್ನಿಯರಿಗೆ ಮಾಡಕೂಡದು. ತರುಣಿಯಾದ ಗುರುಪತ್ನಿಯ ಪಾದವನ್ನು ಮುಟ್ಟಿ ನಮಸ್ಕರಿಸಬಾರದು. ನಾಮ-ಗೋತ್ರಗಳನ್ನು ಹೇಳಿ ಭೂಮಿಯನ್ನು ಮುಟ್ಟಿ ನಮಸ್ಕರಿಸಬೇಕು. ದೇಶಾಟನದಿಂದ ಹಿಂತಿರುಗಿ ಬಂದಾಗ ಸಜ್ಜನರ ಮಧ್ಯದಲ್ಲಿದ್ದರೆ ಗುರುಪತ್ನಿಯರ ಪಾದವನ್ನು ಮುಟ್ಟಿ ನಮಸ್ಕರಿಸಬಹುದು.

ಚಿಕ್ಕಮ್ಮ (*ತಾಯಿಯ ತಂಗಿ*), ಸೋದರ ಮಾವನ ಹೆಂಡತಿ, ಅತ್ತೆ (*ಹೆಂಡತಿಯ ತಾಯಿ*), ಸೋದರತ್ತೆ ಇವರನ್ನು ಗುರುಪತ್ನಿಯನ್ನು ಗೌರವಿಸುವಂತೆ ಗೌರವಿಸಬೇಕು. ಸವರ್ಣಳಾದ ಅತ್ತಿಗೆಯನ್ನೂ ಗೌರವಿಸಬೇಕು. ಜ್ಞಾತಿಸಂಬಂಧಿಗಳಾದ ಸ್ತ್ರೀಯರನ್ನು ಗೌರವಿಸಬೇಕು. ತಂದೆಯ ತಂಗಿ, ತಾಯಿಯ ಅಕ್ಕ - ಇವರನ್ನೂ ಗೌರವದಿಂದ ಕಾಣಬೇಕು. ತಾಯಿ ಇವರೆಲ್ಲರಿಗಿಂತಲೂ ಹೆಚ್ಚು ಮಾನ್ಯಳು.

### ಆಚಾರಸಂಪನ್ನನಿಗೆ ಉಪದೇಶವನ್ನು ಮಾಡಲೇಬೇಕು :

ಮೇಲೆ ಹೇಳಿದಂತೆ ಆಚಾರಸಂಪನ್ನನಾದ, ಜಾಗ್ರತನಾದ, ಡಾಂಭಿಕನಲ್ಲದ ಶಿಷ್ಯನಿಗೆ ವೇದಗಳನ್ನು, ಧರ್ಮವನ್ನೂ ವೇದಾಂಗಗಳನ್ನೂ, ಪುರಾಣಗಳನ್ನೂ ಉಪದೇಶಿಸಲೇ ಬೇಕು. ಸೇವೆ ಮಾಡುತ್ತಾ ಒಂದು ವರ್ಷ ವಾಸಮಾಡಿದ ಶಿಷ್ಯನಿಗೆ ಉಪದೇಶ ಮಾಡದಿದ್ದರೆ ಶಿಷ್ಯನ ಪಾಪವೆಲ್ಲವೂ ಗುರುವಿಗೆ ಸೇರುತ್ತದೆ.

### ಉಪದೇಶಕನಾಗಲು ಅರ್ಹತೆ :

ಗುರುಸೇವೆಯನ್ನು ಮಾಡುವ ಪ್ರವೃತ್ತಿ ಇರುವ, ಧಾರ್ಮಿಕನೂ ಶುಚಿಯೂ ಆದ, ಸರಿಯಾದ ಅರ್ಥವನ್ನು ಹೇಳುವ, ರಾಗರಹಿತನಾದ, ಸರಿಯಾದ ಸಂಸ್ಕಾರಗಳನ್ನು ಹೊಂದಿದ ಉಪಾಧ್ಯಾಯಪುತ್ರನು ಉಪದೇಶಕನಾಗಲು ಅರ್ಹ.

## ಉಪದೇಶ ಪಡೆಯಲು ಅರ್ಹತೆ :

ಕೃತಜ್ಞನೂ, ದ್ರೋಹಮಾಡದವನೂ, ಮೇಧಾವಿಯೂ, ಉಪಕಾರ ಮಾಡುವವನೂ, ಆಪ್ತನೂ, ಪ್ರಿಯನೂ ಆದ ದ್ವಿಜರು ಉಪದೇಶವನ್ನು ಪಡೆಯಲು ಅರ್ಹರು. ಇವರುಗಳಿಗೆ ವೇದಾಧ್ಯಯನವನ್ನು ಮಾಡಿಸುವುದು ಶ್ರೇಯಸ್ಕರ. ಅಧ್ಯಯನ ಮಾಡುವ ಶಿಷ್ಯನು ಆಚಮನವನ್ನು ಮಾಡಿ ಗುರುಗಳ ಪಾದವನ್ನು ಮುಟ್ಟಿ ನಮಸ್ಕರಿಸಿ ಉತ್ತರಾಭಿಮುಖವಾಗಿ ಕುಳಿತುಕೊಳ್ಳಬೇಕು. ಗುರುಗಳ ಮುಖವನ್ನು ನೋಡುತ್ತಾ 'ಗುರುಗಳೇ ಅಧ್ಯಯನ ಮಾಡಿಸಿ' ಎಂದು ಹೇಳಬೇಕು. ಅಧ್ಯಯನ ಮಾಡುವಾಗ ಪವಿತ್ರ (*ದರ್ಭೆಯಿಂದ ಮಾಡಿದ ಉಂಗುರ*) ವನ್ನು ಧರಿಸಿರಬೇಕು. ಮೂರು ಸಲ ಪ್ರಾಣಾಯಾಮವನ್ನು ಮಾಡಿ ಆರಂಭಿಸಬೇಕು. ಬ್ರಾಹ್ಮಣನು ಓಂಕಾರವನ್ನು ಉಚ್ಚರಿಸಿ ಅಧ್ಯಯನವನ್ನು ಆರಂಭಿಸಬೇಕು. ಕೊನೆಯಲ್ಲೂ ಓಂಕಾರವನ್ನು ಉಚ್ಚರಿಸಬೇಕು ಅಧ್ಯಯನವನ್ನು ಮಾಡುವಾಗ ಬ್ರಹ್ಮಾಂಜಲಿ(?)ಯನ್ನು ಮಾಡಿರಬೇಕು.

ವೇದವು ಎಲ್ಲರಿಗೂ ಸನಾತನವಾದ ಕಣ್ಣು. ಪ್ರತಿದಿನ ಇದನ್ನು ಅಧ್ಯಯನ ಮಾಡಬೇಕು. ಮಾಡದಿದ್ದವನ ಬ್ರಾಹ್ಮಣ್ಯವೇ ಹೋಗುತ್ತದೆ. ಪ್ರತಿದಿನ ಋಗ್ವೇದವನ್ನು ಅಧ್ಯಯನ ಮಾಡಿದವನ ಬಗ್ಗೆ ದೇವತೆಗಳು ಕ್ಷೀರಾಹುತಿಯನ್ನು ಕೊಂಡು ಸಂತೋಷಪಡುವಂತೆ ಸಂತೋಷಪಡುತ್ತಾರೆ. ಯಜುರ್ವೇದವನ್ನು ಅಧ್ಯಯನ ಮಾಡಿದರೆ ಮೊಸರಿನಿಂದ ಆಹುತಿಯನ್ನು ಕೊಟ್ಟಾಗ ಆಗುವ ಪ್ರೀತಿಯು ದೇವತೆಗಳಿಗೆ ಆಗುತ್ತದೆ. ಸಾಮವೇದವನ್ನು ಅಧ್ಯಯನ ಮಾಡಿದರೆ ತುಪ್ಪದ ಆಹುತಿಯನ್ನು ಕೊಟ್ಟಾಗ ಆಗುವಷ್ಟು ಪ್ರೀತಿಯು ದೇವತೆಗಳಿಗೆ ಆಗುತ್ತದೆ. ಅಥರ್ವಣವೇದವನ್ನು ಅಧ್ಯಯನ ಮಾಡಿದರೆ ಜೇನುತುಪ್ಪದಿಂದ ಆಹುತಿಯನ್ನು ಕೊಟ್ಟಾಗ ಆಗುವಷ್ಟು ಪ್ರೀತಿಯು ಆಗುತ್ತದೆ. ವೇದಾಂಗಗಳನ್ನೂ, ಪುರಾಣ-ಗಳನ್ನು ಅಧ್ಯಯನ ಮಾಡಿದರೆ ಮಾಂಸದ ಆಹುತಿಯನ್ನು ಕೊಟ್ಟಾಗ ಆಗುವಷ್ಟು ಸಂತೋಷವಾಗುತ್ತದೆ. ಅರಣ್ಯಕ್ಕೆ ಹೋಗಿ ನೀರಿನ ಬಳಿ ನಿತ್ಯವಿಧಿಯನ್ನು ಆಚರಿಸಿ ಶಾಂತ-ಚಿತ್ತನಾಗಿ ಗಾಯತ್ರಿ ಮಂತ್ರವನ್ನಾದರೂ ಜಪಿಸಬೇಕು. ಸಂಧ್ಯಾಕಾಲದಲ್ಲಿ ಕನಿಷ್ಠ ಹತ್ತುಸಲ ಗಾಯತ್ರೀ ಮಂತ್ರವನ್ನು ಜಪಿಸಬೇಕು. ನೂರ ಸಲ ಜಪಿಸುವುದು ಮಧ್ಯಮ ಪಕ್ಷ. ಒಂದು ಸಾವಿರಸಲ ಜಪಿಸುವುದು ಉತ್ತಮಪಕ್ಷ. ಒಂದು ಸಾವಿರಕ್ಕಿಂತ ಹೆಚ್ಚುಸಲವೂ ಜಪಿಸ-ಬಹುದು. ಹೀಗೆ ಜಪಿಸುವುದು ಜಪಯಜ್ಞ.

## ಗಾಯತ್ರೀ ತುಲಾಭಾರ :

ಒಮ್ಮೆ ಭಗವಾನ್ ಮಹೇಶ್ವರನು ಗಾಯತ್ರೀಮಂತ್ರ ಮತ್ತು ನಾಲ್ಕು ವೇದಗಳ ತುಲಾಭಾರವನ್ನು ಏರ್ಪಡಿಸಿದನು. ಒಂದು ಕಡೆ ನಾಲ್ಕು ವೇದಗಳನ್ನು ಮತ್ತೊಂದು ಕಡೆ ಗಾಯತ್ರೀ ಮಂತ್ರವನ್ನು ಇಟ್ಟಿದ್ದನು. ಗಾಯತ್ರೀ ಮಂತ್ರವು ನಾಕು ವೇದಗಳಿಗೆ ಸಮಾನವಾಗಿಯೇ ತೂಗಿತು.

## ಗಾಯತ್ರೀ ಪಠನಕ್ರಮ :

ಶ್ರದ್ಧೆ ಮತ್ತು ಏಕಾಗ್ರತೆಗಳಿಂದ ಮೊದಲು ಓಂಕಾರವನ್ನು, ಅನಂತರ ವ್ಯಾಹೃತಿಗಳನ್ನು (*ಭೂಃ, ಭುವಃ, ಸ್ವಃ ಈ ಪದಗಳನ್ನು*) ಅನಂತರ ಸಾವಿತ್ರೀ ಮಂತ್ರವನ್ನು (*ತತ್ ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ - ಈ ಮಂತ್ರವನ್ನು*) ಹೇಳಬೇಕು. ಭೂಃ, ಭುವಃ, ಸ್ವಃ - ಇವು ಮಹಾವ್ಯಾಹೃತಿಗಳು. ಇವುಗಳು ಸನಾತನ. ಇವುಗಳು ಎಲ್ಲ ಅಶುಭಗಳನ್ನು ಪರಿಹರಿಸುತ್ತೇವೆ. ಸೃಷ್ಟಿ-ಸ್ಥಿತಿ-ಸಂಹಾರಗಳ ಮೂಲ ಕಾರಣಗಳಾದ ಪ್ರಧಾನ-ಪುರುಷ-ಕಾಲಗಳನ್ನು, ಬ್ರಹ್ಮ-ವಿಷ್ಣು-ಮಹೇಶ್ವರರನ್ನು ಮತ್ತು ರಜಸ್-ಸತ್ವ-ತಮಸ್‌ಗಳನ್ನು ಈ ವ್ಯಾಹೃತಿಗಳು ಪ್ರತಿಪಾದಿಸುತ್ತವೆ.

ಓಂಕಾರ ಮತ್ತು ಸಾವಿತ್ರೀ ಮಂತ್ರಗಳು ಅಕ್ಷರ (ಯಾವುದೇ ವಿಧವಾದ ನಾಶವಿಲ್ಲದ) ನಾದ ಪರಬ್ರಹ್ಮನನ್ನು ಪ್ರತಿಪಾದಿಸುತ್ತವೆ. ಈ ಮಂತ್ರವು ಈಶ್ವರಸಾಕ್ಷಾತ್ಕಾರದ ಮಹಾಯೋಗ - ಎಂದರೆ ಅತ್ಯುತ್ತಮವಾದ ದಾರಿ. ಈ ಮಂತ್ರ ಶ್ರೇಷ್ಠಮಂತ್ರಗಳಲ್ಲಿ ಅತೀ ಶ್ರೇಷ್ಠವಾದ ಮಂತ್ರ. ಇದು ವೇದಗಳ ತಾಯಿ. ಅರ್ಥವನ್ನು ತಿಳಿದು ಬ್ರಹ್ಮಚರ್ಯವ್ರತನಿಷ್ಠನಾಗಿ ಈ ಮಂತ್ರವನ್ನು ಪ್ರತಿನಿತ್ಯ ಜಪಿಸುವವನು ಮುಕ್ತಿಯನ್ನು ಪಡೆಯುತ್ತಾನೆ. ಗಾಯತ್ರಿ ವೇದಗಳ ತಾಯಿ. ಇದು ಲೋಕವನ್ನು ಪವಿತ್ರಗೊಳಿಸುತ್ತದೆ. ಇದಕ್ಕಿಂತ ಶ್ರೇಷ್ಠವಾದ ಜಪಯೋಗ್ಯವಾದ ಮಂತ್ರವಿಲ್ಲ. ಇದನ್ನು ತಿಳಿದವನು ಮುಕ್ತನಾಗುತ್ತಾನೆ.

## ಉತ್ಸರ್ಜನ-ಉಪಾಕರಣ :

ಶ್ರಾವಣ ಮಾಸದ ಅಥವಾ ಆಷಾಢ ಮಾಸದ ಅಥವಾ ಭಾದ್ರಪದ ಮಾಸದ ಹುಣ್ಣಿಮೆಯಂದು ವೇದಗಳನ್ನು ಸ್ವೀಕರಿಸಬೇಕು. (*ಸ್ವೀಕಾರವೇ ಉಪಾಕರಣ ಅಥವಾ ಉಪಾಕರ್ಮ.*)

ಬ್ರಾಹ್ಮಣನು ಗ್ರಾಮ-ನಗರಗಳಿಂದ ದೂರ ಹೋಗಿ ಬ್ರಹ್ಮಚರ್ಯವ್ರತವನ್ನು ಪಾಲಿಸುತ್ತ ಶುಚಿಯಾದ ಪ್ರದೇಶದಲ್ಲಿ ಐದೂವರೆ ತಿಂಗಳ ಕಾಲ ವೇದಗಳ ಅಧ್ಯಯನವನ್ನು ಮಾಡಬೇಕು. ಪುಷ್ಯಮಾಸದಲ್ಲಿ ಅಥವಾ ಮಾಘಮಾಸದ ಶುಕ್ಲಪಕ್ಷದ ಮೊದಲನೆಯ ದಿನ ಪೂರ್ವಾಹ್ನದಲ್ಲಿ ವೇದಗಳನ್ನು ಬಿಡಬೇಕು. (ಇದೇ ಉತ್ಸರ್ಜನ) ವೇದಾಂಗಗಳನ್ನು, ಪುರಾಣಗಳನ್ನೂ, ಮಾಘ ಮಾಸದ ಕೃಷ್ಣ ಪಕ್ಷದಲ್ಲಿ ಬಿಟ್ಟು ಇವುಗಳ ಅಭಿಮಾನಿದೇವತೆಗಳಿಗೆ ತರ್ಪಣವನ್ನು ಕೊಡಬೇಕು. ತಮ್ಮ ತಮ್ಮ ನಕ್ಷತ್ರಗಳಲ್ಲಿ ಛಂದಸ್ಸಿನ ಅಭಿಮಾನಿ ದೇವತೆಗಳಿಗೆ ತರ್ಪಣವನ್ನು ಕೊಡಬೇಕು. ವೇದ-ವೇದಾಂಗಗಳನ್ನು ಅನಧ್ಯಯನ ಕಾಲದಲ್ಲಿ ಓದಬಾರದು. ಇವುಗಳನ್ನು ಬೋಧಿಸಲೂಬಾರದು.

## ಅನಧ್ಯಯನ ಸಂದರ್ಭ :

ಕಿವಿಗೆ ಕೇಳಿಸುವಂತೆ ಬೀಸುವ ಗಾಳಿಯಿಂದ ಕೂಡಿದ ರಾತ್ರಿ, ಧೂಳು ಏಳುವ ಹಗಲು, ಮಿಂಚು, ಗುಡುಗು ಮಳೆಯ ಕಾಲ, ಉಲ್ಕಾಪಾತ- ಈ ಸಂದರ್ಭಗಳಲ್ಲಿ ಅಧ್ಯಯನವನ್ನು

ಮಾಡಬಾರದು ಎಂದು ಪ್ರಜಾಪತಿಯು ಹೇಳಿದ್ದಾನೆ. ಸಿಡಿಲಿನ ಬಡಿತ, ಭೂಕಂಪ, ಗ್ರಹಣ ಮತ್ತಿತರ ಜ್ಯೋತಿರ್ಮಂಡಲದ ಪೀಡೆ ಈ ಸಂದರ್ಭಗಳಲ್ಲಿ ಅಧ್ಯಯನವನ್ನು ಮಾಡಬಾರದು. ದುರ್ಗಂಧವು ಹರಡಿದ ಸಮಯ. ಊರಿನಲ್ಲಿ ಶವವಿರುವ ಸಮಯಗಳಲ್ಲಿ ಅಧ್ಯಯನವನ್ನು ಮಾಡಬಾರದು. ಶೂದ್ರಸನ್ನಿಧಿಯಲ್ಲಿ ಅಧ್ಯಯನವನ್ನು ಮಾಡಬಾರದು. ಜನಸಮುದಾಯವು ರೋಧಿಸುತ್ತಿರುವಾಗ ಅಧ್ಯಯನವನ್ನು ಮಾಡಬಾರದು. ಜಲಾಶಯದಲ್ಲಿ, ಮಧ್ಯರಾತ್ರಿಯಲ್ಲಿ, ಮಲಮೂತ್ರವಿಸರ್ಜನ ಕಾಲದಲ್ಲಿ ಅಧ್ಯಯನವನ್ನು ಮಾಡಬಾರದು.

ಉಚ್ಛಿಷ್ಟನು, ಶ್ರಾದ್ಧಕ್ಕೆ ವೇತನದ ಪ್ರತಿಗ್ರಹವನ್ನು ಮಾಡಿದವನು ವೇದಗಳನ್ನು ಮನಸ್ಸಿನಲ್ಲಿಯೂ ಚಿಂತಿಸಬಾರದು. ಏಕೋದ್ದಿಷ್ಟಶ್ರಾದ್ಧ ಭೋಜನವನ್ನು ಮಾಡಿದವನು ಮೂರು ದಿನ ಅಧ್ಯಯನವನ್ನು ಮಾಡಬಾರದು. ಚಂದ್ರನಿಗೆ ರಾಹುಗ್ರಹಣವಾದಾಗ ವೇದಗಳ ಅಧ್ಯಯನವನ್ನು ಮಾಡಬಾರದು. ಅನುದ್ದಿಷ್ಟಶ್ರಾದ್ಧದ ಸ್ನೇಹ, ಲೇಪಗಳು ಪೂರ್ಣವಾಗಿ (ನಿಶ್ಶೇಷವಾಗಿ) ನಾಶವಾಗುವವರೆಗೆ ವೇದಾಧ್ಯಯನವನ್ನು ಮಾಡಬಾರದು. ಮಲಗಿಕೊಂಡು, ಕಾಲುಗಳನ್ನು ಚಾಚಿಕೊಂಡು, ತೊಡೆಯ ಮೇಲೆ ಕಾಲನ್ನಿಟ್ಟುಕೊಂಡು ಅಧ್ಯಯನವನ್ನು ಮಾಡಬಾರದು. ಮಾಂಸವನ್ನು, ಸೂತಕಾನ್ನವನ್ನು ತಿಂದು ಅಧ್ಯಯನವನ್ನು ಮಾಡಬಾರದು.

ಹಿಮಪಾತವಾಗುತ್ತಿರುವಾಗ ಮತ್ತು ಬಾಣಪಾತದಂತೆ ತೀಕ್ಷ್ಣವಾಗಿ ಮಳೆಯಾಗುತ್ತಿರುವಾಗ, ಎರಡು ಸಂಧ್ಯಾಕಾಲಗಳಲ್ಲಿ ಅಧ್ಯಯನವನ್ನು ಮಾಡಬಾರದು. ಅಮಾವಾಸ್ಯೆ, ಚತುರ್ದಶೀ, ಹುಣ್ಣಿಮೆ, ಅಷ್ಟಮಿಗಳಲ್ಲಿ ಅಧ್ಯಯನವನ್ನು ಮಾಡಬಾರದು. ಉತ್ಸರ್ಗ ಉಪಾಕರ್ಮಗಳಲ್ಲಿ ಮೂರು ದಿನ ಅಧ್ಯಯನವನ್ನು ಮಾಡಬಾರದು. ಮಾರ್ಗಶೀರ್ಷ, ಪುಷ್ಯ ಮಾಘ ಮಾಸಗಳ ಕೃಷ್ಣಪಕ್ಷದ ಅಷ್ಟಮಿಗೆ ಅಷ್ಟಕ ಎಂದು ಹೆಸರು. ಈ ಅಷ್ಟಕಗಳಿಗೆ ಹತ್ತಿರವಾದ ಮೂರು ಹಗಲು-ರಾತ್ರಿಗಳ ಕಾಲ ಅಧ್ಯಯನವನ್ನು ಮಾಡಬಾರದು. ಋತುಗಳ ಕೊನೆಯ ಮೂರು ರಾತ್ರಿ ಅಧ್ಯಯನವನ್ನು ಮಾಡಬಾರದು. ಶ್ಲೇಷ್ಮಾಂತಕ, ಶಾಲ್ಮಲಿ, ಮಧುಕ, ಕೋವಿದಾರ, ಕಪಿತ್ಥ - ಈ ಮರಗಳ ನೆರಳಿನಲ್ಲಿ ಅಧ್ಯಯನವನ್ನು ಮಾಡಬಾರದು. ತನ್ನ ವಿದ್ಯೆಗೆ ಸಮಾನವಾದ ವಿದ್ಯೆಯನ್ನು ಹೊಂದಿದವನು ಮೃತನಾದಾಗ ಸಹಪಾಟಿಯು ಮೃತನಾದಾಗ ಅಧ್ಯಯನವನ್ನು ಮಾಡಬಾರದು. ಗುರುಗಳು ಮೃತರಾದಾಗ ಮೂರು ದಿನ ಅಧ್ಯಯನವನ್ನು ಮಾಡಬಾರದು.

ಮೇಲೆ ಹೇಳಿದ ಅನಧ್ಯಯನ ಸಂದರ್ಭಗಳಲ್ಲಿ ಮಾಡಲ್ಪಡುವ ಅಧ್ಯಯನವು ನಾನಾ ಕಾರಣಗಳಿಂದ ಸೋರಿ ಹೋಗುತ್ತದೆ. ಈ ಸಂದರ್ಭಗಳಲ್ಲಿ ರಾಕ್ಷಸರು ಅಧ್ಯಯನವನ್ನು ಹಾಳು ಮಾಡುತ್ತಾರೆ. ಆದ್ದರಿಂದ ಈ ಸಮಯಗಳಲ್ಲಿ ಅಧ್ಯಯನವನ್ನು ಮಾಡಬಾರದು.

### ಅನಧ್ಯಯನ ನಿಯಮಕ್ಕೆ ಅಪವಾದ :

ನಿತ್ಯಕರ್ಮಾಚರಣೆಗೆ, ಸಂಧ್ಯಾವಂದನೆಗೆ ಈ ಅನಧ್ಯಯನ ನಿಯಮವು ಅನ್ವಯಿಸುವುದಿಲ್ಲ. ಉಪಾಕರ್ಮವನ್ನು ಆಚರಿಸುವಾಗ, ಹೋಮವನ್ನು ಮಾಡುವಾಗ ಅನಧ್ಯಯನ

ನಿಯಮವನ್ನು ಪಾಲಿಸಬೇಕಿಲ್ಲ. ಅಷ್ಟಕಾ ದಿನಗಳಲ್ಲಿ ಋಕ್, ಯಜುಸ್, ಸಾಮಗಳ ಒಂದು ಮಂತ್ರವನ್ನು ಪಠಿಸಬೇಕು. ಗಾಳಿಯು ಅತಿಯಾಗಿ ಬೀಸುತ್ತಿರುವಾಗಲ ಒಂದು ಮಂತ್ರವನ್ನು ಪಠಿಸಬೇಕು. ಈ ಸಂದರ್ಭಗಳಲ್ಲಿ ವೇದಾಂಗಗಳನ್ನು, ಇತಿಹಾಸ ಪುರಾಣಗಳನ್ನು, ಧರ್ಮ-ಶಾಸ್ತ್ರಗಳನ್ನು ಅಧ್ಯಯನ ಮಾಡಬಹುದು. ಆದರೆ ಪರ್ವಕಾಲಗಳಲ್ಲಿ ಇವುಗಳ ಅಧ್ಯಯನವನ್ನು ಮಾಡಬಾರದು.

**ಉಪಸಂಹಾರ :**

ಇಲ್ಲಿಯವರೆಗೆ ಬ್ರಹ್ಮಚಾರಿಗಳು ಅನುಸರಿಸಬೇಕಾದ ಧರ್ಮವನ್ನು ಸಂಗ್ರಹವಾಗಿ ಹೇಳಲಾಯಿತು. ಸಾತ್ವಿಕ ಮನಸ್ಸಿನ ಋಷಿಗಳಿಗೆ ಬ್ರಹ್ಮದೇವರು ಈ ಧರ್ಮವನ್ನು ಉಪದೇಶಿಸಿದರು. ಯಾರು ವೇದಾಧ್ಯಯನವನ್ನು ಮಾಡದೆ ಬೇರೆ ವಿಷಯಗಳಲ್ಲಿ ತಮ್ಮ ಸಮಯ-ಸಾಮರ್ಥ್ಯಗಳನ್ನು ವಿನಿಯೋಗಿಸುತ್ತಾರೋ ಅವರು ಮೂಢರು ಈ ವೇದಬಾಹ್ಯರ ಜೊತೆ ಮಾತನಾಡಬಾರದು. ಕೇವಲ ಮಂತ್ರಗಳ ಪಠನದಿಂದ ಸಂತುಷ್ಟನಾಗಬಾರದು. ಅರ್ಥವನ್ನು ತಿಳಿಯಬೇಕು. ಮಂತ್ರಗಳನ್ನು ಕಲಿತು ಅರ್ಥವನ್ನು ಚಿಂತಿಸದವನು ಕುರುಡ. ಶೂದ್ರ ಸಮಾನ, ವೇದಾಧ್ಯಯನವನ್ನು ಮಾಡದವನು ಕೆಸರಿನಲ್ಲಿ ಸಿಕ್ಕಿಕೊಂಡ ಗೋವಿನಂತೆ ನಾಶವಾಗುತ್ತಾನೆ.

ಕಡೆಯವರೆಗೂ ಗುರುಕುಲದಲ್ಲೇ ಇರಲು ಬಯಸುವವನು ಗುರುಗಳ ಸೇವೆಯನ್ನು, ಅವರ ಮರಣಪರ್ಯಂತ ಮಾಡಬೇಕು. ಅಥವಾ ಅರಣ್ಯಕ್ಕೆ ಹೋಗಿ ವಿಧಿಗೆ ಅನುಗುಣ-ವಾಗಿ ಹೋಮವನ್ನು ಮಾಡುತ್ತಾ ಇರಬೇಕು. ಭಸ್ಮಸ್ನಾನವನ್ನು ದಿನವೂ ಮಾಡುತ್ತಾ, ಬ್ರಹ್ಮನಿಷ್ಠನೂ, ಶಾಂತಚಿತ್ತನೂ ಆಗಿ ನಿರಂತರವಾಗಿ ಗಾಯತ್ರಿಯನ್ನೂ, ಶತರುದ್ರಿಯವನ್ನೂ, ವೇದಾಂಗಗಳನ್ನೂ ಅಭ್ಯಾಸಮಾಡಬೇಕು. ಈ ಅಧ್ಯಯನ ವಿಧಿಯು ಪ್ರಾಚೀನವೂ, ಪವಿತ್ರವೂ ಆಗಿದೆ. ಹಿಂದೆ ಈ ಬಗ್ಗೆ ಪ್ರಶ್ನಿಸಿದ ಮಹರ್ಷಿಗಳಿಗೆ ಸ್ವಾಯಂಭುವ ಮನುವು ಇದನ್ನು ಉಪದೇಶಿಸಿದನು. ಈ ಅಧ್ಯಯನ ವಿಧಿಯನ್ನು ಈಶ್ವರನಲ್ಲಿ ಮನಸ್ಸನ್ನಿಟ್ಟು ಯಾರು ಸರಿಯಾಗಿ ಅನುಸರಿಸುತ್ತಾರೋ ಅವರು ಮೋಹವನ್ನು ಕಳೆದುಕೊಂಡು ಅಮೃತವೂ, ಮಂಗಳವೂ ಆದ ಪರಮಪದವನ್ನು ಹೊಂದುತ್ತಾರೆ.

* * *

## ಸಮಾವರ್ತನ

## ಅಧ್ಯಾಯ-೭೮

**ವ್ಯಾಸ ಉವಾಚ :**

ದ್ವಿಜನು ಒಂದು, ಎರಡು ಅಥವಾ ಮೂರು ಅಥವಾ ನಾಲ್ಕು ವೇದಗಳ ಅಧ್ಯಯನವನ್ನು ಮಾಡಬೇಕು. ಅವುಗಳ ಅರ್ಥವನ್ನು ತಿಳಿಯಬೇಕು. ಅನಂತರ ಗುರುದಕ್ಷಿಣೆಯನ್ನು ಕೊಟ್ಟು ಅವರ ಅನುಮತಿಯನ್ನು ಪಡೆದು ಸ್ನಾತಕನಾಗಬೇಕು. (*ಗುರುಕುಲವಾಸದ ದೀಕ್ಷೆಯನ್ನು ವಿಸರ್ಜಿಸಿದವನು ಸ್ನಾತಕ*) ಈ ದೀಕ್ಷಾವಿಸರ್ಜನೆಗೆ ಸಮಾವರ್ತನ ಎಂದೂ ಹೆಸರು. ಸಮಾವರ್ತನವನ್ನು ಮಾಡಿಕೊಳ್ಳುವವನು ವೇಣುದಂಡವನ್ನು, ಎರಡುವಸ್ತ್ರಗಳನ್ನು ಎರಡು ಉಪವೀತಗಳನ್ನು, ನೀರು ತುಂಬಿದ ಕಮಂಡಲವನ್ನೂ ಧರಿಸಬೇಕು. ಕ್ಷೌರವನ್ನು ಮಾಡಿಸಿಕೊಂಡು, ಉಗುರುಗಳನ್ನು ತೆಗೆಸಿಕೊಂಡು ಛತ್ರಿ, ಪೇಟ, ಪಾದರಕ್ಷೆ, ಬಂಗಾರದ ಕುಂಡಲ ಮತ್ತು ದರ್ಭಾಸನಗಳನ್ನು ಧರಿಸಬೇಕು. ಇಂತಹವನು ಪ್ರತಿದಿನ (*ಸದಾ*) ವೇದಾಧ್ಯಯನವನ್ನು ಮಾಡುತ್ತಿರಬೇಕು. ಬಂಗಾರದ ಸರವನ್ನು ಬಿಟ್ಟು ಬೇರೆ ಯಾವ ಮಾಲೆಯನ್ನೂ ಧರಿಸಬಾರದು. ಬಿಳಿ ವಸ್ತ್ರವನ್ನು ಧರಿಸಬೇಕು. ಸುಗಂಧವನ್ನು ಲೇಪಿಸಿಕೊಳ್ಳಬೇಕು. ಪ್ರಿಯನಾಗಿ ಕಾಣನಾಗಬೇಕು. ಹರಿದ, ಕೊಳೆಯಾದ ಬಟ್ಟೆಯನ್ನು ಧರಿಸಬಾರದು. ಬಹಳ ಕೆಂಪಾದ ಬಟ್ಟೆಯನ್ನು, ಬೇರೆಯವರು ಧರಿಸಿದ ಬಟ್ಟೆಯನ್ನು, ಕಮಂಡಲವನ್ನು, ಪಾದರಕ್ಷೆಯನ್ನು ಧರಿಸಬಾರದು. ದರ್ಭೆ, ಕೃಷ್ಣಾಜಿನಗಳನ್ನು ಬಲಹೆಗಲ ಮೇಲೆ ಧರಿಸಬಾರದು. ಬಟ್ಟೆಯನ್ನು ವಿಕೃತವಾಗಿ ಧರಿಸಬಾರದು.

**ವಿವಾಹ ಮತ್ತು ಗೃಹಸ್ಥಾಶ್ರಮಿಯ ಕರ್ತವ್ಯ :**

ಸಮಾವರ್ತನದ ನಂತರ ತನಗೆ ಯೋಗ್ಯಳಾದ, ರೂಪ-ಲಕ್ಷಣ ಸಂಪನ್ನಳಾದ, ಯೋನಿದೋಷರಹಿತಳಾದ, ಸಗೋತ್ರಳಲ್ಲದ, ತನ್ನ ತಾಯಿಯ ಗೋತ್ರದವಳೂ ಅಲ್ಲದ, ಶೀಲ-ಶೌಚ ಸಂಪನ್ನಳಾದ ಹುಡುಗಿಯನ್ನು ಮದುವೆಯಾಗಬೇಕು. ಪುತ್ರಜನ್ಮ ಆಗುವವರೆಗೆ ಪತ್ನೀಸಂಗಮವನ್ನು ಋತುಕಾಲದಲ್ಲಿ ಮಾತ್ರ ಮಾಡಬೇಕು. ನಿಷಿದ್ಧ ದಿನಗಳಲ್ಲಿ ಸಂಗಮವನ್ನು ಮಾಡಬಾರದು. ಷಷ್ಠೀ, ಅಷ್ಟಮೀ, ದ್ವಾದಶೀ, ಚತುರ್ದಶಿ ಹುಣ್ಣಿಮೆ ಮತ್ತು ಅಮಾವಾಸ್ಯೆ - ಇವು ನಿಷಿದ್ಧ ದಿನಗಳು. ಈ ದಿನಗಳಲ್ಲಿ ಬ್ರಹ್ಮಚರ್ಯವನ್ನು ಪಾಲಿಸಬೇಕು. ಯಾವಾಗಲೂ ಜಿತೇಂದ್ರಿಯನಾಗಿರಬೇಕು. ಆವಸಥ್ಯ ಎಂಬ ಅಗ್ನಿಯನ್ನು ವಿಧಿಪೂರ್ವಕವಾಗಿ ಸ್ವೀಕರಿಸಿ ಅದರಲ್ಲಿ ಹೋಮವನ್ನು ಮಾಡಬೇಕು. ತನ್ನನ್ನು ಪವಿತ್ರಗೊಳಿಸುವ ವ್ರತಗಳನ್ನು ನಿತ್ಯವೂ ಮಾಡಬೇಕು. ವೇದೋಕ್ತವಾದ ಸ್ವಾಶ್ರಮೋಚಿತ ಕರ್ಮಗಳನ್ನು ಪ್ರತಿನಿತ್ಯವೂ ಬೇಸರವಿಲ್ಲದೆ ಮಾಡಬೇಕು. ಮಾಡದವನು ಭಯಂಕರ ನರಕಗಳಲ್ಲಿ ಬೀಳುತ್ತಾನೆ. ಸಂಯಮದಿಂದ ಇರುತ್ತಾ ವೇದಗಳ ಅಧ್ಯಯನವನ್ನು ಮಾಡಬೇಕು. ಮಹಾಯಜ್ಞಗಳನ್ನು ಮಾಡಬೇಕು. ಗೃಹ್ಯಸೂತ್ರಗಳು ಹೇಳುವ ಕರ್ಮಗಳನ್ನು ಮಾಡಬೇಕು.

ಸಂಧ್ಯಾವಂದನೆಯನ್ನೂ ಮಾಡಬೇಕು. ತನಗೆ ಸಮಾನರಾದವರ ಮತ್ತು ತನಗಿಂತ ಉತ್ತಮರ ಜೊತೆ ಸಖ್ಯವನ್ನು ಮಾಡಬೇಕು. ಈಶ್ವರಾರಾಧನೆಯನ್ನು ಸದಾ ಮಾಡಬೇಕು. ದೇವತೆಗಳನ್ನು ಚೆನ್ನಾಗಿ ತಿಳಿಯಬೇಕು.

ಪತ್ನಿಗೆ ಆಭರಣ-ಅಲಂಕಾರಗಳನ್ನು ಕೊಡಿಸಬೇಕು. ವಿವೇಕಿಯು ತನ್ನ ಸತ್ಕಾರ್ಯಗಳನ್ನು ಪ್ರಕಟಿಸಬಾರದು. ಪಾಪಕಾರ್ಯಗಳನ್ನು ಮುಚ್ಚಿಡಬಾರದು. ತನಗೆ ಹಿತವುಂಟುಮಾಡುವ ಕೆಲಸಗಳನ್ನೇ ಮಾಡಬೇಕು. ಎಲ್ಲ ಪ್ರಾಣಿಗಳ ಮೇಲೂ ಅನುಕಂಪವನ್ನು ಹೊಂದಿರಬೇಕು. ವಯಸ್ಸು, ಉದ್ಯೋಗ, ಧನ, ವಿದ್ಯೆ, ಕುಲ, ವೇದವಚನ ಮತ್ತು ಬುದ್ಧಿ - ಇವುಗಳಿಗೆ ಅನುಗುಣವಾದ ಆಹಾರ-ವಿಹಾರಗಳನ್ನು ಮಾಡಬೇಕು. ಶ್ರುತಿ-ಸ್ಮೃತಿಗಳು ಹೇಳಿರುವ, ಸಜ್ಜನರು ಆಚರಿಸುವ ಆಚಾರಗಳನ್ನು ನಡೆಸಬೇಕು. ಇದಕ್ಕಿಂತ ಭಿನ್ನವಾದ ಕರ್ಮಗಳಲ್ಲಿ ತೊಡಗಬಾರದು.

ತನ್ನ ಪಿತೃ-ಪಿತಾಮಹರು ನಡೆದ ಸಜ್ಜನರ ದಾರಿಯಲ್ಲೇ ನಡೆಯಬೇಕು. ಹೀಗೆ ಮಾಡುವವನು ಮುಕ್ತಿಯನ್ನು ಪಡೆಯುತ್ತಾನೆ. ನಿತ್ಯವೂ ವೇದಾಧ್ಯಯನವನ್ನು ಮಾಡಬೇಕು. ನಿತ್ಯವೂ ಯಜ್ಞೋಪವೀತವನ್ನು ಧರಿಸಬೇಕು. ಸತ್ಯವನ್ನೆ ಹೇಳಬೇಕು. ಕೋಪವನ್ನು ಗೆಲ್ಲಬೇಕು. ಹೀಗಿದ್ದವನು ಬ್ರಹ್ಮಭಾವವನ್ನು ಪಡೆಯಲು ಸಮರ್ಥನಾಗುತ್ತಾನೆ. ಸ್ನಾನ, ಸಂಧ್ಯಾವಂದನೆ, ಬ್ರಹ್ಮಯಜ್ಞಗಳನ್ನು ಪ್ರತಿದಿನವೂ ಆಚರಿಸಬೇಕು. ಅಸೂಯೆಯಿಲ್ಲದವನೂ, ಮೃದುವೂ, ಜಿತೇಂದ್ರಿಯನೂ ಆದ ಗೃಹಸ್ಥನು ಮರಣಾನಂತರ ಸದ್ಗತಿಯನ್ನು ಪಡೆಯುತ್ತಾನೆ. ರಾಗ-ಭಯ-ಕ್ರೋಧಗಳನ್ನು ಗೆದ್ದ, ಲೋಭ-ಮೋಹಗಳನ್ನು ಬಿಟ್ಟ ಗಾಯತ್ರೀ ಜಪವನ್ನು ಆಚರಿಸುತ್ತಾ ಇರುವ, ಶ್ರಾದ್ಧಕರ್ಮಗಳನ್ನು ಆಚರಿಸುವ ಗೃಹಸ್ಥಾಶ್ರಮಿಯು ಮುಕ್ತನಾಗುತ್ತಾನೆ. ತಂದೆ-ತಾಯಿಗಳ ಹಿತವನ್ನು ಕಾಯುವ, ಗೋ-ಬ್ರಾಹ್ಮಣರ ಹಿತದಲ್ಲಿ ಆಸಕ್ತನಾದ, ಜಿತೇಂದ್ರಿಯನೂ, ಯಜ್ಞವನ್ನು ಮಾಡುವವನೂ, ದೇವಭಕ್ತನು ಆದವನೂ ಬ್ರಹ್ಮಲೋಕದಲ್ಲಿ ಮಾನ್ಯವಾದ ಸ್ಥಾನವನ್ನು ಪಡೆಯುತ್ತಾನೆ. ಪ್ರತಿದಿನವೂ ದೇವತೆಗಳನ್ನು ಪೂಜಿಸುತ್ತಾ ಧರ್ಮ-ಅರ್ಥ-ಕಾಮಗಳನ್ನು ಸೇವಿಸಬೇಕು.

ದಾನಶೀಲನೂ, ಕ್ಷಮಾಶೀಲನೂ, ದಯಾಲುವೂ ಆದವನೇ ನಿಜವಾದ ಗೃಹಸ್ಥ. ಮದುವೆಯಾದ ಮಾತ್ರದಿಂದಲೇ ಅರ್ಥಪೂರ್ಣವಾದ ಗೃಹಸ್ಥತ್ವವು ಉಂಟಾಗುವುದಿಲ್ಲ. ಕ್ಷಮಾ, ದಯೆ, ವಿಜ್ಞಾನ, ಸತ್ಯ, ದಮ, ಶಮ, ಅಧ್ಯಾತ್ಮ ಜ್ಞಾನನಿಷ್ಠೆ - ಇವು ಬ್ರಾಹ್ಮಣನ ಲಕ್ಷಣ. ಈ ಗುಣಗಳು ಕೂಡಿಬರದಂತಹ, ಸೋರಿಹೋಗುವಂತಹ ಪ್ರಮಾದಗಳನ್ನು ಮಾಡಬಾರದು. ಸತ್ಕರ್ಮಗಳನ್ನು ಶಕ್ತಿಯಿದ್ದಷ್ಟು ಮಾಡಬೇಕು. ನಿಂದಿತ ಕರ್ಮಗಳನ್ನು ಬಿಡಬೇಕು. ಮೋಹದ ಕೊಳೆಯನ್ನು ಕೊಡವಿ ಉತ್ತಮವಾದ ಜ್ಞಾನಮಾರ್ಗವನ್ನು ಆಶ್ರಯಿಸಿದ ಗೃಹಸ್ಥನು ಮುಕ್ತನಾಗುತ್ತಾನೆ. ಈ ವಿಷಯದಲ್ಲಿ ಏನೂ ಸಂಶಯಪಡಬೇಕಿಲ್ಲ.

**ಕ್ಷಮಾ** : ನಿಂದೆ, ಕರ್ತವ್ಯ ಲೋಪ, ಹಿಂಸೆ, ಬಂಧನ, ವಧೆ - ಇವು ಬೇರೆಯವರ ಮೇಲೆ ಉಂಟಾದ ಕೋಪದಿಂದ ಉಂಟಾಗುವ ದೋಷಗಳು. ಕೋಪವನ್ನು ತಡೆದುಕೊಂಡು ಈ ದೋಷಗಳನ್ನು ಮಾಡದಿರುವುದೇ ಕ್ಷಮಾ.

**ದಯಾ** : ಪರದುಃಖವನ್ನು ಸ್ವ-ದುಃಖ ಎಂದೇ ಭಾವಿಸಿ ಸ್ನೇಹದಿಂದ ತೋರಿಸಲ್ಪಡುವ ಕಾರುಣ್ಯವೇ ದಯೆ. ಇದು ಪುಣ್ಯಕ್ಕೆ ನೇರವಾದ ಸಾಧನ.

**ವಿಜ್ಞಾನ** : ಹದಿನಾಲ್ಕು ವಿದ್ಯೆಗಳ ಯಥಾರ್ಥನಾದ ಧಾರಣ(retention)ವೇ ವಿಜ್ಞಾನ. ಇದರಿಂದ ಧರ್ಮವು ಬೆಳೆಯುತ್ತದೆ

ವೇದಗಳನ್ನು ಕ್ರಮವಾಗಿ ಅಭ್ಯಸಿಸಿ, ಅರ್ಥಗಳನ್ನೂ ತಿಳಿದುಕೊಂಡು ಧರ್ಮಕಾರ್ಯಗಳನ್ನು ಮಾಡದಿದ್ದರೆ ಅಂತಹವನ ಜ್ಞಾನವು ವಿಜ್ಞಾನವಲ್ಲ.

**ಸತ್ಯ** : ಯಥಾರ್ಥವಾದ ಮಾತು ಸತ್ಯ. ಸತ್ಯನಿಷ್ಠನು ಲೋಕೋತ್ತರನಾಗುತ್ತಾನೆ. ಸತ್ಯವೇ ಮುಕ್ತಿಸಾಧನ.

## ದಮ, ಶಮ ಮತ್ತು ಅಧ್ಯಾತ್ಮ :

ಶರೀರ : ಇಂದ್ರಿಯಗಳ ನಿಗ್ರಹವೇ ದಮ. ಪ್ರಜ್ಞೆಯ ನೈರ್ಮಲ್ಯದಿಂದ ಹುಟ್ಟುವ ಗುಣ ಶಮ. ಅಕ್ಷರ ಎಂಬ ಹೆಸರಿನ ಬ್ರಹ್ಮವೇ ಅಧ್ಯಾತ್ಮ. ಅದನ್ನು ಹೊಂದಿದವನಿಗೆ ಶೋಕವಿಲ್ಲ.

**ಜ್ಞಾನ** : ಯಾವ ಶಾಸ್ತ್ರದಿಂದ ಸರ್ವೋತ್ತಮನಾದ ಮಹಾದೇವನ ಜ್ಞಾನವು ಹುಟ್ಟುವುದೋ ಆ ಶಾಸ್ತ್ರಕ್ಕೆ ಜ್ಞಾನ ಎಂದು ಹೆಸರು. ಮಹಾದೇವನಿಷ್ಠನೂ, ಕ್ರೋಧರಹಿತನೂ, ಶುಚಿಯೂ, ಮಹಾಯಜ್ಞಪರನೂ ಆದವನೇ ವಿದ್ವಾಂಸ

## ಶರೀರ ಅಮೂಲ್ಯ :

ಶರೀರವು ಧರ್ಮಸಾಧನ. ಇದನ್ನು ಪ್ರಯತ್ನದಿಂದ ಪಾಲಿಸಬೇಕು. ದೇಹರಹಿತರು ಮಹಾದೇವನನ್ನು ತಿಳಿಯಲಾರರು. ಧರ್ಮ-ಅರ್ಥ-ಕಾಮಗಳಲ್ಲಿ ಯಾವಾಗಲೂ ಆಸಕ್ತನಾಗಿರಬೇಕು. ಧರ್ಮವಿರುದ್ಧವಾದ ಅರ್ಥ-ಕಾಮಗಳನ್ನು ಚಿಂತಿಸಲೇಬಾರದು. ಧರ್ಮ ಮಾರ್ಗದಲ್ಲಿದ್ದಾಗ ಎಷ್ಟೇ ಕಷ್ಟಗಳು ಬಂದರೂ ಅಧರ್ಮವನ್ನು ಆಚರಿಸಬಾರದು. ಧರ್ಮವೇ ಎಲ್ಲರಿಗೂ ಶ್ರೇಷ್ಠವಾದ ಆಧಾರ.

ಎಲ್ಲ ಪ್ರಾಣಿಗಳಿಗೂ ಪ್ರಿಯವನ್ನೇ ಮಾಡಬೇಕು. ಪರರಿಗೆ ದ್ರೋಹವನ್ನು ಮಾಡ-ಬಾರದು. ದ್ರೋಹವನ್ನು ಮಾಡುವ ಚಿಂತನೆಯನ್ನು ಮಾಡಬಾರದು. ವೇದವನ್ನು ನಿಂದಿಸ-ಬಾರದು. ವೇದನಿಂದಕರ ಜೊತೆ ಮಾತನಾಡಬಾರದು. ಈ ಧರ್ಮಾಧ್ಯಾಯವನ್ನು ಯಾರು ಶುಚಿಯಾಗಿದ್ದು ಪಠಿಸುವನೋ, ಬೋಧಿಸುವನೋ, ಬೇರೆಯವರಿಗೆ ಶ್ರವಣ ಮಾಡಿಸು-ವನೋ ಅವನು ಬ್ರಹ್ಮಲೋಕದಲ್ಲಿ ಮಾನ್ಯನಾಗುತ್ತಾನೆ. *

## ಅಧ್ಯಾಯ-೬೯

**ವ್ಯಾಸ ಉವಾಚ :**

ಯಾವ ಪ್ರಾಣಿಯನ್ನೂ ಹಿಂಸಿಸಬಾರದು. ಯಾವ ಸಂದರ್ಭದಲ್ಲೂ ಸುಳ್ಳನ್ನು ಹೇಳಬಾರದು. ಅಹಿತವನ್ನು, ಅಪ್ರಿಯವನ್ನೂ ಹೇಳಬಾರದು. ಕಳ್ಳತನವನ್ನು ಮಾಡಲೇ-ಬಾರದು. ಬೇರೆಯವರಿಗೆ ಸೇರಿದ ಹುಲ್ಲು, ತರಕಾರಿ, ಮಣ್ಣು ನೀರು -ಇವುಗಳನ್ನು ಅಪಹರಿಸುವವನು ನರಕವನ್ನು ಹೊಂದುತ್ತಾನೆ. ರಾಜನಿಂದ, ಶೂದ್ರನಿಂದ ಮತ್ತು ಪತಿತರಿಂದ ಏನನ್ನೂ ತೆಗೆದುಕೊಳ್ಳಬಾರದು. (ಪ್ರತಿಗ್ರಹವನ್ನು ಮಾಡಬಾರದು) ನಿಂದಿತರಾದ ಯಾರನ್ನೂ ಬೇಡಬಾರದು. ನಿತ್ಯಯಾಚನೆಯನ್ನು ಮಾಡುವವನು ಮತ್ತೆ ಮತ್ತೆ ಅದೇ ವ್ಯಕ್ತಿಯನ್ನು ಯಾಚಿಸಬಾರದು. ಹಾಗೆ ಮಾಡಿದರೆ ದಾತೃವಿನ ಪ್ರಾಣವನ್ನು ಅಪಹರಿಸಿದಂತೆ. ದೇವರಿಗೆ ಸೇರಿದ, ಬ್ರಾಹ್ಮಣರಿಗೆ ಸೇರಿದ ವಸ್ತುಗಳನ್ನು ಆಪತ್ಕಾಲದಲ್ಲಿ ಕೂಡ ಅಪಹರಿಸ-ಬಾರದು. 'ವಿಷ ವಿಷವಲ್ಲ, ಬ್ರಹ್ಮಸ್ವ ವಿಷ' ಎಂದು ತಿಳಿದವರು ಹೇಳುತ್ತಾರೆ. ದೇವಸ್ವವನ್ನು ಪ್ರಯತ್ನಪೂರ್ವಕವಾಗಿ ತ್ಯಜಿಸಬೇಕು. ಬೇರೆಯವರಿಗೆ ಕೊಡಲ್ಪಡದ ಪುಷ್ಪ, ತರಕಾರಿ, ನೀರು, ಕಾಷ್ಠ, ಬೇರು, ಹುಲ್ಲು, ಫಲ- ಇವುಗಳನ್ನು ತೆಗೆದುಕೊಳ್ಳುವುದು ಸ್ತೇಯವಲ್ಲ ಎಂದು ಮನು ಪ್ರಜಾಪತಿ ಹೇಳಿದ್ದಾನೆ.

ದೇವರ ಪೂಜೆಗಾಗಿ ಪ್ರತಿದಿನವೂ ಒಬ್ಬನಿಂದಲೇ ಪುಷ್ಪಗಳನ್ನು ಪಡೆದುಕೊಳ್ಳಬಾರದು. ಅನುಮತಿಯಿಲ್ಲದೆ ತೆಗೆದುಕೊಳ್ಳಬಾರದು. ಹುಲ್ಲು, ಕಾಷ್ಠ, ಫಲ, ಪುಷ್ಪ- ಇವುಗಳನ್ನು ಧರ್ಮಕಾರ್ಯಕ್ಕಾಗಿ ಕಾಣುವಂತೆ ಯಾರ ಸ್ಥಳದಿಂದಾದರೂ ಪಡೆಯಬಹುದು. ಕಾಣದಂತೆ ತೆಗೆದುಕೊಂಡವನು ಪತಿತನಾಗುತ್ತಾನೆ. ಪ್ರಯಾಣದಲ್ಲಿರುವವರು ಹಸಿವಿನಿಂದ ಪೀಡಿತ-ರಾಗಿದ್ದರೆ ದಾರಿಯಲ್ಲಿ ದೊರೆಯುವ ಎಳ್ಳು, ಹೆಸರು, ಯಾವ ಮೊದಲಾದವುಗಳನ್ನು ಒಂದು ಮುಷ್ಟಿ ತೆಗೆದುಕೊಳ್ಳಬಹುದು. ಹಸಿವೆ ಇಲ್ಲದಿದ್ದಾಗ ತೆಗೆದುಕೊಳ್ಳಬಾರದು. ಧರ್ಮದ ಹೆಸರಿನಲ್ಲಿ ಪಾಪವನ್ನು ಮಾಡಿ ವ್ರತವನ್ನು ಆಚರಿಸಬಾರದು. ವ್ರತದ ಹೆಸರಿನಲ್ಲಿ ಪಾಪವನ್ನು ಮರೆಮಾಚಿ, ಸ್ತ್ರೀಯರನ್ನು, ಶೂದ್ರರನ್ನು ಅವಲಂಬಿಸಿ ಬದುಕುವ ವಿಪ್ರನನ್ನು ಬ್ರಹ್ಮವಾದಿ-ಗಳು ನಿಂದಿಸುತ್ತಾರೆ. ವಂಚನೆಯಿಂದ ಆಚರಿಸಲ್ಪಟ್ಟ ವ್ರತಗಳು ರಾಕ್ಷಸರಿಗೆ ಸೇರುತ್ತವೆ.

ಲಿಂಗಧಾರಿಯಾಗದವನು ಲಿಂಗಧಾರಿಯಂತೆ ವೇಷವನ್ನು ಧರಿಸಿ ಜೀವನವನ್ನು ಮಾಡಿದರೆ ಲಿಂಗಧಾರಿಗಳ ಪಾಪವು ಅವನಿಗೆ ಬರುತ್ತದೆ. ಹೀನ ಪ್ರಾಣಿಗಳ ಜನ್ಮಗಳು ಅವನಿಗೆ ಬರುತ್ತವೆ. ಬೆಕ್ಕಿನಂತೆ ಕಪಟಿಗಳಾಗಿದ್ದು, ಧರ್ಮನಾಶವನ್ನು ಮಾಡುವ ಜನರು ಆ ಪಾಪ-ಕರ್ಮಗಳ ಫಲವಾಗಿ ಬೇಗನೇ ಪತನವನ್ನು ಹೊಂದುತ್ತಾರೆ. ಪಾಖಂಡಿಗಳನ್ನು, ವಿರುದ್ಧ ಕರ್ಮಗಳನ್ನು ಮಾಡುವವರನ್ನು ವಾಮಾಚಾರಿಗಳನ್ನು, ವೇದವಿರುದ್ಧವಾದ ಪಂಚರಾತ್ರವನ್ನು ಪಾಶುಪತಶಾಸ್ತ್ರವನ್ನು ಅನುಸರಿಸುವವರನ್ನೂ ಮಾತನಾಡಿಸಬಾರದು. ವೇದನಿಂದಕರೂ,

ದೇವನಿಂದಕರೂ, ದ್ವಿಜನಿಂದಕರೂ ಆದ ಜನರನ್ನು ನೆನೆಯಲೇಬಾರದು. ಇಂತಹವರಿಗೆ ಯಾಗವನ್ನು ಮಾಡಿಸಿದವರು, ಇಂತಹ ಸ್ತ್ರೀಯರ ಸಂಬಂಧವನ್ನು ಹೊಂದಿದವರು ಇವರ ಜೊತೆ ಮಾತನಾಡುವವರು ಪತಿತರಾಗುತ್ತಾರೆ. ಆದ್ದರಿಂದ ಪ್ರಯತ್ನಪಟ್ಟು ಇವರನ್ನು ಬಿಡಬೇಕು.

ದೇವದ್ರೋಹಕ್ಕಿಂತ ಗುರುದ್ರೋಹ ಕೋಟಿಕೋಟಿಪಟ್ಟು ದೊಡ್ಡದಾದ ಪಾಪ. ಜ್ಞಾನನಿಂದೆ ಮತ್ತು ನಾಸ್ತಿಕ್ಯವು ಅದಕ್ಕಿಂತ ಕೋಟಿಪಟ್ಟು ದೊಡ್ಡದಾದ ಪಾಪ.

**ಕುಲನಾಶ :**

ಗೋವು, ದೇವತೆ, ಬ್ರಾಹ್ಮಣ, ಕೃಷಿ ಮತ್ತು ರಾಜಸೇವೆ ಇವುಗಳ ವಿಷಯಗಳಲ್ಲಿ ಧರ್ಮ ವಿರುದ್ಧವಾಗಿ ನಡೆದುಕೊಂಡರೆ ಸತ್ಕುಲಗಳು ದುಷ್ಕುಲಗಳಾಗಿ ಬಿಡುತ್ತವೆ. ನಿಷಿದ್ಧವಿವಾಹ, ಕ್ರಿಯಾಲೋಪ, ವೇದಗಳ ಅನಧ್ಯಯನ. ಬ್ರಾಹ್ಮಣಾಪಮಾನ -ಈ ಪಾಪಗಳನ್ನು ಮಾಡುವವರ ಕುಲಗಳು ಕೆಟ್ಟು ಹೋಗುತ್ತವೆ. ಸುಳ್ಳು ಹೇಳುವುದು, ಪರಸ್ತ್ರೀ ಸಂಬಂಧ, ತಿನ್ನಬಾರದ ವಸ್ತುಗಳನ್ನು ತಿನ್ನುವುದು, ಶ್ರುತಿಯಲ್ಲಿ ಹೇಳಿಲ್ಲದ ಕರ್ಮಗಳನ್ನು ಮಾಡುವುದು -ಇವುಗಳಿಂದ ಕುಲಗಳು ಕೆಟ್ಟುಹೋಗುತ್ತವೆ. ಶ್ರೋತ್ರಿಯರಲ್ಲದವರಿಗೆ, ಶೂದ್ರರಿಗೆ, ಶಾಸ್ತ್ರವಿಹಿತ ಆಚಾರಗಳನ್ನು ಬಿಟ್ಟವರಿಗೆ ದಾನ ಕೊಡುವುದರಿಂದ ಕುಲಗಳು ನಾಶವಾಗುತ್ತವೆ.

**ವಾಸಕ್ಕೆ ಅನರ್ಹವಾದ ಸ್ಥಳಗಳು :**

ಅಧಾರ್ಮಿಕರೇ ಹೆಚ್ಚಾಗಿರುವ, ವ್ಯಾಧಿಗ್ರಸ್ತರೇ ಹೆಚ್ಚಾಗಿರುವ ಗ್ರಾಮಗಳಲ್ಲಿ, ಪಾಖಂಡಜನಗಳಿಂದ ತುಂಬಿರುವ ಶೂದ್ರ ರಾಜ್ಯದಲ್ಲಿ ವಾಸಮಾಡಬಾರದು. ಹಿಮಾಲಯ-ವಿಂಧ್ಯಪರ್ವತಗಳ ಮಧ್ಯದಲ್ಲಿ ಪೂರ್ವ ಪಶ್ಚಿಮ ಸಮುದ್ರಗಳ ಮಧ್ಯದಲ್ಲಿ ದ್ವಿಜನು ವಾಸಿಸಬೇಕು. ಬೇರೆ ಸ್ಥಳಗಲ್ಲಿ ವಾಸಿಸಬಾರದು. ಕೃಷ್ಣಮೃಗವು ಸ್ವಭಾವತಃ ಸಂಚರಿಸುವ ಪ್ರದೇಶಗಳಲ್ಲಿ ಮತ್ತು ಪ್ರಸಿದ್ಧವಾದ ಪುಣ್ಯನದಿಗಳು ಹರಿಯುವ ಪ್ರದೇಶಗಳಲ್ಲಿ ವಾಸಿಸಬೇಕು. ನದೀತೀರದಿಂದ ಸುಮಾರು ಎರಡು ಕಿಲೋ ಮೀಟರ್‌ನಷ್ಟು ದೂರದವರೆಗೆ ವಾಸಿಸಬಹುದು. ಅದಕ್ಕಿಂತ ದೂರಪ್ರದೇಶದಲ್ಲಿ ಮತ್ತು ಅಂತ್ಯಜರ ಗ್ರಾಮದ ಹತ್ತಿರ ವಾಸಮಾಡಬಾರದು. ಪತಿತರ, ಹಿಂಸಕರ ಪುಲ್ಕಸರ, ಮೂರ್ಖರ, ದುರಹಂಕಾರಿಗಳ ಜೊತೆ ವಾಸಿಸಬಾರದು.

**ಸಾಂಕರ್ಯ ಕಾರಣಗಳು :**

ಒಂದೇ ಹಾಸಿಗೆ, ಒಂದೇ ಆಸನ, ಒಂದೇ ಪಂಕ್ತಿ, ಒಂದೇ ಪಾತ್ರೆಯಲ್ಲಿ ಪಕ್ವಾನ್ನ-ಮಿಶ್ರಣ, ಯಾಗಮಾಡಿಸುವುದು, ಅಧ್ಯಾಪನ, ಸ್ತ್ರೀ ಸಹಭೋಜನ, ಸಹಾಧ್ಯಯನ, ಜೊತೆಗೆ ಯಾಗವನ್ನು ಮಾಡಿಸುವುದು -ಇವುಗಳಿಂದ ಸಾಂಕರ್ಯವು (ಕಲಬೆರಕೆಯು)

ಉಂಟಾಗುತ್ತದೆ. ದುಷ್ಟರ ಹತ್ತಿರ ವಾಸ ಮಾಡುವುದರಿಂದಲೂ ಸಾಂಕರ್ಯವು ಸಂಭವಿಸುತ್ತದೆ. ಮಹಾ ಪ್ರಯತ್ನದಿಂದ ಇವುಗಳನ್ನು ಬಿಡಬೇಕು.

## ಪಂಕ್ತಿದೋಷ ಪರಿಹಾರ :

ಒಂದೇ ಪಂಕ್ತಿಯಲ್ಲಿ ಕುಳಿತವರು ಪರಸ್ಪರ ಮುಟ್ಟಿಕೊಳ್ಳದಿದ್ದರೆ, ಭಸ್ಮದಿಂದ ಮಧ್ಯೆ ಗೆರೆಯನ್ನು ಎಳೆದರೆ ಸಾಂಕರ್ಯವು ಸಂಭವಿಸುವುದಿಲ್ಲ. ಅಗ್ನಿ, ಭಸ್ಮ, ನೀರು, ಬಾಗಿಲು, ಸ್ತಂಭ, ದಾರಿ -ಈ ಆರರಿಂದ ಪಂಕ್ತಿಯನ್ನು ಭೇದಿಸಬಹುದು. ಹೀಗೆ ಭೇದಿಸಿದಾಗ ಪಂಕ್ತಿದೋಷವು ಉಂಟಾಗುವುದಿಲ್ಲ.

## ಮತ್ತಷ್ಟು ಮಾಡಬಾರದ ಪಾಪಗಳು :

ದುಃಖವನ್ನುಂಟುಮಾಡುವ ವೈರವನ್ನು, ವಿವಾದವನ್ನು ಚಾಡಿಹೇಳುವುದನ್ನು ಮಾಡಬಾರದು. ಇನ್ನೊಬ್ಬರ ಹೊಲದಲ್ಲಿ ಹಸು ಮೇಯುತ್ತಿದ್ದರೆ ಅದನ್ನು ಯಾರಿಗೂ ಹೇಳಬಾರದು. ಆಶೌಚವುಳ್ಳವನ ಜೊತೆ ವಾಸ ಮಾಡಬಾರದು. ಮರ್ಮ ಸ್ಪರ್ಶವಾಗುವಂತೆ ಯಾರ ಬಗ್ಗೆಯೂ ನಡೆದುಕೊಳ್ಳಬಾರದು. ಸೂರ್ಯನೂ ಸುತ್ತಲೂ ಕಾಣಿಸುವ ಮಂಡಲ, ಕಾಮನಬಿಲ್ಲು, ಶೈವಾಗ್ನಿ -ಇವುಗಳನ್ನು ಕುರಿತು ಯಾರಿಗೂ ಹೇಳಬಾರದು. ಚಂದ್ರನ ಸುತ್ತಲೂ ಕಾಣುವ ಮಂಡಲವನ್ನು ಕುರಿತು ಯಾರಿಗೂ ಹೇಳಬಾರದು. ಬಹಳ ಜನಗಳ ಜೊತೆ ವಿರೋಧವನ್ನು ಮಾಡಿಕೊಳ್ಳಬಾರದು. ತನಗೆ ಅನುಕೂಲವಲ್ಲದೆ ಸಂಗತಿಗಳನ್ನು ಪರರಿಗೂ ಮಾಡಬಾರದು. ರಜಸ್ವಲೆಯೊಡನೆ ಮಾತನಾಡಬಾರದು. ದೇವತೆಗಳಿಗೆ ಗುರುಗಳಿಗೆ, ವಿಪ್ರರಿಗೆ ಕೊಡಲ್ಪಡುತ್ತಿರುವ ದಾನವನ್ನು ತಡೆಯಬಾರದು. ಆತ್ಮಪ್ರಶಂಸೆಯನ್ನು ಮಾಡಿಕೊಳ್ಳಬಾರದು. ಪರರ ನಿಂದೆಯನ್ನು ಮಾಡಬಾರದು. ವೇದನಿಂದೆಯನ್ನೂ, ದೇವನಿಂದೆಯನ್ನೂ ಪ್ರಯತ್ನಪಟ್ಟು ಬಿಡಬೇಕು.

ದೇವತೆಗಳನ್ನು ಋಷಿಗಳನ್ನು ಬ್ರಾಹ್ಮಣರನ್ನೂ, ವೇದಗಳನ್ನೂ ನಿಂದಿಸುವ ದ್ವಿಜನಿಗೆ ಪ್ರಾಯಶ್ಚಿತ್ತವನ್ನು ಶಾಸ್ತ್ರಗಳು ಹೇಳಿಲ್ಲ. ಗುರುಗಳನ್ನು, ದೇವತೆಗಳನ್ನು, ವೇದಗಳನ್ನು ಇತಿಹಾಸ -ಪುರಾಣಗಳನ್ನೂ ನಿಂದಿಸುವವರು ನೂರುಕೋಟಿ ಕಲ್ಪಗಳ ಕಾಲ ರೌರವನರಕದಲ್ಲಿ ಯಾತನೆಯನ್ನು ಅನುಭವಿಸುತ್ತಾನೆ. ಮಾನ್ಯರ ನಿಂದೆಯು ನಡೆಯುತ್ತಿದ್ದರೆ ಸುಮ್ಮನೆ ಇರಬೇಕು. ಏನೂ ಉತ್ತರವನ್ನು ಹೇಳಬಾರದು. ಕಿವಿಗಳನ್ನು ಮುಚ್ಚಿಕೊಂಡು ಹೊರಟು ಹೋಗಬೇಕು. ನಿಂದಕರನ್ನು ನೋಡಬಾರದು. ಇವರನ್ನು ಬಿಟ್ಟುಬಿಡಬೇಕು. ಪರರ ರಹಸ್ಯವನ್ನು ಕಾಪಾಡಬೇಕು. ಸ್ವಜನರ ಜೊತೆ ವಿವಾದವನ್ನು ಮಾಡಬಾರದು. ಪಾಪಿಯನ್ನು ಪಾಪಿ ಎಂದು ಹೇಳಬಾರದು. ಪಾಪಿಯಲ್ಲ ಎಂದು ಹೇಳಬಾರದು. ಹಾಗೆ ಹೇಳಿದರೆ ಪಾಪಿಯ ದೋಷಗಳು ಹೇಳಿದವನಿಗೆ ಬರುತ್ತವೆ. ಪಾಪಿಯಲ್ಲದವನನ್ನು ಪಾಪಿ ಎಂದರೆ ಮಿಥ್ಯಾಪವಾದವನ್ನು ಹೊರಿಸಿದ ಪಾಪಕ್ಕೆ ಭಾಗಿಯಾಗುತ್ತಾನೆ. ಮಿಥ್ಯಾಪವಾದಕ್ಕೆ ಒಳಗಾದವನ

ರೋದನದಿಂದ ಹರಿದ ಕಣ್ಣೀರು ಮಿಥ್ಯಾಪವಾದವನ್ನು ಹೊರಿಸಿದ ಜನರ ಮಕ್ಕಳನ್ನೂ, ಸಂಪತ್ತನ್ನೂ ನಾಶಮಾಡುತ್ತದೆ.

ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ, ಗುರುಪತ್ನೀ ಸಮಾಗಮ - ಈ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಸಜ್ಜನರು ಕಂಡುಕೊಂಡಿದ್ದಾರೆ. ಸುಳ್ಳು ಹೇಳುವ ಪಾಪಕ್ಕೆ ಅವರು ಪ್ರಾಯಶ್ಚಿತ್ತವನ್ನು ಕಂಡಿಲ್ಲ. ಉದಯಿಸುತ್ತಿರುವ ಮತ್ತು ಅಸ್ತಂಗತವಾಗುತ್ತಿರುವ ಮತ್ತು ನೀರಿನಲ್ಲಿ ಮೂಡಿರುವ ಇವರ ಪ್ರತಿಬಿಂಬಗಳನ್ನು, ಗ್ರಹಣಕ್ಕೊಳಗಾಗಿರುವ, ಮಧ್ಯದಲ್ಲಿರುವ ಸೂರ್ಯಚಂದ್ರರನ್ನು ನೋಡಬಾರದು. ವಸ್ತ್ರದ ಮರೆಯಲ್ಲಿ ಸೂರ್ಯ ಚಂದ್ರರನ್ನು ನೋಡಬಾರದು. ಕನ್ನಡಿಯಲ್ಲಿ ಮೂಡಿರುವ ಸೂರ್ಯ-ಚಂದ್ರರ ಪ್ರತಿಬಿಂಬವನ್ನು ನೋಡಬಾರದು. ನಗ್ನಳಾಗಿರುವ ಸ್ತ್ರೀ ಅಥವಾ ಪುರುಷನನ್ನು ನೋಡಬಾರದು. ಮಲ-ಮೂತ್ರಗಳನ್ನು ನೋಡಬಾರದು. ಮೈಥುನದಲ್ಲಿ ತೊಡಗಿದವರನ್ನು ನೋಡಬಾರದು. ಅಶುಚಿಯಾಗಿದ್ದಾಗ ಸೂರ್ಯ-ಚಂದ್ರ ಮೊದಲಾದ ಗ್ರಹಗಳನ್ನು ನೋಡಬಾರದು. ಪತಿತರನ್ನೂ, ಅಂಗವಿಕಲರನ್ನೂ, ಚಂಡಾಲರನ್ನು, ಉಚ್ಛಿಷ್ಟ ಜನರನ್ನೂ, ನೋಡಬಾರದು. ಅವರ ಜೊತೆ ಮಾತನಾಡಬಾರದು. ಗರ್ವವುಳ್ಳವನಿಗೆ ಉಚ್ಛಿಷ್ಟ ಎಂದು ಹೆಸರು. ಶವವನ್ನು ಮುಟ್ಟಿದವರನ್ನು ಮುಟ್ಟಬಾರದು. ಕೋಪಗೊಂಡ ಗುರುವಿನ ಮುಖವನ್ನು ನೋಡ-ಬಾರದು. ಎಣ್ಣೆ, ನೀರುಗಳಲ್ಲಿ ಮೂಡಿದ ಪ್ರತಿಬಿಂಬಗಳನ್ನು ನೋಡಬಾರದು. ಊಟವನ್ನು ಮಾಡುತ್ತಿರುವಾಗ ಪತ್ನಿಯನ್ನು ನೋಡಬಾರದು. ಅಂಗವನ್ನು ಕಟ್ಟಿಕೊಂಡಿರದ ಪತ್ನಿಯನ್ನು ನೋಡಬಾರದು. ಹೆಂಡತಿಯ ಜೊತೆ ಊಟವನ್ನು ಮಾಡಬಾರದು. ಅಶುಚಿಯಾಗಿರುವ ಹೆಂಡತಿಯನ್ನು ನೋಡಬಾರದು. ಸೀನುತ್ತಿರುವ ಆಕಳಿಸುತ್ತಿರುವ ಹೆಂಡತಿಯನ್ನು ನೋಡ-ಬಾರದು. ಸ್ವಚ್ಛಂದವಾದ ಭಂಗಿಯಲ್ಲಿ ಕುಳಿತಿರುವ ಹೆಂಡತಿಯನ್ನು ನೋಡಬಾರದು. ಉನ್ಮತ್ತರನ್ನೂ, ಮತ್ತರನ್ನೂ ನೋಡಬಾರದು. ನೀರಿನಲ್ಲಿ ಮೂಡಿರುವ ತನ್ನ ಪ್ರತಿಬಿಂಬವನ್ನು ನೋಡಬಾರದು. ಬಿರುಕು ಬಿಟ್ಟಿರುವ ದಡವನ್ನು ದಾಟಬಾರದು. ಮೂತ್ರವನ್ನು ದಾಟ-ಬಾರದು. ಅದರ ಮೇಲೆ ನಿಲ್ಲಬಾರದು. ಕೂಡಬಾರದು. ಶೂದ್ರನಿಗೆ ವಿವೇಕವನ್ನು ಹೇಳಬಾರದು. ಕೃಶರ, ಪಾಯಸ, ಮೊಸರು, ಉಚ್ಛಿಷ್ಟ, ತುಪ್ಪ, ಜೇನುತುಪ್ಪ, ಕೃಷ್ಣಾಜಿನ, ಹವಿಸ್ಸು -ಇವುಗಳನ್ನು ಶೂದ್ರನಿಗೆ ಕೊಡಬಾರದು. ಇವನಿಗೆ ವ್ರತೋಪದೇಶವನ್ನು ಧರ್ಮೋಪದೇಶವನ್ನೂ ಮಾಡಬಾರದು.

ಕ್ರೋಧ, ರಾಗ, ದ್ವೇಷಗಳನ್ನು ಬಿಡಬೇಕು. ಲೋಭದಂಭಗಳನ್ನು ಬಿಡಬೇಕು. ಯಾತ್ರಾನಿಂದನೆಯನ್ನು, ಜ್ಞಾನನಿಂದನೆಯನ್ನೂ ಮಾಡಬಾರದು. ದುರಭಿಮಾನ, ಮೋಹ-ಗಳನ್ನು ಬಿಡಬೇಕು. ಯಾರಿಗೂ ತೊಂದರೆಯನ್ನು ಮಾಡಬಾರದು. ಮಗನನ್ನು ಮತ್ತು ಶಿಷ್ಯನನ್ನು ಶಿಕ್ಷಿಸಬಹುದು. ಹೀನಮತಿಯವರಿಗೆ ಮತ್ತು ತೀಕ್ಷ್ಣಮತಿಯವರಿಗೆ ಉಪದೇಶ-ವನ್ನು ಮಾಡಬಾರದು. ತನಗೇ ಅವಮಾನ ಮಾಡಿಕೊಳ್ಳಬಾರದು. ದೈನ್ಯವನ್ನು ಪ್ರಯತ್ನಪಟ್ಟು ಬಿಡಬೇಕು. ಅಶಿಷ್ಟನನ್ನು ಸತ್ಕರಿಸಬಾರದು.

ಉಗುರಿನಿಂದ ಭೂಮಿಯ ಮೇಲೆ ರೇಖೆಯನ್ನು ಮೂಡಿಸಬಾರದು. ಹಸುವನ್ನು ಮಲಗಿಸಬಾರದು. ಒಂದು ನದಿಯಲ್ಲಿ ಇನ್ನೊಂದು ನದಿಯನ್ನು ಒಂದು ಪರ್ವತದಲ್ಲಿ ಇನ್ನೊಂದು ಪರ್ವತವನ್ನು ಪ್ರಶಂಸಿಸಬಾರದು. ಹೀಗೆ ಮಾಡುವವನ ಜೊತೆ ಇರಬಾರದು. ಸಹ ಯಾತ್ರಿಕನನ್ನು ಬಿಡಬಾರದು. ನೀರಿನಲ್ಲಿ ನಗ್ನನಾಗಿ ಪ್ರವೇಶಿಸಬಾರದು. ಅಗ್ನಿಯನ್ನು ಕಾಲಿನಿಂದ ಮುಟ್ಟಬಾರದು. ತಲೆಗೆ ಹಚ್ಚಿ ಉಳಿದ ಎಣ್ಣೆಯನ್ನು ಅಂಗಗಳಿಗೆ ಹಚ್ಚಬಾರದು. ಶಸ್ತ್ರಗಳೊಂದಿಗೆ, ಸರ್ಪಗಳೊಂದಿಗೆ ಆಟವಾಡಬಾರದು. ತನ್ನ ಇಂದ್ರಿಯಗಳನ್ನು ಮುಟ್ಟ-ಬಾರದು. ಗುಹ್ಯಾಂಗಗಳನ್ನೂ, ರೋಮವನ್ನೂ ಮುಟ್ಟಬಾರದು, ಅಶಿಷ್ಟನ ಜೊತೆ ಹೋಗಬಾರದು. ಅಗ್ನಿಯಲ್ಲಿ ಕೈಗಳ, ಕಾಲುಗಳ ಚಾಂಚಲ್ಯವನ್ನು ಮಾಡಬಾರದು. ಶಿಶ್ನ, ಉದರ ಮತ್ತು ಶ್ರವಣೇಂದ್ರಿಯಗಳ ಚಾಪಲ್ಯವನ್ನು ನಿಗ್ರಹಿಸಬೇಕು. ಅಂಗಗಳಿಂದ, ಉಗುರುಗಳಿಂದ ಶಬ್ದವನ್ನು ಹೊರಡಿಸಬಾರದು. ಬೊಗಸೆಯಿಂದ ಕುಡಿಯಬಾರದು. ಕೈ-ಕಾಲುಗಳಿಂದ ನೀರನ್ನು ಹೊಡೆಯಬಾರದು. ಇಟ್ಟಿಗೆಗಳಿಂದ ಫಲಗಳನ್ನು ಜಜ್ಜಬಾರದು. ಫಲಸಹಿತವಾದ ಕೊಂಬೆ ಮೊದಲಾದವುಗಳನ್ನು ಜಜ್ಜಬಾರದು. ಮ್ಲೇಚ್ಛಭಾಷೆಯನ್ನು ಕಲಿಯಬಾರದು. ಕಾಲಿನಿಂದ ಆಸನವನ್ನು ಎಳೆಯಬಾರದು. ನಿಷ್ಫಲವಾದ ಒಡೆಯುವ ಕ್ರಿಯೆ, ಆಸ್ಫೋಟಿಸುವ ಕ್ರಿಯೆ, ಸೀಳುವಿಕೆ, ಗೀರುವಿಕೆ, ವಿಮರ್ದನ ಇವುಗಳನ್ನು ಸುಮ್ಮನೆ ಮಾಡಬಾರದು. ತೊಡೆಯ ಮೇಲಿಟ್ಟುಕೊಂಡು ಪದಾರ್ಥಗಳನ್ನು ತಿನ್ನಬಾರದು. ವ್ಯರ್ಥ-ಚೇಷ್ಟೆಗಳನ್ನು ಮಾಡಬಾರದು. ವ್ಯರ್ಥವಾಗಿ ನರ್ತನವನ್ನು ಮಾಡಬಾರದು. ಹಾಡಬಾರದು. ವಾದ್ಯಗಳನ್ನು ಬಾರಿಸಬಾರದು. ಎರಡೂ ಕೈಗಳಿಂದ ತಲೆಯನ್ನು ಕೆರೆದುಕೊಳ್ಳಬಾರದು. ಲೌಕಿಕಸ್ತೋತ್ರಗಳಿಂದ ಮತ್ತು ಔಷಧಿಗಳಿಂದ ದೇವತೆಗಳನ್ನು ಒಲಿಸಬಾರದು. ಅಕ್ಷಕ್ರೀಡೆ-ಯನ್ನು ಆಡಬಾರದು. ನೀರಿನಲ್ಲಿ ಮಲ ಮೂತ್ರಗಳನ್ನು ವಿಸರ್ಜಿಸಬಾರದು.

ಉಚ್ಛಿಷ್ಟನಾಗಿ (*ಊಟವಾದ ಮೇಲೆ ಶುದ್ಧಿಯನ್ನು ಮಾಡಿಕೊಳ್ಳದೆ*) ಮಲಗಬಾರದು, ನಗ್ನನಾಗಿ ಸ್ನಾನವನ್ನು ಮಾಡಬಾರದು. ಪ್ರಯಾಣಮಾಡುತ್ತಾ ಓದಬಾರದು. ತನ್ನ ತಲೆಯನ್ನು ಮುಟ್ಟಿಕೊಳ್ಳಬಾರದು. ಹಲ್ಲಿನಿಂದ ಉಗುರುಗಳನ್ನು, ಕೂದಲನ್ನು ಛೇದಿಸಬಾರದು. ಮಲಗಿದವನನ್ನು ಎಬ್ಬಿಸಬಾರದು. ಎಳೆಯ ಬಿಸಿಲನ್ನು ಸೇವಿಸಬಾರದು. ಶವದಹನ-ವಾಗುತ್ತಿರುವಾಗ ಏಳುವ ಹೊಗೆಯ ಸ್ಪರ್ಶವಾಗದಂತೆ ಇರಬೇಕು. ಖಾಲಿ ಕಟ್ಟಡದಲ್ಲಿ ಒಬ್ಬನೇ ಮಲಗಬಾರದು. ತನ್ನ ಪಾದುಕೆಗಳನ್ನು ತಾನೇ ಒಯ್ಯಬಾರದು. ಕಾರಣವಿಲ್ಲದೆ. ಉಗುಳಬಾರದು. ಈಜುತ್ತಾ ನದಿಯನ್ನು ದಾಟಬಾರದು. ಕಾಲಿನಿಂದ ಉಜ್ಜಿ ಕಾಲನ್ನು ತೊಳೆಯಬಾರದು. ಅಗ್ನಿಗೆ ಕಾಲನ್ನು ನೀಡಿ ಕಾಯಿಸಬಾರದು. ಕಂಚಿನ ಪಾತ್ರೆಯಲ್ಲಿ ಕಾಲನ್ನು ತೊಳೆಯಬಾರದು, ಬ್ರಾಹ್ಮಣ, ಗೋವು, ವಾಯು, ಅಗ್ನಿ, ಗುರು, ಸೂರ್ಯ, ಚಂದ್ರ - ಇವರ ಕಡೆ ಕಾಲನ್ನು ಚಾಚಬಾರದು. ಅಶುದ್ಧನಾಗಿದ್ದಾಗ ಶಯನ, ಪ್ರಯಾಣ, ವೇದಾಧ್ಯಯನ, ಸ್ನಾನ, ಭೋಜನ, ತಿರುಗಾಟ - ಇವುಗಳನ್ನು ಮಾಡಲೇ ಬಾರದು.

ನಿದ್ರೆ, ಅಧ್ಯಯನ, ಪ್ರಯಾಣ, ಮೂತ್ರವಿಸರ್ಜನೆ, ಊಟ, ಓಡಾಟ- ಇವುಗಳನ್ನು ಎರಡು ಸಂಧ್ಯಾಕಾಲಗಳಲ್ಲಿ ಮತ್ತು ಮಧ್ಯಾಹ್ನದಲ್ಲಿ ಮಾಡಬಾರದು. ತಿರುಗಾಡಿ ಬಂದವನು, ಉಚ್ಛಿಷ್ಟನಾದವನು ಗೋವುಗಳನ್ನು ಬ್ರಾಹ್ಮಣರನ್ನು, ಅಗ್ನಿಯನ್ನು ಮುಟ್ಟಬಾರದು. ಅನ್ನವನ್ನು ದೇವಪ್ರತಿಮೆಯನ್ನು ಕಾಲಿನಿಂದ ಮುಟ್ಟಬಾರದು. ಅಶುದ್ಧನಾಗಿದ್ದಾಗ ಅಗ್ನಿಯಲ್ಲಿ ಅನುಷ್ಠಾನವನ್ನು ಮಾಡಬಾರದು. ಋಷಿಗಳ ಕುರಿತು ಮಾತನಾಡಬಾರದು. ಅಗಾಧವನ್ನು ನೀರಿನಲ್ಲಿ ಪ್ರವೇಶಿಸಬಾರದು. ಒಬ್ಬನೇ ಅಗ್ನಿಯನ್ನು ಧರಿಸಬಾರದು (ಹಿಡಿದು ತರಬಾರದು?) ನೀರನ್ನು ಎಡಗೈಯಿಂದ ತೆಗೆದುಕೊಂಡು ಕುಡಿಯಬಾರದು. ಬಾಯಿಯನ್ನೇ ನೀರಿಗೆ ಹಚ್ಚಿ ಕುಡಿಯಬಾರದು ಆಚಮನ ಮಾಡದೇ ನೀರನ್ನು ದಾಟಬಾರದು. ನೀರಿನಲ್ಲಿ ರೇತಸ್ಸನ್ನು ವಿಸರ್ಜಿಸಬಾರದು. ಅಮೇಧ್ಯದ ಲೇಪವನ್ನು ಹೊಂದಿದ ವಸ್ತುಗಳನ್ನು ಕೆಂಪು ವಸ್ತುಗಳನ್ನು, ವಿಷಗಳನ್ನು ದಾಟಬಾರದು. ಹರಿಯುತ್ತಿರುವ ವಸ್ತುಗಳನ್ನು ದಾಟಬಾರದು. ನೀರಿನಲ್ಲಿ ಮೈಥುನವನ್ನು ಮಾಡಬಾರದು. ದಾರಿಯ ಪಕ್ಕದಲ್ಲಿ ಬೆಳೆದಿರುವ ಮರಗಳನ್ನು ಕಡಿಯಬಾರದು, ನೀರಿನಲ್ಲಿ ಉಗುಳಬಾರದು. ಎಲುಬು, ಕಪಾಲ, ಕೇಶ, ಮುಳ್ಳು, ಉರಿಯುತ್ತಿರುವ ಕೆಂಡ ಮತ್ತು ಒಣಗಿದ ಸೆಗಣಿ- ಇವುಗಳ ಮೇಲೆ ನಿಲ್ಲಬಾರದು.

ಅಗ್ನಿಯನ್ನು ದಾಟಬಾರದು. ಕೆಳಗೆ ಇಡಬಾರದು. ಪಾದದ ಬಳಿ ಇಡಬಾರದು. ಬಾಯಿಂದ ಊದಬಾರದು, ಬಾವಿಯಲ್ಲಿ ಇಳಿಯಬಾರದು. ಅಶುಚಿಯಾಗಿದ್ದಾಗ ಬಾವಿಯನ್ನು ನೋಡಬಾರದು. ಅಗ್ನಿಯಲ್ಲಿ ಅಗ್ನಿಯನ್ನು ಎಸೆಯಬಾರದು. ನೀರನ್ನು ಸುರಿದು ಬೆಂಕಿಯನ್ನು ಆರಿಸಬಾರದು. ಮಿತ್ರನ ಮರಣವಾರ್ತೆಯನ್ನು ತಾನೇ ಇತರರಿಗೆ ತಿಳಿಸಬಾರದು.

ಬ್ರಾಹ್ಮಣನು ಯಾವ ಪದಾರ್ಥವನ್ನು ಮಾಡಬಾರದು? ಬಾಯಿಯ ಗಾಳಿಯಿಂದ ಬೆಂಕಿಯನ್ನು ಜ್ವಲಿಸುವಂತೆ ಮಾಡಬಾರದು. ಕೊಟ್ಟ ಮಾತನ್ನು ತಪ್ಪಬಾರದು. ಸರ್ಪಗಳನ್ನು, ಪಕ್ಷಿಗಳನ್ನು, ಪಶುಗಳನ್ನು ಪರಸ್ಪರ ಕಲಹಕ್ಕೆ, ಸ್ಪರ್ಧೆಗೆ ಹಚ್ಚಬಾರದು. ಜಲಪಾನ, ಗಮನ ಮೊದಲಾದವುಗಳಿಂದ ಪರರಿಗೆ ಬಾಧೆಯನ್ನು ಮಾಡಬಾರದು. ಬಡಗಿಗಳಿಂದ ಕೆಲಸವನ್ನು ಮಾಡಿಸಿಕೊಂಡು ಅವರಿಗೆ ಸಂಭಾವನೆಯನ್ನು ಕೊಡದೆ ಬಿಟ್ಟು ಬಿಡಬಾರದು. ಬೇಡುವವರು ಬರುತ್ತಾರೆಂಬ ಕಾರಣದಿಂದ ಬೆಳಗ್ಗೆ ಸಾಯಂಕಾಲ ಮನೆಯ ಬಾಗಿಲನ್ನು ಮುಚ್ಚಬಾರದು. ಎದ್ದುಕಾಣುವಂತೆ ಗಂಧ, ಮಾಲೆಗಳನ್ನು ಧರಿಸಬಾರದು. ಹೆಂಡತಿಯ ಜೊತೆ ಊಟವನ್ನು ಮಾಡಬಾರದು. ಜಗಳವಾಡುತ್ತಾ ವಾದವನ್ನು ಮಾಡಬಾರದು. ದ್ವಾರವಲ್ಲದ ಸ್ಥಳದಿಂದ ಪ್ರವೇಶಿಸಬಾರದು. ಬ್ರಾಹ್ಮಣನು ತಿನ್ನುವಾಗ, ಜಪವನ್ನು ಮಾಡುವಾಗ, ನಗುವಾಗ ನಿಂತುಕೊಳ್ಳಬಾರದು. ತನ್ನ ಅಗ್ನಿಯನ್ನು ಕೈಯಿಂದ ಮುಟ್ಟಬಾರದು. ನೀರಿನಲ್ಲಿ ಬಹಳ ಹೊತ್ತು ಇರಬಾರದು.

ಅಗ್ನಿಯನ್ನು ಪಾರ್ಶ್ವಭಾಗದಿಂದ ಪ್ರಜ್ವಲಿಸಬಾರದು. ಮೊರದಿಂದ ಮತ್ತು ಕೈಯಿಂದಲೂ ಪ್ರಜ್ವಲಿಸಬಾರದು. ಅಗ್ನಿಯು ಬಾಯಿಂದ ಹುಟ್ಟಿರುವುದರಿಂದ ಬಾಯಿಂದಲೇ ಅದನ್ನು ಉರಿಸಬೇಕು. ಪರಸ್ತ್ರೀಯನ್ನು ಮಾತನಾಡಿಸಬಾರದು. ಯಾಗ ಮಾಡಲು ಅನರ್ಹರಿಗೆ ಯಾಗವನ್ನು ಮಾಡಿಸಬಾರದು. ಒಬ್ಬನೇ ಸಭೆಗೆ ಹೋಗಬಾರದು. ವಿಪ್ರರ ಸಮೂಹದಲ್ಲಿ ಸೇರಬಾರದು.

ದೇವಾಲಯಕ್ಕೆ ಅಪ್ರದಕ್ಷಿಣೆಯಿಂದ ಹೋಗಬಾರದು. ವಸ್ತ್ರದಿಂದ ಬೀಸಬಾರದು. ದೇವಾಲಯದಲ್ಲಿ ನಿದ್ರಿಸಬಾರದು. ಒಬ್ಬನೇ ದಾರಿಯಲ್ಲಿ ಹೋಗುತ್ತಿರಬಾರದು. ಅಧಾರ್ಮಿಕ ಜನರೊಡನೆ ಸಂಚರಿಸಬಾರದು. ವ್ಯಾಧಿಗ್ರಸ್ತರ ಜೊತೆ, ಶೂದ್ರರ ಜೊತೆ, ಪತಿತರ ಜೊತೆ ಮಾರ್ಗದಲ್ಲಿ ಸಂಚರಿಸಬಾರದು. ಚಪ್ಪಲಿ ಧರಿಸದೆ ಸಂಚರಿಸಬಾರದು. ನೀರು ಮೊದಲಾದ ಸೌಕರ್ಯಗಳಿಲ್ಲದೆ ಸಂಚರಿಸಬಾರದು. ರಾತ್ರಿಯಲ್ಲಿ ಶತ್ರುವಿನ ಜೊತೆ ಸಂಚರಿಸಬಾರದು. ಅಗ್ನಿ, ಗೋವು, ಬ್ರಾಹ್ಮಣರು ಮೊದಲಾದವರ ಮಧ್ಯದಲ್ಲಿ ಹೋಗಬಾರದು.

ವಸತಿಯನ್ನು ಮಾಡಿಕೊಂಡಿರುವ ವನಿತೆಯನ್ನು ಅತಿಕ್ರಮಿಸಬಾರದು. ಯೋಗಿಗಳನ್ನು, ಸಿದ್ಧರನ್ನು, ಗುಣವಂತರನ್ನು ಯತಿಗಳನ್ನು ನಿಂದಿಸಬಾರದು. ದೇವಮಂದಿರದಲ್ಲಿ, ದೇವತೆಗಳ ಸನ್ನಿಧಿಯಲ್ಲಿ ಗೋ-ಬ್ರಾಹ್ಮಣರ ನೆರಳನ್ನು ಸ್ವಚ್ಛಂದವಾಗಿ ದಾಟಬಾರದು. ಪತಿತರು, ರೋಗಿಗಳು ತನ್ನ ನೆರಳನ್ನು ದಾಟಲು ಬಿಡಬಾರದು. ಅಂಗಾರ, ಭಸ್ಮ, ಕೇಶ ಮೊದಲಾದವುಗಳ ಮೇಲೆ ನಿಲ್ಲಬಾರದು. ಪರಕೆ(ಕಸಬರಿಕೆ)ಯ ಧೂಳನ್ನು ಮೈಗೆ ಮುಟ್ಟಿಸಿಕೊಳ್ಳಬಾರದು. ಸ್ನಾನವಸ್ತ್ರದ ನೀರನ್ನು ಉಪಯೋಗಿಸಬಾರದು. ಮಡಕೆಯ ನೀರನ್ನು ಉಪಯೋಗಿಸಬಾರದು. ತಿನ್ನಬಾರದೆಂದು ನಿಷಿದ್ಧವಾದ ಪದಾರ್ಥಗಳನ್ನು ತಿನ್ನಬಾರದು. ಕುಡಿಯಬಾರದೆಂದು ನಿಷಿದ್ಧವಾದ ದ್ರವವನ್ನು ಕುಡಿಯಬಾರದು.

* * *

## ವಿಪ್ರನು ತಿನ್ನಬಾರದ ಆಹಾರ

**ಅಧ್ಯಾಯ-೭೦**

**ವ್ಯಾಸ ಉವಾಚ :**

ವಿಪ್ರನು ಮೋಹದಿಂದ ಅಥವಾ ಬೇರೆ ಯಾವುದೇ ಕಾರಣದಿಂದ ಶೂದ್ರನ ಅನ್ನವನ್ನು ತಿನ್ನಬಾರದು. ಆಪತ್ಕಾಲವಿಲ್ಲದಿರುವಾಗ ಶೂದ್ರಾನ್ನವನ್ನು ತಿಂದವನು ಶೂದ್ರಜನ್ಮವನ್ನು ಹೊಂದುತ್ತಾನೆ.

ಯಾವ ದ್ವಿಜನು ಆರು ತಿಂಗಳು ಶೂದ್ರನ ನಿಂದಿತನಾದ ಅನ್ನವನ್ನು ತಿನ್ನುತ್ತಾನೋ ಅವನು ಬದುಕಿರುವಾಗಲೇ ಶೂದ್ರನಾಗುತ್ತಾನೆ. ಮರಣಾನಂತರ ಶೂದ್ರನಾಗಿ ಹುಟ್ಟುತ್ತಾನೆ. ಬ್ರಾಹ್ಮಣ-ಕ್ಷತ್ರಿಯ, ವೈಶ್ಯ-ಶೂದ್ರ -ಇವರಲ್ಲಿ ಯಾರ ಅನ್ನವು ಮರಣ ಕಾಲದಲ್ಲಿ ಹೊಟ್ಟೆಯಲ್ಲಿ ಇರುವುದೋ ಆ ವರ್ಣದವನಾಗಿ ಮರಣಾನಂತರ ಹುಟ್ಟುತ್ತಾನೆ. ನಟ, ನರ್ತಕ, ಬಡಗಿ, ಚರ್ಮಕಾರ, ಗಣಕ, ವೇಶ್ಯೆ -ಇವರ ಅನ್ನವನ್ನು ಬಿಡಬೇಕು. ಕುಂಬಾರ, ಅಗಸ, ಕಳ್ಳ, ಧ್ವಜಕಾರ, ಗಾಯಕ, ಲೋಹಕಾರ ಮತ್ತು ಸೂತಕವುಳ್ಳವನು -ಇವರ ಅನ್ನವನ್ನು ತಿನ್ನಬಾರದು. ಕುಂಬಾರ, ಚಿತ್ರಕಾರ, ಬಡ್ಡಿಯನ್ನು ತೆಗೆದುಕೊಳ್ಳುವವ, ಪತಿತ, ಅಕ್ಕಸಾಲಿಗ, ನಟ, ವ್ಯಾಧ, ಬಂಧನಕ್ಕೊಳಗಾದವ, ಆತುರ -ಇವರ ಅನ್ನವನ್ನು ತಿನ್ನಬಾರದು. ವೈದ್ಯ, ವ್ಯಭಿಚಾರಿಣಿ, ದಂಡವಿಧಿಸುವ ನ್ಯಾಯಾಧೀಶ, ಕಳ್ಳ, ನಾಸ್ತಿಕ, ದೇವತಾನಿಂದಕ -ಇವರ ಅನ್ನವನ್ನು ತಿನ್ನಬಾರದು.

ಸೋಮಲತೆಯನ್ನು, ರಸವನ್ನೂ ಮಾರುವವನ ಅನ್ನವನ್ನು ತಿನ್ನಬಾರದು. ಸ್ವಪಾಕನ (*ನಾಯಿಯನ್ನು ಬೇಯಿಸುವವನ*) ಅನ್ನವನ್ನು ತಿನ್ನಲೇಬಾರದು. ಹೆಂಡತಿಗೆ ಅಧೀನ-ವಾಗಿರುವವನ ಅನ್ನವನ್ನು ಮತ್ತು ಯಾರ ಮನೆಯಲ್ಲಿ ಉಪಪತಿ ಇರುತ್ತಾನೆ ಅವನ ಅನ್ನವನ್ನು ತಿನ್ನಬಾರದು. ಉಚ್ಛಿಷ್ಟನಾದವನ (*ಗರ್ವಿತನಾದವನ*) ಲೋಭಿಯ, ಉಚ್ಛಿಷ್ಟಾನ್ನ-ವನ್ನು ಉಣ್ಣುವವನ, ಪಂಕ್ತಿಗೆ ಅನರ್ಹನಾದವನ ಅನ್ನವನ್ನು, ಸಮೂಹದ (*ನಾನಾ ಜನರಿಂದ ಧನ-ಧಾನ್ಯವನ್ನು ಸಂಗ್ರಹಿಸಿ ಅನ್ನದಾನ ಮಾಡುವ ಸಂಘ-ಸಂಸ್ಥೆಗಳ*) ಅನ್ನವನ್ನು, ಶಸ್ತ್ರದಿಂದ ಜೀವನವನ್ನು ನಡೆಸುವವನ ಅನ್ನವನ್ನು ತಿನ್ನಬಾರದು. ನಪುಂಸಕ, ಸನ್ಯಾಸಿ, ಮತ್ತ, ಉನ್ಮತ್ತ, ಭೀತ, ಅಳುವವ - ಇವರ ಅನ್ನವನ್ನು ತಿನ್ನಬಾರದು. ಬ್ರಹ್ಮದ್ವೇಷಿಯ, ಪಾಪದಲ್ಲಿ ಅಭಿರುಚಿವುಳ್ಳವನ, ಸೂತಕದಲ್ಲಿರುವವನ, ದೇವರಿಗೆ ಸಮರ್ಪಣೆ ಮಾಡದವನ ಅನ್ನವನ್ನೂ ತಿನ್ನಬಾರದು. ಶ್ರಾದ್ಧ ಭೋಜನವನ್ನು ಮಾಡಬಾರದು. ಸಂತತಿಯಿಲ್ಲದ ಸ್ತ್ರೀಯರ ಅನ್ನವನ್ನು ಕೃತಘ್ನನ ಅನ್ನವನ್ನೂ, ಶಿಲ್ಪಿಯ ಅನ್ನವನ್ನು ತಿನ್ನಬಾರದು. ಶಸ್ತ್ರವನ್ನು ಮಾರುವವನ ಅನ್ನವನ್ನು ತಿನ್ನಲೇಬಾರದು.

ಜೂಜುಕೋರನ ಅನ್ನವನ್ನು, ಘಾತುಕನ ಅನ್ನವನ್ನು ವೈದ್ಯನ ಅನ್ನವನ್ನು, ಜನನೇಂದ್ರಿಯ ರೋಗವುಳ್ಳವನ ಅನ್ನವನ್ನು, ಅಣ್ಣನ ಮದುವೆಯಾಗದೆ ಮದುವೆಯಾಗಿರುವ ತಮ್ಮನ ಅನ್ನವನ್ನು ತಿನ್ನಬಾರದು. ಎರಡನೆ ಸಲ ಮದುವೆಯಾಗಿರುವ ಸ್ತ್ರೀಯ ಅಂತಹವಳ ಪತಿಯ ಅನ್ನವನ್ನು ತಿನ್ನಬಾರದು. ಅವಮಾನ, ತಿರಸ್ಕಾರ, ರೋಷ, ಗರ್ವ ಮೂಲಕವಾದ ಅನ್ನವನ್ನು ತಿನ್ನಬಾರದು. ಗುರುಗಳ ಅನ್ನವನ್ನು ಅದು ಸಂಸ್ಕಾರ ರಹಿತವಾಗಿದ್ದರೆ, ತಿನ್ನಬಾರದು, ಮನುಷ್ಯನ ಎಲ್ಲ ಕೆಟ್ಟ ನಡವಳಿಕೆಯ ಮೂಲ ಅನ್ನ. ಯಾರು ಯಾರ ಅನ್ನವನ್ನು ತಿನ್ನುತ್ತಾನೋ ಅವನು ಅವನ ಪಾಪವನ್ನೇ ತಿನ್ನುತ್ತಾನೆ. ಪೀಡಾಗ್ರಸ್ತನಾದವನ, ಕುಲಮಿತ್ರನ (?), ತನ್ನ ಗೋವು-ಗಳನ್ನೇ ಕಾಯುವವನ, ಕ್ಷೌರಿಕನ ಅನ್ನವನ್ನು ತಿನ್ನಬಾರದು. ನಟ, ಕುಂಬಾರ, ಹೊಲದಲ್ಲಿ

ಕೆಲಸ ಮಾಡುವ ರೈತ ಇವರುಗಳಿಂದ ಪಾಯಸ, ಎಣ್ಣೆ-ತುಪ್ಪಗಳಿಂದ ತಯಾರಿಸಲ್ಪಟ್ಟ ಪದಾರ್ಥ ಇವುಗಳನ್ನು ಸ್ವೀಕರಿಸಿ ಶೂದ್ರರಿಗೆ ಕೊಡಬೇಕು. ಹಾಲು, ಮೊಸರು ತುಪ್ಪ, ಹಿಟ್ಟು- ಇವುಗಳನ್ನು ತಾನೇ ತೆಗೆದುಕೊಳ್ಳಬಹುದು. ಹಿಂಡಿ, ಎಣ್ಣೆಗಳನ್ನು ಶೂದ್ರನಿಂದಲೂ ತೆಗೆದುಕೊಳ್ಳಬಹುದು. ಬದನೆಕಾಯಿ, ಜಾಲಿಕ, ಶಾಕ, ಕುಸುಂಭ, ಅಶ್ಮಾಂತಕ, ಈರುಳ್ಳಿ, ಬೆಳ್ಳುಳ್ಳಿ, ಸೂಕ್ತ, ನಿರ್ಯಾಸ, ಛತ್ರಾಕ, ವಿಡ್ವರಾಹ, ಶೇಲ, ಪಿಯೂಷ, ವಿಲಯ, ಸುಮುಖ, ಕವಕ ಗೃಂಜನ, ಸಿಂಶುಕ, ಕುಕ್ಕುಟ - ಇವುಗಳನ್ನು ತಿನ್ನಬಾರದು. ಉದುಂಬರ ( ಅತ್ತಿಹಣ್ಣು) ಅಲಾಬುಗಳನ್ನು ತಿನ್ನುವ ದ್ವಿಜನು ಪತಿತನಾಗುತ್ತಾನೆ. ಕೃಶರ, ಸಂಯಾವ, ಪಾಯಸ, ಅಪೂಪಗಳನ್ನು ವ್ಯರ್ಥನಾಗಿ ( ಚಾಪಲ್ಯದಿಂದ) ತಿನ್ನಬಾರದು. ಸಂಸ್ಕರಿಸದ ಮಾಂಸವನ್ನು, ದೇವತೆಗೆ ಅರ್ಪಿಸಲು ಮೀಸ-ಲಾಗಿರುವ ಸಿದ್ಧವಾಗಿರುವ ಅನ್ನವನ್ನು, ದೇವಸ್ವಾಮಿತ್ವಕ್ಕೆ ಒಳಪಟ್ಟು ಅನ್ನವನ್ನು, ಹವಿಸ್ಸನ್ನು, ಯವಾಗುವನ್ನು, ಮಾತುಲಿಂಗವನ್ನು, ಸಂಸ್ಕರಿಸದ ಮೀನನ್ನು ತಿನ್ನಬಾರದು.

ನೀಪ, ಕಪಿತ್ಥ, ಪ್ಲಕ್ಷಗಳನ್ನು ಪ್ರಯತ್ನ ಪಟ್ಟು ಬಿಡಬೇಕು. ಎಣ್ಣೆಯನ್ನು ತೆಗೆದನಂತರ ಉಳಿಯುವ ಹಿಂಡಿಯನ್ನು ತಿನ್ನಬಾರದು. ರಾತ್ರಿಯ ಹೊತ್ತು ಎಳ್ಳಿನ ಸಂಬಂಧವಿರುವ ಪದಾರ್ಥಗಳನ್ನು, ಮೊಸರನ್ನು ಪ್ರಯತ್ನಪಟ್ಟು ಬಿಡಬೇಕು. ಮಜ್ಜಿಗೆಗೆ ಹಾಲನ್ನು ಬೆರೆಸಿ ತಿನ್ನಬಾರದು. ಬೀಜಗಳನ್ನು ಪ್ರಧಾನ ಆಹಾರವಾಗಿ ತಿನ್ನಬಾರದು. ಕೆಟ್ಟರೀತಿಯಿಂದ ತಯಾರಿಸಿದ, ಕೆಟ್ಟ ಮನಸ್ಸಿನಿಂದ ತಯಾರಿಸಿದ, ದುಷ್ಟರ ಸಹವಾಸಕೊಳಗಾದ ಆಹಾರವನ್ನು ತಿನ್ನಬಾರದು.

'ಕ್ರಿಯಾದುಷ್ಟಂ ಭಾವದುಷ್ಟಮಸತ್ಸಂಗಂ ವಿವರ್ಜಯೇತ್'

ಕೂದಲು ಸೇರಿರುವ, ಕೀಟವು ಸೇರಿರುವ ಅನ್ನವನ್ನು ತಿನ್ನಬಾರದು. ನಾಯಿ ಮೂಸಿದ್ದನ್ನು, ಎರಡನೆ ಸಲ ಬೇಯಿಸಿದ್ದನ್ನು, ಚಂಡಾಲನು ನೋಡಿದ್ದನ್ನು, ರಜಸ್ವಲೆಯು ನೋಡಿದ್ದನ್ನು ಪತಿತರು ನೋಡಿದ್ದನ್ನು, ಗೋವು ಮೂಸಿದ್ದನ್ನು ತಿನ್ನಬಾರದು. ದೇವರಿಗೆ ಅರ್ಪಿಸಲ್ಪಡದ ಆಹಾರವನ್ನು ತಿನ್ನಬಾರದು. ಹಳಸಿದ ಆಹಾರವನ್ನು ತಿನ್ನಬಾರದು. ಪ್ರಯಾಣದಲ್ಲಿ ಜೊತೆಗೆ ಇಟ್ಟುಕೊಂಡು ಆಹಾರವನ್ನು ತಿನ್ನಬಾರದು. ಕಾಗೆ, ಕೋಳಿಗಳು ಮುಟ್ಟಿದ್ದನ್ನು, ಕ್ರಿಮಿಗಳಿರುವ ಆಹಾರವನ್ನು ತಿನ್ನಬಾರದು. ಮನುಷ್ಯರು ಆಘ್ರಾಣಿಸಿದ, ಕುಷ್ಠರೋಗಿಯು ಮುಟ್ಟಿದ, ರಜಸ್ವಲೆಯು ಕೊಟ್ಟ, ವ್ಯಾಭಿಚಾರಿಣಿಯು ಕೊಟ್ಟ, ಕೋಪದಿಂದ ಕೊಟ್ಟ ಆಹಾರವನ್ನು ತಿನ್ನಬಾರದು,. ಕೊಳಕುಬಟ್ಟೆಯನ್ನು ಧರಿಸಿದವನು ಕೊಡುವ, ಬಡಿಸುವ, ಪರಸ್ತ್ರೀಯು ಬಡಿಸುವ ಆಹಾರವನ್ನು ತಿನ್ನಬಾರದು.

ಕರು ಇಲ್ಲದ ಹಸುವಿನ ಹಾಲನ್ನು, ಒಂಟಿಯ ಹಾಲನ್ನು, ಪ್ರಸವಿಸಿ ಹತ್ತುದಿನ ವಾಸದ ಹಸುವಿನ ಹಾಲನ್ನು ಉಪಯೋಗಿಸಬಾರದು. ಕುರಿಯ ಹಾಲನ್ನು, ಗರ್ಭಿಣೀ ಹಸುವಿನ ಹಾಲನ್ನು ಕುಡಿಯಬಾರದು. ಕೊಕ್ಕರೆ, ಹಂಸ, ಚಾತಕ, ಕಲವಿಂಕ, ಗಿಣಿ, ಕುರರ, ವಲ್ಲೂರ,

ಜಾಲಪಾದ, ಕೋಗಿಲೆ, ಚಾಷ, ಖಂಜರೀಟ, ಗಿಡುಗ, ಹದ್ದು, ಗೂಬೆ, ಚಕ್ರವಾಕ, ಭಾಸ, ಪಾರಾವತ, ಕಪೋತ, ಟಿಟ್ಟಿಭ, ಗ್ರಾಮಕೋಳಿ - ಇವುಗಳನ್ನು ತಿನ್ನಬಾರದು. ಸಿಂಹ, ಹುಲಿ, ಬೆಕ್ಕು, ನಾಯಿ, ಕೋತಿ, ಕತ್ತೆ - ಇವುಗಳನ್ನು ತಿನ್ನಬಾರದು. ವನಚಾರಿಗಳಾದ ಮೃಗಗಳು ಮುಟ್ಟಿದ್ದನ್ನು, ಕ್ರಿಮಿಗಳಿರುವ ಆಹಾರವನ್ನು ತಿನ್ನಬಾರದು.

ಜಲಚರ, ಸ್ಥಲಚರ ಪ್ರಾಣಿಗಳನ್ನು ಯಾವುದನ್ನೂ ತಿನ್ನಬಾರದು ಎಂದು ಶಾಸ್ತ್ರಗಳ ನಿರ್ಣಯ. ಮೊಸಳೆ, ಆಮೆ, ಮೊಲ, ಮುಳ್ಳುಹಂದಿ, ಸಲ್ಲಕೀ -ಈ ಐದು ಉಗುರಿನ ಪ್ರಾಣಿಗಳನ್ನು ತಿನ್ನಬಹುದು ಎಂದು ಮನುಪ್ರಜಾಪತಿಯ ಅಭಿಪ್ರಾಯ. ಬಾಣದ ಮುಳ್ಳು ಚುಚ್ಚಿದ ಮೀನುಗಳನ್ನು ತಿನ್ನಬಹುದು. ಜಿಂಕೆಯ ಮಾಂಸವನ್ನು ತಿನ್ನಬಹುದು. ಇವುಗಳನ್ನು ದೇವ-ಬ್ರಾಹ್ಮಣರಿಗೆ ನಿವೇದಿಸಿ ತಿನ್ನಬೇಕು. ನಿವೇದಿಸದೆ ತಿನ್ನಬಾರದು. ನವಿಲು, ತಿತ್ತಿರಿ, ಕಪಿಂಜಲ ಎಂಬ ಹಕ್ಕಿಗಳನ್ನು ತಿನ್ನಬಹುದು. ರಾಜೀವ, ಸಿಹ್ಮತುಂಡ, ಪಾಠೀನ ರೋಹಿತ -ಈ ಮೀನುಗಳನ್ನು ತಿನ್ನಬಹುದು. ಬ್ರಾಹ್ಮಣರು ಬಯಸಿದಾಗ ಮಾತ್ರ ಇವುಗಳನ್ನು ದೇವರಿಗೆ ಸಮರ್ಪಿಸಿ ತಿನ್ನಬಹುದು. ಪ್ರಾಣಹಾನಿಯಾಗುವಂತಹ ಆಪತ್ಕಾಲದಲ್ಲಿ ಮಾಂಸವನ್ನು ತಿನ್ನಬಹುದು. ಯಜ್ಞದಲ್ಲಿ ಆಹುತಿ ನೀಡಿ ಉಳಿದ ಮಾಂಸವನ್ನು ತಿಂದರೆ ತಪ್ಪಿಲ್ಲ. ಔಷಧಿಗಾಗಿ ಮಾಂಸವನ್ನು ಉಪಯೋಗಿಸುವಾಗ ಮತ್ತು ಅಶಕ್ತನಾದಾಗ ಶಾಸ್ತ್ರೀಯ ವಿಧಿಯನ್ನು ಅನುಸರಿಸಬೇಕಿಲ್ಲ. ಶ್ರಾದ್ಧಭೋಜನಕ್ಕೆ ಅಥವಾ ದೇವತಾರಾಧನೆಯ ನಿಮಿತ್ತ ಭೋಜನಕ್ಕೆ ಆಮಂತ್ರಿತನಾದವನು ಮಾಂಸವನ್ನು ತಿಂದರೆ ಪಶುವಿನಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷ ನರಕದಲ್ಲಿ ಬೀಳುತ್ತಾನೆ. ಬ್ರಾಹ್ಮಣರು ಮದ್ಯವನ್ನು ಕುಡಿಯಬಾರದು. ಮುಟ್ಟಬಾರದು. ಅದರ ಬಗ್ಗೆ ಆಲೋಚಿಸಬಾರದು. ಎಲ್ಲ ಪ್ರಯತ್ನಗಳಿಂದ ಮದ್ಯವನ್ನು ಬಿಡಬೇಕು. ಮದ್ಯಪಾನ ಮಾಡಿದವನು ಪತಿತ. ಅವನು ಬ್ರಾಹ್ಮಣರಿಂದ ಮಾತನಾಡಿಸಲ್ಪಡಲು ಅನರ್ಹ. ತಿನ್ನಬಾರದ್ದನ್ನು ತಿಂದ, ಕುಡಿಯಬಾರದ್ದನ್ನು ಕುಡಿದ ದ್ವಿಜನು ಯಾವ ಕರ್ಮಕ್ಕೂ ಅರ್ಹನಲ್ಲ. ಆದ್ದರಿಂದ ಪ್ರಯತ್ನಪಟ್ಟು ಅಭಕ್ಷ್ಯಗಳಿಂದ, ಅಪೇಯಗಳಿಂದ ದೂರವಿರಬೇಕು. ಹೀಗೆ ದೂರವಿರದವನು ರೌರವ ನರಕಕ್ಕೆ ಹೋಗುತ್ತಾನೆ.

* * *

## ಅಧ್ಯಾಯ-೭೧

**ಋಷಯ ಊಚು :**

ಮಹಾಮುನಿಗಳೇ! ಸಂಸಾರಬಂಧನದಿಂದ ಬಿಡುಗಡೆಯನ್ನು ಪಡೆಯಲು ಉಪಯೋಗಿಯಾಗುವ, ಬ್ರಾಹ್ಮಣನು ಪ್ರತಿನಿತ್ಯವೂ ತಪ್ಪದೇ ಮಾಡಬೇಕಾದ ಕಾರ್ಯಗಳನ್ನು ದಯವಿಟ್ಟು ಸಮಗ್ರವಾಗಿ ತಿಳಿಸಿರಿ.

**ವ್ಯಾಸ ಉವಾಚ :**

ಬ್ರಾಹ್ಮಣನು ಪ್ರತಿದಿನವೂ ಆಚರಿಸಬೇಕಾದ ಧರ್ಮಗಳನ್ನು ತಿಳಿಸುವೆ. ನೀವೆಲ್ಲರೂ ಏಕಾಗ್ರತೆಯಿಂದ ಕೇಳಿರಿ.

ಬ್ರಾಹ್ಮೀಮುಹೂರ್ತದಲ್ಲಿ ಎದ್ದು ಧರ್ಮ ಮತ್ತು ಅರ್ಥವನ್ನು ಚಿಂತಿಸಬೇಕು. ಇವುಗಳಿಂದ ಸಂಭವಿಸುವ ಕಾಯಕ್ಲೇಶವನ್ನೂ ಚಿಂತಿಸಬೇಕು. ಜಗದೊಡೆಯನ ಧ್ಯಾನವನ್ನು ಮಾಡಬೇಕು. ವಿಧಿಗೆ ಅನುಗುಣವಾಗಿ ಶೌಚ ಮೊದಲಾದವುಗಳನ್ನು ಮುಗಿಸಿ, ಇತರ ಅವಶ್ಯ ಕೆಲಸಗಳನ್ನು ಮಾಡಿ ಉಷಃಕಾಲದಲ್ಲಿ ಶುದ್ಧವಾದ ನದಿಗಳಲ್ಲಿ ಪ್ರಾತಃಸ್ನಾನವನ್ನು ಮಾಡಬೇಕು. ಪ್ರಾತಃಸ್ನಾನವು ದೃಷ್ಟಫಲವನ್ನು ಮತ್ತು ಅದೃಷ್ಟಫಲವನ್ನು ಉಂಟು-ಮಾಡುವುದು ಎಂದು ಪ್ರಾಜ್ಞರು ಹೇಳುತ್ತಾರೆ. ಪ್ರಾತಃಸ್ನಾನದಿಂದಲೇ ಋಷಿಗಳಿಗೆ ಋಷಿತ್ವವು ಸಿದ್ಧವಾಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ. ಮಲಗಿದವನ ಬಾಯಿಂದ ಲಾಲಾರಸವು ಹರಿಯುತ್ತದೆ. ಆದ್ದರಿಂದ ಸ್ನಾನವನ್ನು ಮಾಡದೆ ಯಾವ ಅನುಷ್ಠಾನವನ್ನೂ ಮಾಡಬಾರದು. ಶರೀರದ ದ್ವಾರಗಳಿಂದ ಹರಿದಿರುವ, ಸ್ರವಿಸಿರುವ ನೀರು, ದುಃಸ್ವಪ್ನ, ಕೆಟ್ಟ ಆಲೋಚನೆ-ಇವುಗಳಿಂದ ಉಂಟಾದ ಅಮಂಗಳವನ್ನು (ತಾಮಸ, ರಾಜಸ ಉದ್ರೇಕವನ್ನು) ಪ್ರಾತಃ-ಸ್ನಾನವು ಪರಿಹರಿಸುತ್ತದೆ. ವ್ಯಕ್ತಿಯು ಶುದ್ಧನಾಗುತ್ತಾನೆ. ಆದ್ದರಿಂದ ಪ್ರಾತಃಸ್ನಾನವಿಲ್ಲದೆ ಯಾವ ಕರ್ಮಗಳನ್ನೂ ಮಾಡಬಾರದು. ಹೋಮವನ್ನು, ಜಪಗಳನ್ನು ಮಾಡಲು ವಿಶೇಷವಾಗಿ ಸ್ನಾನವನ್ನು ಮಾಡಬೇಕು.

**ಅಶಕ್ತರ ಸ್ನಾನ ಕ್ರಮ :**

ತಲೆಯ ಮೇಲೆ ಸ್ನಾನಮಾಡಲು ತೊಂದರೆಯಿದ್ದಾಗ ಹೆಗಲಿನಿಂದಲೇ ಸ್ನಾನವನ್ನು ಮಾಡಬಹುದು. ಒದ್ದೆ ಬಟ್ಟೆಯಿಂದ ಶರೀರವನ್ನು ಒರೆಸಿಕೊಳ್ಳುವುದೂ ಸ್ನಾನವೇ. ಇದಕ್ಕೆ ಕಾಪಿಲಸ್ನಾನ ಎಂದು ಹೆಸರು. ಇದಲ್ಲದೆ ಬ್ರಾಹ್ಮ, ಆಗ್ನೇಯ, ವಾಯವ್ಯ, ದಿವ್ಯ, ವಾರುಣ ಮತ್ತು ಯೌಗಿಕ ಎಂಬ ಆರುವಿಧ ಸ್ನಾನಗಳನ್ನು ಅಶಕ್ತರಿಗಾಗಿ ಪ್ರಾಜ್ಞರು ಹೇಳಿದ್ದಾರೆ.

ಮಂತ್ರವನ್ನು ಹೇಳುತ್ತಾ ದರ್ಭೆಗಳಿಂದ ನೀರಿನ ಹನಿಗಳನ್ನು ಶರೀರಕ್ಕೆ ಪ್ರೋಕ್ಷಿಸುವುದು ಬ್ರಾಹ್ಮಸ್ನಾನ. ಪಾದದಿಂದ ತಲೆಯವರೆಗೆ ಭಸ್ಮದಿಂದ ದೂಲನವು ಭಸ್ಮಸ್ನಾನ. ಗೋಧೂಳಿಯ

ಪ್ರೋಕ್ಷಣವು ವಾಯವ್ಯಸ್ನಾನ. ಬಿಸಿಲು ಇದ್ದಾಗ ಬರುವ ಮಳೆಯಲ್ಲಿ ಸ್ನಾನವು ದಿವ್ಯಸ್ನಾನ. ಅವಗಾಹನವು (ಮುಳುಗುವುದು) ವಾರುಣಸ್ನಾನ. ಧ್ಯಾನಸ್ಥಿತಿಯಲ್ಲಿ ವಿಶ್ವದ ಆಚೆಗಿನ ತತ್ತ್ವದ (ಪರಮಾತ್ಮನ) ಚಿಂತನೆ ಯೌಗಿಕಸ್ನಾನ. ಈ ಚಿಂತನೆಯನ್ನು ಆತ್ಮತೀರ್ಥ ಎಂದು ಬ್ರಾಹ್ಮ-ವಾದಿಗಳು ಪರಿಗಣಿಸಿದ್ದಾರೆ. ಈ ಸ್ನಾನವನ್ನು ಮಾಡುತ್ತಾ ಬಂದಿದ್ದಾರೆ. ಈ ಆತ್ಮತೀರ್ಥದಲ್ಲಿ ಸ್ನಾನವು ಮನಸ್ಸನ್ನು ಶುದ್ಧಗೊಳಿಸುತ್ತದೆ. ಆದ್ದರಿಂದ ಈ ಸ್ನಾನವನ್ನು ಪ್ರತಿದಿನ ಮಾಡಬೇಕು. ಶಕ್ತನಾದವನು ವಾರುಣಸ್ನಾನವನ್ನೇ ಮಾಡಬೇಕು. ಪ್ರಾಯಶ್ಚಿತ್ತ ಮಾಡಿಕೊಳ್ಳುವವರೂ ಕೂಡ ವಾರುಣಸ್ನಾನವನ್ನೇ ಮಾಡಬೇಕು. ಹಲ್ಲನ್ನು ಶುದ್ಧಿಗೊಳಿಸಿ, ಆಚಮನವನ್ನು ಮಾಡಿ ಪ್ರಾತಃಸ್ನಾನವನ್ನು ಮಾಡಬೇಕು. ಹಲ್ಲನ್ನು ಶುದ್ಧಿಗೊಳಿಸುವುದಕ್ಕಾಗಿ ಮಧ್ಯಬೆರಳಿನಷ್ಟು ದಪ್ಪವಾಗಿರುವ, ಹನ್ನೆರಡು ಅಂಗುಲ ಉದ್ದವಾಗಿರುವ, ಸಿಪ್ಪೆಸಹಿತವಾದ ದಂತಕಾಷ್ಠವನ್ನು ಉಪಯೋಗಿಸಬೇಕು. ಈ ಕಾಷ್ಠದ ತುದಿಯಿಂದ ಹಲ್ಲನ್ನು ಶುದ್ಧಿಗೊಳಿಸಬೇಕು. ಅಮೃತಬಳ್ಳಿ, ಮಾಲತೀವೃಕ್ಷ, ಅಪಾಮಾರ್ಗ, ಬಿಲ್ವ, ಕರವೀರ -ಇವುಗಳ ಕಾಷ್ಠವು ಉತ್ತಮ. ನಿಷಿದ್ಧ ದಿನಗಳಲ್ಲಿ ದಂತಕಾಷ್ಠವನ್ನು ಉಪಯೋಗಿಸಬಾರದು. ದಂತಕಾಷ್ಠವನ್ನು ಬೀಳಿಸಬಾರದು. ಹಲ್ಲನ್ನು ಶುದ್ಧಿಗೊಳಿಸಿದನಂತರ ಮುರಿದು ಶುದ್ಧವಾದ ಸ್ಥಳದಲ್ಲಿ ಹಾಕಬೇಕು. ಅನಂತರ ಸ್ನಾನವನ್ನು ಮಾಡಿ ದೇವ, ಋಷಿ, ಪಿತೃಗಳಿಗೆ ತರ್ಪಣವನ್ನು ಕೊಡಬೇಕು.

### ಸಂಧ್ಯಾವಂದನೆ :

ಮಂತ್ರಪೂರ್ವಕವಾಗಿ ಎರಡುಸಲ ಆಚಮನವನ್ನು ಮಾಡಬೇಕು. 'ಆಪೋಹಿಷ್ಠಾ' ಮೊದಲಾದ ಮಂತ್ರಗಳನ್ನು ಪಠಿಸುತ್ತಾ ದರ್ಭೆಗಳಿಂದ ನೀರಿನ ಹನಿಗಳನ್ನು ಪ್ರೋಕ್ಷಿಸಿ-ಕೊಳ್ಳಬೇಕು. ಅನಂತರ 'ಆಪೋಹಿಷ್ಠಾ' ಮೊದಲಾದ ಮಂತ್ರಗಳಿಂದ, ವ್ಯಾಹೃತಿಗಳಿಂದ, ಗಾಯತ್ರಿಯಿಂದ, ವರುಣಮಂತ್ರಗಳಿಂದ ಪ್ರೋಕ್ಷಣೆಯನ್ನು ಮಾಡಿಕೊಳ್ಳಬೇಕು. ಓಂಕಾರ, ವ್ಯಾಹೃತಿ ಮತ್ತು ಗಾಯತ್ರೀ ಮಂತ್ರಗಳನ್ನು ಹೇಳುತ್ತಾ ಸೂರ್ಯನಿಗೆ ಜಲಾಂಜಲಿಯನ್ನು ಕೊಡಬೇಕು. ಅನಂತರ ಪೂರ್ವದಿಕ್ಕಿಗೆ ತುದಿಗಳಿರುವಂತೆ ಹಾಸಲ್ಪಟ್ಟ ದರ್ಭಾಸನದಲ್ಲಿ ಕುಳಿತು, ಮೂರು ಪ್ರಾಣಾಯಾಮಗಳನ್ನು ಮಾಡಿ ಗಾಯತ್ರೀಮಂತ್ರವನ್ನು ಜಪಿಸಬೇಕು. ಈ ಮಂತ್ರಪ್ರತಿಪಾದ್ಯವಾದ ದೇವತೆಯಿಂದಲೇ ಪ್ರಪಂಚದ ಸೃಷ್ಟಿಯಾಗಿದೆ. ಈ ದೇವತೆಗೆ ಮಾಯೆಯ ಬಂಧನವಿಲ್ಲ. ಯಾವುದೇ ಕಲೆಗಳಿಲ್ಲ.

ಸೂರ್ಯಮಂಡಲದಲ್ಲಿರುವ ಈ ದೇವತೆಯನ್ನು ಧ್ಯಾನಿಸಿ ಗಾಯತ್ರೀಮಂತ್ರವನ್ನು ಜಪಿಸಬೇಕು. ಪೂರ್ವದಿಕ್ಕಿಗೆ ಅಭಿಮುಖವಾಗಿ ಕುಳಿತು ಈ ಉಪಾಸನೆಯನ್ನು ಮಾಡಬೇಕು.

### ಸಂಧ್ಯಾವಂದನೆಯನ್ನು ಮಾಡದವನು ಅನರ್ಹ :

ಸಂಧ್ಯಾವಂದನೆಯನ್ನು ಮಾಡದವನು ಅಶುಚಿ. ಅವನಿಗೆ ಯಾವ ಕರ್ಮವನ್ನೂ ಮಾಡಲು ಅರ್ಹತೆಯಿಲ್ಲ. ಅವನು ಮಾಡುವ ಎಲ್ಲ ಕರ್ಮವೂ ನಿಷ್ಫಲ.

## ಸಂಧ್ಯಾವಂದನೆ ಮುಕ್ತಿಗೆ ಸಾಧನ :

ಶಾಸ್ತ್ರವು ವಿಧಿಸಿರುವಂತೆ ಸಂಧ್ಯಾವಂದನೆ ಆಚರಿಸಿದ ಬ್ರಾಹ್ಮಣರು ವೇದಪಾರಂಗತರಾಗಿ, ಭಗವಂತನಲ್ಲಿ ಮನಸ್ಸನ್ನು ಇಡಲು ಸಮರ್ಥರಾಗಿ ಸದ್ಗತಿಯನ್ನು ಹೊಂದಿದರು. ಸಂಧ್ಯಾವಂದನೆಯನ್ನು ಮಾಡದೆ ಬೇರೆ ಧರ್ಮಕಾರ್ಯಗಳಲ್ಲಿ ಪ್ರವೃತ್ತಿ ಮಾಡುವವನು ನರಕವನ್ನು ಹೊಂದುತ್ತಾನೆ. ಆದ್ದರಿಂದ ಎಲ್ಲ ಪ್ರಯತ್ನಗಳನ್ನು ಮಾಡಿ ಸಂಧ್ಯೋಪಾಸನೆ-ಯನ್ನು ಮಾಡಬೇಕು. ಸಂಧ್ಯೋಪಾಸನೆ ಯೋಗೇಶ್ವರನಾದ ಪರಮಾತ್ಮನ ಉಪಾಸನೆಯೇ. ಪೂರ್ವಾಭಿಮುಖವಾಗಿ ನಿಂತು ಅಥವಾ ಕುಳಿತು ಒಂದು ಸಾವಿರ ಅಥವಾ ಒಂದು ನೂರು ಅಥವಾ ಹತ್ತು ಸಲ ಗಾಯತ್ರೀಮಂತ್ರವನ್ನು ಜಪಿಸಬೇಕು. ಒಂದು ಸಾವಿರಕ್ಕಿಂತ ಹೆಚ್ಚು ಸಲ ಜಪಿಸಬಾರದು. ಹತ್ತಕ್ಕಿಂತ ಕಡಿಮೆಸಲವೂ ಜಪಿಸಬಾರದು. ಅನಂತರ ಋಗ್, ಯಜುಸ್, ಸಾಮವೇದಗಳಲ್ಲಿ ಇರುವ, ವಿವಿಧ ಸೂರ್ಯಮಂತ್ರಗಳಿಂದ ಯೋಗೇಶ್ವರನಾದ ಸೂರ್ಯನನ್ನು ಸ್ತುತಿಸಬೇಕು. ಇದೇ ಸೂರ್ಯೋಪಸ್ಥಾನ. ಅನಂತರ ಇದೇ ಮಂತ್ರಗಳಿಂದ ಭೂಮಿಗೆ ತಲೆಯನ್ನು ಮುಟ್ಟಿಸಿ ನಮಸ್ಕರಿಸಬೇಕು. ಅನಂತರ ಸೂರ್ಯಹೃದಯವನ್ನು ಪಠಿಸಿ ನಮಸ್ಕರಿಸಬೇಕು.

### ಸೂರ್ಯಹೃದಯ

ಖದ್ಯೋತಾಯ ಚ ಶಾಂತಾಯ ಕಾರಣತ್ರಯಹೇತವೇ ।
ನಿವೇದಯಾಮಿ ಚಾತ್ಮಾನಂ ನಮಸ್ತೇ ವಿಶ್ವರೂಪಿಣೇ ॥

ನಮಸ್ತೇ ಘೃಣಿನೇ ತುಭ್ಯಂ ಸೂರ್ಯಾಯ ಬ್ರಹ್ಮರೂಪಿಣೇ ।
ತ್ವಮೇವ ಬ್ರಹ್ಮ ಪರಮಮಾಪೋ ಜ್ಯೋತೀ ರಸೋಮೃತಮ್ ॥

ಭೂರ್ಭುವಸ್ತ್ವಮೋಂಕಾರಃ ಶರ್ವೋ ರುದ್ರಃ ಸನಾತನಃ ।
ಪುರುಷಃ ಸನ್ಮಹೋಂತಸ್ಥಂ ಪ್ರಣಮಾಮಿ ಕಪರ್ದಿನಮ್ ॥

ತ್ವಮೇವ ವಿಶ್ವಂ ಬಹುಧಾ ಜಾತಂ ಯಜ್ಜಾಯತೆ ಚ ಯತ್ ।
ನಮೋ ರುದ್ರಾಯ ಸೂರ್ಯಾಯ ತ್ವಾಮಹಂ ಶರಣಂ ಗತಃ ॥

ಪ್ರಚೇತಸೇ ನಮಸ್ತುಭ್ಯಂ ನಮೋ ಮೀಢುಷ್ಟಮಾಯ ಚ ।
ನಮೋ ನಮಸ್ತೇ ರುದ್ರಾಯ ತ್ವಾಮಹಂ ಶರಣಂ ಗತಃ ।
ಹಿರಣ್ಯಬಾಹವೇ ತುಭ್ಯಂ ಹಿರಣ್ಯಪತಯೇ ನಮಃ ॥

ಅಂಬಿಕಾಪತಯೇ ತುಭ್ಯಂ ಉಮಾಯಾಃ ಪತಯೇ ನಮಃ ।
ನಮೋಸ್ತು ನೀಲಗ್ರೀವಾಯ ನಮಸ್ತುಭ್ಯಂ ಪಿನಾಕಿನೇ ॥

ವಿಲೋಹಿತಾಯ ಭರ್ಗಾಯ ಸಹಸ್ರಾಕ್ಷಾಯ ತೇ ನಮಃ ।
ನಮೋಸ್ತು ನೀಲಗ್ರೀವಾಯ ನಮಸ್ತುಭ್ಯಂ ಪಿನಾಕಿನೇ ॥

ನಮಸ್ತೇ ವಜ್ರಹಸ್ತಾಯ ತ್ರ್ಯಂಬಕಾಯ ನಮೋ ನಮಃ ।
ಪ್ರಪದ್ಯೆ ತ್ವಾಂ ವಿರೂಪಾಕ್ಷಂ ಮಹಾಂತಂ ಪರಮೇಶ್ವರಮ್ ॥

ಹಿರಣ್ಮಯೇ ಗೃಹೇ ಗುಪ್ತಮಾತ್ಮಾನಂ ಸರ್ವದೇಹಿನಾಮ್ ।
ನಮಸ್ಯಾಮಿ ಪರಂಜ್ಯೋತಿರ್ಬ್ರಹ್ಮಾಣಂ ತ್ವಾಂ ಪರಾಮೃತಮ್ ॥

ವಿಶ್ವಂ ಪಶುಪತಿಂ ಭೀಮಂ ನರನಾರೀಶರೀರಿಣಮ್ ।
ನಮಃ ಸೂರ್ಯಾಯ ರುದ್ರಾಯ ಭಾಸ್ವತೇ ಪರಮೇಷ್ಠಿನೇ ॥

ಉಗ್ರಾಯ ಸರ್ವಭಕ್ಷಾಯ ತ್ವಾಂ ಪ್ರಪದ್ಯೆ ಸದೈವ ಹಿ ।

(೧) ಆಕಾಶದಲ್ಲಿ ಬೆಳಗುತ್ತಿರುವ, ಶಾಂತನಾದ, ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ-ಸಾಧನಗಳಿಗೆ ಮೂಲನಾದ, ವಿಶ್ವರೂಪಿಯಾದ ನಿನಗೆ ನನ್ನನ್ನು ಸಮರ್ಪಿಸುತ್ತೇನೆ.

(೨) ದಯಾಮಯನಾದ, ಜ್ಞಾನಿಪ್ರಾಪ್ಯನಾದ, ಪೂರ್ಣಸ್ವರೂಪನಾದ ನಿನಗೆ ನಮಸ್ಕಾರ. ನೀನೇ ಪರಮಬ್ರಹ್ಮ, ನೀನೇ ಪರಂಜ್ಯೋತಿ. ನೀನೇ ಅಮೃತರಸ.

(೩) ನೀನೇ ಭೂಃ, ಭುವಃ, ಸ್ವಃ ಎಂಬ ವ್ಯಾಹೃತಿಗಳಿಂದ ಪ್ರತಿಪಾದ್ಯ. ನೀನೇ ಓಂಕಾರಪ್ರತಿಪಾದ್ಯ. ನೀನೇ ಸುಖದಾಯಕ. ರೋಗನಿವಾರಕ. ನೀನೇ ಪುರುಷ. ಮಹಾತೇಜಸ್ಸು. ಸರ್ವಾಂತರ್ಯಾಮಿ. ಜಟಾಧಾರಿಯಾದ ನಿನಗೆ ನಮಸ್ಕಾರ.

(೪) ಬಹುವಿಧವಾಗಿ ಹುಟ್ಟಿರುವ ಮತ್ತು ಹುಟ್ಟುತ್ತಿರುವ ಜಗತ್ತಿಗೆ ನೀನೇ ಅಧಿಪತಿ. ರುದ್ರನೂ ಸೂರ್ಯನೂ ಆದ ನಿನಗೆ ನಮಸ್ಕಾರ. ನಾನು ನಿನಗೆ ಶರಣಾಗತನಾಗಿದ್ದೇನೆ.

(೫) ಮಹಾಜ್ಞಾನಿಯಾದ ನಿನಗೆ ನಮಸ್ಕಾರ. ಇಷ್ಟಾರ್ಥಗಳನ್ನು ನೀಡುವವರಲ್ಲಿ ಶ್ರೇಷ್ಠನಾದ ನಿನಗೆ ನಮಸ್ಕಾರ. ರುದ್ರನಾದ ನಿನಗೆ ನಮಸ್ಕಾರ. ನಾನು ನಿನ್ನನ್ನು ಶರಣಾಗತ-ನಾಗಿದ್ದೇನೆ. ಹಿರಣ್ಯಬಾಹುವಾದ, ಹಿರಣ್ಯಪತಿಯಾದ ನಿನಗೆ ನಮಸ್ಕಾರ. ಅಂಬಿಕಾಪತಿಯಾದ ನಿನಗೆ ನಮಸ್ಕಾರ. ಉಮಾಪತಿಯಾದ ನಿನಗೆ ನಮಸ್ಕಾರ. ನೀಲಕಂಠನೂ, ಪಿನಾಕಧಾರಿಯೂ ಆದ ನಿನಗೆ ನಮಸ್ಕಾರ.

ಕೆಂಪುಬಣ್ಣದವನೂ, ಪೋಷಕನೂ, ಸಹಸ್ರನೇತ್ರನೂ, ಕತ್ತಲನ್ನು ನಾಶಮಾಡುವವನೂ ಆದ ಆದಿತ್ಯನೆ ! ನಿನಗೆ ನಮಸ್ಕಾರ. ವಜ್ರಹಸ್ತನಾದ ಮುಕ್ಕಣ್ಣನೇ! ನಿನಗೆ ನಮಸ್ಕಾರ. ವಿರೂಪಾಕ್ಷನಾದ ಪರಮೇಶ್ವರನೇ ನಿನಗೆ ನಮಸ್ಕಾರ. ಸರ್ವಾಂತರ್ಯಾಮಿಯಾದ, ಪರಂಜ್ಯೋತಿಯಾದ ಬ್ರಹ್ಮನೇ! ನಿನಗೆ ನಮಸ್ಕಾರ. ವಿಶ್ವರೂಪನೂ, ಪಶುಪತಿಯೂ, ಭಯಂಕರನೂ, ನರ-ನಾರೀ ಶರೀರವುಳ್ಳವನೂ, ಪ್ರಕಾಶಮಯನೂ, ಪರಮೇಷ್ಠಿಯೂ ಆದ ಸೂರ್ಯನಾದ ನಿನಗೆ ನಮಸ್ಕಾರ. ಉಗ್ರನೂ, ಸರ್ವಸಂಹಾರಕನೂ ಆದ ನಿನ್ನನ್ನೇ ಆಶ್ರಯಿಸುತ್ತೇನೆ.

ಈ ಶ್ರೇಷ್ಠವಾದ ಆದಿತ್ಯಹೃದಯವನ್ನು ಪ್ರಾತಃಕಾಲ ಮತ್ತು ಮಧ್ಯಾಹ್ನದಲ್ಲಿ ಜಪಿಸಿ ಸೂರ್ಯನನ್ನು ನಮಸ್ಕರಿಸಬೇಕು. ಈ ಸೂರ್ಯಹೃದಯವನ್ನು ಬ್ರಹ್ಮದೇವರು ಬ್ರಾಹ್ಮಣರಿಗೆ ಪರಿಚಯ ಮಾಡಿಸಿದರು. ಇದಕ್ಕೆ ಎಲ್ಲ ಪಾಪಗಳನ್ನೂ ತೊಡೆದು ಹಾಕುವ ಶಕ್ತಿಯಿದೆ. ಇದು ವೇದಗಳ ಸಾರ. ಸರ್ವರಿಗೂ ಹಿತಕರ. ಋಷಿಗಳು ಇದನ್ನು ಆಶ್ರಯಿಸಿ ಕೃತಕೃತ್ಯರಾಗಿದ್ದಾರೆ. ಧಾರ್ಮಿಕನಾದ ಪುತ್ರನಿಗೆ ಮತ್ತು ಶಿಷ್ಯರಿಗೆ ಇದನ್ನು ಉಪದೇಶಿಸಬೇಕು.

## ಸಂಧ್ಯಾವಂದನೆಯಾದನಂತರ..... :

ಸಂಧ್ಯಾವಂದನೆಯನ್ನು ಮುಗಿಸಿ ಮನೆಗೆ ಬಂದು ಆಚಮನವನ್ನು ಮಾಡಿ, ವಿಧಿಯಂತೆ ಅಗ್ನಿಯನ್ನು ಹೊತ್ತಿಸಿ, ವಿಧಿಗೆ ಅನುಗುಣವಾಗಿ ಅಗ್ನಿಯಲ್ಲಿ ಉಪಾಸನೆಯನ್ನು ಮಾಡಬೇಕು. ಯಜಮಾನನ ಪರವಾಗಿ ಅವನ ಮಗ, ಶಿಷ್ಯ, ಹೆಂಡತಿ, ಸೋದರ, ಅಧ್ವರ್ಯು -ಇವರುಗಳಲ್ಲಿ ಯಾರಾದರೂ ಯಜಮಾನನ ಅನುಮತಿಯನ್ನು ಪಡೆದು, ಕೈಯಲ್ಲಿ ಪವಿತ್ರವನ್ನು ಧರಿಸಿ, ಶುದ್ಧ ಮನಸ್ಸಿನವನಾಗಿ, ಬಿಳಿವಸ್ತ್ರವನ್ನು ಉಟ್ಟು, ಇಂದ್ರಿಯ ನಿಗ್ರಹವುಳ್ಳವನಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು.

ದರ್ಭೆಯಿಂದ ಮಾಡಿದ ಪವಿತ್ರವನ್ನು, ಯಜ್ಞೋಪವೀತವನ್ನೂ ಧರಿಸದೆ ಮಾಡಿದ ಆಚರಣೆಗಳೆಲ್ಲವೂ ರಾಕ್ಷಸರಿಗೆ ಸೇರುತ್ತವೆ. ಐಹಿಕ, ಆಮುಷ್ಮಿಕಫಲಗಳು ಲಭಿಸುವುದಿಲ್ಲ. ದೇವತೆಗಳನ್ನು ನಮಸ್ಕರಿಸಬೇಕು. ಯೋಗ್ಯವಸ್ತುಗಳನ್ನು ಅವರಿಗೆ ಅರ್ಪಿಸಬೇಕು. ಪುಷ್ಪ ಮೊದಲಾದವುಗಳನ್ನು ಅರ್ಪಿಸಬೇಕು. ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದಗಳನ್ನು ಹೇಳಿಸಿ-ಕೊಳ್ಳಬೇಕು. ಗುರುಗಳ ಸೇವೆಯನ್ನು ಮಾಡಬೇಕು. ಅವರಿಗೆ ಹಿತವಾಗುವ ಕೆಲಸಗಳನ್ನು ಮಾಡಬೇಕು. ಶಕ್ತಿಯಿದ್ದಷ್ಟು ವೇದಾಭ್ಯಾಸವನ್ನು ಮಾಡಬೇಕು. ಮಂತ್ರಗಳ ಜಪವನ್ನು ಮಾಡಬೇಕು. ಶಿಷ್ಯರಿಗೆ ಅಧ್ಯಯನವನ್ನು ಮಾಡಿಸಬೇಕು. ವಿಚಾರಗಳನ್ನು ಬುದ್ಧಿಯಲ್ಲಿ ಧರಿಸಬೇಕು. ಶಾಸ್ತ್ರಗಳನ್ನು ಪರಿಶೀಲಿಸುತ್ತಾ ಧರ್ಮ ಮೊದಲಾದವುಗಳ ಬಗ್ಗೆ ಚಿಂತನೆಯನ್ನು ಮಾಡಬೇಕು. ವೇದಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ವೇದಾಂಗಗಳನ್ನೂ ಸಂಪೂರ್ಣವಾಗಿ ಅಧ್ಯಯನ ಮಾಡಬೇಕು. ಯೋಗಕ್ಷೇಮಗಳ ಪ್ರಾಪ್ತಿಗಾಗಿ ಈಶ್ವರನನ್ನು ಆಶ್ರಯಿಸಬೇಕು. ಕುಟುಂಬ ಪೋಷಣೆಗಾಗಿ ನಾನಾ ಪದಾರ್ಥಗಳನ್ನು, ಕೆಲಸಗಳನ್ನು ಸಾಧಿಸಬೇಕು.

ಅನಂತರ ದೇವತಾರ್ಚನೆ ಮೊದಲಾದ ಕಾರ್ಯಗಳಿಗಾಗಿ ಪುಷ್ಪ, ಅಕ್ಷತೆ, ದರ್ಭೆ, ಎಳ್ಳು, ಗೋಮಯಗಳನ್ನು ಸಿದ್ಧಪಡಿಸಿಕೊಳ್ಳಬೇಕು. ಸ್ನಾನಕ್ಕಾಗಿ ಮೃತ್ತಿಕೆಯನ್ನು ತೆಗೆದುಕೊಳ್ಳಬೇಕು. ಮಧ್ಯಾಹ್ನಕಾಲದಲ್ಲಿ ದೈವನಿರ್ಮಿತವಾದ ಕೆರೆಗಳಲ್ಲಿ ಅಥವಾ ಸರೋವರಗಳಲ್ಲಿ ಅಥವಾ ಹಳ್ಳಗಳಲ್ಲಿ ಝರಿಗಳಲ್ಲಿ ಸ್ನಾನವನ್ನು ಮಾಡಬೇಕು.

ಜನರು ಕುಡಿಯುವ ನೀರಿನ ಸ್ಥಾನಗಳಲ್ಲಿ ಸ್ನಾನ ಮಾಡಬಾರದು. ಅಲ್ಲಿ ಸ್ನಾನ ಮಾಡಲೇಬೇಕಾದ ಸಂದರ್ಭವಿದ್ದರೆ ಐದು ಪಿಂಟಟ ಮಣ್ಣನ್ನು ಅಲ್ಲಿಂದ ಎತ್ತಿ ಹಾಕಿ ಸ್ನಾನ ಮಾಡಬೇಕು.

ಹಸಿ ನೆಲ್ಲಿಕಾಯಿಯ ಗಾತ್ರದ ಮಣ್ಣಿನಿಂದ ತಲೆಯನ್ನು ತೊಳೆದುಕೊಳ್ಳಬೇಕು. ಅಂತಹ ಎರಡು ಮಣ್ಣುಗಳಿಂದ ನಾಭಿಯ ಮೇಲ್ಭಾಗವನ್ನು ತೊಳೆದುಕೊಳ್ಳಬೇಕು. ನಾಭಿಯ ಕೆಳಭಾಗವನ್ನು ಮೂರು ಮಣ್ಣುಗಳಿಂದ, ಕಾಲುಗಳನ್ನು ಆರು ಮಣ್ಣುಗಳಿಂದ ತೊಳೆದು-ಕೊಳ್ಳಬೇಕು. ಅನಂತರ ಹಸಿ ನೆಲ್ಲಿಕಾಯಿಯ ಗಾತ್ರದ ಗೋಮಯವನ್ನು ಲೇಪಿಸಿಕೊಂಡು ಸ್ನಾನವನ್ನು ಮಾಡಬೇಕು. ಅನಂತರ ಆಚಮನವನ್ನು ಮಾಡಿ ವರುಣದೇವತೆಯ ಮಂತ್ರ-ಗಳಿಂದ ನೀರನ್ನು ಅಭಿಮಂತ್ರಿಸಿ, ಪವಿತ್ರಭಾವನೆಯನ್ನು ಮಾಡಿಕೊಂಡು, ವಿಷ್ಣುವನ್ನು ಚಿಂತಿಸಬೇಕು. ನೀರು ನಾರಾಯಣನಿಂದ ಉದ್ಭವಿಸಿತು. ಅನಂತರ ನೀರು ನಾರಾಯಣನ ವಾಸಸ್ಥಾನವಾಗಿದೆ. ಆದ್ದರಿಂದ ಸ್ನಾನ ಕಾಲದಲ್ಲಿ ನಾರಾಯಣನನ್ನು ಸ್ಮರಿಸಬೇಕು. ಓಂಕಾರ-ವನ್ನು ಉಚ್ಚರಿಸುತ್ತಾ ಸೂರ್ಯನನ್ನು ನೋಡಿ ಮೂರುಸಲ ಮುಳುಗಬೇಕು. ಎದ್ದು ಆಚಮನವನ್ನು ಮಾಡಬೇಕು. ಅನಂತರ ''ಅಂತಶ್ಚರಸಿ ಭೂತೇಷು ಗುಹಾಯಾಂ ವಿಶ್ವತೋ ಮುಖಃ । ತ್ವಂ ಯಜ್ಞಸ್ತ್ವಂ ವಷಟ್ಕಾರ ಆಪೋ ಜ್ಯೋತೀರಸೋಮೃತಮ್'' ॥ ಎಂಬ ಮಂತ್ರವನ್ನು ಪಠಿಸಿ ಪುನಃ ಆಚಮನವನ್ನು ಮಾಡಬೇಕು. ಅನಂತರ ದ್ರುಪದಾಮಂತ್ರವನ್ನು ಮೂರುಸಲ ಪಠಿಸಬೇಕು. ಅಥವಾ ಪ್ರಣವ ಮತ್ತು ವ್ಯಾಹೃತಿಸಹಿತವಾಗಿ ಗಾಯತ್ರಿಯನ್ನು ಪಠಿಸಬೇಕು. ಅನಂತರ ಅಘಮರ್ಷಣಮಂತ್ರವನ್ನು ಪಠಿಸಬೇಕು. ಅನಂತರ 'ಆಪೋ ಹಿ ಷ್ಠಾ ಮಯೋಭುವಃ' ಎಂಬ ಮಂತ್ರಗಳಿಂದ ''ಇದಮಾಪಃ ಪ್ರವಹತ'' ಎಂಬ ಮಂತ್ರದಿಂದಲೂ, ವ್ಯಾಹೃತಿಗಳಿಂದಲೂ ಪ್ರೋಕ್ಷಣೆಯನ್ನು ಮಾಡಿಕೊಳ್ಳಬೇಕು. ಅನಂತರ ''ಆಪೋ ಹಿ ಷ್ಠಾ'' ಮೊದಲಾದ ಮಂತ್ರಗಳಿಂದ ಜಲಾಶಯವನ್ನೇ ಅಭಿಮಂತ್ರಿಸಿ, ಅದರಲ್ಲಿ ಮುಳುಗಿ ಅಘಮರ್ಷಣಮಂತ್ರವನ್ನು ಮೂರುಸಲ ಜಪಿಸಬೇಕು. ದ್ರುಪದಾಮಂತ್ರವನ್ನು, ಗಾಯತ್ರಿಯನ್ನು ''ತದ್ವಿಷ್ಣೋಃ ಪರಮಂ ಪದಂ'' ಎಂಬ ಮಂತ್ರವನ್ನು, ಪ್ರಣವವನ್ನು ಪಠಿಸಬೇಕು. ಶ್ರೀಹರಿಯನ್ನು ಸ್ಮರಿಸಬೇಕು. ಯಜುರ್ವೇದದಲ್ಲಿ ಪ್ರಸಿದ್ಧವಾಗಿರುವ ''ದ್ರುಪದಾದಿವ'' ಎಂಬ ಮಂತ್ರವನ್ನು ನೀರಿನೊಳಗಿದ್ದು ಮೂರುಸಲ ಪಠಿಸುವುದರಿಂದ ಎಲ್ಲ ಪಾಪಗಳ ಪರಿಹಾರವಾಗುತ್ತದೆ. ನೀರನ್ನು ಕೈಯಲ್ಲಿ ಇಟ್ಟುಕೊಂಡು ಮಂತ್ರವನ್ನು ಜಪಿಸಿ ಮಾರ್ಜನವನ್ನು ಮಾಡಿಕೊಂಡು, ಕೊನೆಗೆ ಆ ನೀರನ್ನು ತಲೆಯ ಮಾಲೆ ಹಾಕಿಕೊಂಡರೆ ಎಲ್ಲ ಪಾಪಗಳಿಂದ ಬಿಡುಗಡೆಯಾಗುತ್ತದೆ. ಯಜ್ಞಗಳ ರಾಜನೆನಿಸಿದ ಅಶ್ವಮೇಧವು ಎಲ್ಲ ಪಾಪಗಳನ್ನು ಪರಿಹರಿಸುವಂತೆ, ಅಘಮರ್ಷಣವು ಎಲ್ಲ ಪಾಪಗಳನ್ನು ಪರಿಹರಿಸುತ್ತದೆ ಎಂದು ಶಾಸ್ತ್ರಗಳು ಹೇಳಿವೆ.

**ಸೂರ್ಯೋಪಸ್ಥಾನ :**

ಅನಂತರ ಸೂರ್ಯನ ಕಡೆ ಪುಷ್ಪ, ಅಕ್ಷತೆಗಳನ್ನು ಎಸೆದು ಕತ್ತಲನ್ನು ಪರಿಹರಿಸುವ ಅವನ ಸ್ತೋತ್ರವನ್ನು ಪಠಿಸಬೇಕು. ''ಉದುತ್ಯಂ ಜಾತವೇದಸಂ'' ಎಂಬ ಮಂತ್ರವನ್ನು, ''ತಚ್ಚಕ್ಷುಃ'' ಎಂಬ ಮಂತ್ರವನ್ನು ''ಹಂಸಃ ಶುಚಿಷದ್'' ಎಂಬ ಮಂತ್ರವನ್ನು ಗಾಯತ್ರಿಯನ್ನು, ಇನ್ನೂ

ಬೇರೆ ವೈದಿಕ ಮಂತ್ರಗಳನ್ನು ಪಠಿಸಬೇಕು. ಅನಂತರ ಗಾಯತ್ರಿಮಂತ್ರವನ್ನು ಜಪಿಸಬೇಕು. ಇದು ಜಪಯಜ್ಞ ಎಂದು ಪ್ರಸಿದ್ಧ. ಅನೇಕ ಪವಿತ್ರ ಮಂತ್ರಗಳನ್ನು, ಗುಹ್ಯವಿದ್ಯೆಗಳನ್ನು, ಶತ-ರುದ್ರಿಯವನ್ನು, ಅಥರ್ವಶಿರಸ್ಸನ್ನೂ, ಸಕಲ ಸೂರ್ಯದೇವತೆಯ ಮಂತ್ರಗಳನ್ನು ಪಠಿಸ-ಬೇಕು. ಪೂರ್ವದಿಕ್ಕಿನ ಕಡೆ ತುದಿಯಿರುವಂತೆ ಹಾಸಲ್ಪಟ್ಟಿರುವ ಕುಶಾಸನದ ಮೇಲೆ ಪೂರ್ವಾಭಿಮುಖವಾಗಿ ನಿಂತುಕೊಂಡು ಸೂರ್ಯನನ್ನು ನೋಡುತ್ತಾ ಜಪವನ್ನು ಮಾಡಬೇಕು.

ಸ್ಫಟಿಕಮಣಿ, ಇಂದ್ರಾಕ್ಷ ರುದ್ರಾಕ್ಷ ಪುತ್ರಜೀವ ಎಂಬ ಮಣಿಗಳಿಂದ ಜಪಮಾಲೆಯನ್ನು ಮಾಡಬೇಕು. ಇವುಗಳಲ್ಲಿ ಕ್ರಮವಾಗಿ ಅನಂತರ ಹೇಳಲ್ಪಟ್ಟಿರುವ ಮಣಿಗಳು ಉತ್ತಮ. ಜಪಮಾಡುತ್ತಿರುವಾಗ ಮಾತನಾಡಬಾರದು. ಅಂಗವಿಕಲರನ್ನು ನೋಡಬಾರದು. ತಲೆ-ಯನ್ನು ಕುತ್ತಿಗೆಯನ್ನು ಅಲುಗಾಡಿಸಬಾರದು. ಹಲ್ಲುಗಳನ್ನು ತೋರಿಸಬಾರದು. ಜಪವನ್ನು ಏಕಾಂತದಲ್ಲಿ ಶುಚಿಯಾದ ಸ್ಥಳದಲ್ಲಿ ಆಚರಿಸಬೇಕು. ಇಲ್ಲದಿದ್ದರೆ ಗುಹ್ಯಕರು, ರಾಕ್ಷಸರು, ಸಿದ್ಧರು ಜಪವನ್ನು ಅಪಹರಿಸುತ್ತಾರೆ. ಜಪಕಾಲದಲ್ಲಿ ಚಂಡಾಲರನ್ನು, ಅಶುಚಿಗಳನ್ನು, ಪತಿತರನ್ನು ಕಂಡರೆ ಪುನಃ ಜಪಿಸಬೇಕು. ಅವರ ಜೊತೆ ಮಾತನಾಡಿದರೆ ಪುನಃ ಸ್ನಾನ ಮಾಡಿ ಜಪಿಸಬೇಕು.

ಅಶುಚಿ ಪದಾರ್ಥಗಳ ದರ್ಶನವಾದರೆ ಆಚಮನವನ್ನು ಮಾಡಿ ಸೂರ್ಯಮಂತ್ರಗಳನ್ನೂ, ಪವಮಾನಮಂತ್ರಗಳನ್ನೂ ಶಕ್ತಿ ಇದ್ದಷ್ಟು ಪಠಿಸಬೇಕು. ಶುಚಿಯಾದ ಸ್ಥಳದಲ್ಲಿ ಹಾಸಲ್ಪಟ್ಟಿರುವ ದರ್ಭಾಸನದ ಮೇಲೆ ಕುಳಿತು, ಆಚಮನವನ್ನು ಮಾಡಿ ಶಾಸ್ತ್ರವಿಧಿಗೆ ಅನುಗುಣವಾಗಿ ಭಕ್ತಿಯಿಂದ ವೇದಮಂತ್ರಗಳನ್ನು ಪಠಿಸಬೇಕು. ಒದ್ದೆ ವಸ್ತ್ರವನ್ನು ಧರಿಸಿದ್ದರೆ, ನೀರಿನ ಮಧ್ಯ-ದಲ್ಲಿದ್ದರೆ ಮೇಲೆ ಹೇಳಿದ ನಿಯಮವಿಲ್ಲ.

**ತರ್ಪಣ :**

ಜಪ ಮುಗಿದನಂತರ ದೇವತೆಗಳಿಗೆ, ಋಷಿಗಳಿಗೆ ತರ್ಪಣವನ್ನು ಕೊಡಬೇಕು. ಓಂಕಾರಪೂರ್ವಕವಾಗಿ ಋಷಿಗಳ ನಾಮವನ್ನು ಉಚ್ಚರಿಸಿ ''ತರ್ಪಯಾಮಿ ವಃ'' ಎಂದು ಹೇಳುತ್ತಾ ತರ್ಪಣವನ್ನು ಕೊಡಬೇಕು. ದೇವತೆಗಳಿಗೆ ಮತ್ತು ಬ್ರಹ್ಮರ್ಷಿಗಳಿಗೆ ಅಕ್ಷತೋದಕ-ದಿಂದ ತರ್ಪಣವನ್ನು ಕೊಡಬೇಕು. ಪಿತೃಗಳಿಗೆ ತಿಲೋದಕ (ಎಳ್ಳು+ನೀರು) ದಿಂದ ತರ್ಪಣವನ್ನು ಕೊಡಬೇಕು. ತಮ್ಮ ತಮ್ಮ ಗೃಹ್ಯಸೂತ್ರದಲ್ಲಿ (ಅಶ್ವಲಾಯನಸೂತ್ರ, ಆಪಸ್ತಂಭಸೂತ್ರ ಇತ್ಯಾದಿ) ಹೇಳಿದಂತೆ ತರ್ಪಣವನ್ನು ಕೊಡಬೇಕು. ಬಲಗೈಗೆ ಎಡಗೈಯನ್ನು ತಾಗಿಸಿಕೊಂಡು ದೇವತೆಗಳಿಗೆ, ಋಷಿಗಳಿಗೆ ತರ್ಪಣವನ್ನು ಕೊಡಬೇಕು. ಉದಕಾಂಜಲಿ-ಯಿಂದ ಪಿತೃಗಳಿಗೆ ತರ್ಪಣವನ್ನು ಕೊಡಬೇಕು. ದೇವತೆಗಳಿಗೆ ಉಪವೀತವಾಗಿ (ಜನಿವಾರವನ್ನು ಯಾವಾಗಲೂ ಹಾಕಿಕೊಂಡಿರುವ ರೀತಿಯಲ್ಲೇ ಇಟ್ಟುಕೊಂಡು) ತರ್ಪಣವನ್ನು ಕೊಡಬೇಕು. ನಿವೀತಿಯಾಗಿ (ಮಾಲಾಕಾರವಾಗಿ ಮಾಡಿಕೊಂಡು)

ಋಷಿಗಳಿಗೆ ತರ್ಪಣವನ್ನು ಕೊಡಬೇಕು. ಪಿತೃತರ್ಪಣವನ್ನು ಕೊಡುವಾಗ ಪ್ರಾಚೀನಾವೀತಿಯಾಗಿರಬೇಕು. (ಯಾವಾಗಲೂ ಹಾಕಿಕೊಂಡಿರುವ ರೀತಿಗೆ ವಿರುದ್ಧವಾದ ರೀತಿಯಲ್ಲಿ ಹಾಕಿಕೊಂಡಿರಬೇಕು.)

## ದೇವತಾರ್ಚನೆ :

ಅನಂತರ ಆಚಮನವನ್ನು ಮಾಡಿ ಆಯಾಯಾ ದೇವತೆಯ ಮಂತ್ರಗಳನ್ನು ಹೇಳುತ್ತಾ ಪುಷ್ಪ-ಪತ್ರೆ ಮತ್ತು ನೀರಿನಿಂದ ಬ್ರಹ್ಮ, ಶಿವ, ಸೂರ್ಯ, ವಿಷ್ಣು -ಇವರನ್ನು ಭಕ್ತಿಯಿಂದ ಪೂಜಿಸಬೇಕು. ಬೇರೆ ಇಷ್ಟದೇವತೆಗಳನ್ನೂ ಪೂಜಿಸಬೇಕು. ಪುರುಷಸೂಕ್ತವನ್ನು ಪಠಿಸುತ್ತಾ ಪುಷ್ಪಗಳನ್ನು ಅರ್ಪಿಸಬೇಕು. ಅಥವಾ ನೀರನ್ನು ಅರ್ಪಿಸಬೇಕು. ಇದು ಎಲ್ಲ ದೇವತೆಗಳಿಗೂ ಇಷ್ಟವಾದ ಪೂಜಾವಿಧಾನ. ಪ್ರಣವಮಂತ್ರವನ್ನು ಪಠಿಸುತ್ತಾ ದೇವತೆಗಳನ್ನು ಧ್ಯಾನಿಸಿ ನಮಸ್ಕರಿಸುತ್ತಾ ಒಂದೊಂದೇ ಪುಷ್ಪಗಳನ್ನು ಅರ್ಪಿಸಬೇಕು.

ವಿಷ್ಣುವಿನ ಆರಾಧನೆಗಿಂತ ಹೆಚ್ಚು ಪುಣ್ಯಕರವಾದ ವೈದಿಕ ಆಚರಣೆ ಯಾವುದೂ ಇಲ್ಲ. ಆದ್ದರಿಂದ ಆದಿ, ಅಂತ್ಯಗಳಿಲ್ಲದ ವಿಷ್ಣುವನ್ನು ಸದಾ ಆರಾಧಿಸಬೇಕು. ಪುರುಷಸೂಕ್ತ ಮತ್ತು ವಿಷ್ಣುಸೂಕ್ತದಿಂದ ವಿಷ್ಣುವನ್ನು ಆರಾಧಿಸಬೇಕು. ಇವೆರಡು ಮಂತ್ರಗಳಿಗೆ ಸಮವಾದ ಮಂತ್ರವು ನಾಲ್ಕು ವೇದಗಳಲ್ಲೂ ಇಲ್ಲ. ಆದ್ದರಿಂದ ಅವನಲ್ಲೇ ಮನಸ್ಸನ್ನಿಟ್ಟು, ಶಾಂತನಾಗಿ ವಿಷ್ಣುಸೂಕ್ತದಿಂದ ವಿಷ್ಣುವನ್ನು ಆರಾಧಿಸಬೇಕು. ಅಥವಾ ರುದ್ರಗಾಯತ್ರೀ ಮಂತ್ರದಿಂದ, ಪ್ರಣವದಿಂದ, ಈಶಾನಮಂತ್ರದಿಂದ ರುದ್ರಮಂತ್ರಗಳಿಂದ, ತ್ರ್ಯಂಬಕ ಮಂತ್ರದಿಂದ ಸನಾತನನಾದ ಮಹಾದೇವನನ್ನು ಪೂಜಿಸಬೇಕು. ಪುಷ್ಪ, ಪತ್ರ, ನೀರು, ಚಂದನಗಳಿಂದ ಶಿವನನ್ನು ಪೂಜಿಸಬೇಕು.

'ಓಂ ನಮಃ ಶಿವಾಯ' ಎಂಬ ಮಂತ್ರವನ್ನು ಜಪಿಸಬೇಕು. ಶಿವನನ್ನು ಮೃತ್ಯುಂಜಯ, ಈಶ್ವರ ಎಂದು ಚಿಂತಿಸುತ್ತಾ ನಮಸ್ಕರಿಸಬೇಕು. ಬ್ರಹ್ಮ, ಈಶ್ವರ ಎಂದು ಭಾವಿಸುತ್ತಾ ತನ್ನನ್ನೇ ಅರ್ಪಿಸಿಕೊಳ್ಳಬೇಕು. ಐದು ವರ್ಷಗಳ ಕಾಲ ಶಿವನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು. ಹೃದಯಾಕಾಶದಲ್ಲಿರುವ ಶಿವನ ಧ್ಯಾನವನ್ನು ಮಾಡಬೇಕು. ದೇವತಾರ್ಚನೆಯಾದನಂತರ ''ಹಂಸಃ ಶುಚಿಷದ್....'' ಇತ್ಯಾದಿ ಮಂತ್ರದಿಂದ ಸೂರ್ಯನನ್ನು ನೋಡಬೇಕು.

## ಪಂಚ ಯಜ್ಞಗಳು :

ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ ಮತ್ತು ಬ್ರಹ್ಮಯಜ್ಞ -ಇವುಗಳನ್ನು ಗೃಹಸ್ಥಾಶ್ರಮಿಯು ತಪ್ಪದೇ ನಡೆಸಬೇಕು.

ಮೊದಲೇ ಬ್ರಹ್ಮಯಜ್ಞವನ್ನು ಮಾಡಿರದಿದ್ದರೆ ಮನುಷ್ಯಯಜ್ಞವನ್ನು ಮಾಡಿದನಂತರ ಮಾಡಬೇಕು. ಅಗ್ನಿಯ ಪಶ್ಚಿಮಭಾಗದಲ್ಲಿ ದರ್ಭಾಸನದಲ್ಲಿ ಕುಳಿತುಕೊಂಡು ದರ್ಭದ

ಪವಿತ್ರವನ್ನು ಕೈಗೆ ಧರಿಸಿ ವೈಶ್ವದೇವವನ್ನು ಮಾಡಬೇಕು. ಹೋಮಶಾಲೆಯ ಅಗ್ನಿಯಲ್ಲಿ ಅಥವಾ ಅಡಿಗೆಮನೆಯ ಅಗ್ನಿಯಲ್ಲಿ ವೈಶ್ವದೇವಹೋಮವನ್ನು ಮಾಡಬೇಕು. ಹೋಮ-ಶಾಲೆಯ ಅಗ್ನಿಯಲ್ಲಿ ಮಾಡುವುದಾದರೆ ಅದೇ ಅಗ್ನಿಯಲ್ಲಿ ಅನ್ನವನ್ನು ಮಾಡಿಕೊಳ್ಳಬೇಕು. ಅಡಿಗೆಮನೆಯ ಅಗ್ನಿಯಲ್ಲಿ ಮಾಡುವುದಾದರೆ ಸಿದ್ಧವಾದ ಅನ್ನದ ಆಹುತಿಯನ್ನು ಹಾಕಬೇಕು. ಇದು ಸನಾತನ ಕ್ರಮ. ಈ ವೈಶ್ವದೇವಕ್ಕೆ ದೇವಯಜ್ಞ ಎಂದು ಹೆಸರು. ನೀರಿನಲ್ಲಿ ಅಥವಾ ನೆಲದ ಮೇಲೆ ಕೂಡ ವೈಶ್ವದೇವವನ್ನು ಮಾಡಬಹುದು. ವೈಶ್ವದೇವಯಜ್ಞಕ್ಕೆ ಉಪಯೋಗಿಸಿ ಉಳಿದ ಅನ್ನದಿಂದ ಬಲಿಹರಣವನ್ನು ಮಾಡಬೇಕು. ಇದೇ ಭೂತಯಜ್ಞ. ಈ ಯಜ್ಞದಿಂದ ಎಲ್ಲ ಪ್ರಾಣಿಗಳು ಸಮೃದ್ಧಿಯನ್ನು ಪಡೆಯುತ್ತವೆ. ನಾಯಿ, ಶ್ವಪಚ, ಪತಿತ, ಪಕ್ಷಿಗಳು -ಇವರಿಗೋಸ್ಕರ ಮನೆಯ ಹೊರಗೆ ಅನ್ನವನ್ನು ಇಡಬೇಕು.

ಸಾಯಂಕಾಲ ಮಾಡಿದ ಅನ್ನದಿಂದ ಗೃಹಿಣಿಯು ಮಂತ್ರವಿಲ್ಲದೆ ಭೂತಬಲಿಯನ್ನು ಕೊಡಬೇಕು. ಪ್ರತಿದಿನವೂ ಪಿತೃಗಳನ್ನು ಉದ್ದೇಶಿಸಿ ಒಬ್ಬ ಬ್ರಾಹ್ಮಣನಿಗೆ ಭೋಜನವನ್ನು ಮಾಡಿಸಬೇಕು. ಇದು ನಿತ್ಯಶ್ರಾದ್ಧ. ಇದರಿಂದ ಪಿತೃಗಳಿಗೆ ಸದ್ಗತಿಯಾಗುತ್ತದೆ. ವೇದಾರ್ಥವನ್ನು ತಿಳಿದಿರುವ ಬ್ರಾಹ್ಮಣನಿಗೆ ಯಥಾಶಕ್ತಿ ಅನ್ನದಾನವನ್ನು ಮಾಡಬೇಕು. ಮನೆಗೆ ಬಂದ ಅತಿಥಿಯಲ್ಲಿ ವಿಷ್ಣುಸನ್ನಿಧಾನವನ್ನು ಗುರುತಿಸಿ ಒಳ್ಳೆಯ ಮನಸ್ಸು, ಮಾತು, ಕೃತಿಗಳಿಂದ ಅವನನ್ನು ಪೂಜಿಸಬೇಕು. ನಮಸ್ಕರಿಸಬೇಕು. ನಿತ್ಯಾಹ್ನಿಕವು ಮುಗಿದ ಮೇಲೆ ಒಂದು ಹಸುವನ್ನು ಕರೆಯಲು ಬೇಕಾಗುವಷ್ಟು ಸಮಯ ಅತಿಥಿಗಳನ್ನು ನಿರೀಕ್ಷಿಸಬೇಕು. ಅತಿಥಿಗೆ ಅನ್ನ ಮಾಡಿದರೆ ಅದರ ನಾಲ್ಕುಪಟ್ಟು ಸಮೃದ್ಧಿಯು ಮನೆಯ ಯಜಮಾನನಿಗೆ ಆಗುವುದು.

ಭಿಕ್ಷೆಯನ್ನು ಕೇಳಲು ಬಂದವರಿಗೆ ಎಡಗೈಯ ಸ್ಪರ್ಶವುಳ್ಳ ಬಲಗೈಯಿಂದ ಭಿಕ್ಷೆಯನ್ನು ಯಥಾಶಕ್ತಿ ಕೊಡಬೇಕು. ಕೊಡುವಾಗ 'ಹಂತ' ಎಂದು ಹೇಳಬೇಕು. ಒಂದು ತುತ್ತು ಭಿಕ್ಷೆಯನ್ನು ಕೊಟ್ಟರೆ ನಾಲ್ಕರಷ್ಟು ಸಮೃದ್ಧಿಯು ಯಜಮಾನನಿಗೆ ಉಂಟಾಗುವುದು. ಬ್ರಹ್ಮಚಾರಿಗೆ ಭಿಕ್ಷೆಯನ್ನು ಹಾಕಬೇಕು. ಅಭ್ಯಾಗತರನ್ನು ಯಥಾಶಕ್ತಿ ಸತ್ಕರಿಸಬೇಕು. ಸತ್ಕಾರ ಮತ್ತು ಭಿಕ್ಷಾಪ್ರದಾನಗಳಲ್ಲಿ ಲೋಭರಹಿತನಾಗಿರಬೇಕು. ಅತಿಥಿ, ಅಭ್ಯಾಗತ, ಬೇಡುವವರು ಯಾರೂ ಇಲ್ಲದಿದ್ದಾಗ ಗೋವುಗಳಿಗೆ ಅನ್ನವನ್ನು ನಿವೇದಿಸಬೇಕು. ಅನಂತರ ಬಹುಜನ-ಗಳೊಂದಿಗೆ ಊಟವನ್ನು ಮಾಡಬೇಕು. ಅನ್ನವನ್ನು ನಿಂದಿಸಬಾರದು. ಪಂಚಮಹಾ-ಯಜ್ಞಗಳನ್ನು ಮಾಡದೆ ಊಟ ಮಾಡುವವನು ಮೂಢ. ಅವನು ಮರಣಾನಂತರ ಹೀನಮೃಗಗಳ ಜನ್ಮವನ್ನು ಹೊಂದುತ್ತಾನೆ.

ಪ್ರತಿದಿನವೂ ಶಕ್ತಿಯಿದ್ದಷ್ಟು ವೇದಾಭ್ಯಾಸವನ್ನು, ಪಂಚಮಹಾಯಜ್ಞವನ್ನು ಮತ್ತು ದೇವತಾರ್ಚನೆಯನ್ನು ಮಾಡುವುದರಿಂದ ಎಲ್ಲ ಪಾಪಗಳೂ ನಾಶವಾಗುತ್ತವೆ. ಮೋಹದಿಂದ ಅಥವಾ ಅಜ್ಞಾನದಿಂದ ಯಾರು ದೇವತಾರ್ಚನೆಯನ್ನು ಮಾಡದೆ ಊಟವನ್ನು ಮಾಡುತ್ತಾರೋ ಅವರು ಸೂಕರ ನರಕವನ್ನು ಹೊಂದುತ್ತಾರೆ. ಆದ್ದರಿಂದ ಎಲ್ಲ

ಪ್ರಯತ್ನಗಳನ್ನು ಮಾಡಿ ದೇವತಾರ್ಚನೆ ಮೊದಲಾದ ಸತ್ಕರ್ಮಗಳನ್ನು ಮಾಡಿ ಸ್ವಜನ-ರೊಂದಿಗೆ ಊಟವನ್ನು ಮಾಡಬೇಕು. ಹೀಗೆ ಮಾಡುವವನು ಸದ್ಗತಿಯನ್ನು ಹೊಂದುತ್ತಾನೆ.

* * *

## ಅಧ್ಯಾಯ-೭೨

**ವ್ಯಾಸ ಉವಾಚ :**

ಪೂರ್ವದಿಕ್ಕಿಗೆ ಎದುರಾಗಿ ಅಥವಾ ಸೂರ್ಯನಿಗೆ ಎದುರಾಗಿ ಶುದ್ಧವಾದ ಆಸನದ ಮೇಲೆ ನೆಲದ ಮೇಲೆ ಪಾದಗಳು ಇರುವಂತೆ ಕುಳಿತು ಊಟವನ್ನು ಮಾಡಬೇಕು. ಪೂರ್ವಾಭಿ-ಮುಖವಾಗಿ ಕುಳಿತು ಊಟಮಾಡಿದರೆ ಕೀರ್ತಿಯುಂಟಾಗುತ್ತದೆ. ಪಶ್ಚಿಮಾಭಿಮುಖವಾಗಿ ಕುಳಿತು ಊಟಮಾಡಿದರೆ ಐಶ್ವರ್ಯವು ಲಭಿಸುತ್ತದೆ. ಉತ್ತರಾಭಿಮುಖವಾಗಿ ಕುಳಿತು ಊಟ ಮಾಡಿದರೆ ಯಥಾರ್ಥಜ್ಞಾನವು ಲಭಿಸುತ್ತದೆ.

ಊಟಕ್ಕೆ ಮೊದಲು ಎರಡು ಕೈಗಳನ್ನು ಎರಡು ಕಾಲುಗಳನ್ನು ತೊಳೆದುಕೊಂಡು ಆಚಮನವನ್ನು ಮಾಡಬೇಕು. ಗೋಮಯಲೇಪನದಿಂದ ಶುದ್ಧವಾದ ಸ್ಥಳದಲ್ಲಿ ಕುಳಿತು, ಭೋಜನ ಪಾತ್ರೆಯನ್ನು (ಎಲೆಯನ್ನು, ತಟ್ಟೆಯನ್ನು) ನೆಲದ ಮೇಲೆ ಇಟ್ಟು ಊಟವನ್ನು ಮಾಡಬೇಕು. ಈ ಕ್ರಮದ ಭೋಜನವು ಉಪವಾಸಕ್ಕೆ ಸಮಾನ ಎಂದು ಮನುಪ್ರಜಾಪತಿಯು ಹೇಳಿದ್ದಾನೆ. ಮಹಾವ್ಯಾಹೃತಿಯನ್ನು ಹೇಳುತ್ತಾ ನೀರಿನಿಂದ ಪರಿಷೇಚನವನ್ನು ಮಾಡಿ 'ಅಮೃತೋಪಸ್ತರಣಮಸಿ' ಎಂದು ಹೇಳುತ್ತಾ ಆಪೋಶನವನ್ನು ಮಾಡಬೇಕು. ಓಂಕಾರ ಮತ್ತು ಸ್ವಾಹಾಕಾರಗಳ ಜೊತೆಗೆ ಪ್ರಾಣಾಹುತಿಯನ್ನು (ಓಂ ಪ್ರಾಣಾಯ ಸ್ವಾಹಾ ಎಂದು ಹೇಳಿ) ತೆಗೆದುಕೊಳ್ಳಬೇಕು. ಹೀಗೆಯೇ ಓಂ ಅಪಾನಾಯ ಸ್ವಾಹಾ, ಓಂ ವ್ಯಾನಾಯ ಸ್ವಾಹಾ, ಓ, ಉದಾನಾಯಸ್ವಾಹಾ, ಓಂ ಸಮಾನಾಯಸ್ವಾಹಾ ಎಂದು ಹೇಳುತ್ತಾ ಕ್ರಮವಾಗಿ ಆಹುತಿಯನ್ನು ತಿನ್ನಬೇಕು. ಹೀಗೆ ಆಹುತಿಗಳನ್ನು ತನ್ನಲ್ಲಿಯೇ ಹಾಕಿಕೊಳ್ಳುವುದರ ತತ್ವವನ್ನು ತಿಳಿದುಕೊಂಡು ಆಹುತಿಗಳನ್ನು ತಿನ್ನಬೇಕು. ಉಳಿದ ಅನ್ನವನ್ನು ಯಥೇಷ್ಟವಾಗಿ ವ್ಯಂಜನ (ಸಾರು, ಹುಳಿ, ಪಲ್ಯ ಇತ್ಯಾದಿ)ಗಳೊಂದಿಗೆ ಊಟ ಮಾಡಬೇಕು. ಊಟ ಮಾಡುತ್ತಿರುವಾಗ ದೇವತೆಗಳನ್ನು ಸ್ಮರಿಸಬೇಕು. ಕೊನೆಯಲ್ಲಿ 'ಅಮೃತಾಪಿಧಾನಮಸಿ' ಎಂದು ಹೇಳಿ ನೀರನ್ನು ಕುಡಿಯಬೇಕು. ಕೈ ಕಾಲುಗಳನ್ನು ತೊಳೆದುಕೊಂಡು ಆಚಮನವನ್ನು ಮಾಡಬೇಕು. 'ಗೌಃ' ಎಂಬ ಮಂತ್ರದಿಂದ ಪುನಃ ಆಚಮನವನ್ನು ಮಾಡಬೇಕು.

ಸರ್ವಪಾಪಗಳನ್ನು ಪರಿಹರಿಸುವ 'ದ್ರುಪದಾ' ಮಂತ್ರವನ್ನು ಮೂರು ಸಲ ಪಠಿಸಬೇಕು. 'ಪ್ರಾಣಾನಾಂ ಗ್ರಂಥಿರಸಿ' ಎಂಬ ಮಂತ್ರದಿಂದ ಉದರವನ್ನು ಮುಟ್ಟಿಕೊಳ್ಳಬೇಕು. ಅನಂತರ 'ಸಂಧ್ಯಾಯಾಮ್' ಎಂಬ ಮಂತ್ರದಿಂದ ಹಿಂದೆ ಮಾಡಿದ ಕರ್ಮಗಳ ಅನುಮಂತ್ರಣವನ್ನು ಮಾಡಬೇಕು. ಅನಂತರ ಪರಬ್ರಹ್ಮನ ಚಿಂತನೆಯನ್ನು ಮಾಡಬೇಕು. ಇದು ಆತ್ಮಯೋಗ. ಇದು ಯೋಗಗಳಲ್ಲಿ ಶ್ರೇಷ್ಠವಾದ ಯೋಗ. ಇದನ್ನು ಇಲ್ಲಿ ಹೇಳಿದಂತೆ ಮಾಡುವವನು ಬ್ರಹ್ಮಜ್ಞಾನವನ್ನು ಪಡೆಯುತ್ತಾನೆ. ಗಂಧ, ಮಾಲೆ ಮೊದಲಾದ ಅಲಂಕಾರಗಳನ್ನು ಧರಿಸಿ ಶುಚಿಯಾಗಿದ್ದ ಊಟವನ್ನು ಮಾಡಬೇಕು. ಮಧ್ಯಾಹ್ನ ಮತ್ತು ರಾತ್ರಿ ಮಾತ್ರ ಊಟವನ್ನು ಮಾಡಬೇಕು. ಮಧ್ಯದಲ್ಲಿ ಊಟವನ್ನು ಮಾಡಬಾರದು. ಸಂಧ್ಯಾಕಾಲದಲ್ಲಿ ಮಾಡಲೇ-ಬಾರದು. ಸೂರ್ಯಗ್ರಹಣ, ಚಂದ್ರಗ್ರಹಣಗಳ ಪೂರ್ವಕಾಲದಲ್ಲಿ ಊಟ ಮಾಡಬಾರದು. ಗ್ರಹಣಕಾಲದಲ್ಲೂ ಮಾಡಬಾರದು. ಗ್ರಹಣವು ಬಿಟ್ಟಮೇಲೆ ಸ್ನಾನಮಾಡಿಯೇ ಊಟವನ್ನು ಮಾಡಬೇಕು. ಚಂದ್ರಗ್ರಹಣವು ಬಿಟ್ಟಮೇಲೆ ಮಧ್ಯರಾತ್ರಿಯಾಗಿದ್ದರೆ ಊಟಮಾಡಬಾರದು. ಗ್ರಹಣವು ಬಿಡುವ ಮೊದಲೆ ಸೂರ್ಯ-ಚಂದ್ರರ ಅಸ್ತವಾದರೆ ಮರುದಿನ ಅವರನ್ನು ನೋಡಿ ಸ್ನಾನಾದಿಗಳನ್ನು ಮಾಡಿ ಊಟವನ್ನು ಮಾಡಬೇಕು.

ನೋಡುತ್ತಿರುವವರಿಗೆ ಕೊಡದೆ ತಿನ್ನಬಾರದು. ಯಜ್ಞಕ್ಕೆ ಉಪಯೋಗಿಸಿ ಉಳಿದದ್ದನ್ನೇ ಊಟ ಮಾಡಬೇಕು. ಕೋಪಗೊಂಡಿದ್ದಾಗ, ಮನಸ್ಸು ಚಂಚಲವಾಗಿದ್ದಾಗ ಊಟವನ್ನು ಮಾಡಬಾರದು. ತನಗೋಸ್ಕರವೇ ಅಡಿಗೆ ಮಾಡಿಕೊಳ್ಳುವವನ, ರತಿಗಾಗಿ ಮೈಥುನವನ್ನು ನಡೆಸುವವನ, ವಿದ್ಯೆಯನ್ನು ಜೀವನೋಪಾಯವನ್ನಾಗಿ ಮಾಡಿಕೊಂಡವನ ಜೀವನ ವ್ಯರ್ಥ. ತಲೆಗೆ ಬಟ್ಟೆಯನ್ನು ಸುತ್ತಿಕೊಂಡು, ಚಪ್ಪಲಿಯನ್ನು ಧರಿಸಿಕೊಂಡು ಊಟವನ್ನು ಮಾಡ-ಬಾರದು. ಮಾಡಿದರೆ ಅದು ಅಸುರಭೋಜನ.

ಮಧ್ಯರಾತ್ರಿಯಲ್ಲಿ ಮಧ್ಯಾಹ್ನದಲ್ಲಿ ಊಟವನ್ನು ಮಾಡಬಾರದು. ಅಜೀರ್ಣವಾದಾಗ ಊಟವನ್ನು ಮಾಡಬಾರದು. ಒದ್ದೆಬಟ್ಟೆಯನ್ನು ಉಟ್ಟು ಊಟವನ್ನು ಮಾಡಬಾರದು. ಒಡೆದ ಅಥವಾ ಭಾಗವಾಗಿರುವ ಆಸನದಲ್ಲಿ ಕುಳಿತು ಊಟವನ್ನು ಮಾಡಬಾರದು. ವಾಹನದಲ್ಲಿ ಕುಳಿತು ಊಟಮಾಡಬಾರದು. ಒಡೆದಿರುವ (ಭಿನ್ನವಾಗಿರುವ) ಪಾತ್ರೆಯಲ್ಲಿ, ನೆಲದ ಮೇಲೆ ಊಟಮಾಡಬಾರದು. ಕೈಯಲ್ಲಿ ಹಾಕಿಸಿಕೊಂಡು, ಹಾಕಿಕೊಂಡು ಊಟಮಾಡಬಾರದು. ಊಟಮಾಡುತ್ತಿರುವಾಗ ಮತ್ತು ಮುಗಿದಮೇಲೆ ಕೈತೊಳೆದುಕೊಳ್ಳದೆ (ಇದು ಉಚ್ಛಿಷ್ಟಸ್ಥಿತಿ) ತುಪ್ಪದ ಪಾತ್ರೆಯನ್ನು ತೆಗೆದುಕೊಳ್ಳಬಾರದು. ತಲೆಯನ್ನು ಮುಟ್ಟಿ-ಕೊಳ್ಳಬಾರದು. ವೇದವನ್ನು ಹೇಳಬಾರದು. ನಿಃಶೇಷವಾಗಿ ಊಟ ಮಾಡಬಾರದು. ಹೆಂಡತಿಯ ಜೊತೆ ಊಟಮಾಡಬಾರದು. ಕತ್ತಲಿನಲ್ಲಿ, ಸಂಧ್ಯಾಕಾಲದಲ್ಲಿ, ದೇವಾಲಯ ಮೊದಲಾದ ಸ್ಥಳಗಳಲ್ಲಿ ಊಟವನ್ನು ಮಾಡಬಾರದು.

ಒಂದೇ ವಸ್ತ್ರವನ್ನು ಧರಿಸಿ ಊಟಮಾಡಬಾರದು. ವಾಹನದಲ್ಲಿದ್ದು ಹಾಸಿಗೆಯಲ್ಲಿದ್ದು ಊಟ ಮಾಡಬಾರದು. ನಗುತ್ತಾ, ವಿಲಾಪ ಮಾಡುತ್ತಾ ಊಟವನ್ನು ಮಾಡಬಾರದು.

ಊಟವಾದ ಮೇಲೆ ಉದ್ವೇಗವಿಲ್ಲದಂತೆ ಇದ್ದು ಆಹಾರವು ಜೀರ್ಣವಾಗಲು ಅವಕಾಶ ಮಾಡಿಕೊಡಬೇಕು. ಇತಿಹಾಸ-ಪುರಾಣಗಳಿಂದ ವೇದಾರ್ಥವನ್ನು ವಿವರಿಸಬೇಕು. ಅನಂತರ ಪ್ರಾತಃಸಂಧ್ಯಾವಂದನೆಯ ಕ್ರಮದಂತೆ ಸಾಯಂಕಾಲ ಸಂಧ್ಯಾವಂದನೆಯನ್ನು ಮಾಡಬೇಕು. ಕುಳಿತುಕೊಂಡೇ ಸಾಯಂಕಾಲದಲ್ಲಿ ಗಾಯತ್ರಿಯನ್ನು ಜಪಿಸಬೇಕು. ಬೆಳಗಿನ ಗಾಯತ್ರೀ ಜಪವನ್ನು ಕುಳಿತುಕೊಂಡು ಮಾಡುವವನ, ಸಾಯಂಕಾಲದ ಗಾಯತ್ರೀಜಪವನ್ನು ನಿಂತು ಮಾಡುವವನು ಶೂದ್ರಸಮಾನ. ಅವನು ಎಲ್ಲ ಕರ್ಮಗಳಿಗೂ ಅನರ್ಹ. ಅನಂತರ ವಿಧಿಗೆ ಅನುಗುಣವಾಗಿ ಹೋಮವನ್ನು ಮಾಡಿ, ಉಳಿದದ್ದನ್ನು ಬಂಧುಭೃತ್ಯರೊಡನೆ ಊಟ ಮಾಡಬೇಕು. ರಾತ್ರಿ ಕಾಲುಗಳನ್ನು ಒಣಗಿಸಿಕೊಂಡು ಮಲಗಬೇಕು. ಉತ್ತರಾಭಿಮುಖವಾಗಿ ಮತ್ತು ಪಶ್ಚಿಮಾಭಿಮುಖವಾಗಿ ಮಲಗಬಾರದು. ಬಯಲಿನಲ್ಲಿ ಮಲಗಬಾರದು. ನಗ್ನನಾಗಿ, ಅಶುಚಿಯಾಗಿ ಮಲಗಬಾರದು. ಆಸನದಲ್ಲಿ ನಿದ್ರಿಸಬಾರದು. ಶಿಥಿಲವಾದ ಮಂಚದ ಮೇಲೆ, ಖಾಲಿಮನೆಯಲ್ಲಿ ಮಲಗಬಾರದು. ಬಿದಿರಿನ ಶಯನದಲ್ಲಿ, ಮುತ್ತುಗದ ಎಲೆಯ ಶಯನದಲ್ಲಿ ಮಲಗಬಾರದು.

ಹೀಗೆ ಬ್ರಾಹ್ಮಣ ನಿತ್ಯಕರ್ತವ್ಯವನ್ನು ಹೇಳಿದ್ದೇನೆ. ಇವುಗಳ ಅನುಷ್ಠಾನದಿಂದ ಮುಕ್ತಿಯು ಲಭಿಸುತ್ತದೆ. ನಾಸ್ತಿಕ್ಯಬುದ್ಧಿಯಿಂದ ಅಥವಾ ಸೋಮಾರಿತನದಿಂದ ಯಾರು ಈ ಕರ್ತವ್ಯಗಳನ್ನು ಮಾಡುವುದಿಲ್ಲವೋ ಅವನು ಘೋರನರಕಗಳಿಗೆ ಹೋಗುತ್ತಾನೆ. ಕಾಗೆಯಾಗುತ್ತಾನೆ. ತಮ್ಮ ತಮ್ಮ ಆಶ್ರಮನಿಯಮಗಳನ್ನು ಪಾಲಿಸದೆ ಬೇರೆ ವಿಧಾನದಿಂದ ಮುಕ್ತಿಯಾಗುವುದಿಲ್ಲ. ಆದ್ದರಿಂದ ಪರಮಾತ್ಮನನ್ನು ಒಲಿಸುವುದಕ್ಕೋಸ್ಕರ ತಮ್ಮ ತಮ್ಮ ಆಶ್ರಮಕ್ಕೆ ವಿಹಿತವಾದ ಕರ್ಮಗಳನ್ನು ಮಾಡಬೇಕು.

* * *

## ಅಧ್ಯಾಯ-೭೩

ವ್ಯಾಸ ಉವಾಚ :

ದ್ವಿಜರು ಅಮಾವಾಸ್ಯೆಯಂದು ಪಿಂಡಾನ್ವಾಹಾರ್ಯಕ ಶ್ರಾದ್ಧವನ್ನು ಭಕ್ತಿಯಿಂದ ಮಾಡಬೇಕು. ಇದರಿಂದ ಭೋಗ-ಮುಕ್ತಿಗಳು ಲಭಿಸುತ್ತವೆ. ಅಮಾವಾಸ್ಯೆಯ ದಿನ ಅಪರಾಹ್ನ ಕಾಲದಲ್ಲಿ ಈ ಶ್ರಾದ್ಧವನ್ನು ಮಾಪದಿಂದ ಮಾಡಬೇಕು. ಕೃಷ್ಣಪಕ್ಷದಲ್ಲಿ ಚತುರ್ದಶಿಯನ್ನು ಬಿಟ್ಟು ಎಲ್ಲ ತಿಥಿಗಳು ಈ ಶ್ರಾದ್ಧಕ್ಕೆ ಯೋಗ್ಯ ದಿನಗಳು. ಪಾಡ್ಯದಿಂದ ಆರಂಭಿಸಿ ಮುಂದಿನ ತಿಥಿಗಳು ಹೆಚ್ಚು ಯೋಗ್ಯ. ಪುಷ್ಯ ಮೊದಲಾದ ಮೂರು ಮಾಸಗಳಲ್ಲಿ

ಬರುವ ಮೂರು ಅಮಾವಾಸ್ಯೆಗಳು ಅಷ್ಟಕಗಳು. ಈ ಮೂರು ಅಷ್ಟಕಗಳು ಮತ್ತು ಮಾಘಮಾಸದ ಹುಣ್ಣಿಮೆ ಶ್ರಾದ್ಧಕ್ಕೆ ಯೋಗ್ಯವಾದ ಪುಣ್ಯಕರವಾದ ತಿಥಿಗಳು. ವರ್ಷಋತುವಿನಲ್ಲಿ ಮಘಾನಕ್ಷತ್ರಯುಕ್ತವಾದ ತ್ರಯೋದಶಿ ಶ್ರಾದ್ಧಕ್ಕೆ ವಿಶೇಷವಾಗಿ ಯೋಗ್ಯವಾದ ದಿನ. ಚಂದ್ರ-ಸೂರ್ಯರ ಗ್ರಹಣಕಾಲದಲ್ಲಿ ಬಾಂಧವರಿಗೆ ವಿಸ್ತಾರವಾಗಿ ನೈಮಿತ್ತಿಕ ಶ್ರಾದ್ಧವನ್ನು ಮಾಡಬೇಕು. ಮಾಡದವನು ನರಕಭಾಗಿಯಾಗುತ್ತಾನೆ. ಗ್ರಹಣ ಮೊದಲಾದ ಸಮಯದಲ್ಲಿ ಕಾಮ್ಯಶ್ರಾದ್ಧಗಳನ್ನು ಶಾಸ್ತ್ರಗಳು ಹೇಳಿವೆ. ಅಯನೆ, ವಿಷುವ, ವ್ಯತೀಪಾತಗಳಲ್ಲಿ ಶ್ರಾದ್ಧವು ಅನಂತಫಲವನ್ನು ಕೊಡುತ್ತದೆ. ಸಂಕ್ರಮಣದಲ್ಲಿ ಶ್ರಾದ್ಧವು ಅಕ್ಷಯಫಲವನ್ನು ಕೊಡುತ್ತದೆ. ಜನ್ಮದಿನ, ಜನ್ಮನಕ್ಷತ್ರಗಳ ಕಾಲದಲ್ಲಿ ಶ್ರಾದ್ಧವನ್ನು ವಿಶೇಷ-ಶ್ರದ್ಧೆಯಿಂದ ಮಾಡಬೇಕು. ಕೃತ್ತಿಕಾನಕ್ಷತ್ರಕಾಲದಲ್ಲಿ ಶ್ರಾದ್ಧವನ್ನು ಮಾಡಿದರೆ ಸ್ವರ್ಗವು ಲಭಿಸುತ್ತದೆ. ರೋಹಿಣಿಯಲ್ಲಿ ಮಾಡಿದರೆ ಸಂತಾನಪ್ರಾಪ್ತಿ. ಮೃಗಶಿರಾ ನಕ್ಷತ್ರ ಶ್ರಾದ್ಧವು ಬ್ರಹ್ಮವರ್ಚಸ್ ಅನ್ನು ಉಂಟುಮಾಡುತ್ತದೆ. ಆರ್ದ್ರಾನಕ್ಷತ್ರ ಶ್ರಾದ್ಧದಿಂದ ರೌದ್ರಕರ್ಮಗಳ ಸಿದ್ಧಿಯಾಗುತ್ತದೆ. ಪುನರ್ವಸುಶ್ರಾದ್ಧದಿಂದ ಶೌರ್ಯವು, ಭೂಮಿಯು ಲಭಿಸುತ್ತವೆ. ಪುಷ್ಯ ನಕ್ಷತ್ರಶ್ರಾದ್ಧವು ಸಂಪತ್ಕರ. ಆಶ್ಲೇಷಾ ನಕ್ಷತ್ರದ ಶ್ರಾದ್ಧವು ಸರ್ವಕಾಮಗಳನ್ನು ಈಡೇರಿಸುತ್ತದೆ. ಮಘಾನಕ್ಷತ್ರಶ್ರಾದ್ಧವು ಸೌಭಾಗ್ಯವನ್ನು ಉಂಟುಮಾಡುತ್ತದೆ. ಹುಬ್ಬಾನಕ್ಷತ್ರದಿಂದ ಧನಲಾಭ. ಫಲ್ಗುನೀ ನಕ್ಷತ್ರದಿಂದ ಪಾಪನಾಶ. ಹಸ್ತಾನಕ್ಷತ್ರ ಶ್ರಾದ್ಧದಿಂದ ಬಾಂಧವರ ಮಧ್ಯ ಶ್ರೇಷ್ಠತೆಯು ತನಗೆ ಉಂಟಾಗುತ್ತದೆ. ಸ್ವಾತಿನಕ್ಷತ್ರ ಶ್ರಾದ್ಧದಿಂದ ವ್ಯಾಪಾರಸಿದ್ಧಿ. ವಿಶಾಖಾ ನಕ್ಷತ್ರದಿಂದ ಸುವರ್ಣಸಿದ್ಧಿಯಾಗುತ್ತದೆ. ಅನೂರಾಧಾ ನಕ್ಷತ್ರ ಶ್ರಾದ್ಧದಿಂದ ಮಿತ್ರರೂ, ಜ್ಯೇಷ್ಠಾಶ್ರಾದ್ಧ-ದಿಂದ ರಾಜ್ಯವೂ ಲಭಿಸುತ್ತದೆ. ಮೂಲಾನಕ್ಷತ್ರ ಶ್ರಾದ್ಧದಿಂದ ಕೃಷಿಸಿದ್ಧಿಯೂ, ಪೂರ್ವಾಷಾಢಾ ನಕ್ಷತ್ರ ಶ್ರಾದ್ಧದಿಂದ ಸಮುದ್ರಸಂಪತ್ತಿನ ಸಿದ್ಧಿಯೂ ಆಗುತ್ತವೆ. ಉತ್ತರಾಷಾಢಾನಕ್ಷತ್ರದಲ್ಲಿ ಶ್ರಾದ್ಧದಿಂದ ಸರ್ವಾಭೀಷ್ಟ ಸಿದ್ಧಿಯಾಗುತ್ತದೆ. ಶ್ರವಣನಕ್ಷತ್ರ ಶ್ರಾದ್ಧದಿಂದ ಶ್ರೇಷ್ಠತೆಯ ಸಿದ್ಧಿ, ಧನಿಷ್ಠಾ ಶ್ರಾದ್ಧವು ಇಷ್ಟಾರ್ಥಸಿದ್ಧಿ, ಶತತಾರಾ ಶ್ರಾದ್ಧದಿಂದ ಅತಿಶಯವಾದ ಬಲದ ಸಿದ್ಧಿಯಾಗುತ್ತದೆ. ರೇವತಿ ಶ್ರಾದ್ಧದಿಂದ ಗೋಸಂಪತ್ತು ಉಂಟಾಗುತ್ತದೆ. ಅಶ್ವಿನೀ ಶ್ರಾದ್ಧ-ದಿಂದ ಅಶ್ವಸಂಪತ್ತಿನ ಸಿದ್ಧಿ. ಭರಣೀ ಶ್ರಾದ್ಧದಿಂದ ಜೀವನೋಪಾಯಸಿದ್ಧಿ.

ಆದಿತ್ಯವಾರ ಶ್ರಾದ್ಧದಿಂದ ಆರೋಗ್ಯವು, ಸೋಮವಾರ ಶ್ರಾದ್ಧದಿಂದ ಸೌಭಾಗ್ಯವೂ, ಮಂಗಳವಾರ ಶ್ರಾದ್ಧದಿಂದ ಸರ್ವತ್ರವಿಜಯವೂ, ಬುಧವಾಸರ ಶ್ರಾದ್ಧದಿಂದ ಸರ್ವಕಾಮ-ಸಿದ್ಧಿಯೂ, ಗುರುವಾರ ಶ್ರಾದ್ಧದಿಂದ ಇಷ್ಟವಾದ ವಿದ್ಯೆಯೂ, ಶುಕ್ರವಾರ ಶ್ರಾದ್ಧದಿಂದ ಧನವೂ, ಶನಿವಾರ ಶ್ರಾದ್ಧದಿಂದ ಆಯುಷ್ಯವೂ ಉಂಟಾಗುತ್ತವೆ.

ಪ್ರತಿಪತ್ (ಪಾಡ್ಯ) ಶ್ರಾದ್ಧದಿಂದ ಒಳ್ಳೆಯ ಮಕ್ಕಳ, ದ್ವಿತೀಯಾ ಶ್ರಾದ್ಧದಿಂದ ಪುತ್ರಿಯ, ತೃತೀಯಾಶ್ರಾದ್ಧದಿಂದ ಪಶುಗಳ, ಚತುರ್ಥೀ-ಪಂಚಮೀ ಶ್ರಾದ್ಧದಿಂದ ಉತ್ತಮಪುತ್ರರ ಪ್ರಾಪ್ತಿಯಾಗುತ್ತದೆ. ಷಷ್ಠೀಶ್ರಾದ್ಧದಿಂದ ಕಾಂತಿಯನ್ನು, ಕೃಷಿಯನ್ನೂ, ಸಪ್ತಮಿ ಶ್ರಾದ್ಧದಿಂದ

ಧನವನ್ನು ಅಷ್ಟಮೀ ಶ್ರಾದ್ಧದಿಂದ ವ್ಯಾಪಾರವನ್ನೂ ವಿಪುಲವಾಗಿ ಪಡೆಯುತ್ತಾನೆ. ನವಮೀ, ದಶಮೀ ಮತ್ತು ಏಕಾದಶೀ ಶ್ರಾದ್ಧಗಳಿಂದ ಕ್ರಮವಾಗಿ ಒಂದು ಗೊರಸಿನ, ಎರಡು ಗೊರಸಿನ ಪ್ರಾಣಿಗಳನ್ನು ಬ್ರಹ್ಮವರ್ಚಸ್ವಿಗಳಾದ ಮಕ್ಕಳನ್ನೂ ಪಡೆಯುತ್ತಾನೆ.

ದ್ವಾದಶೀ ಶ್ರಾದ್ಧದಿಂದ ಬಂಗಾರ, ಬೆಳ್ಳಿ ಮತ್ತು ಅನ್ನ-ವಸ್ತ್ರಗಳ ಪ್ರಾಪ್ತಿಯಾಗುತ್ತದೆ. ತ್ರಯೋದಶೀ ಶ್ರಾದ್ಧದಿಂದ ಜ್ಞಾತಿಗಳಲ್ಲಿ ತನಗೆ ಶ್ರೇಷ್ಠತೆಯು ಉಂಟಾಗುತ್ತದೆ. ಚತುರ್ದಶೀ ಶ್ರಾದ್ಧದಿಂದ ಕೆಟ್ಟಮಕ್ಕಳು ಹುಟ್ಟುತ್ತಾರೆ. ಅಮಾವಾಸ್ಯೆ ಅಥವಾ ಹುಣ್ಣಿಮೆಯ ಶ್ರಾದ್ಧದಿಂದ ಎಲ್ಲ ಅಪೇಕ್ಷೆಗಳೂ ಈಡೇರುತ್ತವೆ. ಚತುರ್ದಶಿ ಶ್ರಾದ್ಧವು ಅನಿಷ್ಟಕರವಾದುದರಿಂದ ಆ ದಿನ ಶ್ರಾದ್ಧವನ್ನು ಮಾಡಬಾರದು. ಶಸ್ತ್ರದಿಂದ ಹತರಾದವರಿಗೆ ಆ ದಿನ ಶ್ರಾದ್ಧವನ್ನು ಮಾಡಬೇಕು.

ಶ್ರಾದ್ಧಕ್ಕೆ ಉಪಯುಕ್ತವಾದ ದ್ರವ್ಯ ಮತ್ತು ಬ್ರಾಹ್ಮಣರು ದೊರೆತಾಗ ಶ್ರಾದ್ಧಕ್ಕೆ ಕಾಲನಿಯಮವೇ ಇಲ್ಲ.

ಭೋಗ ಮತ್ತು ಮುಕ್ತಿ ಶ್ರಾದ್ಧದಿಂದ ಲಭಿಸುವ ಫಲಗಳು. ಆದಕ್ಕಾಗಿ ಶ್ರಾದ್ಧವನ್ನು ಮಾಡಬೇಕು. ಯಾವುದೇ ಕಾರ್ಯದ ಆರಂಭದಲ್ಲಿ, ಅಭ್ಯುದಯವಾದಾಗ, ಪುತ್ರಜನ್ಮ ಮೊದಲಾದ ಸಂದರ್ಭದಲ್ಲಿ ಪಾರ್ವಣ ಶ್ರಾದ್ಧವನ್ನು ಮಾಡಬೇಕು. ಹೀಗೆ ಶ್ರಾದ್ಧವು ಐದು ವಿಧ ಎಂದು ಮನು ಹೇಳಿದ್ದಾನೆ. ಯಾತ್ರೆಯ ಸಂದರ್ಭದಲ್ಲಿ ತೀರ್ಥಶ್ರಾದ್ಧವು ವಿಹಿತವಾಗಿದೆ. ಇದನ್ನು ತಪ್ಪದೇ ಮಾಡಬೇಕು. ಶುದ್ಧಿಗಾಗಿ ಶ್ರಾದ್ಧ ಮಾಡಬೇಕೆಂದು ಬ್ರಹ್ಮದೇವರು ಹೇಳಿದ್ದಾರೆ. ದೈವಿಕಶ್ರಾದ್ಧವನ್ನು ಭಯದಿಂದ ಬಿಡುಗಡೆಯನ್ನು ಪಡೆಯುವುದಕ್ಕಾಗಿ ಮಾಡಬೇಕು.

ಸಂಧ್ಯಾಕಾಲದಲ್ಲಿ ರಾತ್ರಿಯಲ್ಲಿ ಶ್ರಾದ್ಧವನ್ನು ಮಾಡಬಾರದು. ರಾಹುದರ್ಶನವಾಗುವ ರಾತ್ರಿಯಲ್ಲಿ ಮಾಡಬೇಕು. ದೇಶಕ್ಕೆ ಇರುವ ಮಹಿಮೆಗೆ ತಕ್ಕಂತೆ ಶ್ರಾದ್ಧವು ಪುಣ್ಯಕರ-ವಾಗುತ್ತದೆ. ಪ್ರಯಾಗದಲ್ಲಿ ದೇವಕಂಟಕ ಎಂಬ ಸ್ಥಳದಲ್ಲಿ ಗಂಗಾತೀರದಲ್ಲಿ ಮಾಡುವ ಶ್ರಾದ್ಧವು ಅಕ್ಷಯಫಲವನ್ನು ಕೊಡುತ್ತದೆ. ಇಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳು ಸಂತೋಷದಿಂದ ಗಾಯನ-ನರ್ತನಗಳನ್ನು ಮಾಡುತ್ತಾರೆ.

ಶೀಲವಂತರಾದ ಬಹಳ ಪುತ್ರರನ್ನು ಪಡೆಯಬೇಕು. ಅವರಲ್ಲಿ ಒಬ್ಬನಾದರೂ ಗಯೆಗೆ ಹೋಗಿ ಶ್ರಾದ್ಧವನ್ನು ಮಾಡಬಹುದು. ಗಯೆಯಲ್ಲಿ ಶ್ರಾದ್ಧವನ್ನು ಮಾಡಿದರೆ ಪಿತೃಗಳು ಕಷ್ಟದಿಂದ ಮೇಲೆದ್ದು ಸದ್ಗತಿಯನ್ನು ಪಡೆಯುತ್ತಾರೆ. ವರಾಹಪರ್ವತದಲ್ಲಿ, ಗಯೆಯಲ್ಲಿ ಪಿತೃಶ್ರಾದ್ಧವು ಪಿತೃಗಳಿಗೆ ವಿಶೇಷವಾಗಿ ತೃಪ್ತಿಕರ. ಹರನ ಸಾಕ್ಷಾತ್ ಸನ್ನಿಧಾನವಿರುವ ವಾರಾಣಸಿಯಲ್ಲೂ ಶ್ರಾದ್ಧವು ಪಿತೃಗಳಿಗೆ ತೃಪ್ತಿಕರ. ಗಂಗಾದ್ವಾರ, ಪ್ರಭಾಸ, ಬಿಲ್ವಕ, ನೀಲಪರ್ವತ, ಕುರುಕ್ಷೇತ್ರ, ಕುಬ್ಜಾಗ್ರ, ಭೃಗುತುಂಗ, ಮಹಾಲಯ, ಕೇದಾರ, ಫಲ್ಗುತೀರ್ಥ,

ನೈಮಿಷಾರಣ್ಯ , ಸರಸ್ವತೀ ತೀರ, ಪುಷ್ಕರ, ನರ್ಮದಾ, ಕುಶಾವರ್ತ, ಶ್ರೀಶೈಲ, ಭದ್ರಕರ್ಣಕ, ನೇತ್ರಾವತಿ, ವಿಶಾಖಾ, ಗೋದಾವರಿ ಮೊದಲಾದ ಪುಣ್ಯಕ್ಷೇತ್ರ-ತೀರ್ಥಗಳಲ್ಲಿ ಶ್ರಾದ್ಧದಾನವು ಪಿತೃಗಳಿಗೆ ವಿಶೇಷವಾದ ತೃಪ್ತಿಯನ್ನುಂಟು ಮಾಡುವುದು. ಮರಳಿನ ಪ್ರದೇಶದಲ್ಲಿ ಶ್ರಾದ್ಧದಾನವು ಪಿತೃಗಳಿಗೆ ವಿಶೇಷವನ್ನು ತೃಪ್ತಿಯನ್ನುಂಟು ಮಾಡುವುದು.

ಭತ್ತ, ಯವ, ಉದ್ದು, ನೀರು, ಮೂಲ, ಫಲ, ಶ್ಯಾಮಾಕ, ಕಾಶ, ನೀವಾರ, ಪ್ರಿಯಂಗುಂ, ಗೋಧಿ, ಎಳ್ಳು, ಹೆಸರು -ಈ ಪದಾರ್ಥಗಳನ್ನುಪಯೋಗಿಸಿ ಮಾಡಿದ ಶ್ರಾದ್ಧ-ದಿಂದ ಪಿತೃಗಳು ಒಂದು ತಿಂಗಳು ತೃಪ್ತರಾಗಿರುತ್ತಾರೆ. ಶ್ರಾದ್ಧಕಾಲದಲ್ಲಿ ಮಾವು, ಹಲಸು, ಕಬ್ಬು, ದ್ರಾಕ್ಷಿ, ದಾಳಿಂಬ, ವಿದಾಶ್ವ, ಕುರುಂಡಗಳನ್ನು ದಾನಮಾಡಬೇಕು. ಅರಳು ಮತ್ತು ಜೇನುತುಪ್ಪವನ್ನು, ಹಿಟ್ಟು-ಸಕ್ಕರೆಯನ್ನು ಶೃಂಗಾಟಕ-ಕಶೇರುಕಗಳನ್ನು ಶ್ರಾದ್ಧಕಾಲದಲ್ಲಿ ದಾನಮಾಡಬೇಕು.

ಪಿಪ್ಪಲೀ, ರುಚಕ, ಮಸೂರಕ, ಕೂಷ್ಮಾಂಡ, ಅಲಾಬು, ವಾರ್ತಾಕ, ಭೂತೃಣ, ಸರಸ, ಕುಸುಂಭ, ಪಿಂಡಮೂಲ, ತಂದುಲೀಯಕ, ರಾಜಮಾಷಗಳನ್ನು, ಎಮ್ಮೆ ಮತ್ತು ಆಡಿನ ಹಾಲನ್ನು ಶ್ರಾದ್ಧದಲ್ಲಿ ಉಪಯೋಗಿಸಬಾರದು. ಆಢಕ, ಕೋವಿದಾರ, ಪಾಲಕ್ಯ ಮತ್ತು ಮರೀಚ ಇವುಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಬಾರದು.

* * *

## ಅಧ್ಯಾಯ-೭೪

### ವ್ಯಾಸ ಉವಾಚ :

ಅಮಾವಾಸ್ಯೆಯಂದು ಸ್ನಾನ ಮಾಡಿದನಂತರ ಶಾಸ್ತ್ರದಲ್ಲಿ ಹೇಳಿರುವಂತೆ ಪಿತೃಗಳಿಗೆ ತರ್ಪಣವನ್ನು ಕೊಟ್ಟು ಪಿಂಡಾನ್ವಾಹಾರ್ಯಕ ಶ್ರಾದ್ಧವನ್ನು ಮಾಡಬೇಕು. ಶ್ರಾದ್ಧವನ್ನು ಮಾಡುವಾಗ ಮನಸ್ಸು ಶಾಂತವಾಗಿರಬೇಕು. ಮೊದಲೇ ವೇದದಲ್ಲಿ ಪಾರಂಗತನಾದ ಬ್ರಾಹ್ಮಣನನ್ನು ಕರೆದಿರಬೇಕು. ವೇದಪಾರಂಗತನಾದ ಬ್ರಾಹ್ಮಣನು ಹವ್ಯ-ಕವ್ಯಗಳ ದಾನಕ್ಕೆ ಪಾತ್ರ ಎಂದು ಶಾಸ್ತ್ರಗಳು ಹೇಳಿವೆ.

### ಶ್ರಾದ್ಧ ದಾನಕ್ಕೆ ಪಾತ್ರರು :

ಸೋಮಪಾನವನ್ನು ಮಾಡುವ, ರಜೋಗುಣರಹಿತರಾದ, ಧರ್ಮವನ್ನು ತಿಳಿದಿರುವ, ಶಾಂತಮನಸ್ಕಿನ, ವ್ರತಗಳನ್ನು ಆಚರಿಸುವ, ನಿಯಮಗಳನ್ನು ಪಾಲಿಸುವ, ಋತುಕಾಲದಲ್ಲಿ

ಭಾರ್ಯಾಸಂಗವನ್ನು ಮಾಡುವ ಬ್ರಾಹ್ಮಣರು ಶ್ರಾದ್ಧದಾನಕ್ಕೆ ಅರ್ಹರು. ಪಂಚ ಅಗ್ನಿಗಳ (ತನ್ನ ನಾಲ್ಕು ದಿಕ್ಕುಗಳಲ್ಲಿ ಅಗ್ನಿ ಮತ್ತು ಸೂರ್ಯ) ತಾಪವನ್ನು ಸಹಿಸುತ್ತಾ ತಪಸ್ಸು ಮಾಡುವ, ಋಗ್ವೇದ, ಯಜುರ್ವೇದಗಳನ್ನು ಅಧ್ಯಯನ ಮಾಡಿರುವ ತ್ರಿಸುಪರ್ಣ, ತ್ರಿಮಧುಸೂಕ್ತಗಳ ಅಧ್ಯಯನವನ್ನು ಮಾಡಿರುವ ಬ್ರಾಹ್ಮಣರು ಶ್ರಾದ್ಧಕ್ಕೆ ಅರ್ಹರು.

**ಪಂಕ್ತಿಪಾವನ :**

ಅಹಿಂಸಾವ್ರತನಿರತನಾದ, ದಾನವನ್ನು ಸ್ವೀಕರಿಸಿದ ಸತ್ರಯಾಗವನ್ನು ನಡೆಸುವ, ದಾನವನ್ನು ಮಾಡುವ ವ್ಯಕ್ತಿಯು ಪಂಕ್ತಿಪಾವನ. ತಂದೆ-ತಾಯಿಗಳಿಗೆ ಹಿತವಾಗುವಂತೆ ನಡೆದುಕೊಳ್ಳುವ, ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡುವ, ದೇಹ-ಇಂದ್ರಿಯಗಳ ವ್ಯಾಪಾರ-ಪ್ರಯೋಜನವನ್ನು ತಿಳಿದಿರುವ, ಇಂದ್ರಿಯನಿಗ್ರಹವಿರುವ ವ್ಯಕ್ತಿಯು ಪಂಕ್ತಿ-ಪಾವನ. ಜ್ಞಾನದಲ್ಲಿ ಆಸಕ್ತನಾದ, ವೇದಾಂತಗಳ (ಉಪನಿಷತ್ತುಗಳ) ಅರ್ಥವನ್ನು ಚಿಂತನೆ ಮಾಡುವ, ಶ್ರದ್ಧಾಲುವಾದ, ಶ್ರಾದ್ಧವನ್ನು ಆಚರಿಸುವ ಬ್ರಾಹ್ಮಣನು ಪಂಕ್ತಿಪಾವನ. ವೇದವಿದ್ಯೆಯಲ್ಲಿ ಆಸಕ್ತನಾದ, ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮಾಡಿ ವಿದ್ಯುಕ್ತವಾಗಿ ಹೊರಗೆ ಬಂದಿರುವ, ಬ್ರಹ್ಮಚರ್ಯವನ್ನು ಪಾಲಿಸುತ್ತಿರುವ, ಅಥರ್ವ ವೇದಾಧ್ಯಯನವನ್ನು ಮಾಡಿರುವ, ಮೋಕ್ಷಾರ್ಥಿಯಾಗಿರುವ ಬ್ರಾಹ್ಮಣನು ಪಂಕ್ತಿಪಾವನ. ಬೇರೆ ಗೋತ್ರ-ಪ್ರವರಗಳಿಗೆ ಸೇರಿದ, ಕುಲಸಂಬಂಧಿಯಲ್ಲದ ಬ್ರಾಹ್ಮಣ ಪಂಕ್ತಿಪಾವನ. ಶ್ರಾದ್ಧದಲ್ಲಿ ಯೋಗಿಯೂ, ಶಾಂತನೂ, ತತ್ವಜ್ಞಾನನಿರತನೂ ಆದ ಬ್ರಾಹ್ಮಣನಿಗೆ ಭೋಜನವನ್ನು ಮಾಡಿಸಬೇಕು. ಅಂತಹ ಬ್ರಾಹ್ಮಣನು ಸಿಗದಿದ್ದರೆ ಜಿತೇಂದ್ರಿಯನೂ, ಉಪಕಾರಶೀಲನೂ ಆದ ಬ್ರಾಹ್ಮಣನಿಗೆ ಭೋಜನವನ್ನು ಮಾಡಿಸಬೇಕು. ಅವನೂ ಸಿಗದಿದ್ದರೆ ಮೋಕ್ಷಾರ್ಥಿಯೂ, ವಿಷಯಪದಾರ್ಥಗಳ ಸಂಗವಿಲ್ಲದವನೂ ಆಗ ಗೃಹಸ್ಥಾಶ್ರಮಿಗೆ ಭೋಜನವನ್ನು ಮಾಡಿಸಬೇಕು. ಮೇಲೆ ವಿವರಿಸಲ್ಪಟ್ಟ ಯಾರೂ ಸಿಗದಿದ್ದರೆ ಸಾಧಕನಾದ ಗೃಹಸ್ಥನಿಗೆ ಭೋಜನವನ್ನು ಮಾಡಿಸಬೇಕು.

ಪ್ರಕೃತಿಯ ಗುಣ-ತತ್ವಗಳನ್ನು ವೇದಾಂತವನ್ನೂ ತಿಳಿದ ಯತಿಯು ಯಾರ ಭೋಜನ-ವನ್ನು ಸ್ವೀಕರಿಸುವನೋ ಅವನಿಗೆ ಅನಂತಫಲವು ಲಭಿಸುವುದು. ಆದ್ದರಿಂದ ಶ್ರಾದ್ಧಕಾಲದಲ್ಲಿ ಪ್ರಯತ್ನಪಟ್ಟು ಈಶ್ವರಜ್ಞಾನನಿಷ್ಠರಾದ ಯತಿಗಳಿಗೆ ಭೋಜನವನ್ನು ಮಾಡಿಸಬೇಕು. ಅವರು ಸಿಗದಿದ್ದಾಗ ಬೇರೆಯವರಿಗೆ ಭೋಜನವನ್ನು ಮಾಡಿಸಬೇಕು. ಶ್ರಾದ್ಧಕಾಲದಲ್ಲಿ ಯತಿಗಳಿಗೆ ಭೋಜನವನ್ನು ಮಾಡಿಸುವುದು ಪ್ರಥಮಕಲ್ಪ. ಬೇರೆ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸುವುದು ದ್ವಿತೀಯಕಲ್ಪ. ಇದು ಸಜ್ಜನರು ಅನುಸರಿಸುತ್ತಾ ಬಂದಿರುವ ದಾರಿ. ತಾಯಿಯ ತಂದೆ, ಸೋದರಮಾವ, ಸೋದರಿಯ ಮಗ, ಮಾವ, ಗುರು, ಮಗಳ ಮಗ, ಋತ್ವಿಜರು, ಯಾಜ್ಯರು (ತನ್ನ ಪೌರೋಹಿತ್ಯದಲ್ಲಿ ಯಾಗವನ್ನು ಮಾಡುವವರು) ಇವರನ್ನು ಶ್ರಾದ್ಧಭೋಜನಕ್ಕೆ ಕರೆಯಬೇಕು.

## ಶ್ರಾದ್ಧಭೋಜನಕ್ಕೆ ಅನರ್ಹರು :

ದಕ್ಷಿಣೆಯ ಆಸೆಯಿಂದ ಭೋಜನಕ್ಕೆ ಬರುವವರನ್ನು, ಅಂತಹವರು ಮಿತ್ರರಾಗಿದ್ದರೂ, ಕರೆಯಬಾರದು. ದಕ್ಷಿಣೆಯ ಆಸೆಯು ಒಂದು ಪಿಶಾಚಿ. ಆದರಿಂದ ಈ ಲೋಕದಲ್ಲೂ ಫಲವಿಲ್ಲ. ಪರಲೋಕದಲ್ಲೂ ಫಲವಿಲ್ಲ. ವೇದ-ಶಾಸ್ತ್ರಗಳ ಅಧ್ಯಯನವನ್ನು ಮಾಡದಿರುವ ಬ್ರಾಹ್ಮಣನು ಹುಲ್ಲುಕಡ್ಡಿಗೆ ಹತ್ತಿದ ಬೆಂಕಿಯಂತೆ ಆರಿಹೋಗುತ್ತಾನೆ. ಅರ್ಥಾತ್ ಅವನಲ್ಲಿ ಬ್ರಹ್ಮವರ್ಚಸ್ಸು ಉಜ್ವಲವಾಗಿ, ನಿರಂತರವಾಗಿ ಇರುವುದಿಲ್ಲ. ಆದ್ದರಿಂದ ಅವನಿಗೆ ಶ್ರಾದ್ಧ-ಭೋಜನವನ್ನು ಮಾಡಿಸಬಾರದು. ಅವನ ಪಾಣಿಯಲ್ಲಿ ಹೋಮ ಬೂದಿಯಲ್ಲಿ ಮಾಡಿದ ಹೋಮ. ಮರುಭೂಮಿಯಲ್ಲಿ ಬೀಜವನ್ನು ಬಿತ್ತುವುದು ಹೇಗೆ ನಿಷ್ಫಲವೋ ಹಾಗೆ ವೇದಾಧ್ಯಯನ ಮಾಡದವನ ಪಾಣಿಯಲ್ಲಿ ಮಾಡುವ ಹೋಮ ಮತ್ತು ಅವನಿಗೆ ಮಾಡಿಸುವ ಭೋಜನ ನಿಷ್ಫಲ. ಹವ್ಯ-ಕವ್ಯಗಳಲ್ಲಿ (ಶ್ರಾದ್ಧಕಾಲದಲ್ಲಿ) ವೇದವನ್ನು ತಿಳಿಯದ-ವನು ಎಷ್ಟು ತುತ್ತುಗಳನ್ನು ತಿನ್ನುವನೋ ಅಷ್ಟು ಉರಿಯುತ್ತಿರುವ, ದಪ್ಪವಾದ ಕಬ್ಬಿಣದ ಗುಂಡುಗಳನ್ನು ತಿನ್ನುವ ಶಿಕ್ಷೆಗೆ ಮರಣಾನಂತರ ಒಳಗಾಗುತ್ತಾನೆ. ಸತ್ಕುಲಪ್ರಸೂತರೂ, ವಿದ್ಯಾವಂತರೂ, ಆಗಿದ್ದರೂ ಕೂಡ ಆಚಾರಹೀನರಾಗಿದ್ದಾರೆ. ಅಂತಹವರು ಶ್ರಾದ್ಧ ಭೋಜನವನ್ನು ಮಾಡಿದರೆ, ಆ ಶ್ರಾದ್ಧಫಲವು ಅಸುರರಿಗೆ ಸೇರುವುದು.

ಯಾರ ಕುಲದಲ್ಲಿ ಮೂರು ಸಂತತಿಗಳಲ್ಲಿ (ಉದಾ: ತಾತ ತಂದೆ ಮಗ) ವೇದಾಧ್ಯಯನವು ನಡೆಯುವುದಿಲ್ಲವೋ ಅವನು ಕೆಟ್ಟ ಬ್ರಾಹ್ಮಣ. ಅವನು ಶ್ರಾದ್ಧಭೋಜನ ಮೊದಲಾದವು- ಗಳಿಗೆ ಅನರ್ಹ.

ಕೃತಘ್ನ, ಚಾಡಿಕೋರ, ಕ್ರೂರ, ನಾಸ್ತಿಕ, ವೇದನಿಂದಕ, ಮಿತ್ರದ್ರೋಹಿ, ಕುಹಕ -ಇವರು ವಿಶೇಷವಾಗಿ ಪಂಕ್ತಿದೂಷಕರು. ಇವರಾರಿಗೂ ಶ್ರಾದ್ಧಭೋಜನವನ್ನು ಮಾಡಿಸಬಾರದು. ದಾನವನ್ನು ಕೊಡಬಾರದು. ಶೂದ್ರಾನ್ನವನ್ನು ತಿಂದ, ಸಂಧ್ಯಾವಂದನೆಯನ್ನು ಬಿಟ್ಟ ಮಹಾಯಜ್ಞಗಳನ್ನು ಮಾಡದ ಬ್ರಾಹ್ಮಣರು ಪಂಕ್ತಿದೂಷಕರು. ಅಧ್ಯಯನ ಮಾಡದ ವೇದವನ್ನು ತ್ಯಾಗಮಾಡಿದ ಸ್ನಾನ-ದಾನಗಳನ್ನು ಬಿಟ್ಟ, ತಾಮಸ, ರಾಜಸ ಬ್ರಾಹ್ಮಣರು ಪಂಕ್ತಿದೂಷಕರು. ಬಹಳ ವಿವರವೇಕೆ! ಇಷ್ಟು ಸಂಕ್ಷೇಪ, ಶಾಸ್ತ್ರ ವಿಹಿತವಾದದ್ದನ್ನು ಮಾಡದ, ಶಾಸ್ತ್ರನಿಂದಿತವಾದದ್ದನ್ನು ಮಾಡುವ ಎಲ್ಲರನ್ನೂ ಪ್ರಯತ್ನಪಟ್ಟು ಬಿಡಬೇಕು. ಶ್ರಾದ್ಧಭೋಜನಕ್ಕೆ ಕರೆಯಲೇಬಾರದು.

* * *

## ಅಧ್ಯಾಯ-೭೫

ವ್ಯಾಸ ಉವಾಚ :

ಶ್ರಾದ್ಧದ ಹಿಂದಿನ ದಿನವೇ ಗೋಮಯದಿಂದ ನೆಲವನ್ನು ಶುದ್ಧ ಮಾಡಬೇಕು. ಬ್ರಾಹ್ಮಣರನ್ನು "ನಾಳೆ ನಮ್ಮ ಪಿತೃಗಳ ಶ್ರಾದ್ಧವು ನಡೆಯಬೇಕಾಗಿದೆ" ಎಂದು ಹೇಳಿ ಗೌರವದಿಂದ ನಿಮಂತ್ರಿಸಬೇಕು. ಹಿಂದಿನ ದಿನವೇ ನಿಮಂತ್ರಿಸಲು ಆಗದಿದ್ದರೆ ಶ್ರಾದ್ಧದ ದಿನವೇ ಹಿಂದೆ ಹೇಳಿದ ಲಕ್ಷಣಗಳನ್ನು ಹೊಂದಿದ ಬ್ರಾಹ್ಮಣರನ್ನು ನಿಮಂತ್ರಿಸಬೇಕು. ಪಿತೃಗಳಿಗೆ ಈ ಮಾತುಗಳು ಕೇಳಿಸುತ್ತವೆ. ಕೇಳಿ ಪಿತೃಗಳು, ಪರಸ್ಪರ ಆಲೋಚಿಸಿ, ಮನೋವೇಗದಿಂದ ಧಾವಿಸುತ್ತಾರೆ. ಅಂತರಿಕ್ಷದಲ್ಲಿ ವಾಯುರೂಪದಿಂದ ಇದ್ದು ಬ್ರಾಹ್ಮಣರ ಜೊತೆ ಊಟಮಾಡುತ್ತಾರೆ. ಅನಂತರ ಸದ್ಗತಿಯನ್ನು ಹೊಂದುತ್ತಾರೆ.

ಆಮಂತ್ರಿತರಾದ ಬ್ರಾಹ್ಮಣರು, ಬ್ರಹ್ಮಚರ್ಯವನ್ನು ಪಾಲಿಸಬೇಕು. ಶ್ರಾದ್ಧಕರ್ತೃವು ಕ್ರೋಧ-ಆತುರ-ಮದಗಳಿಲ್ಲದೆ ಇರಬೇಕು. ಸತ್ಯವಾದಿಯೂ, ಮನಸ್ಸಮಾಧಾನವುಳ್ಳವನೂ ಆಗಿರಬೇಕು. ಭಾರವನ್ನು ಹೊರಬಾರದು. ಮೈಥುನವನ್ನು ಮಾಡಬಾರದು. ದೂರ-ಪ್ರಯಾಣವನ್ನು ಮಾಡಬಾರದು. ಆಮಂತ್ರಿತ ಬ್ರಾಹ್ಮಣನು ಬೇರೆ ಕಡೆ ಶ್ರಾದ್ಧಭೋಜನಕ್ಕೆ ಹೋದರೆ ಘೋರ ನರಕವನ್ನು ಹೊಂದುತ್ತಾನೆ. ಹಂದಿ ಜನ್ಮವನ್ನು ಹೊಂದುತ್ತಾನೆ. ಶ್ರಾದ್ಧಕರ್ತೃವು ಒಬ್ಬರನ್ನು ಆಮಂತ್ರಿಸಿ, ಅನಂತರ ಅವರನ್ನು ಮರೆತು ಮತ್ತೊಬ್ಬರನ್ನು ಆಹ್ವಾನಿಸಿದರೆ ಅವನು ಆಮಂತ್ರಣತ್ಯಾಗವನ್ನು ಮಾಡಿದ ಬ್ರಾಹ್ಮಣನು ಹೊಂದುವ ನರಕಕ್ಕಿಂತ ಹೆಚ್ಚು ಘೋರವಾದ ನರಕಕ್ಕೆ ಹೋಗುತ್ತಾನೆ. ಮಲದಲ್ಲಿ ಕ್ರಿಮಿಯಾಗಿ ಹುಟ್ಟುತ್ತಾನೆ.

ಶ್ರಾದ್ಧಕರ್ತೃವು ಕೋಪರಹಿತನಾಗಿರಬೇಕು. ಶುದ್ಧನಾಗಿರಬೇಕು. ಜಿತೇಂದ್ರಿಯನಾಗಿರ-ಬೇಕು. ಮರುದಿನ (ಶ್ರಾದ್ಧದ ದಿನ) ದಕ್ಷಿಣದಿಕ್ಕಿಗೆ ಹೋಗಿ ಬೇರುಸಹಿತವಾದ ನಿರ್ಮಲವಾದ ನೀರಿನಲ್ಲಿ ದಕ್ಷಿಣಮುಖವಾಗಿರುವ ದರ್ಭೆಗಳನ್ನು ತರಬೇಕು. ದಕ್ಷಿಣದಿಕ್ಕಿನ ಕಡೆ ಹರಿಯು-ವಂತಿರುವ, ಮೃದುವಾದ, ಶುಭಲಕ್ಷಣಗಳುಳ್ಳ, ಶುಚಿಯಾದ, ಪ್ರತ್ಯೇಕವಾದ ಸ್ಥಳಕ್ಕೆ ಗೋ-ಮಯವನ್ನು ಹೆಚ್ಚಬೇಕು. ನದೀತೀರದಲ್ಲಿ, ತೀರ್ಥಗಳಲ್ಲಿ, ತನ್ನದೇ ಜಾಗದಲ್ಲಿ, ನಿರ್ಜನ ಪ್ರದೇಶದಲ್ಲಿ ಶ್ರಾದ್ಧಾನ್ನದಾನದಿಂದ ಪಿತೃಗಳು ತೃಪ್ತರಾಗುತ್ತಾರೆ. ಪರರ ಜಾಗದಲ್ಲಿ ಶ್ರಾದ್ಧವನ್ನು ಮಾಡಬಾರದು. ಮೋಹದಿಂದ ಹಾಗೆ ಮಾಡಿದರೆ ಜಾಗದ ಯಜಮಾನರು ಆ ಶ್ರಾದ್ಧದ ವಿಘಾತವನ್ನು ಮಾಡುವರು. ಅರಣ್ಯ, ಪರ್ವತ, ಪುಣ್ಯತೀರ್ಥಗಳು, ದೇವಾಲಯ-ಗಳು - ಇವು ಯಾರ ಸ್ವಾಮಿತ್ವಕ್ಕೂ ಒಳಪಟ್ಟವುಗಳಲ್ಲ. ಈ ಸ್ಥಳಗಳಲ್ಲಿ ಮಾಡಲ್ಪಟ್ಟ ಶ್ರಾದ್ಧವು ಪಿತೃಗಳಿಗೆ ಸೇರುತ್ತದೆ. ಬೇರೆ ಯಾರಿಗೂ ಸೇರುವುದಿಲ್ಲ. ಶ್ರಾದ್ಧಸ್ಥಳದಲ್ಲಿ ಸುತ್ತಲೂ ಎಳ್ಳುಕಾಳನ್ನು ಚೆಲ್ಲಬೇಕು. ಆಡನ್ನು ಕಟ್ಟಬೇಕು. ಎಳ್ಳು ಮತ್ತು ಆಡು ಶ್ರಾದ್ಧದ ಮೇಲೆ

ಅಸುರರ ಪ್ರಭಾವವನ್ನು ತಪ್ಪಿಸುತ್ತವೆ. ಅನಂತರ ಬಹಳ ಸಂಸ್ಕಾರಸಂಪನ್ನವಾದ ಅನ್ನವನ್ನೂ ಅನೇಕ ವ್ಯಂಜನಗಳನ್ನೂ, ಸಂಸ್ಕರಿಸಲ್ಪಟ್ಟ ಚೋಷ್ಯ, ಪೇಯಗಳನ್ನು ತಯಾರಿಸಬೇಕು.

ವಿಶ್ವೇದೇವತೆಗಳ ಸ್ಥಾನದಲ್ಲಿ ಬ್ರಾಹ್ಮಣರಾಗಲು ನಿಮಂತ್ರಿಸಲ್ಪಟ್ಟವರಿಗೆ ಪೂರ್ವಾಭಿ-ಮುಖವಾಗಿ ಆಸನವನ್ನು ಕಲ್ಪಿಸಬೇಕು. ಆಸನಗಳಿಗೆ ಮೂರು ದರ್ಭೆಯನ್ನು ಹಚ್ಚಿರಬೇಕು.

ಪಿತೃಸ್ಥಾನಕ್ಕೆ ನಿಮಂತ್ರಿಸಲ್ಪಟ್ಟ ಬ್ರಾಹ್ಮಣರಿಗೆ ದಕ್ಷಿಣಾಭಿಮುಖವಾಗಿ ಆಸನಗಳನ್ನು ಹಾಕಬೇಕು. ದಕ್ಷಿಣಕ್ಕೆ ತುದಿಯಿರುವಂತೆ ದರ್ಭೆಗಳನ್ನು ಹಾಕಿ ಅವುಗಳ ಮೇಲೆ ಆಸನಗಳನ್ನು ಹಾಕಬೇಕು. ಆಸನಗಳ ಮೇಲೆ ಎಳ್ಳು-ನೀರನ್ನು ಪ್ರೋಕ್ಷಿಸಬೇಕು. ಆಸನಗಳನ್ನು ಮುಟ್ಟಿ ತೋರಿಸುತ್ತಾ ಬ್ರಾಹ್ಮಣರಿಗೆ 'ಕುಳಿತುಕೊಳ್ಳಿ' ಎಂದು ಹೇಳಬೇಕು. ಅವರು ಕುಳಿತು-ಕೊಳ್ಳಬೇಕು. ಪ್ರತಿಯೊಬ್ಬ ಬ್ರಾಹ್ಮಣನನ್ನು ಪ್ರತ್ಯೇಕವಾಗಿ ಹೀಗೆ ಕೂಡಿಸಬೇಕು. ದೇವಸ್ಥಾನ-ದಲ್ಲಿ ಇಬ್ಬರನ್ನು ಪೂರ್ವಾಭಿಮುಖವಾಗಿ ಕೂಡಿಸಬೇಕು. ಪಿತೃಸ್ಥಾನದಲ್ಲಿ ಮೂರುಜನರನ್ನು ಉತ್ತರಾಭಿಮುಖವಾಗಿ ಕೂಡಿಸಬೇಕು.

ಶ್ರಾದ್ಧದಲ್ಲಿ ಸತ್ಕಾರ, ಪ್ರಶಸ್ತ ಸ್ಥಳ, ಯೋಗ್ಯವಾದ ಕಾಲ, ಶುದ್ಧಿ, ಬಹಳ ಶ್ರೇಷ್ಠರಾದ ಬ್ರಾಹ್ಮಣರು -ಈ ಐದು ಬಹಳ ಮುಖ್ಯ. ಶ್ರಾದ್ಧಕ್ಕೆ ಬಹಳ ಜನರನ್ನು ಕರೆದರೆ ಈ ಐದಕ್ಕೂ ಭಂಗ ಬರುತ್ತದೆ. ಆದ್ದರಿಂದ ಶ್ರಾದ್ಧವನ್ನು ವಿಸ್ತರಿಸಬಾರದು. ವೇದಪಾರಂಗತನಾದ, ಶೀಲ ಮೊದಲಾದ ಗುಣಸಂಪನ್ನನಾದ, ಅವಲಕ್ಷಣವಿಲ್ಲದ ಒಬ್ಬನೇ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೂ ಸಾಕು. ಶ್ರಾದ್ಧಕ್ಕಾಗಿ ತಯಾರಿಸಲ್ಪಟ್ಟಿರುವ ಎಲ್ಲ ಪದಾರ್ಥಗಳನ್ನು ಒಂದು ಪಾತ್ರೆಯಲ್ಲಿ ತೆಗೆದುಕೊಂಡು ದೇವಾಲಯದಲ್ಲಿ ನಿವೇದಿಸಿ ಉಳಿದ ಪದಾರ್ಥಗಳನ್ನು ಶ್ರಾದ್ಧಕ್ಕೆ ಉಪಯೋಗಿಸಬೇಕು.

ಪಿತೃಸ್ಥಾನದಲ್ಲಿ ಇರುವವರಿಗೆ ನಡೆಸುವ ವಿಧಿಗಳೆಲ್ಲವನ್ನೂ ಮೊದಲು ವಿಶ್ವೇದೇವತೆಗಳ ಸ್ಥಾನದಲ್ಲಿ ಇರುವವರಿಗೆ ಮಾಡಬೇಕು. ಕ್ರಮವಾಗಿ ಕುಳಿತಿರುವ ಎಲ್ಲರನ್ನೂ ಮಾಲೆ, ಮುಂಡಾಸು, ಧೂಪ, ವಸ್ತ್ರ ಸುಗಂಧ, ಆಭರಣ ಇವುಗಳಿಂದ ಅಲಂಕರಿಸಬೇಕು. ಅನಂತರ ಬ್ರಾಹ್ಮಣರ ಅನುಜ್ಞೆಯನ್ನು ಪಡೆದು ಉತ್ತರಾಭಿಮುಖವಾಗಿ ಕುಳಿತುಕೊಂಡು, ವಿಧಿಗನು-ಗುಣವಾಗಿ 'ವಿಶ್ವೇದೇವಾಸ' ಎಂಬ ಮಂತ್ರದಿಂದ ದೇವತೆಗಳ ಆವಾಹನವನ್ನು ಮಾಡಬೇಕು.

ಎರಡು ಪವಿತ್ರಗಳನ್ನು ಧರಿಸಿ ಪಾತ್ರೆಯನ್ನು ತೊಳೆದು 'ಶನ್ನೋ ದೇವೀಃ' ಎಂಬ ಮಂತ್ರದಿಂದ ನೀರನ್ನು ಹಾಕಿ 'ಯವೋಽಸಿ' ಎಂಬ ಮಂತ್ರದಿಂದ ಯವಗಳನ್ನು ಹಾಕಿ 'ಯಾ ದಿವ್ಯಾ' ಎಂಬ ಮಂತ್ರದಿಂದ ಬ್ರಾಹ್ಮಣರ ಕೈಯಲ್ಲಿ ಅರ್ಘ್ಯವನ್ನು ಕೊಡಬೇಕು. ಗಂಧ, ಮಾಲೆ, ಧೂಪ ಮೊದಲಾದವುಗಳನ್ನು ಯಥಾಶಕ್ತಿ ಕೊಡಬೇಕು. ಅನಂತರ ಜನಿವಾರವನ್ನು ಬಲಹೆಗಲಮೇಲೆ ಹಾಕಿಕೊಂಡು ದಕ್ಷಿಣಾಭಿಮುಖವಾಗಿ ''ಉಶಂತಸ್ತ್ವಾ'' ಮೊದಲಾದ

ಮಂತ್ರದಿಂದ ಪಿತೃಗಳ ಆವಾಹನೆಯನ್ನು ಮಾಡಬೇಕು. ಅನಂತರ ಅವರ ಅನುಜ್ಞೆಯನ್ನು ಪಡೆದು 'ಆಯಂತು ನಃ' ಎಂಬ ಮಂತ್ರವನ್ನು ಜಪಿಸಬೇಕು. ಅನಂತರ ಪಿತೃಪಾತ್ರೆಯಲ್ಲಿ ''ಶಂ ನೋ ದೇವೀಃ'' ಎಂಬ ಮಂತ್ರದಿಂದ ನೀರನ್ನು, 'ತಿಲೋಸಿ' ಎಂಬ ಮಂತ್ರದಿಂದ ತಿಲಗಳನ್ನೂ ಹಾಕಬೇಕು. ಹಿಂದಿನಂತೆ ಬ್ರಾಹ್ಮಣನ ಕೈಯಲ್ಲಿ ಅರ್ಘ್ಯವನ್ನು ಕೊಟ್ಟು, ಪಾತ್ರೆಗಳಲ್ಲಿರುವ ನೀರನ್ನು ಒಂದು ಪಾತ್ರೆಯಲ್ಲಿ ಸೇರಿಸಬೇಕು. ಅನಂತರ 'ಇದು ಪಿತೃಗಳ ಸ್ಥಾನ' ಎಂದು ನಿರ್ದೇಶಿಸುತ್ತಾ ಪಾತ್ರೆಗಳನ್ನು ಕೆಳಮುಖವಾಗಿ ಇಡಬೇಕು. ಅನಂತರ 'ಅಗ್ನೌಕರಣ'ವನ್ನು ಮಾಡುವುದಕ್ಕಾಗಿ ತುಪ್ಪಮಿಶ್ರಿತವಾದ ಅನ್ನವನ್ನು ತೆಗೆದುಕೊಂಡು, 'ಮಾಡು' ಎಂದು ಅನುಜ್ಞೆಯನ್ನು ಪಡೆದು, ಉಪವೀತಿಯಾಗಿ ಹೋಮಿಸಬೇಕು.

ಹೋಮವನ್ನು ಕೈಯಲ್ಲಿ ದರ್ಭೆಯನ್ನು ಧರಿಸಿ ಉಪವೀತಿಯಾಗಿಯೇ (ಜನಿವಾರವನ್ನು ಎಂದಿನ ಕ್ರಮದಲ್ಲಿ ಧರಿಸಿ) ಮಾಡಬೇಕು. ಪಿತೃಕರ್ಮವನ್ನು ಪ್ರಾಚೀನಾವೀತಿಯಾಗಿ ಮಾಡಬೇಕು. ವೇಶ್ವದೇವವನ್ನು ಹೋಮದಂತೆ ಮಾಡಬೇಕು. ದೇವತೆಗಳಿಗೆ ಸತ್ಕಾರವನ್ನು ಮಾಡುವಾಗ ಬಲಮಂಡಿಯನ್ನು ನೆಲಕ್ಕೆ ಊರಬೇಕು. ಪಿತೃಸತ್ಕಾರವನ್ನು ಮಾಡುವಾಗ ಎಡಮಂಡಿಯನ್ನು ನೆಲಕ್ಕೆ ಊರಬೇಕು.

'ಅಗ್ನೌಕರಣ'ದಲ್ಲಿ 'ಸೋಮಾಯ ವೈ ಪಿತೃಮತೆ ಸ್ವಧಾನಮಃ' ಎಂದು ಹೇಳುತ್ತಾ ಆಹುತಿಯನ್ನು ಹಾಕಿ, 'ಅಗ್ನಯೇ ಕವ್ಯವಾಹನಾಯ ಸ್ವಧಾ' ಎಂದು ಹೇಳುತ್ತಾ ಇನ್ನೊಂದು ಆಹುತಿಯನ್ನು ಹಾಕಬೇಕು. ಅಗ್ನಿಯು ಇಲ್ಲದಿದ್ದರೆ ಬ್ರಾಹ್ಮಣನ ಕೈಯಲ್ಲಿ ಹಾಕಬೇಕು. ಅಥವಾ ದೇವರ ಹತ್ತಿರ ಅಥವಾ ಗೋಶಾಲೆಯಲ್ಲಿ ಹಾಕಬೇಕು. ಅನಂತರ ಬ್ರಾಹ್ಮಣರ ಅನುಮತಿಯನ್ನು ಪಡೆದು ದಕ್ಷಿಣ ದಿಕ್ಕಿಗೆ ಹೋಗಿ ಸ್ಥಳವೊಂದರಲ್ಲಿ ಗೋಮಯವನ್ನು ಲೇಪಿಸಿ ಮರಳನ್ನು ಹಾಕಬೇಕು. ಅಲ್ಲಿ ದಕ್ಷಿಣದ ದಿಕ್ಕಿನ ಕಡೆಗೆ ತಗ್ಗಾಗಿರುವ ಚೌಕಾಕಾರದ ಮಂಡಲವನ್ನು ಮಾಡಿ ಒಂದು ದರ್ಭೆಯಿಂದ ಆದರ ಮಧ್ಯವನ್ನು ಮೂರು ಗೆರೆಯನ್ನು ಎಳೆಯಬೇಕು. ಅವರ ಮೇಲೆ ದಕ್ಷಿಣಮುಖವಾಗಿ ದರ್ಭೆಗಳನ್ನು ಹಾಸಿ ಉಳಿದಿರುವ ಹವಿಸ್ಸಿನಿಂದ ಮೂರು ಪಿಂಡಗಳನ್ನು ಇಡಬೇಕು. ಹೀಗೆ ಪಿಂಡಗಳನ್ನು ಇಟ್ಟು, ಆ ಕೈಯನ್ನು 'ಲೇಪಭೋಜನ' ಎಂಬ ಪಿತೃಗಳನ್ನು ಉದ್ದೇಶಿಸಿ ಆ ದರ್ಭೆಗಳ ಮೇಲೆ ಇಡಬೇಕು. ಅನಂತರ ಮೂರು ಸಲ ಆಚಮನವನ್ನು ಮಾಡಿ, ಪ್ರಾಣಾಯಾಮವನ್ನು ಮಾಡಿ ಪಿತೃಗಳನ್ನು ಉದ್ದೇಶಿಸಿ ಪಿಂಡಗಳಿಗೆ ನಮಸ್ಕರಿಸಬೇಕು. ಪಿಂಡದ ಹತ್ತಿರದಲ್ಲಿ ಶೇಷೋದಕವನ್ನು ಚೆಲ್ಲಬೇಕು. ಪಿಂಡಗಳನ್ನು ಆಘ್ರಾಣಿಸಬೇಕು. ಪಿಂಡಗಳನ್ನು ಮಾಡಿ ಉಳಿದ ಅನ್ನವನ್ನು ಬ್ರಾಹ್ಮಣರಿಗೆ ಬಡಿಸಬೇಕು. ಪಾಯಸ, ತೊವ್ವೆ ಮೊದಲಾದ ವಿಧವಿಧವಾದ ರುಚಿಯಾದ ಪದಾರ್ಥಗಳನ್ನು ಬ್ರಾಹ್ಮಣರಿಗೆ ಬಡಿಸಬೇಕು.

ಬ್ರಾಹ್ಮಣರ ಭೋಜನ ಕಾಲದಲ್ಲಿ ಅವರ ಎದುರಿಗೆ ಯಜಮಾನನು ಕೈಮುಗಿದುಕೊಂಡು ನಿಲ್ಲಬೇಕು. ಪುನಃ ಬ್ರಾಹ್ಮಣರಿಗೆ ಅನ್ನವನ್ನು ಬಡಿಸಬೇಕು. ತೃಪ್ತರಾದ ಅವರಿಗೆ

ಆಚಮನವನ್ನು ನೀಡಬೇಕು. ಆಚಮನ ಮಾಡಿದ ಅವರಿಗೆ ಸುತ್ತಲೂ ಇರುವ ಪ್ರದೇಶದಲ್ಲಿ ವಿಶ್ರಾಂತಿ ಪಡೆಯಲು ಅನುಮತಿಯನ್ನು ಕೊಡಬೇಕು. ಬ್ರಾಹ್ಮಣರು'ಸ್ವಧಾ ಅಸ್ತು' ಎಂದು ಹೇಳಬೇಕು. ಭೋಜನವನ್ನು ಮುಗಿಸಿರುವ ಆ ಬ್ರಾಹ್ಮಣರಿಗೆ ಉಳಿದ ಅನ್ನದ ಬಗ್ಗೆ ತಿಳಿಸಬೇಕು. ಅವರು ಹೇಳಿದಂತೆ ಅದನ್ನು ವಿನಿಯೋಗಿಸಬೇಕು.

ಪಿತೃಕರ್ಮದಲ್ಲಿ 'ಸ್ವದಿತಮ್?' (ಚೆನ್ನಾಗಿ ಊಟ ಮಾಡಿದಿರಾ?) ಎಂದು ಬ್ರಾಹ್ಮಣರ ತೃಪ್ತಿಯನ್ನು ಕೇಳಬೇಕು. ಗೋಶಾಲೆಯಲ್ಲಿ 'ಸುಶ್ರಿತಮ್?' ಎಂದೂ, ಅಭ್ಯುದಯಶ್ರಾದ್ಧದಲ್ಲಿ 'ಸಂಪನ್ನಮ್?' ಎಂದೂ ದೇವತಾರಾಧನೆಯಲ್ಲಿ 'ಸೇವಿತಮ್?' ಎಂದೂ ವಿಚಾರಿಸಬೇಕು. ಅನಂತರ ಯಜಮಾನನು ಪಿತೃಸ್ಥಾನದಲ್ಲಿದ್ದ ಬ್ರಾಹ್ಮಣರನ್ನು ಮೊದಲು ಅನಂತರ ವಿಶ್ವೇದೇವತೆಗಳ ಸ್ಥಾನದಲ್ಲಿದ್ದ ಬ್ರಾಹ್ಮಣರನ್ನು ಕಳಿಸಿಕೊಟ್ಟು ದಕ್ಷಿಣದಿಕ್ಕಿನ ಕಡೆ ಹೋಗುತ್ತಾ ಪಿತೃಗಳನ್ನು ''ನಮಗೆ ದಾನ ಮಾಡಿದವರು ಅಭಿವೃದ್ಧಿ ಹೊಂದಲಿ. ವೇದಗಳ ಜ್ಞಾನವು ಹೆಚ್ಚಾಗಲಿ. ಸಂತತಿಯು ಬೆಳೆಯಲಿ. ನಮ್ಮ ಶ್ರದ್ಧೆಯು ಹೋಗದಿರಲಿ. ನಮಗೆ ದಾನ ಮಾಡಲು ಪದಾರ್ಥಗಳು ವಿಪುಲವಾಗಿ ಲಭಿಸಲಿ'' ಎಂದು ಪ್ರಾರ್ಥಿಸಬೇಕು. ಪಿಂಡಗಳನ್ನು ಆಕಳಿಗೆ, ಆಡಿಗೆ ಅಥವಾ ಬ್ರಾಹ್ಮಣರಿಗೆ ಕೊಡಬೇಕು. ಅಥವಾ ನೀರಿನಲ್ಲಿ ಹಾಕಬೇಕು. ಆದರೆ ಮಧ್ಯದ ಪಿಂಡವನ್ನು ಪುತ್ರಸಂತತಿಯನ್ನು ಬಯಸಿರುವ ಶ್ರಾದ್ಧಕರ್ತೃವಿನ ಪತ್ನಿಯು ತಿನ್ನಬೇಕು. ಕೈ ತೊಳೆದುಕೊಂಡು, ಆಚಮನವನ್ನು ಮಾಡಿ ಪಿತೃಶೇಷದಿಂದ ಜ್ಞಾತಿಗಳಿಗೆ ಸಂತೋಷವನ್ನುಂಟು ಮಾಡಬೇಕು.

ಅನಂತರ ಜ್ಞಾತಿಗಳಿಗೆ ಉಳಿದ ಅಡಿಗೆಯನ್ನು ಬಡಿಸಬೇಕು. ಅವರ ಊಟವಾದ ನಂತರ ಭೃತ್ಯರಿಗೆ ಬಡಿಸಬೇಕು. ಅನಂತರ ಶ್ರಾದ್ಧಕರ್ತೃ ಮತ್ತು ಅವನ ಪತ್ನಿಯು ಊಟ ಮಾಡಬೇಕು. ಬ್ರಾಹ್ಮಣರ ಎಲೆಯ ಮೇಲೆ ಉಳಿದದ್ದನ್ನು ಸೂರ್ಯಾಸ್ತವಾಗುವವರೆಗೆ ಹೊರಗೆ ಹಾಕಬಾರದು. ಶ್ರಾದ್ಧವನ್ನು ಮಾಡಿದ ಯಜಮಾನ ಮತ್ತು ಅವನ ಪತ್ನಿ ಆ ದಿನ ಬ್ರಹ್ಮಚರ್ಯದಿಂದಿರಬೇಕು. ಶ್ರಾದ್ಧವನ್ನು ಮಾಡಿದ ದಿನ ಮೈಥುನವನ್ನು ಮಾಡಿದರೆ ಮಹಾರೌರವ ನರಕಕ್ಕೆ ಹೋಗುವನು. ಅನಂತರ ಕೀಟಜನ್ಮವನ್ನು ಪಡೆಯುವನು. ಶ್ರಾದ್ಧಕರ್ತೃವು ಶುಚಿಯೂ, ಕ್ರೋಧರಹಿತನೂ, ಶಾಂತನೂ ಆಗಿರಬೇಕು. ಶ್ರಾದ್ಧ ಭೋಜನ ಮಾಡಿದ ಬ್ರಾಹ್ಮಣನೂ ಹೀಗೆ ಇರಬೇಕು. ಆ ದಿನ ವೇದಾಧ್ಯಯನವನ್ನು ಮಾಡಬಾರದು. ಪ್ರಯಾಣ ಮಾಡಬಾರದು. ಒಂದು ಕಡೆ ಶ್ರಾದ್ಧ ಭೋಜನವನ್ನು ಮಾಡಿ ಅದೇ ದಿನ ಮತ್ತೊಂದು ಕಡೆ ಶ್ರಾದ್ಧ ಭೋಜನವನ್ನು ಮಾಡುವುದು ಮಹಾಪಾಪ. ಹಾಗೆ ಮಾಡಿದವರು ಬಹುವಿಧವಾದ ನರಕಗಳಿಗೆ ಹೋಗುತ್ತಾರೆ.

ಹೀಗೆ ನಿಮಗೆ ಶ್ರಾದ್ಧಕಲ್ಪವನ್ನು ಚೆನ್ನಾಗಿ ವಿವರಿಸಿದ್ದೇನೆ. ಇದನ್ನು ತಿಳಿದವರು ದುಃಖಗಳನ್ನು ಕಳೆದುಕೊಂಡು ನಿತ್ಯವೂ ಏಳಿಗೆಯನ್ನು ಪಡೆಯುತ್ತಾರೆ. ಆಮಶ್ರಾದ್ಧದ ವಿಧಿಯನ್ನು ತಿಳಿದು ಅದನ್ನು ಶ್ರದ್ಧೆಯಿಂದ ಮಾಡುವವರು ಆಮದಿಂದಲೇ 'ಅಗ್ನಿಕರಣ'ವನ್ನು

ಮಾಡಬೇಕು. ಆಮದಿಂದಲೇ (*ಹಸಿ ಪದಾರ್ಥಗಳಿಂದಲೇ ಪಿಂಡಗಳನ್ನು ಹಾಕಬೇಕು*) ಶ್ರಾದ್ಧ ವಿಧಿಯನ್ನು ಸರಿಯಾಗಿ ತಿಳಿದು ಶಾಂತಮನಸ್ಸಿನಿಂದ ಅದನ್ನು ಆಚರಿಸುವವರು ಕಲ್ಮಷಗಳನ್ನು ಕಳೆದುಕೊಂಡು ಯತಿಗಳ ಸ್ಥಾನವನ್ನು ಹೊಂದುವರು.

ಶ್ರಾದ್ಧ ಈಶ್ವರನ ಆರಾಧನೆಯೇ. ಆದ್ದರಿಂದ ಪ್ರಯತ್ನಪಟ್ಟು ಶ್ರಾದ್ಧವನ್ನು ಮಾಡಬೇಕು. ಧನವಿಲ್ಲದ ಬ್ರಾಹ್ಮಣನು ಸ್ನಾನಮಾಡಿ ಪಿತೃಗಳಿಗೆ ತಿಲೋದಕಗಳಿಂದ ತರ್ಪಣವನ್ನು ಕೊಟ್ಟು ಫಲ-ಮೂಲಗಳನ್ನಾದರೂ ಬ್ರಾಹ್ಮಣರಿಗೆ ಕೊಡಬೇಕು.

## ಅಭ್ಯುದಯಶ್ರಾದ್ಧ :

ಅಭ್ಯುದಯವನ್ನು (*ಮಕ್ಕಳ ಉಪನಯನ, ವಿವಾಹ ಮೊದಲಾದ ಸಂದರ್ಭದಲ್ಲಿ*) ಬಯಸುವವನು ಅಶೌಚವು ಕಳೆದನಂತರ ಅಭ್ಯುದಯಶ್ರಾದ್ಧವನ್ನು ಮಾಡಬೇಕು. ಇದನ್ನು ಪೂರ್ವಾಹ್ನದಲ್ಲಿ ಮಾಡಬೇಕು. ದೇವಸ್ಥಾನದಲ್ಲಿ ಮಾಡುವಂತೆಯೇ ಎಲ್ಲವನ್ನೂ ಮಾಡ-ಬೇಕು. ಎಳ್ಳನ್ನು ಉಪಯೋಗಿಸಬಾರದು. ದರ್ಭೆಗಳನ್ನು ನೇರವಾಗಿ ಇಡಬೇಕು. ಇಬ್ಬರು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ನಾಂದಿಯಲ್ಲಿ ''ನಾಂದೀ ಮುಖಾಸ್ತು ಪಿತರಃ ಪ್ರೀಯಂತಾಮ್'' ಎಂದು ಬ್ರಾಹ್ಮಣರಿಂದ ಹೇಳಿಸಬೇಕು. ಅಭ್ಯುದಯಶ್ರಾದ್ಧದಲ್ಲಿ ಮಾತೃ ಶ್ರಾದ್ಧವನ್ನು ಮಾಡಬೇಕು. ಪಿತೃಗಳ ಶ್ರಾದ್ಧವನ್ನು ಅನಂತರ ಮಾಡಬೇಕು. ಅನಂತರ ಮಾತಾಮಹರ ಶ್ರಾದ್ಧವನ್ನು ಮಾಡಬೇಕು. ಪೂರ್ವದಿಕ್ಕಿಗೆ ಅಭಿಮುಖವಾಗಿ ಕುಳಿತು ಉಪವೀತಿಯಾಗಿ ಶ್ರಾದ್ಧವನ್ನು ಮಾಡಬೇಕು. ಶ್ರಾದ್ಧಕ್ಕಿಂತ ಮೊದಲು ಸುಂದರವಾದ ವೇದಿಕೆಯಲ್ಲಿ ಪ್ರತಿಮೆಗಳಲ್ಲಿ ಅಥವಾ ಬ್ರಾಹ್ಮಣರಲ್ಲಿ ಮಾತೃಗಳನ್ನು ಗುಹೇಶ್ವರರನ್ನೂ ಪುಷ್ಪ ಆಭರಣ, ದೀಪ, ನೈವೇದ್ಯಗಳಿಂದ ಪೂಜಿಸಬೇಕು. ಮಾತೃಗಳ ಪೂಜೆಯನ್ನು ಮಾಡದೇ ಅಭ್ಯುದಯಶ್ರಾದ್ಧವನ್ನು ಮಾಡಿದರೆ ಮಾತೃಗಳು ಕುಪಿತರಾಗಿ ಹಿಂಸೆಯನ್ನು ಮಾಡುತ್ತಾರೆ.

* * *

## ಅಧ್ಯಾಯ-೭೬

**ವ್ಯಾಸ ಉವಾಚ :**

ಸಪಿಂಡವರ್ಗದವರಲ್ಲಿ ಯಾರಾದರೂ ಮೃತರಾದರೆ ಅಥವಾ ಅವರ ಕುಟುಂಬಗಳಲ್ಲಿ ಶಿಶು ಜನನವಾದರೆ ಅಂತಹ ಬ್ರಾಹ್ಮಣರಿಗೆ ಹತ್ತು ದಿನಗಳು ಅಶೌಚ.

ನಿತ್ಯಕರ್ಮಗಳನ್ನೂ, ಕಾಮ್ಯಕರ್ಮಗಳನ್ನು ಈ ದಿನಗಳಲ್ಲಿ ಮಾಡಬಾರದು. ವೇದಗಳನ್ನು ಸ್ಮರಿಸಬಾರದು. ಅಶೌಚಕ್ಕೊಳಗಾದವರ ಹೋಮಶಾಲೆಗೆ ಶುದ್ಧರೂ, ಕೋಪರಹಿತರೂ ಆದ ಬ್ರಾಹ್ಮಣರನ್ನು ಕರೆಸಿ ಒಣಗಿದ ಪದಾರ್ಥಗಳಿಂದ ಅಥವಾ ಫಲಗಳಿಂದ ಹೋಮವನ್ನು ಮಾಡಿಸಬೇಕು. ಈ ಬ್ರಾಹ್ಮಣರನ್ನು ಯಾರೂ ಮುಟ್ಟಬಾರದು. ಅವರಿಂದ ಏನನ್ನೂ ತೆಗೆದುಕೊಳ್ಳಬಾರದು. ನಾಲ್ಕನೇ, ಐದನೇ ದಿನದಲ್ಲಿ ಮುಟ್ಟಬಹುದು ಎಂದು ತಿಳಿದವರು ಹೇಳುತ್ತಾರೆ.

ಜಾತಾಶೌಚದಲ್ಲಿ ಸಪಿಂಡವರ್ಗದವರು ಪರಸ್ಪರ ಮುಟ್ಟಿದರೆ ಏನೂ ದೋಷವಿಲ್ಲ. ಆದರೆ ಮಗುವನ್ನು ಮತ್ತು ತಾಯಿಯನ್ನು ಮುಟ್ಟಬಾರದು. ಹನ್ನೊಂದನೆಯ ದಿನ ಸ್ನಾನವಾದನಂತರ ತಾಯಿ-ಮಗು ಸ್ಪರ್ಶಾರ್ಹರಾಗುತ್ತಾರೆ.

ಶಿಶುವು ಒಂದು ವರ್ಷಕ್ಕೆ ಮೊದಲೇ ಮೃತವಾದರೆ ಮೂರು ದಿನ ಅಶೌಚ. ಒಂದು ವರ್ಷಾನಂತರ ಮೃತವಾದರೆ ಹತ್ತು ದಿನ ಅಶೌಚ. ತಂದೆ-ತಾಯಿಗಳಿಗೆ ಮಾತ್ರ ಈ ಅಶೌಚ. ಇತರರಿಗೆ ಅಶೌಚವಿಲ್ಲ. ಮಗು ಎರಡು ವರ್ಷಕ್ಕೆ ಮೊದಲೇ ಮೃತವಾದರೆ ಅತ್ಯಂತ ಆಚಾರಹೀನನಾದ ವ್ಯಕ್ತಿಗೆ ಮಾತ್ರ ಮೂರು ದಿನ ಅಶೌಚ. ಹಲ್ಲು ಹುಟ್ಟುವ ಮೊದಲೇ ಮಗು ಮೃತವಾದರೆ ತಂದೆ-ತಾಯಿಗಳಿಗೆ ಒಂದು ರಾತ್ರಿ ಅಶೌಚ. ಹಲ್ಲು ಹುಟ್ಟಿದ ಮಗುವು ಮೃತವಾದರೆ ಮೂರು ರಾತ್ರಿ ಅಶೌಚ.

ಸಪಿಂಡರಾದ ಬಂಧುಗಳಿಗೆ ಹಲ್ಲುಹುಟ್ಟಿದ ಮಗು ಮೃತವಾದರೆ ಕೂಡಲೇ ಶುದ್ಧಿ. ಹಲ್ಲು ಹುಟ್ಟಿ ಚೂಡಾಕರಣವಾಗದ ಮಗು ಮೃತವಾದರೆ ಒಂದು ರಾತ್ರಿ ಅಶುದ್ಧಿ. ಚೂಡಾಕರಣವಾಗಿದ್ದು ಉಪನಯನವಾಗಿಲ್ಲದಿದ್ದರೆ ಮೂರು ರಾತ್ರಿ ಅಶುದ್ಧಿ. ಹುಟ್ಟಿದ ಕೂಡಲೇ ಮಗುವು ಮೃತವಾದರೆ ತಂದೆ-ತಾಯಿಗಳಿಗೆ ಜಾತಾಶೌಚವಿರುತ್ತದೆ. ಜಾತಾಶೌಚವಾದ್ದರಿಂದ ತಂದೆ ಬೇರೆಯವರನ್ನು ಮುಟ್ಟಬಹುದು. ಮಗು ಹತ್ತು ದಿನಗಳನಂತರ ಸತ್ತರೆ ಅದರ ಸೋದರನು, ಅವನು ನಿರ್ಗುಣನಾಗಿದ್ದರೆ, ಒಂದು ದಿನ ಅಶೌಚವನ್ನು ಆಚರಿಸಬೇಕು.

ಹಲ್ಲುಹುಟ್ಟಿದ ಮಗುವು ಸತ್ತರೆ ಅತ್ಯಂತ ನಿರ್ಗುಣರಾದ ಸಪಿಂಡರಿಗೆ ಒಂದು ರಾತ್ರಿ ಅಶೌಚ. ಒಂದು ಜಾತಾಶೌಚವಿರುವಾಗಲೇ ಮತ್ತೊಂದು ಜಾತಾಶೌಚವು ಬಂದರೆ, ಒಂದು

ಮೃತಾಶೌಚವಿರುವಾಗಲೇ ಮತ್ತೊಂದು ಮೃತಾಶೌಚವು ಬಂದರೆ, ಮೊದಲಿನ ಅಶೌಚವು ಇನ್ನು ಎಷ್ಟುದಿನ ಇರುವುದೋ ಅಷ್ಟುದಿನದ ಅಶೌಚದ ಆಚರಣೆಯಿಂದಲೇ ಶುದ್ಧಿ-ಯಾಗುತ್ತದೆ. ಇಂತಹ ಸಂದರ್ಭದಲ್ಲಿ ಮೊದಲಿನ ಅಶೌಚವು ಕೇವಲ ಒಂದು ದಿನ ಉಳಿದಿದ್ದರೆ, ಇನ್ನು ಮೂರು ರಾತ್ರಿಯ ಅಶೌಚದ ಆಚರಣೆಯಿಂದ ಎರಡು ಅಶೌಚವು ಕಳೆಯುತ್ತದೆ. ಮೃತಾಶೌಚ ಮತ್ತು ಜಾತಾಶೌಚಗಳು ಸೇರಿದರೆ ಮೃತಾಶೌಚದ ಅವಧಿಯ ಕಳೆದಾಗ ಶುದ್ಧಿಯಾಗುತ್ತದೆ.

ಜನನ-ಮರಣಗಳು ಬೇರೆ ಊರಿನಲ್ಲಿ ಆಗಿದ್ದರೆ ಸುದ್ದಿ ತಿಳಿದಾಗಿನಿಂದ ಅವಧಿ ಮುಗಿಯುವವರೆಗೆ ಮಾತ್ರ ಅಶೌಚ. ಜಾತಾಶೌಚದ ಅವಧಿಯು ಕಳೆದನಂತರ ಸುದ್ದಿ ತಿಳಿದರೆ ಸಪಿಂಡರು ಮೂರುದಿನ ಅಶೌಚವನ್ನು ಆಚರಿಸಬೇಕು. ಮದುವೆಯಾಗದ ಹುಡುಗಿಯು ಮೃತಳಾದರೆ ಸಪಿಂಡರಿಗೆ ಮೂರು ರಾತ್ರಿ ಅಶೌಚ. ಮದುವೆಯಾದವಳು ಮೃತಳಾದರೆ ಹತ್ತು ರಾತ್ರಿ ಅಶೌಚ. ತಾಯಿಯ ತಂದೆಯು ಮೃತನಾದರೆ ಮೂರುರಾತ್ರಿ ಅಶೌಚ. ಪತ್ನೀಸಂಬಂಧಿಗಳು ಮೃತರಾದರೆ ಎರಡು ಹಗಲು ಮತ್ತು ಒಂದು ರಾತ್ರಿ ಅಶೌಚ. ಸಪಿಂಡರಲ್ಲದ ಬಂಧುಗಳು ಮೃತರಾದರೆ ಹೀಗೆಯೇ. ಗುರುಗಳು ಅಥವಾ ಸಹಪಾಠಿಗಳು ಮೃತರಾದರೆ ಒಂದು ರಾತ್ರಿ ಅಶೌಚ.

ಹುಡುಗಿಯರು ಪಿತೃಗೃಹದಲ್ಲಿ ಮರಣ ಹೊಂದಿದರೆ ತಂದೆ-ತಾಯಿಯರಿಗೆ ಮೂರು ದಿನ ಅಶೌಚ. ಆಚಾರ್ಯಪುತ್ರ, ಆಚಾರ್ಯಪತ್ನಿಯರು ಮೃತರಾದರೆ ಒಂದುಹಗಲು ಮತ್ತು ಒಂದು ರಾತ್ರಿ ಅಶೌಚ. ತನ್ನ ಗ್ರಾಮದಲ್ಲಿ ವಾಸಿಸುವ ಉಪಾಧ್ಯಾಯನು ಅಥವಾ ಶ್ರೋತ್ರಿಯ ಮೃತರಾದರೆ ಒಂದು ದಿನ ಅಶೌಚ. ಸಪಿಂಡರಲ್ಲದ ಬಂಧುಗಳು ತನ್ನ ಮನೆಯಲ್ಲಿ ಮೃತರಾದರೆ ಮೂರು ದಿನ ಅಶೌಚ. ತನಗಿಂತ ಚಿಕ್ಕವರು ಹೀಗೆ ಮೃತರಾದರೆ ಒಂದು ರಾತ್ರಿ ಅಶೌಚ. ಅತ್ತೆ-ಮಾವ ಮೃತರಾದರೆ ಮೂರು ರಾತ್ರಿ ಅಶೌಚ. ಸ್ವಗೋತ್ರ-ದವರು ಮೃತರಾದರೆ ಕೂಡಲೇ ಶುದ್ಧಿ.

ಬ್ರಾಹ್ಮಣನಿಗೆ ಹತ್ತುದಿನಗಳು ಮೃತಾಶೌಚ. ಕ್ಷತ್ರಿಯನಿಗೆ ಹನ್ನೆರಡು ದಿನಗಳು ಮೃತಾಶೌಚ. ವೈಶ್ಯನಿಗೆ ಹದಿನೈದು ದಿನಗಳು ಮತ್ತು ಶೂದ್ರನಿಗೆ ಒಂದು ತಿಂಗಳು.

ಅಗ್ನಿಹೋತ್ರಿಗಳಾದ, ಸಪಿಂಡರಾದ ಬ್ರಾಹ್ಮಣರ ಮರಣವಾದಾಗ ಶವದಾಹದ ಸಮಯದಿಂದ ಅಶೌಚವು ಆರಂಭವಾಗುತ್ತದೆ. ಅಗ್ನಿಹೋತ್ರಿಗಳಲ್ಲದ ಸಪಿಂಡಬ್ರಾಹ್ಮಣರ ಮರಣವಾದಾಗ ಮರಣ ಸಮಯದಿಂದಲೇ ಅಶೌಚವು ಆರಂಭವಾಗುತ್ತದೆ.

### ಸಪಿಂಡರು ಯಾರು ? :

ತಂದೆಯಿಂದ ಆರಂಭಿಸಿ ಹಿಂದೆ, ಹಿಂದೆ ಗುರುತಿಸುತ್ತಾ ಹೋದಾಗ ಏಳನೆಯ ವ್ಯಕ್ತಿಯವರೆಗೆ ಬರುವ ಜನರು ಸಪಿಂಡರು, ಏಳನೆಯ ವ್ಯಕ್ತಿಯಲ್ಲಿ ಸಪಿಂಡತ್ವವು

ನಿವೃತ್ತವಾಗುತ್ತದೆ. ಸಮಾನೋದಕಭಾವವು ಹುಟ್ಟು ಮತ್ತು ಹೆಸರು ತಿಳಿಯದಿದ್ದಾಗ ನಿವೃತ್ತವಾಗುತ್ತದೆ. ತಂದೆ, ಅಜ್ಜ, ಮುತ್ತಜ್ಜ ಇವರು ಪಾಪಪುಣ್ಯಗಳ ಲೇಪಕ್ಕೆ ಭಾಗಿಗಳು. ಸಪಿಂಡತ್ವವು ಏಳು ಪುರುಷರವರೆಗೆ ಇರುತ್ತದೆ.

ಮದುವೆಯಾಗದ ಸ್ತ್ರೀಯರಿಗೆ ಏಳು ಪುರುಷರವರೆಗೆ (ಇವರ ಕುಲದಲ್ಲಿ ಸೇರುವುದರಿಂದ) ಸಪಿಂಡತ್ವವು ಇರುತ್ತದೆ. ಮದುವೆಯಾದ ಸ್ತ್ರೀಯರಿಗೆ ಗಂಡನ ಜೊತೆ ಸಪಿಂಡತ್ವವಿದೆ. ಇದು ಸನಾತನ ಅಭಿಪ್ರಾಯ. ಒಬ್ಬನೇ ಪುರುಷನಿಂದ ಬಹುಮಂದಿ ಸ್ತ್ರೀಯರಲ್ಲಿ ಹುಟ್ಟಿದ್ದ ಬೇರೆ ಬೇರೆ ವರ್ಣದವರಿಗೆ ಮೂರು ತಲೆಯವರೆಗೆ ಸಪಿಂಡತ್ವವು ಇರುತ್ತದೆ

**ಸದ್ಯಃಶೌಚ** (ಕೂಡಲೇ ನಿವೃತ್ತಿಯಾಗುವ ಅಶೌಚ)

ಬಡಗಿ, ಶಿಲ್ಪಿ, ವೈದ್ಯ, ದಾಸಿ, ದಾಸ, ದಾನಮಾಡುವ ದೀಕ್ಷೆಯನ್ನು ಸ್ವೀಕರಿಸಿದವರು, ಬ್ರಹ್ಮಜ್ಞಾನಿಗಳು, ಬ್ರಹ್ಮಚಾರಿಗಳು, ಸತ್ತ್ರದೀಕ್ಷೆಯನ್ನು ತೆಗೆದುಕೊಂಡವರು, ವ್ರತದೀಕ್ಷೆಯನ್ನು ತೆಗೆದುಕೊಂಡವರು, ಅಭಿಷಿಕ್ತನಾದ ರಾಜ, ಅನ್ನಸತ್ರವನ್ನು ನಡೆಸುವವರು - ಇವರಿಗೆ ಮರಣವಾರ್ತೆಯು ತಿಳಿದ ಕ್ಷಣದಲ್ಲಿ ಮಾತ್ರ ಅಶೌಚ. ಕೂಡಲೆ ಅದರ ನಿವೃತ್ತಿಯಾಗುತ್ತದೆ. ವಿವಾಹಕಾಲದಲ್ಲಿ, ದೇವತೆಗಳ ಪೂಜಾ-ಉತ್ಸವಕಾಲದಲ್ಲಿ ದುರ್ಭಿಕ್ಷೆಯ ಕಾಲದಲ್ಲಿ, ಪ್ರಕೃತಿವಿಕೋಪಸಂದರ್ಭದಲ್ಲಿ ಅಶೌಚವು ಕೂಡಲೇ ನಿವೃತ್ತವಾಗುತ್ತದೆ.

ತುಮುಲಯುದ್ಧದಲ್ಲಿ ಸತ್ತವರ, ಸರ್ಪಕಚ್ಚಿ ಸತ್ತವರ, ಬಂಧುಗಳಿಗೆ ಸದ್ಯಃಶೌಚ. ಗೋ-ಬ್ರಾಹ್ಮಣರಿಗಾಗಿ ಕಾದಿರಿಸಲ್ಪಟ್ಟಿರುವ, ನಾಶದ ಸಾಧ್ಯತೆಗಳಿಲ್ಲದ ವೀರಮಾರ್ಗದಲ್ಲಿ ಅಗ್ನಿಪ್ರಕೋಪ, ಬಿರುಗಾಳಿ - ಇವುಗಳಿಂದ ಜ್ಞಾತಿಮರಣವು ಸಂಭವಿಸಿದರೂ, ಬಂಧುಗಳಿಗೆ ಸದ್ಯಃಶೌಚ

**ಇವರಿಗೆ ಅಶೌಚವಿಲ್ಲ**

ನೈಷ್ಠಿಕರಿಗೆ (ಆಮರಣ ಬ್ರಹ್ಮಚರ್ಯಾಶ್ರಮದಲ್ಲಿರುವವರಿಗೆ), ವಾನಪ್ರಸ್ಥರಿಗೆ, ಯತಿಗಳಿಗೆ, ಬ್ರಹ್ಮಚಾರಿಗಳಿಗೆ ಅಶೌಚವಿಲ್ಲ.

**ಇವರು ಸತ್ತಾಗ ಅಶೌಚವಿಲ್ಲ, ಸತ್ತವರಿಗೆ ಅಂತ್ಯಕ್ರಿಯೆ ಇಲ್ಲ**

ಪತಿತರು ಮೃತರಾದರೆ ಬಂಧುಗಳಿಗೆ ಅಶೌಚವಿಲ್ಲ, ಮೃತ ಪತಿತರಿಗೆ ದಹನವಿಲ್ಲ. ಅಂತ್ಯೇಷ್ಟಿ (ಹನ್ನೆರಡು ದಿನ ನಡೆಸುವ ಪ್ರೇತಸಂಸ್ಕಾರ) ಇಲ್ಲ. ಅಸ್ಥಿಸಂಚಯವಿಲ್ಲ. ಅವರಿಗಾಗಿ ಕಣ್ಣೀರು ಹಾಕಬಾರದು. ಪಿಂಡಪ್ರದಾನವನ್ನು ಮಾಡಬಾರದು. ಶ್ರಾದ್ಧ ಮೊದಲಾದವನ್ನು ಮಾಡಬಾರದು.

ಅಗ್ನಿ, ವಿಷ ಮೊದಲಾದವುಗಳಿಂದ ಆತ್ಮಹತ್ಯೆಯನ್ನು ಮಾಡಿಕೊಂಡವರಿಗೆ ಅಗ್ನಿಸಂಸ್ಕಾರವಿಲ್ಲ. ತರ್ಪಣವಿಲ್ಲ. ಅವರ ಬಂಧುಗಳಿಗೆ ಅಶೌಚವಿಲ್ಲ. ಪ್ರಮಾದದಿಂದ (ತನಗೆ ಗೊತ್ತಾಗದಂತೆ ಅಥವಾ ಉದ್ದೇಶವಿಲ್ಲದೆ) ಅಗ್ನಿ, ವಿಷ ಮೊದಲಾದವುಗಳಿಂದ ಮರಣವು ಸಂಭವಿಸಿದರೆ ಮೃತರ ಬಂಧುಗಳಿಗೆ ಅಶೌಚವಿದೆ. ಮೃತರಿಗೆ ಅಗ್ನಿಸಂಸ್ಕಾರ, ಉದಕಕ್ರಿಯೆ ಮೊದಲಾದವುಗಳೂ ಇವೆ.

## ಮೃತನ ಶವವು ಸಿಗದಿದ್ದರೆ :

ಶವವು ಸಿಗದಿದ್ದರೆ ಸಪಿಂಡಬಂಧುಗಳು ಮುತ್ತುಗದ ಎಲೆ-ಕಾಂಡಗಳಿಂದ ಸತ್ತವರ ಪ್ರತಿಕೃತಿಯನ್ನು ಮಾಡಿ ಶ್ರದ್ಧೆಯಿಂದ, ವಿಧಿಗೆ ಅನುಗುಣವಾಗಿ ದಹನವನ್ನು ಮಾಡಬೇಕು.

## ಸಾಧಾರಣ ವಿಚಾರಗಳು :

ಸಪಿಂಡಜನರು ತಮ್ಮ ನಾಮ-ಗೋತ್ರಗಳನ್ನು ಹೇಳಿ ಮಾತನಾಡದೆ ಒಮ್ಮೆ ಉದಕಾಂಜಲಿಯನ್ನು ಕೊಡಬೇಕು. ಹತ್ತುದಿನ ಬಂಧುಗಳೆಲ್ಲರೂ ಸೇರಿ ಸಂಯಮದಿಂದ ಇರುತ್ತಾ ಶ್ರಾದ್ಧವನ್ನು ಮಾಡಬೇಕು. ಪ್ರತಿದಿನ ಮನೆಯ ಬಾಗಿಲಿನಲ್ಲಿ ಬೆಳಗ್ಗೆ-ಸಾಯಂಕಾಲ ಸತ್ತವರಿಗಾಗಿ ಪಿಂಡವನ್ನು ಹಾಕಬೇಕು. ನಾಲ್ಕನೆಯ ದಿನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

ಎರಡನೆಯ ದಿನ ಬಂಧುಗಳು-ಕರ್ತೃಗಳು ಕ್ಷೌರವನ್ನು ಮಾಡಿಸಿಕೊಳ್ಳಬೇಕು. ನಾಲ್ಕನೆಯ ದಿನ ಬಂಧುಗಳೆಲ್ಲರೂ ಸೇರಿ ಅಸ್ಥಿಸಂಚಯನವನ್ನು ಮಾಡಬೇಕು. ಹಿರಿಯರಾದ ಬ್ರಾಹ್ಮಣರನ್ನು ಶ್ರದ್ಧೆಯಿಂದ ಆರಾಧಿಸಬೇಕು. ಬ್ರಹ್ಮಣರನ್ನು ಸಮಸಂಖ್ಯೆಯಲ್ಲೇ ಆಹ್ವಾನಿಸಬೇಕು. ಐದನೆಯ, ಒಂಭತ್ತನೆಯ ಮತ್ತು ಹನ್ನೊಂದನೆಯ ದಿನಗಳಲ್ಲಿ ಸಮಸಂಖ್ಯೆಯ ಬ್ರಾಹ್ಮಣರಿಗೇ ಭೋಜನವನ್ನು ಮಾಡಿಸಬೇಕು. ಒಂಭತ್ತನೆಯ, ಹನ್ನೊಂದನೆಯ ಅಥವಾ ಹನ್ನೆರಡೆಯ ದಿನ ಸತ್ತವರನ್ನು ಉದ್ದೇಶಿಸಿ ಭಕ್ತಿಯಿಂದ ನವಶ್ರಾದ್ಧವನ್ನು ಮಾಡಬೇಕು. ಈ ಶ್ರಾದ್ಧದಲ್ಲಿ ಒಂದೇ ಪವಿತ್ರ, ಒಂದೇ ಅರ್ಘ್ಯಪಾತ್ರೆ ಮತ್ತು ಒಂದೇ ಪಿಂಡಪಾತ್ರೆ -ಇರಬೇಕು.

ಪ್ರತಿತಿಂಗಳೂ ಮೃತತಿಥಿಯಂದು ಶ್ರಾದ್ಧವನ್ನು ಮಾಡಬೇಕು. ಒಂದು ವರ್ಷ ಕಳೆದನಂತರ ಸಪಿಂಡೀಕರಣವನ್ನು ಮಾಡಬೇಕು. ಸಪಿಂಡೀಕರಣದಲ್ಲಿ ಮೃತ ಮೊದಲಾದವರಿಗೆ ನಾಲ್ಕು ಪಾತ್ರೆಗಳನ್ನು ಇಡಬೇಕು. ಮೃತನಿಗೋಸ್ಕರ ಪಿತೃಪಾತ್ರೆಗಳಲ್ಲಿ ತೀರ್ಥವನ್ನು ಹಾಕಬೇಕು. ''ಯೇ ಸಮಾನಾ'' ಮೊದಲಾದ ಎರಡು ಮಂತ್ರಗಳಿಂದ ಪಿತೃಗಳಿಗೆ ಪಿಂಡಗಳನ್ನೂ ಹಾಕಬೇಕು. ಸಪಿಂಡೀಕರಣ ಶ್ರಾದ್ಧವನ್ನು ದೇವಪೂರ್ವಕವಾಗಿ ಮಾಡಬೇಕು. ಈ ಶ್ರಾದ್ಧದಲ್ಲಿ ಮೊದಲು ಪಿತೃಗಳನ್ನು ಆವಾಹಿಸಿ ಅನಂತರ ಮೃತನನ್ನು ನಿರ್ದೇಶಿಸಬೇಕು. ಸಪಿಂಡೀಕೃತರಾದ ಮೃತರಿಗೆ ಮತ್ತೆ ಯಾವ ಪ್ರತ್ಯೇಕ ಕ್ರಿಯೆಗಳೂ ಇಲ್ಲ. ಪ್ರತ್ಯೇಕ ಪಿಂಡಪ್ರದಾನವನ್ನು ಮಾಡುವವನು ಪಿತೃಹತ್ಯೆಯ ಪಾಪಕ್ಕೆ ಒಳಗಾಗುತ್ತಾನೆ.

ತಂದೆಯು ಮೃತನಾದಾಗ ಮಗನು ಒಂದು ವರ್ಷ ಪ್ರತಿದಿನವೂ ಪಿಂಡಪ್ರದಾನವನ್ನು ಮಾಡಬೇಕು. ಪ್ರೇತಧರ್ಮಗಳನ್ನನುಸರಿಸಿ ಪ್ರತಿದಿನ ಉದಕುಂಭದಾನ ಮತ್ತು ಅನ್ನದಾನ-ವನ್ನು ಮಾಡಬೇಕು. ಸಾಂವತ್ಸರಿಕಶ್ರಾದ್ಧವನ್ನು ಪಾರ್ವಣವಿಧಾನದಿಂದ ಮಾಡಬೇಕು. ಈ ಶ್ರಾದ್ಧವನ್ನು ಪ್ರತಿವರ್ಷವೂ ಮಾಡಬೇಕು. ಮಾತಾ-ಪಿತೃಗಳಿಗೆ ಪುತ್ರರು ಪಿಂಡದಾನಾದಿ-ಗಳನ್ನು ಮಾಡಬೇಕು ಎಂದು ಸನಾತನವಿಧಿ. ಗಂಡುಮಕ್ಕಳಿಲ್ಲದಿದ್ದರೆ ಪತ್ನಿಯು ಮಾಡ-ಬೇಕು. ಪತ್ನಿಯೂ ಇಲ್ಲದಿದ್ದರೆ ಸೋದರನು ಮಾಡಬೇಕು. ಎಲ್ಲರೂ ಶ್ರದ್ಧೆಯಿಂದ, ಸಮಾಧಾನದಿಂದ ದಾನ ಮೊದಲಾದವುಗಳನ್ನು ಮಾಡಿ ಮೇಲೆ ವಿವರಿಸಿದ ವಿಧಾನದಿಂದಲೇ ಶ್ರಾದ್ಧವನ್ನು ಆಚರಿಸಬೇಕು.

ಇಲ್ಲಿಯವರೆಗೆ ನಿಮಗೆ ಗೃಹಸ್ಥಾಶ್ರಮಿಗಳ ಕರ್ತವ್ಯವನ್ನು ಹೇಳಿದ್ದಾಯಿತು. ಸ್ತ್ರೀಯರಿಗೆ ಪತಿಸೇವೆಯೇ ಧರ್ಮ. ಬೇರೆ ಯಾವುದೂ ಅವರಿಗೆ ಧರ್ಮವಲ್ಲ. ಸ್ವಧರ್ಮಾಚರಣೆಯಲ್ಲಿ ನಿರತರಾದ, ಈಶ್ವರನಲ್ಲಿ ಮನಸ್ಸನ್ನು ಅರ್ಪಿಸಿರುವ ಸಾಧಕರು ವೇದವಾದಿಗಳು ಹೇಳಿರುವ ಉತ್ತಮಸ್ಥಾನವನ್ನು ಹೊಂದುತ್ತಾರೆ.

* * *

## ಅಧ್ಯಾಯ-೭೭

**ವ್ಯಾಸ ಉವಾಚ :**

ಗೃಹಸ್ಥಾಶ್ರಮಿಯು ಪ್ರತಿದಿನ ಬೆಳಗ್ಗೆ ಮತ್ತು ಸಾಯಂಕಾಲದಲ್ಲಿ ಅಗ್ನಿಹೋತ್ರವನ್ನು ನಡೆಸಬೇಕು. ದರ್ಶದಲ್ಲಿಯೂ, ಹಿಮಕಾಲದ ಕೊನೆಯಲ್ಲೂ, ಹೊಸಸಸ್ಯಗಳು ಬೆಳೆದಾಗಲೂ ಹೋಮವನ್ನು ಮಾಡಬೇಕು. ಋತುವಿನ ಕೊನೆಯಲ್ಲೂ ಹೋಮವನ್ನು ಮಾಡಬೇಕು.

ದಕ್ಷಿಣಾಯನ-ಉತ್ತರಾಯಣಗಳ ಕೊನೆಯಲ್ಲಿ ಪಶುಯಾಗವನ್ನು ಮಾಡಬೇಕು. ವರ್ಷದ ಕೊನೆಯಲ್ಲೂ ಹೋಮಗಳನ್ನು ಮಾಡಬೇಕು.

ದೀರ್ಘಕಾಲ ಬದುಕುವ ಅಪೇಕ್ಷೆಯಿರುವ ಆಹಿತಾಗ್ನಿಯಾದ ಬ್ರಾಹ್ಮಣನು ಹೊಸ ಸಸ್ಯಗಳ ಕಾಲದಲ್ಲಿ 'ಅಗ್ರಾಯಣ' ಎಂಬ ಇಷ್ಟಿಯನ್ನೂ ಅಯನದ ಕೊನೆಯಲ್ಲಿ ಪಶುಯಾಗವನ್ನೂ ಮಾಡದೆ ಅನ್ನವನ್ನಾಗಲಿ, ಮಾಂಸವನ್ನಾಗಲಿ ತಿನ್ನಬಾರದು. ಹೊಸಧಾನ್ಯವನ್ನು, ಪಶುಹವಿಸ್ಸನ್ನು ಹೋಮಿಸದಿದ್ದರೆ, ಹೊಸ ಧಾನ್ಯ-ಮಾಂಸಗಳನ್ನು ಅಪೇಕ್ಷಿಸುತ್ತಿರುವ ಅಗ್ನಿದೇವತೆಗಳು, ಬ್ರಾಹ್ಮಣನ ಪ್ರಾಣವನ್ನೇ ತಿನ್ನುತ್ತಾರೆ. ಪರ್ವಕಾಲಗಳಲ್ಲಿ ಸವಿತೃದೇವತಾಸಂಬಂಧಿಯಾದ

ಶಾಂತಿಹೋಮಗಳನ್ನು ಮಾಡಬೇಕು. ಅಷ್ಟಕ-ಅನ್ವಷ್ಟಕ ಶ್ರಾದ್ಧಗಳನ್ನು ಮಾಡಬೇಕು. ಇದು ಶಾಶ್ವತವಾದ ಶ್ರೇಷ್ಠಧರ್ಮ. ಹೀಗೆ ಮಾಡದಿರುವುದು ಅಧರ್ಮ. ಈ ವಿಧಿಗಳು ಗೃಹಸ್ಥಾಶ್ರಮಿಗಳಾದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯರಿಗೆ ಅನ್ವಯಿಸುತ್ತದೆ.

ನಾಸ್ತಿಕಬುದ್ಧಿಯಿಂದ ಅಥವಾ ಆಲಸ್ಯದಿಂದ ಅಗ್ನಿಯ ಆಧಾನವನ್ನು ಮಾಡದಿದ್ದರೆ, ಹೋಮಗಳನ್ನು ಮಾಡದಿದ್ದರೆ ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕುಂಭೀಪಾಕ, ವೈಕರಣೀ ಅಸಿಪತ್ರವನ ಮೊದಲಾದ ಘೋರನರಕಗಳಿಗೆ ಹೋಗುತ್ತಾರೆ. ಅಂತ್ಯಜರೂ, ಶೂದ್ರರೂ ಆಗಿ ಹುಟ್ಟುತ್ತಾರೆ. ಆದ್ದರಿಂದ ಬ್ರಾಹ್ಮಣನು ವಿಶೇಷ ಪ್ರಯತ್ನವನ್ನು ಮಾಡಿ, ಶುದ್ಧ ಮನಸ್ಸಿನಿಂದ ಅಗ್ನಿಯ ಆಧಾನವನ್ನು ಮಾಡಿ ಪರಮೇಶ್ವರನನ್ನು ಆರಾಧಿಸಬೇಕು. ಬ್ರಾಹ್ಮಣರಿಗೆ ಅಗ್ನಿಹೋತ್ರಕ್ಕೆ ಸಮವಾದ ಬೇರೆ ಧರ್ಮವಿಲ್ಲ. ಆದ್ದರಿಂದ ಯಾವಾಗಲೂ ಅಗ್ನಿಹೋತ್ರವನ್ನು ಮಾಡುತ್ತ ಪರಮೇಶ್ವರನನ್ನು ಆರಾಧಿಸಬೇಕು.

ಸೋಮಯಾಗವು ಯಜ್ಞಗಳಲ್ಲಿ ಪ್ರಥಮ ಎಂದು ಪ್ರಸಿದ್ಧವಾಗಿದೆ. ಸರ್ವಲೋಕಾಧಿಪತಿಯಾದ ಪರಮೇಶ್ವರನನ್ನು ಸೋಮರಸದಿಂದ ಆರಾಧಿಸಬೇಕು. ಸೃಷ್ಟಿಕರ್ತರಾದ ಬ್ರಹ್ಮದೇವರು ಬ್ರಾಹ್ಮಣರ ಸುಖಕ್ಕಾಗಿ ಮತ್ತು ಮುಕ್ತಿಗಾಗಿ ಶ್ರೌತ ಮತ್ತು ಸ್ಮಾರ್ತ ಎಂಬ ಎರಡು ಬಗೆಯ ಧರ್ಮಗಳನ್ನು ಕಲ್ಪಿಸಿದರು. ದಕ್ಷಿಣಾಗ್ನಿ ಗಾರ್ಹಪತ್ಯ ಮತ್ತು ಆಹವನೀಯ ಎಂಬ ಮೂರು ಅಗ್ನಿಗಳನ್ನು ಸ್ವೀಕರಿಸಿ ಅವುಗಳಲ್ಲಿ ಮಾಡಲ್ಪಡುವ ಹೋಮಾದಿಗಳು ಶ್ರೌತಧರ್ಮ. ಹಿಂದೆ ಹೇಳಲ್ಪಟ್ಟದ್ದು ಸ್ಮಾರ್ತಧರ್ಮ ಇವುಗಳಲ್ಲಿ ಶ್ರೌತಧರ್ಮವು ಹೆಚ್ಚು ಶ್ರೇಯಸ್ಕರ.

ವೇದದಿಂದ ತಿಳಿದುಬರುವ ಶ್ರೌತಧರ್ಮ ಮತ್ತು ವೇದಮೂಲಕವಾದ ಸ್ಮೃತಿಯಿಂದ ತಿಳಿದುಬರುವ ಸ್ಮಾರ್ತಧರ್ಮ -ಇವೆರಡು ಹಿತಕರವೇ. ಶ್ರುತಿ-ಸ್ಮೃತಿಗಳಿಲ್ಲದಿರುವಾಗ ಶಿಷ್ಟಾಚಾರವೇ ಮೂಲಪ್ರಮಾಣ.

ವೇದ-ವೇದಾಂಗಗಳನ್ನು ವಿಧಿಗನುಗುಣವಾಗಿ ಅಧ್ಯಯನ ಮಾಡಿದ, ಆತ್ಮೋನ್ನತಿಕರವಾದ ಶಮ, ದಮ ಮೊದಲಾದ ಗುಣಗಳನ್ನು ಹೊಂದಿದ ಬ್ರಾಹ್ಮಣರು ಶಿಷ್ಟರು. ಇಂತಹ ಶಿಷ್ಟರ ಮನಸ್ಸಿಗೆ ಒಪ್ಪಿಗೆಯಾದ ಸಂಗತಿಗಳೇ ಧರ್ಮ. ಇದಕ್ಕೆ ವಿರುದ್ಧವಾದದು ಅಲ್ಲ.

ಪುರಾಣಗಳು ಮತ್ತು ಧರ್ಮಶಾಸ್ತ್ರಗಳು ವೇದಗಳನ್ನು ವಿವರಿಸುವ ಶಾಸ್ತ್ರಗಳು. ವೇದಗಳಿಂದ ಬ್ರಹ್ಮಜ್ಞಾನವುಂಟಾದರೆ ಪುರಾಣ-ಧರ್ಮಶಾಸ್ತ್ರಗಳಿಂದ ಧರ್ಮದ ಜ್ಞಾನವಾಗುತ್ತದೆ. ಧರ್ಮವನ್ನು ತಿಳಿಯಲು ಬಯಸುವವರಿಗೆ ಧರ್ಮಶಾಸ್ತ್ರವು ಶ್ರೇಷ್ಠಪ್ರಮಾಣ. ಬೇರೆ ಯಾವುದೇ ಪ್ರಮಾಣಗಳಿಂದ ಗ್ರಂಥಗಳಿಂದ ಧರ್ಮದ ಜ್ಞಾನವಾಗಲಿ, ವೈದಿಕವಾದ ಬ್ರಹ್ಮವಿದ್ಯೆಯಾಗಲಿ ಲಭಿಸುವುದಿಲ್ಲ. ಆದ್ದರಿಂದ ಧರ್ಮ-ಶಾಸ್ತ್ರಗಳನ್ನು ಮತ್ತು ಪುರಾಣಗಳನ್ನು ಶ್ರದ್ಧೆಯಿಂದ ಅಭ್ಯಸಿಸಬೇಕು.

* * *

## ಅಧ್ಯಾಯ-೭೮

**ವ್ಯಾಸ ಉವಾಚ :**

ಗೃಹಸ್ಥಾಶ್ರಮಿಯು ಅನುಸರಿಸಬೇಕಾದ ಜೀವನೋಪಾಯಗಳನ್ನು ಹೇಳುವೆ. ಕೇಳಿರಿ. ಗೃಹಸ್ಥಾಶ್ರಮಿಗಳು ಎರಡು ವಿಧ. ಸಾಧಕರು ಮತ್ತು ಅಸಾಧಕರು. ಅಧ್ಯಾಪನ (ಪಾಠ ಹೇಳುವುದು), ಯಾಜನ (ಯಜ್ಞವನ್ನು ಮಾಡಿಸುವುದು) ಮತ್ತು ಪ್ರತಿಗ್ರಹ (ದಾತೃಗಳು ಕೊಡುವ ಪದಾರ್ಥಗಳ ಸ್ವೀಕಾರ) -ಈ ಮೂರು ಸಾಧಕರ ಜೀವನೋಪಾಯ. ಧನದ ಲೇವಾದೇವಿ, ಕೃಷಿ ಮತ್ತು ವ್ಯಾಪಾರ -ಈ ಮೂರು ಕೂಡ ಜೀವನೋಪಾಯ. ಮೊದಲನೆಯ ಮೂರು ದುರ್ಲಭವಾದಾಗ ಇವನ್ನು ಅನುಸರಿಸಬೇಕು. ಇವುಗಳಲ್ಲೂ ಕೃಷಿಯು ದುರ್ಲಭವಾದಾಗ ವಾಣಿಜ್ಯವನ್ನು, ಅದೂ ಸಾಧ್ಯವಾಗದಿರುವಾಗ ಲೇವಾದೇವಿ-ಯನ್ನು ಮಾಡಬೇಕು. ಲೇವಾದೇವಿಯು ಬಹಳ ಪಾಪಕರವಾದ ವೃತ್ತಿ. ಇದನ್ನು ಬಿಡಬೇಕು.

ತಾನು ಹಿಡಿದ ಜೀವನೋಪಾಯದಿಂದ ಬಂದ ಲಾಭದಲ್ಲಿ ಪಿತೃ-ದೇವ-ಬ್ರಾಹ್ಮಣರ ಪೂಜೆಯನ್ನು ಮಾಡಬೇಕು. ತೃಪ್ತರಾದ ಅವರು ಬೇರೆ ಪಂಥದವರ ಜೀವನೋಪಾಯವನ್ನು ಅನುಸರಿಸಿದ್ದರಿಂದ ಉಂಟಾದ ದೋಷವನ್ನು ಪರಿಹರಿಸುತ್ತಾರೆ.

ಕೃಷಿಯನ್ನು ಆಶ್ರಯಿಸಿದ ಬ್ರಾಹ್ಮಣನು ದೇವತೆಗಳಿಗೆ ಮತ್ತು ಪಿತೃಗಳಿಗೆ ಇಪ್ಪತ್ತು ಭಾಗವನ್ನು, ಬ್ರಾಹ್ಮಣರಿಗೆ ಮೂವತ್ತುಭಾಗವನ್ನು ಕೊಡಬೇಕು. ವ್ಯಾಪಾರವನ್ನು ಮಾಡುವ ಬ್ರಾಹ್ಮಣನು ಕ್ರಮವಾಗಿ ನಲವತ್ತು ಮತ್ತು ಅರವತ್ತು ಭಾಗವನ್ನು, ಲೇವಾದೇವಿಯಿಂದ ಸಂಪಾದಿಸುವ ಬ್ರಾಹ್ಮಣನು ಕ್ರಮವಾಗಿ ಅರವತ್ತು ಮತ್ತು ತೊಂಭತ್ತು ಭಾಗವನ್ನು ದಾನ ಮಾಡಬೇಕು. ಆಗ ಅವನು ದೋಷಗಳಿಂದ ಮುಕ್ತನಾಗುತ್ತಾನೆ. ಸಾಧಕ ಗೃಹಸ್ಥಾಶ್ರಮಿಯು ಶಿಲವೃತ್ತಿಯನ್ನು ಅಥವಾ ಉಂಛವೃತ್ತಿಯನ್ನು ಆಶ್ರಯಿಸಬಹುದು. ವಿದ್ಯಾಶಿಲ್ಪ ಮೊದಲಾದ ಇನ್ನೂ ಅನೇಕ ಜೀವನೋಪಾಯಗಳು ಇವೆ.

ಅಸಾಧಕ ಗೃಹಸ್ಥಾಶ್ರಮಿಯು ಶಿಲ ಅಥವಾ ಉಂಛ ವೃತ್ತಿಯನ್ನು ಆಶ್ರಯಿಸಬೇಕೆಂದು ಮಹರ್ಷಿಗಳ ಅಭಿಪ್ರಾಯ. ಅಮೃತ ಮತ್ತು ಮೃತ ಎಂಬ ಜೀವನೋಪಾಯಗಳನ್ನೂ ಅನುಸರಿಸಬಹುದು.

ಬೇಡದೆ ಬದುಕುವುದು ಅಮೃತ ಜೀವನ. ಬೇಡಿ ಜೀವನ ಸಾಗಿಸುವುದು ಮೃತ ಜೀವನ. ಮುಂದಿನ ದಿನಗಳಿಗಾಗಿ ಸಂಗ್ರಹ ಮಾಡಿಕೊಳ್ಳುವವರಲ್ಲೂ ಹೀಗೆ ಪ್ರಭೇದಗಳಿವೆ. (೧) ಕಣಜದಲ್ಲಿ ಸಂಗ್ರಹಿಸುವವರು (೨) ಕುಂಭಯಲ್ಲಿ ಸಂಗ್ರಹಿಸುವವರು (೩) ಮೂರು ದಿನಗಳಲ್ಲಿ ಸಾಕಾಗುವಷ್ಟು ಸಂಗ್ರಹಿಸುವವರು (೪) ನಾಳೆಗಾಗಿ ಏನನ್ನೂ ಇಟ್ಟುಕೊಳ್ಳದವರು. ಈ ನಾಲ್ಕು ವಿಧದ ಬ್ರಾಹ್ಮಣ-ಗೃಹಸ್ಥಾಶ್ರಮಿಗಳಲ್ಲಿ ಹಿಂದಿನವರಿಗಿಂತ ಮುಂದಿನವರು ಧರ್ಮದಿಂದ ಶ್ರೇಷ್ಠರು. ಲೋಕವನ್ನು ಗೆದ್ದವರು.

ಗೃಹಸ್ಥಾಶ್ರಮಿ ಬ್ರಾಹ್ಮಣರಲ್ಲಿ ಕೆಲವರು ಆರು (ಅಧ್ಯಯನ-ಅಧ್ಯಾಪನ, ಯಜನ-ಯಾಜನ-ದಾನ-ಪ್ರತಿಗ್ರಹ) ಕರ್ಮಗಳನ್ನು ಜೀವನಕ್ಕಾಗಿ ಆಶ್ರಯಿಸುತ್ತಾರೆ. ಮತ್ತೆ ಕೆಲವರು ಮೂರನ್ನು (ಅಧ್ಯಾಪನ-ಯಾಜನ-ಪ್ರತಿಗ್ರಹ) ಆಶ್ರಯಿಸುತ್ತಾರೆ. ಮತ್ತಿತರರು ಅಧ್ಯಾಪನ-ಯಾಜನಗಳಿಂದ ಮಾತ್ರ ಜೀವಿಸುತ್ತಾರೆ. ಇನ್ನು ಕೆಲವರು ಬ್ರಹ್ಮಸತ್ರಗಳನ್ನು ಆಶ್ರಯಿಸಿ (ಬ್ರಹ್ಮಜ್ಞಾನಕ್ಕಾಗಿ ಮುನಿಗಳು ಸೇರಿ ನಡೆಸುವ ವಿವಿಧ ಯಜ್ಞ) ಜೀವನವನ್ನು ನಡೆಸುತ್ತಾರೆ.

ಯಾವ ಗೃಹಸ್ಥಾಶ್ರಮಿಯು ಧನಾರ್ಜನೆಯನ್ನು ಮಾಡಿ ದೇವತೆಗಳ-ಪಿತೃಗಳ ಅರ್ಚನೆಯನ್ನು ಕ್ರಮವಾಗಿ ಮಾಡುವುದಿಲ್ಲವೋ ಅವನು ನಾಯಿಯಾಗಿ ಹುಟ್ಟುತ್ತಾನೆ.

ಧರ್ಮ-ಅರ್ಥ-ಕಾಮ-ಮೋಕ್ಷಗಳು ನಾಲ್ಕು ಪುರುಷಾರ್ಥಗಳು. ಕಾಮವು ಧರ್ಮಕ್ಕೆ ಅವಿರುದ್ಧವಾಗಿರಬೇಕು. ಧರ್ಮಕ್ಕಾಗಿ ಉಪಯೋಗಿಯಾಗುವ ಧನವೇ ಧನ. ತನಗಾಗಿ ಉಪಯೋಗವಾಗುವುದು ಅಲ್ಲ. ಆದ್ದರಿಂದ ಬ್ರಾಹ್ಮಣನು ಅರ್ಥವನ್ನು ಸಂಪಾದಿಸಿ ದಾನಗಳನ್ನು ಮಾಡಬೇಕು. ಹೋಮಗಳನ್ನು ಮಾಡಬೇಕು.

* * *

## ಅಧ್ಯಾಯ-೭೯

**ವ್ಯಾಸ ಉವಾಚ :**

ಹಿಂದೆ ಬ್ರಹ್ಮದೇವರು ಬ್ರಹ್ಮವಾದಿಗಳಾದ ಋಷಿಗಳಿಗೆ ದಾನ, ಧರ್ಮಗಳನ್ನು ಕುರಿತು ಹೇಳಿದ್ದರು. ಅದನ್ನು ನಾನು ನಿಮಗೆ ಹೇಳುತ್ತೇನೆ.

ಸಂಪತ್ತನ್ನು ಸತ್ಪಾತ್ರನಿಗೆ ಶ್ರದ್ಧೆಯಿಂದ ಕೊಡುವುದು ದಾನ. ಇದು ದಾತೃವಿಗೆ ಭೋಗವನ್ನೂ, ಮುಕ್ತಿಯನ್ನೂ ಉಂಟುಮಾಡುತ್ತದೆ. ವಿಶಿಷ್ಟರಾದ ಶಿಷ್ಟರಿಗೆ ಶ್ರದ್ಧೆಯಿಂದ ದಾನವನ್ನು ಮಾಡಬೇಕು. ಇದು ಶ್ರೇಷ್ಠದಾನ. ಬೇರೆ ದಾನಗಳು ಯಾರಿಗೋ ಉಪಯುಕ್ತವಾಗುತ್ತದೆ, ಅಷ್ಟೇ.

ನಿತ್ಯ, ನೈಮಿತ್ತಿಕ, ಕಾಮ್ಯ ಎಂದು ದಾನವು ಮೂರು ವಿಧ. ಇದಲ್ಲದೆ ವಿಮಲ ಎಂಬ ನಾಲ್ಕನೆಯ ವಿಧವೂ ಇದೆ. ಇದು ದಾನಗಳಲ್ಲಿ ಅತ್ಯಂತ ಉತ್ತಮವಾದ ದಾನ. ಪ್ರತ್ಯುಪಕಾರ ಮಾಡದ ಬ್ರಾಹ್ಮಣನಿಗೆ ಪ್ರತಿದಿನವೂ ಪ್ರತಿಫಲಾಪೇಕ್ಷೆಯಿಲ್ಲದೆ ಕೊಡಲ್ಪಡುವ ದಾನವು ನಿತ್ಯದಾನ. ಪಾಪಪರಿಹಾರಕ್ಕಾಗಿ ಜ್ಞಾನಿಗಳ ಕೈಯಲ್ಲಿ ಕೊಡಲ್ಪಡುವ ದಾನವು ನೈಮಿತ್ತಿಕದಾನ.

## ಅಧ್ಯಾಯ-೭೮

**ವ್ಯಾಸ ಉವಾಚ :**

ಗೃಹಸ್ಥಾಶ್ರಮಿಯು ಅನುಸರಿಸಬೇಕಾದ ಜೀವನೋಪಾಯಗಳನ್ನು ಹೇಳುವೆ. ಕೇಳಿರಿ. ಗೃಹಸ್ಥಾಶ್ರಮಿಗಳು ಎರಡು ವಿಧ. ಸಾಧಕರು ಮತ್ತು ಅಸಾಧಕರು. ಅಧ್ಯಾಪನ (ಪಾಠ ಹೇಳುವುದು), ಯಾಜನ (ಯಜ್ಞವನ್ನು ಮಾಡಿಸುವುದು) ಮತ್ತು ಪ್ರತಿಗ್ರಹ (ದಾತೃಗಳು ಕೊಡುವ ಪದಾರ್ಥಗಳ ಸ್ವೀಕಾರ) -ಈ ಮೂರು ಸಾಧಕರ ಜೀವನೋಪಾಯ. ಧನದ ಲೇವಾದೇವಿ, ಕೃಷಿ ಮತ್ತು ವ್ಯಾಪಾರ -ಈ ಮೂರು ಕೂಡ ಜೀವನೋಪಾಯ. ಮೊದಲನೆಯ ಮೂರು ದುರ್ಲಭವಾದಾಗ ಇವನ್ನು ಅನುಸರಿಸಬೇಕು. ಇವುಗಳಲ್ಲೂ ಕೃಷಿಯು ದುರ್ಲಭವಾದಾಗ ವಾಣಿಜ್ಯವನ್ನು, ಅದೂ ಸಾಧ್ಯವಾಗದಿರುವಾಗ ಲೇವಾದೇವಿಯನ್ನು ಮಾಡಬೇಕು. ಲೇವಾದೇವಿಯು ಬಹಳ ಪಾಪಕರವಾದ ವೃತ್ತಿ. ಇದನ್ನು ಬಿಡಬೇಕು.

ತಾನು ಹಿಡಿದ ಜೀವನೋಪಾಯದಿಂದ ಬಂದ ಲಾಭದಲ್ಲಿ ಪಿತೃ-ದೇವ-ಬ್ರಾಹ್ಮಣರ ಪೂಜೆಯನ್ನು ಮಾಡಬೇಕು. ತೃಪ್ತರಾದ ಅವರು ಬೇರೆ ಪಂಥದವರ ಜೀವನೋಪಾಯವನ್ನು ಅನುಸರಿಸಿದ್ದರಿಂದ ಉಂಟಾದ ದೋಷವನ್ನು ಪರಿಹರಿಸುತ್ತಾರೆ.

ಕೃಷಿಯನ್ನು ಆಶ್ರಯಿಸಿದ ಬ್ರಾಹ್ಮಣನು ದೇವತೆಗಳಿಗೆ ಮತ್ತು ಪಿತೃಗಳಿಗೆ ಇಪ್ಪತ್ತು ಭಾಗವನ್ನು, ಬ್ರಾಹ್ಮಣರಿಗೆ ಮೂವತ್ತುಭಾಗವನ್ನು ಕೊಡಬೇಕು. ವ್ಯಾಪಾರವನ್ನು ಮಾಡುವ ಬ್ರಾಹ್ಮಣನು ಕ್ರಮವಾಗಿ ನಲವತ್ತು ಮತ್ತು ಅರವತ್ತು ಭಾಗವನ್ನು, ಲೇವಾದೇವಿಯಿಂದ ಸಂಪಾದಿಸುವ ಬ್ರಾಹ್ಮಣನು ಕ್ರಮವಾಗಿ ಅರವತ್ತು ಮತ್ತು ತೊಂಭತ್ತು ಭಾಗವನ್ನು ದಾನ ಮಾಡಬೇಕು. ಆಗ ಅವನು ದೋಷಗಳಿಂದ ಮುಕ್ತನಾಗುತ್ತಾನೆ. ಸಾಧಕ ಗೃಹಸ್ಥಾಶ್ರಮಿಯು ಶಿಲವೃತ್ತಿಯನ್ನು ಅಥವಾ ಉಂಛವೃತ್ತಿಯನ್ನು ಆಶ್ರಯಿಸಬಹುದು. ವಿದ್ಯಾಶಿಲ್ಪ ಮೊದಲಾದ ಇನ್ನೂ ಅನೇಕ ಜೀವನೋಪಾಯಗಳು ಇವೆ.

ಅಸಾಧಕ ಗೃಹಸ್ಥಾಶ್ರಮಿಯು ಶಿಲ ಅಥವಾ ಉಂಛ ವೃತ್ತಿಯನ್ನು ಆಶ್ರಯಿಸಬೇಕೆಂದು ಮಹರ್ಷಿಗಳ ಅಭಿಪ್ರಾಯ. ಅಮೃತ ಮತ್ತು ಮೃತ ಎಂಬ ಜೀವನೋಪಾಯಗಳನ್ನೂ ಅನುಸರಿಸಬಹುದು.

ಬೇಡದೆ ಬದುಕುವುದು ಅಮೃತ ಜೀವನ. ಬೇಡಿ ಜೀವನ ಸಾಗಿಸುವುದು ಮೃತ ಜೀವನ. ಮುಂದಿನ ದಿನಗಳಿಗಾಗಿ ಸಂಗ್ರಹ ಮಾಡಿಕೊಳ್ಳುವವರಲ್ಲೂ ಹೀಗೆ ಪ್ರಭೇದಗಳಿವೆ. (೧) ಕಣಜದಲ್ಲಿ ಸಂಗ್ರಹಿಸುವವರು (೨) ಕುಂಭಯಲ್ಲಿ ಸಂಗ್ರಹಿಸುವವರು (೩) ಮೂರು ದಿನಗಳಲ್ಲಿ ಸಾಕಾಗುವಷ್ಟು ಸಂಗ್ರಹಿಸುವವರು (೪) ನಾಳೆಗಾಗಿ ಏನನ್ನೂ ಇಟ್ಟುಕೊಳ್ಳದವರು. ಈ ನಾಲ್ಕು ವಿಧದ ಬ್ರಾಹ್ಮಣ-ಗೃಹಸ್ಥಾಶ್ರಮಿಗಳಲ್ಲಿ ಹಿಂದಿನವರಿಗಿಂತ ಮುಂದಿನವರು ಧರ್ಮದಿಂದ ಶ್ರೇಷ್ಠರು. ಲೋಕವನ್ನು ಗೆದ್ದವರು.

ಗೃಹಸ್ಥಾಶ್ರಮಿ ಬ್ರಾಹ್ಮಣರಲ್ಲಿ ಕೆಲವರು ಆರು (ಅಧ್ಯಯನ-ಅಧ್ಯಾಪನ, ಯಜನ-ಯಾಜನ-ದಾನ-ಪ್ರತಿಗ್ರಹ) ಕರ್ಮಗಳನ್ನು ಜೀವನಕ್ಕಾಗಿ ಆಶ್ರಯಿಸುತ್ತಾರೆ. ಮತ್ತೆ ಕೆಲವರು ಮೂರನ್ನು (ಅಧ್ಯಾಪನ-ಯಾಜನ-ಪ್ರತಿಗ್ರಹ) ಆಶ್ರಯಿಸುತ್ತಾರೆ. ಮತ್ತಿತರರು ಅಧ್ಯಾಪನ-ಯಾಜನಗಳಿಂದ ಮಾತ್ರ ಜೀವಿಸುತ್ತಾರೆ. ಇನ್ನು ಕೆಲವರು ಬ್ರಹ್ಮಸತ್ರಗಳನ್ನು ಆಶ್ರಯಿಸಿ (ಬ್ರಹ್ಮಜ್ಞಾನಕ್ಕಾಗಿ ಮುನಿಗಳು ಸೇರಿ ನಡೆಸುವ ವಿವಿಧ ಯಜ್ಞ) ಜೀವನವನ್ನು ನಡೆಸುತ್ತಾರೆ.

ಯಾವ ಗೃಹಸ್ಥಾಶ್ರಮಿಯು ಧನಾರ್ಜನೆಯನ್ನು ಮಾಡಿ ದೇವತೆಗಳ-ಪಿತೃಗಳ ಅರ್ಚನೆಯನ್ನು ಕ್ರಮವಾಗಿ ಮಾಡುವುದಿಲ್ಲವೋ ಅವನು ನಾಯಿಯಾಗಿ ಹುಟ್ಟುತ್ತಾನೆ.

ಧರ್ಮ-ಅರ್ಥ-ಕಾಮ-ಮೋಕ್ಷಗಳು ನಾಲ್ಕು ಪುರುಷಾರ್ಥಗಳು. ಕಾಮವು ಧರ್ಮಕ್ಕೆ ಅವಿರುದ್ಧವಾಗಿರಬೇಕು. ಧರ್ಮಕ್ಕಾಗಿ ಉಪಯೋಗಿಯಾಗುವ ಧನವೇ ಧನ. ತನಗಾಗಿ ಉಪಯೋಗವಾಗುವುದು ಅಲ್ಲ. ಆದ್ದರಿಂದ ಬ್ರಾಹ್ಮಣನು ಅರ್ಥವನ್ನು ಸಂಪಾದಿಸಿ ದಾನಗಳನ್ನು ಮಾಡಬೇಕು. ಹೋಮಗಳನ್ನು ಮಾಡಬೇಕು.

* * *

## ಅಧ್ಯಾಯ-೭೯

**ವ್ಯಾಸ ಉವಾಚ :**

ಹಿಂದೆ ಬ್ರಹ್ಮದೇವರು ಬ್ರಹ್ಮವಾದಿಗಳಾದ ಋಷಿಗಳಿಗೆ ದಾನ, ಧರ್ಮಗಳನ್ನು ಕುರಿತು ಹೇಳಿದ್ದರು. ಅದನ್ನು ನಾನು ನಿಮಗೆ ಹೇಳುತ್ತೇನೆ.

ಸಂಪತ್ತನ್ನು ಸತ್ಪಾತ್ರನಿಗೆ ಶ್ರದ್ಧೆಯಿಂದ ಕೊಡುವುದು ದಾನ. ಇದು ದಾತೃವಿಗೆ ಭೋಗವನ್ನೂ, ಮುಕ್ತಿಯನ್ನೂ ಉಂಟುಮಾಡುತ್ತದೆ. ವಿಶಿಷ್ಟರಾದ ಶಿಷ್ಟರಿಗೆ ಶ್ರದ್ಧೆಯಿಂದ ದಾನವನ್ನು ಮಾಡಬೇಕು. ಇದು ಶ್ರೇಷ್ಠದಾನ. ಬೇರೆ ದಾನಗಳು ಯಾರಿಗೋ ಉಪಯುಕ್ತ-ವಾಗುತ್ತದೆ, ಅಷ್ಟೇ.

ನಿತ್ಯ, ನೈಮಿತ್ತಿಕ, ಕಾಮ್ಯ ಎಂದು ದಾನವು ಮೂರು ವಿಧ. ಇದಲ್ಲದೆ ವಿಮಲ ಎಂಬ ನಾಲ್ಕನೆಯ ವಿಧವೂ ಇದೆ. ಇದು ದಾನಗಳಲ್ಲಿ ಅತ್ಯಂತ ಉತ್ತಮವಾದ ದಾನ. ಪ್ರತ್ಯುಪಕಾರ ಮಾಡದ ಬ್ರಾಹ್ಮಣನಿಗೆ ಪ್ರತಿದಿನವೂ ಪ್ರತಿಫಲಾಪೇಕ್ಷೆಯಿಲ್ಲದೆ ಕೊಡಲ್ಪಡುವ ದಾನವು ನಿತ್ಯದಾನ. ಪಾಪಪರಿಹಾರಕ್ಕಾಗಿ ಜ್ಞಾನಿಗಳ ಕೈಯಲ್ಲಿ ಕೊಡಲ್ಪಡುವ ದಾನವು ನೈಮಿತ್ತಿಕದಾನ.

ಸಂತತಿಯಾಗುವುದಕ್ಕಾಗಿ, ವಿಜಯಕ್ಕಾಗಿ, ಐಶ್ವರ್ಯಕ್ಕಾಗಿ, ಸ್ವರ್ಗಕ್ಕಾಗಿ ಮಾಡಲ್ಪಡುವ ದಾನವು ಕಾಮ್ಯ. ಪರಮಾತ್ಮನು ಪ್ರೀತನಾಗಲೆಂದು ಬ್ರಹ್ಮಜ್ಞಾನಿಗಳಿಗೆ ಧರ್ಮಬುದ್ಧಿಯಿಂದ ಕೊಡಲ್ಪಡುವ ದಾನವು ವಿಮಲದಾನ.

ಸತ್ಪಾತ್ರರು ದೊರೆತಾಗ ದಾನ- ಧರ್ಮವನ್ನು ಶಕ್ತಿಯಿದ್ದಷ್ಟು ಮಾಡಬೇಕು. ಏಕೆಂದರೆ ಪಾತ್ರರು ದಾತೃವನ್ನು ಅನರ್ಥಗಳಿಂದ ಪಾರು ಮಾಡುತ್ತಾರೆ. ಕುಟುಂಬದ ಆಹಾರ-ವಸ್ತ್ರಗಳಿಗೆ ಸಾಕಾಗಿ ಉಳಿದ ಸಂಪತ್ತನ್ನು ಮಾತ್ರ ದಾನ ಮಾಡಬೇಕು. ಹೀಗಿಲ್ಲದ ದಾನವು ಫಲಪ್ರದವಲ್ಲ. ವೇದಾಧ್ಯಯನ ಸಂಪನ್ನನೂ, ಸತ್ಕುಲಪ್ರಸೂತನೂ, ವಿನೀತನೂ, ತಪಸ್ವಿಯೂ, ವ್ರತನಿಷ್ಠನೂ, ದರಿದ್ರನೂ ಆದವನು ಪಾತ್ರ, ಇವನಿಗೆ ಭಕ್ತಿಯಿಂದ ಮಾಡಲ್ಪಡುವ ದಾನವು ಫಲಪ್ರದ. ನಿತ್ಯವು ಅಗ್ನಿಯ ಆಧಾನವನ್ನು ಮಾಡಿಕೊಂಡಿರುವ ಬ್ರಾಹ್ಮಣನಿಗೆ ಭಕ್ತಿಯಿಂದ ಭೂದಾನವನ್ನು ಮಾಡಿದರೆ ದಾತೃ ಶೋಕವೇ ಇಲ್ಲದ ಸ್ಥಾನವನ್ನು ಪಡೆಯುತ್ತಾನೆ. ಕಬ್ಬು, ಯವ, ಗೋದಿ -ಇವುಗಳು ಸಮೃದ್ಧವಾಗಿ ಬೆಳೆದಿರುವ ಭೂಮಿ-ಯನ್ನು ವೇದಜ್ಞಾನಿಗೆ ದಾನಮಾಡಿದರೆ ಅವನಿಗೆ ಪುನರ್ಜನ್ಮವಿಲ್ಲ. ಬಡವನಾದ ಬ್ರಾಹ್ಮಣನಿಗೆ ಹಸುವಿನ ಚರ್ಮದ ಅಳತೆಯಷ್ಟು ಭೂಮಿಯನ್ನು ದಾನಮಾಡಿದರೂ, ದಾತೃ ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಭೂದಾನಕ್ಕಿಂತ ದೊಡ್ಡದಾನವಿಲ್ಲ. ಅನ್ನದಾನವು ಭೂದಾನಕ್ಕೆ ಸಮಾನ. ವಿದ್ಯಾದಾನವು ಅದಕ್ಕಿಂತ ಹೆಚ್ಚು. ಶುಚಿಯೂ, ಧರ್ಮನಿಷ್ಠನೂ ಆದ ಬ್ರಾಹ್ಮಣನಿಗೆ ವಿಧಿಗೆ ಅನುಗುಣವಾಗಿ ವಿದ್ಯಾದಾನವನ್ನು ಮಾಡಿದವನು ಬ್ರಹ್ಮಲೋಕದಲ್ಲಿ ಮಾನ್ಯನಾಗುತ್ತಾನೆ.

ವೈಶಾಖದಲ್ಲಿ 'ಧರ್ಮರಾಜನು ಪ್ರೀತನಾಗಲಿ' ಎಂದು ಹೇಳುತ್ತಾ ಸಿದ್ಧವಾದ ಅನ್ನವನ್ನು ಉದಕುಂಭವನ್ನು ದಾನ ಮಾಡಿದರೆ ಎಲ್ಲ ಭಯಗಳಿಂದ ಮುಕ್ತನಾಗುತ್ತಾನೆ. ಬಂಗಾರ, ಎಳ್ಳು ಮತ್ತು ಉದಕಪಾತ್ರೆಯನ್ನು ಐದು ಅಥವಾ ಏಳು ಬ್ರಾಹ್ಮಣರಿಗೆ ದಾನಮಾಡಿದರೆ ಬ್ರಹ್ಮಹತ್ಯಾದೋಷದ ಪರಿಹಾರವಾಗುತ್ತದೆ. ಮಾಘಮಾಸದ ದ್ವಾದಶಿಯಂದು ಉಪವಾಸ ಮಾಡಿ, ಬಿಳಿ ಬಟ್ಟೆಯನ್ನು ಉಟ್ಟು, ಕಪ್ಪುಎಳ್ಳುಗಳಿಂದ ಹೋಮವನ್ನು ಮಾಡಿ, ಸಮಾಧಾನ-ದಿಂದ ಬ್ರಾಹ್ಮಣರಿಗೆ ಎಳ್ಳನ್ನು ದಾನ ಮಾಡಬೇಕು. ಇದರಿಂದ ಹುಟ್ಟಿದಾಗಿನಿಂದ ಮಾಡಿದ ಎಲ್ಲ ಪಾಪಗಳೂ ನಾಶವಾಗುತ್ತವೆ. ಅಮಾವಾಸ್ಯೆಯಂದು ದೇವೋತ್ತಮನಾದ ಶಂಕರನ ಅನುಗ್ರಹವನ್ನು ಬಯಸಿ, 'ಪ್ರೀಯತಾಮೀಶ್ವರಃ ಸೋಮೋ ಮಹಾದೇವಃ ಸನಾತನಃ' ಎಂದ ನಿರ್ದೇಶಿಸಿ ಏನನ್ನಾದರೂ ದಾನ ಮಾಡಬೇಕು. ಇದರಿಂದ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳು ನಾಶವಾಗುತ್ತವೆ.

ಐಶ್ವರ್ಯವನ್ನು ಬಯಸುವ ಬ್ರಾಹ್ಮಣನು ಯಾವಾಗಲೂ ಇಂದ್ರನನ್ನು ಪೂಜಿಸಬೇಕು. ಬ್ರಹ್ಮವರ್ಚಸ್ ಅನ್ನು ಬಯಸುವವರು ಬ್ರಹ್ಮನನ್ನು ಪೂಜಿಸಬೇಕು. ಆರೋಗ್ಯವನ್ನು ಬಯಸುವವರು ಸೂರ್ಯನನ್ನು ಪೂಜಿಸಬೇಕು. ಗೋಸಂಪತ್ತನ್ನು ಬಯಸುವವನು

ಅಗ್ನಿದೇವತೆಯನ್ನು ಪೂಜಿಸಬೇಕು. ಕಾರ್ಯಸಿದ್ಧಿಯನ್ನು ಬಯಸುವವನು ವಿನಾಯಕನನ್ನು ಪೂಜಿಸಬೇಕು. ಬಲವನ್ನು ಬಯಸುವವನು ಸಮೀರನನ್ನು ಪೂಜಿಸಬೇಕು. ಸಂಸಾರದಿಂದ ಪೂರ್ಣ ಬಿಡುಗಡೆಯನ್ನು ಬಯಸುವವನು ಹರಿಯನ್ನು ಪೂಜಿಸಬೇಕು.

ಯಾರು ಯೋಗ, .ಮೋಕ್ಷ ಮತ್ತು ಈಶ್ವರಜ್ಞಾನವನ್ನು ಬಯಸುವರೋ ಅವರು ಪ್ರಯತ್ನಪಟ್ಟು ವಿರೂಪಾಕ್ಷನಾದ ಮಹೇಶ್ವರನನ್ನು ಪೂಜಿಸಬೇಕು. ಮಹಾಯೋಗವನ್ನೂ, ಜ್ಞಾನವನ್ನೂ ಬಯಸುವವರು.ಭೂತೇಶನಾದ ಮಹೇಶ್ವರನನ್ನೂ ಭೋಗಾಪೇಕ್ಷೆವುಳ್ಳವರು ಕೇಶವನನ್ನೂ ಪೂಜಿಸುತ್ತಾರೆ.

ನೀರನ್ನು ದಾನಮಾಡಿದವನು ತೃಪ್ತಿಯನ್ನೂ, ಅನ್ನದಾನ ಮಾಡಿದವನು ಅಕ್ಷಯ ಸುಖವನ್ನೂ, ತಿಲದಾನ ಮಾಡಿದವನು ಇಷ್ಟವಾದ ಸಂತತಿಯನ್ನೂ, ದೀಪದಾನವನ್ನು ಮಾಡಿದವನು ಉತ್ತಮವಾದ ದೃಷ್ಟಿಯನ್ನೂ ಹೊಂದುತ್ತಾನೆ. ಭೂದಾನವನ್ನು ಮಾಡಿದವನು ಎಲ್ಲವನ್ನೂ ಹೊಂದುತ್ತಾನೆ. ಸ್ವರ್ಣದಾನವನ್ನು ಮಾಡಿದವನು ದೀರ್ಘಾಯುಷ್ಯವನ್ನು, ಗೃಹದಾನವನ್ನು ಮಾಡಿದವನು ಶ್ರೇಷ್ಠವಾದ ಮನೆಗಳನ್ನೂ, ಬೆಳ್ಳಿಯನ್ನು ದಾನಮಾಡಿದವನು ಉತ್ತಮವಾದ ರೂಪವನ್ನೂ ಹೊಂದುವನು. ಬಟ್ಟೆಗಳನ್ನು ದಾನಮಾಡಿದವನು ಚಂದ್ರನ ಲೋಕವನ್ನೂ, ಕುದುರೆಗಳನ್ನು ದಾನಮಾಡಿದವನು ಅಶ್ವಿನೀ ದೇವತೆಗಳ ಲೋಕವನ್ನೂ, ಎತ್ತುಗಳನ್ನು ದಾನ ಮಾಡಿದವನು ವಿಪುಲವಾದ ಸಂಪತ್ತನ್ನೂ ಗೋದಾನ ಮಾಡಿದವನು ಬ್ರಹ್ಮಲೋಕವನ್ನು ಹೊಂದುತ್ತಾನೆ. ವಾಹನ-ಶಯ್ಯಾಗಳನ್ನು ದಾನಮಾಡಿದವನು ಹೆಂಡತಿ-ಯನ್ನು, ಅಭಯದಾನ ಮಾಡಿದವನು. ಐಶ್ವರ್ಯವನ್ನೂ, ಧಾನ್ಯದಾನವನ್ನು ದಾನ ಮಾಡಿದವನು ಶಾಶ್ವತ ಸೌಖ್ಯವನ್ನೂ, ವೇದವಿದ್ಯೆಯ ದಾನವನ್ನು ಮಾಡಿದವನು ಬ್ರಹ್ಮಸಾಮೀಪ್ಯವನ್ನೂ ಹೊಂದುತ್ತಾನೆ. ವೇದಜ್ಞಾನಿಗಳಾದ ವಿಶಿಷ್ಟವಿಪ್ರರಲ್ಲಿ ಶಕ್ತಿಯಿದ್ದಷ್ಟು ಧಾನ್ಯದಾನವನ್ನು ಮಾಡಬೇಕು. ಇದರಿಂದ ಮರಣಾನಂತರ ಸ್ವರ್ಗ ಪ್ರಾಪ್ತಿ. ಗೋದಾನ ಮಾಡುವುದರಿಂದ ಎಲ್ಲ ಪಾಪಗಳಿಂದ ಮುಕ್ತಿಯನ್ನು ಪಡೆಯುತ್ತಾನೆ. ಇಂಧನ ದಾನದಿಂದ ಜ್ವಲಿಸುವ ಅಗ್ನಿ (ಜೀರ್ಣಶಕ್ತಿ)ವುಳ್ಳವನು ಆಗುತ್ತಾನೆ.

ಯೋಗ್ಯಬ್ರಾಹ್ಮಣರಿಗೆ ಫಲ-ಮೂಲಗಳನ್ನೂ, ತರಕಾರಿಗಳನ್ನೂ, ವಿವಿಧ ಭೋಜ್ಯ ಪದಾರ್ಥಗಳನ್ನೂ ದಾನ ಮಾಡಬೇಕು. ನಿರಂತರ ಸಂತೋಷವೇ ಈ ದಾನದ ಫಲ. ರೋಗಿಯಾದವನಿಗೆ ರೋಗಪರಿಹಾರಕ್ಕಾಗಿ ಔಷಧವನ್ನೂ, ಅನುಕೂಲವಾದ ಆಹಾರವನ್ನೂ ದಾನಮಾಡಿದವನು ರೋಗರಹಿತನೂ, ದೀರ್ಘಾಯುವೂ ಆಗಿರುತ್ತಾನೆ. ಛತ್ರಿ ಮತ್ತು ಪಾದರಕ್ಷೆಗಳ ದಾನವನ್ನು ಮಾಡಿದವನು ಮರಣಾನಂತರ ಹರಿತವಾಗಿರುವ ದಾರಿಯಲ್ಲಿ ನಡೆದು ಅಸಿಪತ್ರವನ ಎಂಬ ನರಕಕ್ಕೆ ಹೋಗುವ ಪ್ರಸಂಗದಿಂದ ಪಾರಾಗುತ್ತಾನೆ. ಪ್ರಖರ ಬಿಸಿಲಿನ ನರಕವನ್ನೂ ತಪ್ಪಿಸಿಕೊಳ್ಳುತ್ತಾನೆ. ಲೋಕದಲ್ಲಿ ಯಾವುದು ಬಹಳ ಇಷ್ಟವಾದುದೋ, ಮನೆಯಲ್ಲಿ ಇರುವ ವಸ್ತುಗಳಲ್ಲಿ ಯಾವುದು ಬಹಳ ಪ್ರಿಯವೋ ಅವುಗಳನ್ನು ಸತ್ಪಾತ್ರನಿಗೆ

ದಾನಮಾಡಬೇಕು. ಇದರಿಂದ ಆ ಪದಾರ್ಥಗಳು ಅಕ್ಷಯವಾಗಿ ಲಭಿಸುತ್ತವೆ. ದಕ್ಷಿಣಾಯನ-ಉತ್ತರಾಯಣಕಾಲಗಳಲ್ಲಿ, ವಿಷುವಕಾಲದಲ್ಲಿ, ಚಂದ್ರಗ್ರಹಣ-ಸೂರ್ಯಗ್ರಹಣ ಕಾಲ-ದಲ್ಲಿ ಸಂಕ್ರಾತಿ ಮೊದಲಾದ ಸಮಯದಲ್ಲಿ ಕೊಡಲ್ಪಟ್ಟ ವಸ್ತುಗಳು ಅಕ್ಷಯವಾಗುತ್ತವೆ. ಪ್ರಯಾಗ ಮೊದಲಾದ ತೀರ್ಥ ಕ್ಷೇತ್ರಗಳಲ್ಲಿ, ಪುಣ್ಯದೇವಾಲಯಗಳಲ್ಲಿ, ನದೀತೀರದಲ್ಲಿ, ವನಗಳಲ್ಲಿ ದಾನಮಾಡಿದರೆ ಅಕ್ಷಯ ಫಲ ಪ್ರಾಪ್ತಿಯಾಗುವುದು.

ದಾನಕ್ಕಿಂತ ಶ್ರೇಷ್ಠವಾದ ಧರ್ಮವಿಲ್ಲ. ಆದ್ದರಿಂದ ದೀನದರಿದ್ರರಿಗೆ ದಾನವನ್ನು ಮಾಡಬೇಕು.

ತನ್ನ ಜೀವನ ನಡೆಯಲು ಆದಷ್ಟು ಕಡಿಮೆ ದ್ರವ್ಯವನ್ನು ಅವಲಂಬಿಸಬೇಕು. ಅದಕ್ಕಾಗಿ ವೃತ್ತಿಯನ್ನೂ ಆದಷ್ಟೂ ಕಡಿಮೆ ಮಾಡಬೇಕು. ಧನಲೋಭವನ್ನು ಬೆಳೆಸಿಕೊಂಡರೆ ಬ್ರಾಹ್ಮಣ್ಯವೇ ಹೋಗುತ್ತದೆ. ವಿಷಯಭೋಗವನ್ನು ಕಡಿಮೆ ಮಾಡಿ ಮಾಡಿಕೊಳ್ಳುವುದರಿಂದ ಹೊಂದುವ ಸದ್ಗತಿಯನ್ನು ಸಕಲ ವೇದಗಳ ಅಧ್ಯಯನ ಮಾಡಿ, ಸಕಲ ಯಜ್ಞಗಳನ್ನು ಮಾಡಿದರೂ ಪಡೆಯಲಾಗುವುದಿಲ್ಲ. ಪ್ರತಿಗ್ರಹದಲ್ಲಿ ಆಸಕ್ತಿ ಇರಬಾರದು. ಜೀವನ ನಿರ್ವಹಣೆಗೋಸ್ಕರವೇ ಪ್ರತಿಗ್ರಹವನ್ನು ಮಾಡಬೇಕು. ಅದಕ್ಕಿಂತ ಹೆಚ್ಚನ್ನು ಬಯಸುವವನು ಅಧೋಗತಿಯನ್ನು ಹೊಂದುತ್ತಾನೆ. ಪ್ರತಿದಿನ ಬೇಡುವವನಿಗೆ ಸ್ವರ್ಗವೂ ಲಭಿಸುವುದಿಲ್ಲ. ಇಂತಹವರು ಯೋಚನೆಯಿಂದ ಜನರಿಗೆ ಉದ್ವೇಗವನ್ನು ಉಂಟುಮಾಡುತ್ತಾರೆ. ಕಳ್ಳರಂತೆ. ಹಿರಿಯರ, ಭೃತ್ಯರ ಉದ್ಧಾರಕ್ಕಾಗಿ, ದೇವತೆಗಳ - ಅತಿಥಿಗಳ ಪೂಜೆಗಾಗಿ ಎಲ್ಲರಿಂದಲೂ ಪ್ರತಿಗ್ರಹವನ್ನು ಮಾಡಬಹುದು. ಪ್ರತಿಗ್ರಹವನ್ನು ತನ್ನ ತೃಪ್ತಿಗಾಗಿ ಮಾಡಬಾರದು.

ಹೀಗೆ ಗೃಹಸ್ಥಾಶ್ರಮಿಯು ದೇವತೆಗಳನ್ನು - ಅತಿಥಿಗಳನ್ನೂ ಪೂಜಿಸುತ್ತಾ, ಸಂಯಮ-ದಿಂದ ಸಾಧಕನಾಗಿ ಬದುಕಿದರೆ ಪರಮಪದವನ್ನು ಹೊಂದುತ್ತಾನೆ. ಕೊನೆಗೆ ಮಗನಿಗೆ ಆಸ್ತಿಯನ್ನೂ, ಜವಾಬ್ದಾರಿಯನ್ನು ಕೊಟ್ಟು ಅರಣ್ಯಕ್ಕೆ ಹೋಗಿ ಏಕಾಕಿಯಾಗಿ, ಅಂತರ್ಮುಖಿನಾಗಿ ಅನುಷ್ಠಾನವನ್ನು ಮಾಡಬೇಕು.

ದ್ವಿಜೋತ್ತಮರೇ! ಹೀಗೆ ಗೃಹಸ್ಥಾಶ್ರಮಿಗಳ ನಿಮಗೆ ಇಲ್ಲಿಯವರೆಗೆ ಹೇಳಿದ್ದಾಯಿತು. ಇದನ್ನು ಚೆನ್ನಾಗಿ ತಿಳಿದು ಪೂರ್ಣವಾಗಿ ಅನುಷ್ಠಾನ ಮಾಡಬೇಕು. ಅನುಷ್ಠಾನ ಮಾಡಿಸಬೇಕು. ಅನಾದಿಯಾದ, ಸರ್ವನಿಯಾಮಕನೂ, ಸ್ವತಂತ್ರನೂ ಆದ ಈಶನನ್ನು ಗೃಹಸ್ಥಾಶ್ರಮಧರ್ಮದಿಂದ ಆರಾಧಿಸುವವನು ಸಂಸಾರ ಬಂಧನದಿಂದ - ಪ್ರಕೃತಿಬಂಧನ-ದಿಂದ ಬಿಡುಗಡೆಯನ್ನು ಪಡೆಯುತ್ತಾನೆ. ಪುನರ್ಜನ್ಮ ಅವನಿಗೆ ಆಗುವುದಿಲ್ಲ.

* * *

## ಅಧ್ಯಾಯ-೬೦

ವ್ಯಾಸ ಉವಾಚ :

ಮಾನವನು ತನ್ನ ಆಯುಷ್ಯದ ಎರಡನೇ ಭಾಗ ಮುಗಿಯುವವರೆಗೆ ಗೃಹಸ್ಥಾಶ್ರಮದಲ್ಲಿ ಇದ್ದು ಹೆಂಡತಿಯೊಡನೆ ಅಗ್ನಿಸಹಿತನಾಗಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕು. ಅಥವಾ ಹೆಂಡತಿಯನ್ನು ಪುತ್ರರ ರಕ್ಷಣೆಯಲ್ಲಿರಿಸಿ ಒಬ್ಬನೇ ವನಕ್ಕೆ ಹೋಗಬಹುದು.

ಉತ್ತರಾಯಣದಲ್ಲಿ ಶುಕ್ಲಪಕ್ಷದ ಒಂದು ಪ್ರಶಸ್ತವಾದ ಪೂರ್ವಾಹ್ನದಲ್ಲಿ ಅರಣ್ಯಕ್ಕೆ ಹೊರಡಬೇಕು. ಅಲ್ಲಿ ಏಕಾಗ್ರ ಮನಸ್ಸಿನಿಂದ ತಪಸ್ಸನ್ನು ಮಾಡಬೇಕು. ಪವಿತ್ರವಾದ ಫಲ ಮೂಲಗಳನ್ನು ಮಿತವಾಗಿ ಸೇವಿಸಬೇಕು. ಪಿತೃಗಳ ದೇವತೆಗಳ ಆರಾಧನೆಗೆ ಅವುಗಳನ್ನೇ ಉಪಯೋಗಿಸಬೇಕು. ನಿತ್ಯವೂ ದೇವತಾರ್ಚನೆಯನ್ನು ಮಾಡಬೇಕು. ಅತಿಥಿಸತ್ಕಾರವನ್ನು ಮಾಡಬೇಕು. ಮನೆಯಿಂದ ಆಹಾರವನ್ನು ತರಿಸಿ ಎಂಟು ತುತ್ತುಗಳನ್ನು ಭುಂಜಿಸಬಹುದು. ಜಟೆಯನ್ನು ಧರಿಸಬೇಕು. ಉಗುರು-ಕೂದಲುಗಳನ್ನು ಕತ್ತರಿಸಬಾರದು. ಯಾವಾಗಲೂ ವೇದಾಧ್ಯಯನವನ್ನು ಮಾಡಬೇಕು. ಬೇರೆ ವಿಷಯಗಳನ್ನು ಕುರಿತು ಮಾತನಾಡಬಾರದು. ಮುನಿಗಳ ಆಹಾರವಾದ, ವನದಲ್ಲಿ ದೊರೆಯುವ ವಿವಿಧ ತರಕಾರಿ - ಮೂಲ ಫಲಗಳನ್ನು ಉಪಯೋಗಿಸಿ ಅಗ್ನಿಹೋತ್ರವನ್ನು ಆಚರಿಸಬೇಕು. ದೇವ-ಋಷಿ-ಪಿತೃ-ಮನುಷ್ಯ-ಭೂತ ಯಜ್ಞಗಳನ್ನು ಆಚರಿಸಬೇಕು. ಯಾವಾಗಲೂ ನಾರು ಬಟ್ಟೆಯನ್ನು ಧರಿಸಬೇಕು. ಮೂರು ಹೊತ್ತು ಸ್ನಾನ ಮಾಡಬೇಕು. ಎಲ್ಲ ಭೂತಗಳ ಮೇಲೂ ದಯವುಳ್ಳವನಾಗಬೇಕು. ಪ್ರತಿಗ್ರಹವನ್ನು ಮಾಡಬಾರದು. ದರ್ಶ-ಪೂರ್ಣಮಾಸ ಯಾಗಗಳನ್ನು ಮಾಡಬೇಕು. ನಕ್ಷತ್ರ ಯಜ್ಞವನ್ನು, ಆಗ್ರಾಯಣ ಯಜ್ಞವನ್ನು ಮಾಡಬೇಕು. ಚಾತುರ್ಮಾಸ್ಯ ಯಾಗವನ್ನು ಆಚರಿಸಬೇಕು.

ತಾನೇ ಸಂಗ್ರಹಿಸಿದ ಋಷಿಗಳ ಪವಿತ್ರ ಆಹಾರದಿಂದ (*ಕಂದಮೂಲ-ಫಲಗಳಿಂದ*) ಕ್ರಮವಾಗಿ ಉತ್ತರಾಯಣ-ದಕ್ಷಿಣಾಯನ ಯಜ್ಞಗಳನ್ನೂ, ವಸಂತ-ಶರದ್ ಋತುಗಳಲ್ಲಿ ವಿಹಿತವಾದ ಯಜ್ಞಗಳನ್ನೂ ಮಾಡಬೇಕು.

ವನದಲ್ಲಿ ಬೆಳೆದ ಪವಿತ್ರವಾದ ಧಾನ್ಯದಿಂದ ಪುರೋಡಾಶ ಮತ್ತು ಚರು ಎಂಬ ಎರಡು ವಿಧವಾದ ಹವಿಸ್ಸುಗಳನ್ನು ತಯಾರಿಸಿ ದೇವತೆಗಳನ್ನು ಉದ್ದೇಶಿಸಿ ಹೋಮಿಸಬೇಕು. ಉಳಿದದ್ದನ್ನು ತಾನು ಸೇವಿಸಬೇಕು. ಉಪ್ಪು, ಮಧು, ಮಾಂಸಗಳನ್ನು ಮತ್ತು ಭೂಮಿಯಲ್ಲಿ ಬೆಳೆಯುವ ಕವಚ ಎಂಬ ಧಾನ್ಯವನ್ನು ಬಿಡಬೇಕು.

ಭೂಸ್ತೃಣ-ಶಿಶುಕಗಳನ್ನು, ಶ್ಲೇಷಾತ್ಮಕ ಎಂಬ ಫಲವನ್ನೂ ನೇಗಿಲಿನಿಂದ ಉತ್ತು ಬೆಳೆದಿರುವ ಧಾನ್ಯವನ್ನೂ, ಪರರು ಬಿಟ್ಟದ್ದನ್ನೂ ತಿನ್ನಬಾರದು. ಆಪತ್‌ಸ್ಥಿತಿಯಲ್ಲಿದ್ದರೂ

ಗ್ರಾಮದಲ್ಲಿ ಬೆಳೆದ ಪುಷ್ಪ ಫಲಗಳನ್ನೂ ಉಪಯೋಗಿಸಬಾರದು. ಶ್ರವಣನಕ್ಷತ್ರದಲ್ಲಿ ನಡೆಸಲ್ಪಡುವ ಯಜ್ಞದ ಕ್ರಮದಿಂದಲೇ ಅಗ್ನಿಯಲ್ಲಿ ಅನುಷ್ಠಾನ-ಹೋಮಾದಿಗಳನ್ನು ಮಾಡಬೇಕು. ಯಾರಿಗೂ ದ್ರೋಹವನ್ನು ಮಾಡಬಾರದು. ದ್ವಂದ್ವ-ಭಯಗಳಿಲ್ಲದೆ ಇರಬೇಕು. ರಾತ್ರಿಯಲ್ಲಿ ಏನನ್ನೂ ತಿನ್ನಬಾರದು. ಆಗ ಧ್ಯಾನವನ್ನು ಮಾಡಬೇಕು. ಜಿತೇಂದ್ರಿಯನಾಗಿರಬೇಕು. ಕೋಪಗೊಳ್ಳಬಾರದು. ತತ್ವಗಳ ಬಗ್ಗೆ ಚಿಂತನಶೀಲನಾಗಬೇಕು. ಬ್ರಹ್ಮಚಾರಿಯಾಗಿರಬೇಕು. ಯಾವುದಕ್ಕೂ ಹೆಂಡತಿಯನ್ನೂ ಅವಲಂಬಿಸಬಾರದು. ಪತ್ನಿಯ ಜೊತೆ ವನಕ್ಕೆ ಹೋದವನು ಕಾಮವಶನಾಗಿ ಮೈಥುನವನ್ನು ನಡೆಸಿದರೆ, ಎಲ್ಲ ವ್ರತಗಳೂ ಲೋಪವನ್ನು ಹೊಂದುತ್ತವೆ. ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುತ್ತದೆ.

ನೆಲದ ಮೇಲೆ ಮಲಗಬೇಕು. ಯಾವಾಗಲೂ ಗಾಯತ್ರೀಮಂತ್ರವನ್ನು ಜಪಿಸಬೇಕು. ಎಲ್ಲರಿಗೂ ಆಶ್ರಯದಾತೃವಾಗಬೇಕು. ದಾನಶೀಲನಾಗಬೇಕು. ಪರನಿಂದೆಯನ್ನೂ, ಸುಳ್ಳು ಹೇಳುವುದನ್ನೂ, ನಿದ್ರೆ ಆಲಸ್ಯವನ್ನೂ ಬಿಡಬೇಕು. ಮನೆಯಲ್ಲಿರಬಾರದು. ಪ್ರೋಕ್ಷಣೆ ಮಾಡಿದ ಭೂಮಿಯನ್ನೇ ಆಶ್ರಯಿಸಬೇಕು.

ವಾನಪ್ರಸ್ಥಾಶ್ರಮಿಯು ಒಂದು ಹೊತ್ತಿನ ಆಹಾರವನ್ನಷ್ಟೆ ಸಂಗ್ರಹಿಸಬೇಕು. ಅಥವಾ ತಿಂಗಳಿಗೆ ಒಮ್ಮೆ ಆಹಾರವನ್ನು ಸಂಗ್ರಹಿಸಬೇಕು. ಅಥವಾ ಆರು ತಿಂಗಳಿಗೆ ಒಮ್ಮೆ ಆಹಾರವನ್ನು ಸಂಗ್ರಹಿಸಬೇಕು. ಅಥವಾ ವರ್ಷಕ್ಕೆ ಒಮ್ಮೆ ಆಹಾರವನ್ನು ಸಂಗ್ರಹಿಸಬೇಕು.

ಚಾಂದ್ರಾಯಣ ವ್ರತದ ಕ್ರಮವನ್ನನುಸರಿಸಿ ಶುಕ್ಲಪಕ್ಷದಲ್ಲಿ ಹೆಚ್ಚಿಸುತ್ತಾ ಕೃಷ್ಣಪಕ್ಷದಲ್ಲಿ ಕಡಿಮೆ ಮಾಡುತ್ತಾ ಆಹಾರವನ್ನು ಸೇವಿಸಬಹುದು. ಪ್ರತಿಪಕ್ಷದಲ್ಲಿ ಬ್ರಾಹ್ಮಣಶ್ರೇಷ್ಠನೊಬ್ಬನು ಹೇಳಿದಷ್ಟೆ ಆಹಾರವನ್ನು ಸೇವಿಸಬಹುದು. ಸನ್ಯಾಸಿಯಂತೆ ತಾವೇ ಬಿದ್ದ, ಉದುರಿದ ಪುಷ್ಪಫಲ ಮೂಲಗಳನ್ನು ಮಾತ್ರ ಸೇವಿಸಬೇಕು.

ಗ್ರೀಷ್ಮದಲ್ಲಿ ಪಂಚಾಗ್ನಿ ತಪಸ್ಸನ್ನು (ತನ್ನ ನಾಲ್ಕು ದಿಕ್ಕುಗಳಲ್ಲಿ ಬೆಂಕಿ ಇರಬೇಕು. ಸೂರ್ಯನನ್ನು ನೋಡುತ್ತಾ ತಪಸ್ಸು ಮಾಡಬೇಕು) ಮಾಡಬೇಕು. ಮಳೆಗಾಲದಲ್ಲಿ ಮಳೆಯಲ್ಲಿ ತಪಸ್ಸನ್ನು ಮಾಡಬೇಕು. ಹೇಮಂತದಲ್ಲಿ ಹಸಿಬಟ್ಟೆಯುಟ್ಟು ತಪಸ್ಸನ್ನು ಮಾಡಬೇಕು. ಈ ತಪಸ್ಸುಗಳನ್ನು ಕ್ರಮವಾಗಿ ಹೆಚ್ಚಿಸಬೇಕು. ಮೂರು ಹೊತ್ತು ಸ್ನಾನ ಮಾಡಿ ಪಿತೃಗಳಿಗೂ, ದೇವತೆಗಳಿಗೂ ತರ್ಪಣವನ್ನು ಕೊಡಬೇಕು. ಒಂದೇ ಕಾಲಿನ ಮೇಲೆ ನಿಂತು ಸೂರ್ಯಕಿರಣಗಳನ್ನು ಪಾನ ಮಾಡಬೇಕು. ಪಂಚಾಗ್ನಿ ತಪಸ್ಸನ್ನು ಮಾಡುತ್ತಾ ಹೊಗೆಯನ್ನು ಕುಡಿಯಬೇಕು. ಬಾಷ್ಪವನ್ನು ಅಥವಾ ಸೋಮರಸವನ್ನು ಪಾನಮಾಡಬೇಕು. ಶುಕ್ಲಪಕ್ಷದಲ್ಲಿ ಹಾಲನ್ನೂ, ಕೃಷ್ಣಪಕ್ಷದಲ್ಲಿ ಗೋಮಯವನ್ನೂ ಸೇವಿಸಬೇಕು. ತಾನಾಗಿಯೇ ಬಿದ್ದಿರುವ ಎಲೆಗಳನ್ನು ತಿನ್ನಬೇಕು. ಯಾವಾಗಲೂ ದೇಹದಂಡನೆಯಾಗುವ ಕಠಿಣ ವ್ರತಗಳನ್ನು ಮಾಡಬೇಕು. ಯೋಗಾಭ್ಯಾಸದಲ್ಲಿ ನಿರತನಾಗಬೇಕು. ರುದ್ರಾಧ್ಯಾಯವನ್ನು ಜಪಿಸುತ್ತಿರಬೇಕು.

ಅಥರ್ವಶಿರಸ್ಸನ್ನೂ ಓದುತ್ತಿರಬೇಕು. ವೇದಾಂತವನ್ನೂ ನಿರಂತರ ಅಧ್ಯಯನ ಮಾಡಬೇಕು. ಯಮ-ನಿಯಮಗಳನ್ನು ಆಲಸ್ಯವಿಲ್ಲದೆ ಅನುಷ್ಠಾನ ಮಾಡಬೇಕು. ಕೃಷ್ಣಾಜಿನವನ್ನೂ, ಉತ್ತರೀಯವನ್ನು ಶುದ್ಧವಾದ ಜನಿವಾರವನ್ನೂ ಧರಿಸಿರಬೇಕು. ಅಗ್ನಿಗಳನ್ನು ತನ್ನಲ್ಲಿ ಆರೋಪಿಸಿಕೊಂಡು ಧ್ಯಾನಾಸಕ್ತನಾಗಬೇಕು. ಅಗ್ನಿಯನ್ನೂ, ವಸತಿಯನ್ನು ಬಿಡಬೇಕು. ಮೋಕ್ಷಸಾಧನೆಯಲ್ಲಿ ಪೂರ್ಣವಾಗಿ ತೊಡಗಬೇಕು. ತಪಸ್ವಿಗಳಾದ ವಿಪ್ರರಲ್ಲಿ ಅಥವಾ ಗೃಹಸ್ಥಾಶ್ರಮಿಗಳಲ್ಲಿ ಅಥವಾ ವನವಾಸಿಗಳಾದ ಬ್ರಾಹ್ಮಣರಲ್ಲಿ ಭಿಕ್ಷೆಯನ್ನು ಕೇಳಿ ತಂದು, ಅರಣ್ಯಕ್ಕೆ ಬಂದು ಎಂಟು ತುತ್ತುಗಳನ್ನು ತಿನ್ನಬೇಕು. ತನ್ನ ಬೊಗಸೆಯಲ್ಲೇ ಭಿಕ್ಷೆಯನ್ನು ತೆಗೆದುಕೊಳ್ಳಬೇಕು ಅಥವಾ ಒಂದು ತುಂಡು ಎಲೆಯಲ್ಲಿ. ಆತ್ಮಸಾಕ್ಷಾತ್ಕಾರಕ್ಕೋಸ್ಕರ ವಿವಿಧ ಉಪನಿಷತ್ತುಗಳನ್ನು ಪಠಿಸುತ್ತಿರಬೇಕು. ಇನ್ನೂ ವಿಶೇಷವಿದ್ಯೆಗಳನ್ನೂ, ಗಾಯತ್ರೀ ಮಂತ್ರವನ್ನೂ, ರುದ್ರಾಧ್ಯಾಯವನ್ನೂ ಸದಾ ಜಪಿಸುತ್ತಿರಬೇಕು. ತನ್ನ ಜೀವನವನ್ನು ಬ್ರಹ್ಮನಿಗೆ ಅರ್ಪಿಸುವ ವಿಧಿಯನ್ನು ಅನುಸರಿಸುತ್ತಾ ಮಹಾಪ್ರಸ್ಥಾನವನ್ನು (ಮರಣಪರ್ಯಂತ ಕಾಡಿನಲ್ಲಿ ನಡಿಗೆಯನ್ನು) ಅಥವಾ ಆಮರಣ ಉಪವಾಸವನ್ನು ಅಥವಾ ಅಗ್ನಿಪ್ರವೇಶವನ್ನು ಮಾಡಬೇಕು.

ಯಾರು ಮಂಗಳಕರವೂ, ಅಮಂಗಳ ನಿವಾರಕವೂ ಆದ ಈ ವಾನಪ್ರಸ್ಥಾಶ್ರಮವನ್ನು ಅವಲಂಬಿಸುತ್ತಾರೋ ಅವರು ಈಶ್ವರನ ಲೋಕವನ್ನು ಹೊಂದುವರು.

* * *

## ಅಧ್ಯಾಯ-೨೮

**ವ್ಯಾಸ ಉವಾಚ :**

ಹೀಗೆ ಆಯುಷ್ಯದ ಮೂರನೇ ಭಾಗವನ್ನು ವಾನಪ್ರಸ್ಥಾಶ್ರಮದಲ್ಲಿ ಸಾರ್ಥಕಗೊಳಿಸಿ ನಾಲ್ಕನೆಯ ಭಾಗವನ್ನು ಸನ್ಯಾಸದಿಂದ ಕಳೆಯಬೇಕು.

ತಾನು ಇಷ್ಟು ದಿನ ಉಪಾಸಿಸುತ್ತಿದ್ದ ಅಗ್ನಿಗಳನ್ನು ತನ್ನೊಳಗೆ ಆರೋಪಿಸಿಕೊಂಡು ಸನ್ಯಾಸಿಯಾಗಬೇಕು. ಯೋಗಾಭ್ಯಾಸ ನಿರತನೂ, ಶಾಂತನೂ, ಬ್ರಹ್ಮವಿದ್ಯಾಸಕ್ತನೂ ಆಗಬೇಕು. ಲೋಕದ ಎಲ್ಲಾ ವಸ್ತುಗಳ ಮೇಲೆ ವಿರಕ್ತಿಯು ಮನಸ್ಸಿನಲ್ಲಿ ಹುಟ್ಟಿದ ಕೂಡಲೇ ಸನ್ಯಾಸವನ್ನು ತೆಗೆದುಕೊಳ್ಳಬೇಕೆಂದು ಜ್ಞಾನಿಗಳು ಹೇಳುತ್ತಾರೆ. ಹೀಗೆ ಮಾಡದಿದ್ದವನು ಪತಿತ ಎಂದೂ ಹೇಳುತ್ತಾರೆ. ಪ್ರಾಜಾಪತ್ಯ ಎಂಬ ಅಥವಾ ಆಗ್ನೇಯೀ ಎಂಬ ಇಷ್ಟಿ(ಯಾಗ)ವನ್ನು ಮಾಡಿ ಸನ್ಯಾಸಿಯಾಗಬೇಕು. ಸನ್ಯಾಸಾಶ್ರಮಕ್ಕೆ ಬ್ರಹ್ಮಾಶ್ರಮ ಎಂದೂ ಹೆಸರು.

ಮೂರು ವಿಧ ಸನ್ಯಾಸಿಗಳು ಪ್ರಸಿದ್ಧರಾಗಿದ್ದಾರೆ (೧) ಜ್ಞಾನ ಸನ್ಯಾಸಿಗಳು (೨) ವೇದಸನ್ಯಾಸಿಗಳು (೩) ಕರ್ಮಸನ್ಯಾಸಿಗಳು.

(೧) ಸರ್ವಸಂಗವನ್ನು ಪರಿತ್ಯಾಗ ಮಾಡಿ, ದ್ವಂದ್ವರಹಿತನೂ, ನಿರ್ಭಯನೂ ಆಗಿ ಪರಮಾತ್ಮನಲ್ಲೇ ನಿರಂತರವಾಗಿ ಮನಸ್ಸನ್ನಿಟ್ಟವನು ಜ್ಞಾನಸನ್ಯಾಸಿ. (೨) ಮೋಕ್ಷಾಪೇಕ್ಷಿಯಾಗಿರುವ, ಜಿತೇಂದ್ರಿಯನಾದ, ಪರಿಗ್ರಹವನ್ನು ಮಾಡದ, ದ್ವಂದ್ವಗಳಿಲ್ಲದ, ವೇದಗಳನ್ನು ನಿರಂತರ ಅಭ್ಯಾಸ ಮಾಡುವ ಸನ್ಯಾಸಿಯು ವೇದಸನ್ಯಾಸಿ. (೩) ಅಗ್ನಿಗಳನ್ನು ತನ್ನಲ್ಲಿ ಆರೋಪಿಸಿಕೊಂಡು ಬ್ರಹ್ಮಾರ್ಪಣವನ್ನು ಮಾಡುತ್ತಾ, ಪರಮಾತ್ಮನ ಪ್ರೀತಿಗೋಸ್ಕರವೇ ಎಲ್ಲ ಕರ್ಮಗಳನ್ನು ಮಾಡುತ್ತಿರುವ ಸನ್ಯಾಸಿಯು ಕರ್ಮಸನ್ಯಾಸಿ.

ಈ ಮೂರು ವಿಧ ಸನ್ಯಾಸಿಗಳಲ್ಲಿ ಜ್ಞಾನಸನ್ಯಾಸಿಯು ಇನ್ನಿಬ್ಬರಿಗಿಂತ ಶ್ರೇಷ್ಠ. ಅವನು ಯಾವ ಕರ್ಮಗಳನ್ನೂ ಕಡ್ಡಾಯವಾಗಿ ಮಾಡಬೇಕಾಗಿಲ್ಲ. ಯಾವ ಗುರುತುಗಳನ್ನೂ ಹೊಂದಬೇಕಾಗಿಲ್ಲ.

ಸನ್ಯಾಸಿಗೆ ನನ್ನದು ಎಂಬ ಅಭಿಮಾನವಿರಬಾರದು. ಭಯವಿರಬಾರದು. ಶಾಂತಿ ಇರಬೇಕು. ದ್ವಂದ್ವವಿರಬಾರದು. ಪರಿಗ್ರಹವನ್ನು ಮಾಡಬಾರದು. ಸಾಕಷ್ಟು ಶಿಥಿಲವಾದ ಕೌಪೀನ-ವಸ್ತ್ರವನ್ನು ಧರಿಸಿರಬೇಕು. ಅಥವಾ ನಗ್ನನಾಗಿರಬೇಕು. ಯಾವಾಗಲೂ ಧ್ಯಾನವನ್ನು ಮಾಡುತ್ತಿರಬೇಕು. ಬ್ರಹ್ಮಚಾರಿಯಾಗಿರಬೇಕು. ಮಿತಾಹಾರಿಯಾಗಿರಬೇಕು. ಗ್ರಾಮದಿಂದ ಆಹಾರವನ್ನು ತರಬೇಕು. ಪರಮಾತ್ಮನಲ್ಲೇ ಮನಸ್ಸನ್ನು ಇಟ್ಟಿರಬೇಕು. ಬೇರೆ ಏನನ್ನೂ ಅಪೇಕ್ಷಿಸಬಾರದು. ಸುಖಾರ್ಥಿಯಾಗಿ ಒಬ್ಬನೇ ಸಾಧನ ಮಾರ್ಗದಲ್ಲಿ ಸಾಗಬೇಕು. ಮರಣವನ್ನು ಬಯಸಬಾರದು. ಜೀವಿತವನ್ನೂ ಬಯಸಬಾರದು. ಸೇವಕನು ಯಜಮಾನನ ಆಜ್ಞೆಗಾಗಿ ಕಾಯುತ್ತಾ ಇರುವಂತೆ ಆಯಾಯಾ ಕಾಲದಲ್ಲಿ ಆಗುವ ಘಟನೆಗಳಿಗೆ ಸಿದ್ಧನಾಗಿರಬೇಕು. ಅಧ್ಯಯನವನ್ನು ಮಾಡಬಾರದು. ಪ್ರವಚನವನ್ನು ಮಾಡಬಾರದು. ಶ್ರವಣವನ್ನು ಮಾಡಬಾರದು. ಹೀಗಿರುವವನು ಯೋಗಿ. ಯೋಗಿಯು ಮಾತ್ರ ಬ್ರಹ್ಮನಿಷ್ಠನಾಗಲು ಸಮರ್ಥನಾಗುತ್ತಾನೆ.

ಯತಿಯು ಒಂದು ವಸ್ತ್ರವನ್ನು ಧರಿಸಬೇಕು. ಅಥವಾ ಕೇವಲ ಕೌಪೀನವನ್ನು ಧರಿಸಬೇಕು. ತಲೆಯನ್ನು ಪೂರ್ತಿ ಬೋಳಿಸಿಕೊಳ್ಳಬಹುದು ಅಥವಾ ಶಿಖಾಧಾರಿಯೂ ಆಗಬಹುದು. ಯಾವಾಗಲೂ ಕಾವಿಬಟ್ಟೆಯನ್ನು ಧರಿಸಬೇಕು. ಯಾವಾಗಲೂ ಧ್ಯಾನ ಮಾಡುತ್ತಿರಬೇಕು. ಗ್ರಾಮದಲ್ಲಿ ಗಡಿಯಲ್ಲಿ ಅಥವಾ ಮರದ ಬುಡದಲ್ಲಿ ಅಥವಾ ದೇವಾಲಯದಲ್ಲಿ ವಾಸಿಸಬೇಕು. ಶತ್ರುಗಳನ್ನು ಮಿತ್ರರನ್ನು ಸಮವಾಗಿಯೇ ಕಾಣಬೇಕು. ಮಾನ-ಅಪಮಾನಗಳನ್ನು ಸಮವಾಗಿಯೇ ಪರಿಗಣಿಸಬೇಕು. ಭಿಕ್ಷೆಯಿಂದಲೇ ಆಹಾರದ ಆವಶ್ಯಕತೆಯನ್ನು ಪೂರೈಸಿಕೊಳ್ಳಬೇಕು. ಕೇವಲ ಒಬ್ಬರಿಂದ ಆಹಾರವನ್ನು ಸ್ವೀಕರಿಸಬಾರದು.

ಯಾವುದೇ ಕಾರಣದಿಂದ ಕೇವಲ ಒಬ್ಬನಿಂದ ಆಹಾರವನ್ನು ಸ್ವೀಕರಿಸುವುದು ಮಹಾ ಪಾಪ. ಈ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಯಾವ ಧರ್ಮಶಾಸ್ತ್ರವೂ ಹೇಳಿಲ್ಲ. ಯತಿಯು ರಾಗ-ದ್ವೇಷಗಳನ್ನು ಬಿಟ್ಟಿರಬೇಕು. ಮಣ್ಣು-ಕಲ್ಲು-ಚಿನ್ನಗಳನ್ನು ಒಂದೇ ಭಾವನೆಯಿಂದ ಕಾಣಬೇಕು. ಪ್ರಾಣಿಹಿಂಸೆಯನ್ನು ಮಾಡಬಾರದು. ಯಾವ ವಸ್ತುವಿನ ಮೇಲೂ ಆಸೆ ಇರಬಾರದು. ಮೌನಿಯಾಗಿರಬೇಕು. ಕಾಲಿಡಬೇಕಾದ ಸ್ಥಳವನ್ನು ಮೊದಲು ನೋಡಬೇಕು. ನೋಟದಿಂದ ಪವಿತ್ರವಾದ ಸ್ಥಳದಲ್ಲಿ ಹೆಜ್ಜೆಯನ್ನಿಡಬೇಕು. ವಸ್ತ್ರದಿಂದ ಶೋಧಿಸಿದ ನೀರನ್ನು ಕುಡಿಯಬೇಕು. ಶಾಸ್ತ್ರಾಧ್ಯಯನದಿಂದ ಸುಸಂಸ್ಕೃತವಾದ ಮಾತನ್ನೇ ಆಡಬೇಕು. ಮನಸ್ಸು ಒಪ್ಪಿದ್ದನ್ನೇ ಆಚರಿಸಬೇಕು.

ಮಳೆಗಾಲ ಬಿಟ್ಟು ಬೇರೆ ಕಾಲದಲ್ಲಿ ಒಂದೇ ಪ್ರದೇಶದಲ್ಲಿ ವಾಸಿಸಬಾರದು. ಸ್ನಾನ-ಶೌಚಗಳಲ್ಲಿ ತೀವ್ರ ಶ್ರದ್ಧೆ ಇರಬೇಕು. ಶುದ್ಧನಾಗಿರಬೇಕು. ಕೈಯಲ್ಲಿ ಕಮಂಡಲವನ್ನು ಹಿಡಿದಿರಬೇಕು. ಸದಾ ಬ್ರಹ್ಮಚರ್ಯದಿಂದಿರಬೇಕು. ವನವಾಸ ಮಾಡಬೇಕು. ಮೋಕ್ಷ-ಶಾಸ್ತ್ರದ ಅಧ್ಯಯನದಲ್ಲಿ ತೊಡಗಿರಬೇಕು. ಡಂಭಾಚಾರ - ಅಹಂಕಾರಗಳನ್ನು ಬಿಡಬೇಕು. ಪರರನ್ನು ನಿಂದಿಸಬಾರದು. ಚಾಡಿ ಹೇಳಬಾರದು. ಯಾವಾಗಲೂ ಪ್ರಣವ ಚಿಂತನೆಯನ್ನು ಮಾಡುತ್ತಿರಬೇಕು. ಮತ್ತೊಂದು ವಿಧ. ಯತಿಯೂ ಇದ್ದಾನೆ. ಈ ಯತಿ ಜನಿವಾರವನ್ನು ಧರಿಸಬಹುದು. ದರ್ಭೆಯನ್ನು ಕೈಯಲ್ಲಿ ಧರಿಸಬೇಕು. ಮನಸ್ಸು ಶಾಂತವಾಗಿರಬೇಕು. ಸ್ವಚ್ಛವಾದ ಕಾವಿ ಬಟ್ಟೆಯನ್ನು ಧರಿಸಿರಬೇಕು. ದೇಹಕ್ಕೆ ಭಸ್ಮವನ್ನು ಧರಿಸಬೇಕು. ಯಜ್ಞಗಳ ಅಧಿಪತಿಯಾದ ಬ್ರಹ್ಮನ ಜಪವನ್ನು ಮಾಡಬೇಕು. ಅಥವಾ ದೇವತೆಗಳ ಅಂತರ್ಯಾಮಿ-ಯಾದ ಬ್ರಹ್ಮನನ್ನು ಜಪಿಸಬೇಕು. ಅಥವಾ ಸರ್ವೋತ್ತಮನಾದ ಬ್ರಹ್ಮನನ್ನು ಅರ್ಥಾತ್ ಬ್ರಹ್ಮನನ್ನು ಸರ್ವೋತ್ತಮ ಎಂದು ಉಪಾಸನೆ ಮಾಡಬೇಕು. ವೇದಾಂತವು ಪ್ರತಿಪಾದಿಸುವ ಬ್ರಹ್ಮಸ್ವರೂಪವನ್ನೇ ಚಿಂತಿಸಬೇಕು.

ಇನ್ನೊಂದು ವಿಧದ ಸನ್ಯಾಸಿಯು ಮಕ್ಕಳ ಜೊತೆಯೇ ವಾಸಿಸಬಹುದು. ಯಾವಾಗಲೂ ಬ್ರಹ್ಮಚರ್ಯದಿಂದ ಇರಬೇಕು. ಯಾವಾಗಲೂ ವೇದಗಳ ಅಭ್ಯಾಸವನ್ನು ಮಾಡುತ್ತಿರಬೇಕು. ಹೀಗಿರುವ ಯತಿಯು ಪರಮಗತಿಯನ್ನು ಹೊಂದುತ್ತಾನೆ. ಅಹಿಂಸಾ-ಸತ್ಯ-ಅಸ್ತೇಯ-ಬ್ರಹ್ಮಚರ್ಯ-ತಪಸ್ಸು-ಕ್ಷಮಾ-ದಯೆ-ಸಂತೋಷ -ಇವುಗಳು ಈ ಯತಿಗೆ ವಿಶೇಷವಾದ ವ್ರತಗಳು.

ಇನ್ನೊಂದು ವಿಧದ ಯತಿಃ ವೇದಾಂತಜ್ಞಾನನಿಷ್ಠನಾಗಿ ಪಂಚಯಜ್ಞಗಳನ್ನು ನಡೆಸುತ್ತಾ ಜ್ಞಾನ-ಧ್ಯಾನಗಳಲ್ಲಿ ತೊಡಗಿದ್ದು ಭಿಕ್ಷಾನ್ನದಿಂದ ಶರೀರ ಪೋಷಣೆಯನ್ನು ಮಾಡಬೇಕು. ಇವನು ನಿತ್ಯವೂ ಕಾಲಕಾಲಕ್ಕೆ ಮಾಡಬೇಕಾದ ಹೋಮಗಳ ಮಂತ್ರಗಳನ್ನು ಜಪಿಸಬೇಕು. ಪ್ರತಿದಿನ ವೇದಗಳ ಅಧ್ಯಯನವನ್ನು ಮಾಡಬೇಕು. ಸಂಧ್ಯಾಕಾಲಗಳಲ್ಲಿ ಗಾಯತ್ರೀ ಮಂತ್ರವನ್ನು ಜಪಿಸಬೇಕು. ಏಕಾಂತದಲ್ಲಿ ಪರಮಾತ್ಮನ ಧ್ಯಾನವನ್ನು ಮಾಡಬೇಕು. ಈ

ಯತಿಯು ಒಂದು ವಸ್ತ್ರವನ್ನು ಅಥವಾ ಎರಡು ವಸ್ತ್ರವನ್ನು ಧರಿಸಬಹುದು. ಶಿಖಾ-ಯಜ್ಞೋಪವೀತಗಳನ್ನು ಧರಿಸಬಹುದು. ಮೂರು ದಂಡಗಳನ್ನು ಇವನು ಧರಿಸಬೇಕು. ಕಮಂಡಲವನ್ನು ಹಿಡಿಯಬೇಕು. ಈ ಯತಿಯು ತನ್ನ ಸಾಧನೆಯಿಂದ ಸದ್ಗತಿಯನ್ನು ಪಡೆಯುತ್ತಾನೆ.

* * *

## ಅಧ್ಯಾಯ-೮೨

**ವ್ಯಾಸ ಉವಾಚ :**

ಯತಿಗಳು ಭಿಕ್ಷಾನ್ನದಿಂದಲೇ ಶರೀರರಕ್ಷಣೆಯನ್ನು ಮಾಡಿಕೊಳ್ಳಬೇಕು. ಅಥವಾ ಫಲ-ಮೂಲಗಳನ್ನು ತಿನ್ನಬಹುದು. ಭಿಕ್ಷೆಯನ್ನು ದಿನಕ್ಕೆ ಒಂದು ಸಲ ಮಾತ್ರ ಬೇಡಬೇಕು. ಹೆಚ್ಚು ಬೆಳೆಸಬಾರದು. ಭಿಕ್ಷೆಯಲ್ಲಿ ಹೆಚ್ಚು ಆಸಕ್ತನಾದರೆ ಅದರಿಂದ ವಿಷಯ ಪದಾರ್ಥ-ಗಳಲ್ಲೂ (ಭೋಗವಸ್ತುಗಳಲ್ಲೂ) ಆಸಕ್ತಿಯು ಹೆಚ್ಚುತ್ತದೆ.

ಏಳು ಮನೆಗಳಲ್ಲಿ ಭಿಕ್ಷೆಯನ್ನು ಕೇಳಬೇಕು. ಅಷ್ಟರಲ್ಲಿ ಭಿಕ್ಷೆಯು ಸಿಗದಿದ್ದರೆ ಬೇರೆ ಮನೆಗಳಲ್ಲಿ ಬೇಡಬಹುದು. ಭಿಕ್ಷಾನ್ನವನ್ನು, ಭಿಕ್ಷಾಪಾತ್ರೆಯಲ್ಲೇ ತೊಳೆದು ತಿನ್ನಬೇಕು. ಅಥವಾ ಬೇರೆ ಪಾತ್ರೆಗೆ ಹಾಕಿ ತೊಳೆದು ತಿನ್ನಬೇಕು. ಆ ಪಾತ್ರೆಯನ್ನು ಪುನಃ ತೊಳೆಯಬೇಕು. ಶರೀರಕ್ಷಣೆಗೆ ಅವಶ್ಯವಾದಷ್ಟೇ ಆಹಾರವನ್ನು ಸೇವಿಸಬೇಕು. ಲೋಲುಪನಾಗಬಾರದು.

ಹೊಗೆ ಇಲ್ಲದ, ಒನಕೆಯ ಶಬ್ದವಿಲ್ಲದ, ಕೆಂಡವನ್ನು ಆರಿಸಿರುವ, ಮನೆಗೆ, ಆ ಮನೆಯ ಜನರ ಊಟವಾಗಿದ್ದರೆ ಮಾತ್ರ, ಭಿಕ್ಷೆಗೆ ಹೋಗಬೇಕು. ಮನೆಯ ಮುಂದೆ 'ಭಿಕ್ಷೆ' ಎಂದು ಒಂದು ಸಲ ಮಾತ್ರ ಹೇಳಿ ಮುಖವನ್ನು ಕೆಳಗೆ ತಗ್ಗಿಸಿ, ಹಸುವಿನ ಹಾಲನ್ನು ಕರೆಯಲು ಬೇಕಾಗುವಷ್ಟು ಹೊತ್ತು ಮಾತ್ರ ನಿಲ್ಲಬೇಕು.

ಕೈಕಾಲುಗಳನ್ನು ತೊಳೆದುಕೊಂಡು, ಆಚಮನವನ್ನು ಮಾಡಿ, ಭಿಕ್ಷಾನ್ನವನ್ನು ಸೂರ್ಯನಿಗೆ ತೋರಿಸಿ, ಪೂರ್ವಾಭಿಮುಖವಾಗಿ ಕುಳಿತು, ಐದು ಪ್ರಾಣಾಹುತಿಗಳನ್ನು ಅರ್ಪಿಸಿ ಎಂಟು ತುತ್ತು ಊಟ ಮಾಡಬೇಕು. ಅನಂತರ ಆಚಮನವನ್ನು ಮಾಡಿ ಪರಮೇಶ್ವರನ ಧ್ಯಾನವನ್ನು ಮಾಡಬೇಕು.

ಸನ್ಯಾಸಿಯು ಸೋರೆ ಬುರುಡೆಯನ್ನು ಪಾತ್ರೆಯಾಗಿ ಉಪಯೋಗಿಸಬೇಕು. ಮರದ, ಮಣ್ಣಿನ ಅಥವಾ ಬಿದಿರಿನ ಪಾತ್ರೆಯನ್ನು ಉಪಯೋಗಿಸಬಹುದು ಎಂದು ಮನು ಪ್ರಜಾಪತಿ ಹೇಳಿದ್ದಾನೆ.

ಸಾಯಂಕಾಲ, ರಾತ್ರಿ, ಮಧ್ಯರಾತ್ರಿ ಮತ್ತು ಸಂಧ್ಯಾಕಾಲಗಳಲ್ಲಿ ತೇಜೋರೂಪಿಯಾದ ಪರಮಾತ್ಮನನ್ನು ಧ್ಯಾನಿಸಬೇಕು. ಬೇರೆ ಸಮಯದಲ್ಲಿ ವಿಶ್ವ ಎಂಬ ಹೆಸರಿನ ಪರಮಾತ್ಮನನ್ನು ಜಗಜ್ಜನ್ಮಾದಿಕಾರಣ, ಸರ್ವಭೂತಾಂತರ್ಯಾಮಿ, ತ್ರಿಗುಣವರ್ಜಿತ, ಸರ್ವಾಧಾರ, ಜ್ಯೋತಿಃ ಸ್ವರೂಪ, ಅವ್ಯಯ, ಪ್ರಕೃತಿ-ಪುರುಷರಿಗಿಂತ ಉತ್ತಮ, ಬ್ರಹ್ಮರೂಪಿ ಎಂದು ಹೃದಯ-ಕಮಲದಲ್ಲಿ ಧ್ಯಾನಿಸಬೇಕು. ಆನಂದ ಮೊದಲಾದ ಗುಣಗಳಿಂದ ಪೂರ್ಣ, ಮಹಾಪುರುಷ, ಸತ್ಯ, ಅವ್ಯಯ, ತರುಣ ಸೂರ್ಯನಂತೆ ತೇಜಸ್ವಿ ಎಂದು ಚಿಂತಿಸಬೇಕು. ಓಂಕಾರಾರ್ಥ-ಚಿಂತನೆಯಿಂದ ಪರಮಾತ್ಮನಲ್ಲಿ ಮನಸ್ಸನ್ನು ನಿಲ್ಲಿಸಬೇಕು. ಆಕಾಶ ಮಧ್ಯದಲ್ಲಿರುವ ಪರಮಾತ್ಮನನ್ನು ಚಿಂತಿಸಬೇಕು. ಇಂತಹ ಚಿಂತನೆಯಿಂದ ಸಂಸಾರ ಬಂಧನದಿಂದ ಬಿಡುಗಡೆಯನ್ನು ಹೊಂದುವನು.

ಅಥವಾ ಹೃದಯದಲ್ಲಿ ಪರಮಾಕಾಶವನ್ನು ಚಿಂತಿಸಿ ಆ ಆಕಾಶದ ಮಧ್ಯದಲ್ಲಿ ಪರಮಾತ್ಮ-ನನ್ನು ಸರ್ವಕಾರಣ ಎಂದೂ ಎಲ್ಲರಿಗೂ ಜೀವನಪ್ರದ ಎಂದೂ, ಪ್ರಲಯಾಧಾರ ಎಂದೂ, ಆನಂದರೂಪ ಎಂದೂ, ಜ್ಞಾನರೂಪ, ಅನಂತ, ಸತ್ಯ, ಈಶಾನ ಎಂದು ಧ್ಯಾನಿಸಬೇಕು. ಇದು ಯತಿಗಳಿಗೆ ಇರಬೇಕಾದ ಜ್ಞಾನರಹಸ್ಯಗಳಲ್ಲಿ ರಹಸ್ಯವಾದ ಜ್ಞಾನ. ಮಹೇಶ್ವರನು ಉಪದೇಶಿಸಿದ ಈ ಧ್ಯಾನಮಾರ್ಗವನ್ನು ಅನುಸರಿಸುವ ಯತಿಯು ಶ್ರೇಷ್ಠವಾದ ಯೋಗವನ್ನು ತಲುಪುತ್ತಾನೆ. ಆದ್ದರಿಂದ ಆತ್ಮವಿದ್ಯೆಯಲ್ಲಿ ನಿರತನಾಗಿ, ಧ್ಯಾನಾಸಕ್ತನಾಗಿ, ಜ್ಞಾನವನ್ನು ಪಡೆಯಬೇಕು. ಹೀಗೆ ಮಾಡಿದವನಿಗೆ ಸಂಸಾರಬಂಧನದಿಂದ ಬಿಡುಗಡೆಯಾಗುತ್ತದೆ. ತಾನು (ಸ್ವಾತ್ಮಾ) ಬೇರೆ ಎಲ್ಲ ಚೇತನಾಚೇತನಗಳಿಂದ ಭಿನ್ನ ಎಂದು ಮೊದಲು ತಿಳಿಯಬೇಕು. ಅನಂತರ ಆನಂದರೂಪನೂ, ಅಜರನೂ, ಜ್ಞಾನಸ್ವರೂಪನೂ ಆದ ಪರಮಾತ್ಮನ ಧ್ಯಾನವನ್ನು ಮಾಡಬೇಕು. ಸಕಲವಸ್ತುಗಳ ಉತ್ಪತ್ತಿಗೆ ಕಾರಣನಾದ ಪುನರಾವೃತ್ತಿಯಿಲ್ಲದ ಮೋಕ್ಷವನ್ನು ಕೊಡುವ ಈಶ್ವರನೇ ಪರಮಾತ್ಮ. ಇವನು ಸರ್ವೋತ್ತಮ. ಇವನನ್ನು ಹೊಂದುವುದೇ ಶಾಶ್ವತವಾದ, ಮಂಗಳಮಯವಾದ ಮುಕ್ತಿ.

ಯತಿಗಳು ವ್ರತಗಳನ್ನು ಉಲ್ಲಂಘಿಸಬಾರದು. ಯತಿಗಳಿಗೆ ಶಾಸ್ತ್ರಗಳು ವಿಧಿಸಿರುವ ವ್ರತಗಳನ್ನೂ, ಉಪವ್ರತಗಳನ್ನೂ ಉಲ್ಲಂಘಿಸಬಾರದು. ಯಾವುದೇ ವ್ರತದ ಉಲ್ಲಂಘನೆ-ಯಾದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

ಯತಿಯು ಕಾಮವಶನಾಗಿ ಸ್ತ್ರೀಸಂಗವನ್ನು ಮಾಡಿದರೆ ದೇಹದಂಡನೆಯನ್ನು ಮಾಡಿ-ಕೊಂಡು, ಪ್ರಾಣಾಯಾಮವನ್ನು ಮಾಡಿ ಸಾಂತಪನವ್ರತವನ್ನು ಮಾಡಿ ಶುಚಿಯಾಗಬೇಕು. ಅನಂತರ ಮನಸ್ಸನ್ನು ನಿಗ್ರಹದಲ್ಲಿಟ್ಟುಕೊಂಡು ತೀವ್ರಸ್ವರೂಪದ ನಿಯಮಗಳನ್ನು ಆಚರಿಸ-ಬೇಕು. ಅನಂತರ ಪುನಃ ವಿಧಿಯಂತೆ ಯತ್ಯಾಶ್ರಮವನ್ನು ಸ್ವೀಕರಿಸಿ, ಎಚ್ಚರ ತಪ್ಪದೆ ಯತಿಧರ್ಮವನ್ನು ಪಾಲಿಸಬೇಕು.

ವಿನೋದಕ್ಕಾಗಿ ಸುಳ್ಳು ಹೇಳುವುದು ಅಪರಾಧವಲ್ಲ ಎಂದು ಜ್ಞಾನಿಗಳು ಹೇಳುತ್ತಾರೆ. ಆದರೂ ಯತಿಯು ವಿನೋದಕ್ಕಾಗಿಯೂ ಸುಳ್ಳಾಡಬಾರದು. ಇಂತಹ ಆಸಕ್ತಿಯೂ ದಾರುಣಪರಿಣಾಮವನ್ನು ಉಂಟುಮಾಡಬಹುದು. ಒಂದು ವೇಳೆ ಅನೃತವನ್ನು ಆಡಿದರೆ ಒಂದು ದಿನ ಉಪವಾಸವನ್ನು ಮಾಡಬೇಕು. ಮತ್ತು ಒಂದು ನೂರು ಪ್ರಾಣಾಯಾಮಗಳನ್ನು ಮಾಡಬೇಕು.

ಎಂತಹ ಆಪತ್‌ಸ್ಥಿತಿಯು ಒದಗಿದ್ದರೂ ಕಳ್ಳತನವನ್ನು ಮಾಡಬಾರದು. ಕಳ್ಳತನಕ್ಕಿಂತ ದೊಡ್ಡ ಅಧರ್ಮವೇ ಇಲ್ಲ ಎಂದು ಸ್ಮೃತಿಗಳು ಹೇಳುತ್ತವೆ. ಇದು ದೊಡ್ಡ ಹಿಂಸೆ. ಈ ಹಿಂಸಾಚಾರದಿಂದ ಆತ್ಮಜ್ಞಾನವೇ ನಾಶವಾಗುತ್ತದೆ. ಹಣ ಹೊರಗೆ ಸಂಚರಿಸುವ ಪ್ರಾಣ. ಆದ್ದರಿಂದ ಯಾರು ಯಾರ ಹಣವನ್ನು ಅಪಹರಿಸುತ್ತಾನೋ ಅವನು ಅವನ ಪ್ರಾಣವನ್ನೇ ಅಪಹರಿಸುತ್ತಾನೆ. ಇಂತಹ ಮಹಾಪಾಪವನ್ನು ಮಾಡಿ ಕೆಟ್ಟುಹೋದ, ವ್ರತಗಳನ್ನು ಶೀಲವನ್ನು ಕಳೆದುಕೊಂಡ ಯತಿಯು ಬಹಳ ಜುಗುಪ್ಸೆ, ಪಶ್ಚಾತ್ತಾಪಗಳನ್ನು ಹೊಂದಿ ಚಾಂದ್ರಾಯಣ ವ್ರತವನ್ನು ಆಚರಿಸಬೇಕು. ಈ ವ್ರತವನ್ನು ಒಂದು ವರ್ಷ ಆಚರಿಸಬೇಕೆಂದು ಶ್ರುತಿಗಳು ಹೇಳುತ್ತವೆ. ಅನಂತರ ವಿರಕ್ತನಾಗಿ, ಎಚ್ಚರದಿಂದ ಯತಿಧರ್ಮವನ್ನು ಆಚರಿಸಬೇಕು. ಯತಿಯು ಅಕಸ್ಮಾತ್ ಆಗಿ ಹಿಂಸೆಯನ್ನು ಮಾಡಿದರೆ ಅತ್ಯಂತ ಕಷ್ಟವಾದ ಚಾಂದ್ರಾಯಣ ವ್ರತವನ್ನು ಆಚರಿಸಬೇಕು. ದೇಹ ದಂಡನೆಯನ್ನು ಮಾಡಿಕೊಳ್ಳಬೇಕು.

ಯತಿಗೆ, ಸ್ತ್ರೀಯನ್ನು ನೋಡಿ ವೀರ್ಯಸ್ಖಲನವಾದರೆ ಹದಿನಾರು ಪ್ರಾಣಾಯಾಮಗಳನ್ನು ಮಾಡಬೇಕು. ಹಗಲಿನಲ್ಲಿ ಸ್ಖಲನವಾದರೆ ಮೂರು ದಿನ ನೂರು ಪ್ರಾಣಾಯಾಮಗಳನ್ನು ಮಾಡಬೇಕು. ಸ್ತ್ರೀಯೊಡನೆ ಏಕಾಂತದಲ್ಲಿದ್ದರೆ, ಮದು-ಮಾಂಸಗಳನ್ನು ಸೇವಿಸಿದರೆ ಹೊಸಧಾನ್ಯದ ಶ್ರಾದ್ಧ ಭೋಜನವನ್ನು ಮಾಡಿದರೆ, ಉಪ್ಪನ್ನು ನೇರವಾಗಿ ಸೇವಿಸಿದರೆ ಪ್ರಾಜಾಪತ್ಯ ಎಂಬ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಧ್ಯಾನನಿಷ್ಠನಾದರೆ ಎಲ್ಲ ಪಾಪಗಳೂ ನಾಶವಾಗುತ್ತವೆ. ಆದ್ದರಿಂದ ಮಹೇಶ್ವರನನ್ನು ತಿಳಿದುಕೊಂಡು ಅವನ ಧ್ಯಾನದಲ್ಲಿ ನಿರತನಾಗಬೇಕು.

ಪರಬ್ರಹ್ಮವೇ ಪರತತ್ತ್ವ. ಈ ತತ್ತ್ವವೇ ಮಹಾದೇವ. ಹೀಗೆ ತಿಳಿದವನು ಎಲ್ಲ ಬಾಧೆಗಳಿಂದ ಮುಕ್ತನಾಗುತ್ತಾನೆ. ಆದ್ದರಿಂದ ಯತಿಯು ಜ್ಞಾನಯೋಗನಿರತನಾಗಿ, ಮನೋನಿಗ್ರಹದಿಂದ ಭಕ್ತಿಯಿಂದ ಮಹಾದೇವನನ್ನು ತಪ್ಪದೇ ಆರಾಧಿಸಬೇಕು, ಧ್ಯಾನಿಸಬೇಕು.

ವಿಪ್ರರೇ! ಹೀಗೆ ಯತ್ಯಾಶ್ರಮ ಧರ್ಮವನ್ನು ನಿಮಗೆ ಹೇಳಿದ್ದಾಯಿತು. ಇದನ್ನು ಹಿಂದೆ ಚತುರ್ಮುಖಬ್ರಹ್ಮದೇವರು ಮುನಿಗಳಿಗೆ ಹೇಳಿದ್ದಾರೆ.

ಇಲ್ಲಿ ಹೇಳಲ್ಪಟ್ಟಿರುವ ಯತ್ಯಾಶ್ರಮಿಯ ನಿಯಮಗಳು ಪಶುಪತಿಯನ್ನು ಸಂತೋಷ ಪಡಿಸುವ ಮುಖ್ಯಸಾಧನ. ಏಕಾಗ್ರಮನಸ್ಸಿನಿಂದ ಪ್ರತಿದಿನವೂ ಈ ನಿಯಮಗಳನ್ನು ತಪ್ಪದೇ ಪಾಲಿಸುವವರಿಗೆ ಪುನರ್ಜನ್ಮವೇ ಇಲ್ಲ. *

## ಅಧ್ಯಾಯ-೮೩

**ವ್ಯಾಸ ಉವಾಚ :**

ಇನ್ನು ಮುಂದೆ ಎಲ್ಲ ವಿಪ್ರರ ಹಿತಕ್ಕಾಗಿ, ಅವರ ದೋಷಗಳ ಪರಿಹಾರಕ್ಕಾಗಿ ಶುಭವಾದ ಪ್ರಾಯಶ್ಚಿತ್ತ ವಿಧಿಯನ್ನು ಹೇಳುತ್ತೇನೆ.

ವಿಹಿತಕರ್ಮಗಳನ್ನು ಮಾಡದೆ, ನಿಷಿದ್ಧಕರ್ಮಗಳನ್ನು ಮಾಡುವ ವ್ಯಕ್ತಿಯು ದೋಷ-ಭಾಗಿಯಾಗುತ್ತಾನೆ. ಅವನ ದೋಷಗಳನ್ನು ತೊಳೆಯುವ ವಿಧಾನವೇ ಪ್ರಾಯಶ್ಚಿತ್ತ. ಪಾಪಗಳನ್ನು ಮಾಡಿದ ಬ್ರಾಹ್ಮಣ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆ ಇರಬಾರದು. ಶಾಂತರೂ, ಪ್ರಾಜ್ಞರೂ ಆದ ಬ್ರಾಹ್ಮಣರು ಹೇಳಿದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

ವೇದಾರ್ಥವನ್ನು ಬಹಳ ಚೆನ್ನಾಗಿ ತಿಳಿದ, ಶಾಂತನೂ, ಧರ್ಮದಲ್ಲಿ ಅಭಿರುಚಿ ಇರುವವನೂ ಆದ, ಪ್ರತಿದಿನ ಅಗ್ನಿಯ ಉಪಾಸನೆಯನ್ನು ಮಾಡುವ ಒಬ್ಬ ಬ್ರಾಹ್ಮಣನು ಯಾವುದನ್ನು ಧರ್ಮ ಎಂದು ನಿರ್ಣಯಿಸುವನೋ ಅದು ಧರ್ಮ.

ಅಗ್ನಿಯಲ್ಲಿ ಉಪಾಸನೆಯನ್ನು ಮಾಡಿದ, ವೇದಾರ್ಥ ಪಾರಂಗತರಾದ, ಧರ್ಮದಲ್ಲಿ ಅಭಿರುಚಿ ಇರುವ, ಮೂರು ಮಂದಿ ವಿಪ್ರರು ಯಾವುದನ್ನು ಧರ್ಮ ಎಂದು ನಿರ್ಣಯಿಸು-ವರೋ ಅದು ಧರ್ಮ.

ಅನೇಕಧರ್ಮಶಾಸ್ತ್ರಗಳನ್ನು ತಿಳಿದ, ಅರ್ಥವನ್ನು ನಿರ್ಣಯಿಸಲು ಅವಶ್ಯಕವಾದ ಊಹೆ ಮತ್ತು ನಿರಾಕರಣೆಗಳನ್ನು ಮಾಡಲು ಸಮರ್ಥರಾದ, ವೇದಾಧ್ಯಯನಸಂಪನ್ನರಾದ ಏಳುಜನರು ಪ್ರಾಯಶ್ಚಿತ್ತವನ್ನು ವಿಧಿಸಲು ಅರ್ಹರು.

ವಿಮರ್ಶೆಯ (ಯುಕ್ತಿಯ ಅನುಸಂಧಾನದ) ಪದ್ಧತಿಯನ್ನು ತಿಳಿದ, ವೇದಾಂತ ಕುಶಲರಾದ ಇಪ್ಪತ್ತೊಂದು ಜನರ ಸಮಿತಿಯು ಪ್ರಾಯಶ್ಚಿತ್ತವನ್ನು ವಿಧಿಸಲು ಅರ್ಹ.

**ಪಾಪಿಗಳು :**

ಬ್ರಹ್ಮಹತ್ಯೆಯನ್ನು ಮಾಡಿದವರು. ಮದ್ಯಪಾನವನ್ನು ಮಾಡಿದವರು, ಕಳ್ಳರು, ಗುರುಗಳ ಹಾಸಿಗೆಯ ಮೇಲೆ ಮಲಗಿದವರು (ಗುರುಪತ್ನಿಯ ಸಂಗವನ್ನು ಮಾಡಿದವರು) ಮಹಾಪಾತಕಿಗಳು. ಇವರ ಜೊತೆ ವ್ಯವಹಾರ ಮಾಡುವವರೂ ಕೂಡ ಮಹಾಪಾತಕಿಗಳು.

ಒಬ್ಬ ವ್ಯಕ್ತಿಯು ಪಾಪಿ ಎಂದು ತಿಳಿದ ಮೇಲೂ ಅವನ ಜೊತೆ ಪ್ರಯಾಣ, ಮಲಗುವುದು, ಕುಳಿತುಕೊಳ್ಳುವುದು ಮೊದಲಾದ ವ್ಯವಹಾರಗಳನ್ನು ಒಂದು ವರ್ಷ ಮಾಡಿದವನು ಪತಿತನಾಗುತ್ತಾನೆ.

ಪಾತಕಿಗೆ ಯಜ್ಞವನ್ನು ಮಾಡಿಸುವವನು, ಅವನ ಮನೆಯ ಕನ್ಯೆಯನ್ನು ಮದುವೆಯಾಗುವವನು, ಅವನಿಗೆ ಅಧ್ಯಾಪನವನ್ನು ಮಾಡಿಸುವವನು, ಅವನೊಡನೆ ಭೋಜನವನ್ನು ಮಾಡುವವನು ಕೂಡಲೇ ಪತಿತನಾಗುತ್ತಾನೆ.

ಪತಿತನಾದವನಿಗೆ, ಅವನು ಪತಿತ ಎಂದು ಗೊತ್ತಿಲ್ಲದೆ, ಒಂದು ವರ್ಷ ವೇದಾಧ್ಯಯನವನ್ನು ಮಾಡಿಸಿದ. ಅಧ್ಯಯನವನ್ನು ಮಾಡಿದ ದ್ವಿಜರು ಪತಿತರಾಗುತ್ತಾರೆ.

## ಪ್ರಾಯಶ್ಚಿತ್ತ :

ಬ್ರಹ್ಮಹತ್ಯೆಯನ್ನು ಮಾಡಿದವನು ಕಾಡಿನಲ್ಲಿ ಕುಟೀರವನ್ನು ಮಾಡಿಕೊಂಡು, ಹೆಣದ ತಲೆಯನ್ನು ಲಾಂಛನವಾಗಿ ಮಾಡಿಕೊಂಡು, ವಾಸಿಸಬೇಕು. ಭಿಕ್ಷಾನ್ನದಿಂದ ಬದುಕಬೇಕು.

ಬ್ರಾಹ್ಮಣರ ವಾಸಸ್ಥಳಗಳಿಗೆ, ದೇವಾಲಯಗಳಿಗೆ ಹೋಗಬಾರದು. ತನ್ನಿಂದ ಹತನಾದ ಬ್ರಾಹ್ಮಣನನ್ನು ನೆನೆಯುತ್ತಾ ತನ್ನನ್ನು ನಿಂದಿಸಿಕೊಳ್ಳುತ್ತಾ ಇರಬೇಕು.

ಯಾವ ಮನೆಗಳಿಗೆ ಭಿಕ್ಷೆಗಾಗಿ ಹೋಗಬೇಕೆಂದು ಮೊದಲೇ ನಿರ್ಣಯಿಸದೆ, ಯೋಗ್ಯವಾದ ಯಾವುದಾದರೂ ಏಳು ಮನೆಗಳಿಗೆ ಹೋಗಬೇಕು. ಮನೆಯ ಅಡಿಗೆ ಮನೆಯಲ್ಲಿ ಬೆಂಕಿಯನ್ನು ಆರಿಸಿರಬೇಕು. ಜನರ ಊಟವು ಮುಗಿದಿರಬೇಕು. ತನ್ನ ಅಪರಾಧವನ್ನು ತಿಳಿಸುತ್ತಾ ಭಿಕ್ಷೆಯನ್ನು ಕೇಳಬೇಕು. ದಿನಕ್ಕೆ ಒಂದೇ ಸಲ ಭಿಕ್ಷೆಯನ್ನು ಕೇಳಬೇಕು. ಸಿಗದಿದ್ದರೆ ಕಾಡಿನಲ್ಲಿ ಸಿಗುವ ಗಡ್ಡೆಗಳಿಂದ ಫಲಗಳಿಂದ ಜೀವನವನ್ನು ಸಾಗಿಸಬೇಕು. ಕೈಯಲ್ಲಿ ಕಪಾಲವನ್ನು ಹಿಡಿಯಬೇಕು. ತಲೆಬುರುಡೆ ಸಹಿತವಾದ ದಂಡವನ್ನು ಹಿಡಿಯಬೇಕು. ಬ್ರಹ್ಮಚರ್ಯವನ್ನು ಪಾಲಿಸಬೇಕು. ಹನ್ನೆರಡು ವರ್ಷಗಳ ಕಾಲ ಹೀಗೆ ಮಾಡಿದರೆ ಬ್ರಹ್ಮಹತ್ಯೆಯ ಪಾಪವು ಹೋಗುತ್ತದೆ.

ಪ್ರಮಾದದಿಂದ (ಉದ್ದೇಶವಿಲ್ಲದೆ) ಮಾಡಿದ ಬ್ರಹ್ಮಹತ್ಯೆಗೆ ಇದು ಪ್ರಾಯಶ್ಚಿತ್ತ. ಉದ್ದೇಶಪೂರ್ವಕವಾಗಿ ಮಾಡಿದ ಬ್ರಹ್ಮಹತ್ಯೆಗೆ ಮರಣವೇ ಪ್ರಾಯಶ್ಚಿತ್ತ, ಬೇರೆ ಯಾವುದೇ ದಾರಿ ಇಲ್ಲ. ಮರಣಪ್ರಾಯಶ್ಚಿತ್ತವನ್ನು ಉಪವಾಸವಿದ್ದು ಮಾಡಿಕೊಳ್ಳಬೇಕು. ಅಂದರೆ ಪ್ರಾಯಶ್ಚಿತ್ತಕ್ಕಾಗಿ ಸಾಯಲು ಸಂಕಲ್ಪಿಸಿ ಮರಣಪರ್ಯಂತ ಉಪವಾಸವನ್ನು ಮಾಡಬೇಕು. ಅಥವಾ ಪರ್ವತದ ತುದಿಯಿಂದ ಬೀಳಬೇಕು. ಅಥವಾ ಅಗ್ನಿಪ್ರವೇಶನ್ನು ಮಾಡಬೇಕು. ಅಥವಾ ನೀರಿನಲ್ಲಿ ಮುಳುಗಬೇಕು. ಒಬ್ಬ ಬ್ರಾಹ್ಮಣನಿಗೆ ಅನುಕೂಲವಾಗುವಂತೆ, ಅಥವಾ ಒಂದು ಆಕಳಿಗೆ ಅನುಕೂಲವಾಗುವಂತೆ, ಅಥವಾ ತನ್ನಿಂದ ಹತನಾದ ಬ್ರಾಹ್ಮಣನನ್ನೇ ಉದ್ದೇಶಿಸಿ (ಅವನ ಅವಲಂಬಿಗಳಿಗೆ ಅನುಕೂಲವಾಗುವಂತೆ) ಪ್ರಾಣತ್ಯಾಗ ಮಾಡಿ ಬ್ರಹ್ಮಹತ್ಯೆಯ ಪಾಪವನ್ನು ಕಳೆದುಕೊಳ್ಳಬಹುದು.

ದೀರ್ಘಕಾಲ ರೋಗಿಯಾದ ಬ್ರಾಹ್ಮಣನಿಗೆ ರೋಗಪರಿಹಾರವಾಗುವಂತೆ ಮಾಡಿದರೆ (ಅವಶ್ಯಕವಾದ ಚಿಕಿತ್ಸೆಯನ್ನು ಮಾಡಿಸಿದರೆ) ಬ್ರಹ್ಮಹತ್ಯೆಯ ದೋಷವು ಹೋಗುತ್ತದೆ.

ಶ್ರೇಷ್ಠಜ್ಞಾನಿಗೆ ಅನ್ನದಾನ ಮಾಡಿದರೆ ಬ್ರಹ್ಮಹತ್ಯೆಯು ಪರಿಹಾರವಾಗುತ್ತದೆ. ಅಶ್ವಮೇಧದ ಅವಭೃಥದಲ್ಲಿ ಸ್ನಾನಮಾಡಿದರೆ ಬ್ರಹ್ಮಹತ್ಯೆಯ ನಿವೃತ್ತಿಯಾಗುತ್ತದೆ. ವೇದಗಳನ್ನು ತಿಳಿದ ಬ್ರಾಹ್ಮಣನಿಗೆ ಸರ್ವಸ್ವವನ್ನು ದಾನಮಾಡಿದರೆ ಬ್ರಹ್ಮಹತ್ಯೆಯು ಪರಿಹಾರವಾಗುತ್ತದೆ. ಮೂರು ದಿನ ಉಪವಾಸವಿದ್ದು, ಅನಂತರ ಲೋಕಪ್ರಸಿದ್ಧವಾದ ಸರಸ್ವತೀ-ಶೋಣಾನದಿಗಳ ಸಂಗಮದಲ್ಲಿ ಮೂರು ಹೊತ್ತು ಸ್ನಾನ ಮಾಡುವುದರಿಂದ ಬ್ರಹ್ಮಹತ್ಯಾದೋಷವು ಹೋಗುತ್ತದೆ. ರಾಮೇಶ್ವರಕ್ಕೆ ಹೋಗಿ, ಸಮುದ್ರದಲ್ಲಿ ಸ್ನಾನವನ್ನು ಮಾಡಿ ಬ್ರಹ್ಮಚರ್ಯ ಮೊದಲಾದ ವ್ರತಗಳನ್ನು ಮಾಡಿ ರಾಮೇಶ್ವರನ ದರ್ಶನ ಮಾಡಿದರೆ ಬ್ರಹ್ಮಹತ್ಯೆಯ ಪಾಪದಿಂದ ಬಿಡುಗಡೆಯಾಗುತ್ತದೆ. ಶೂಲಧಾರಿಯಾದ ಶಿವನ ಸನ್ನಿಧಾನವಿರುವ ಕಪಾಲಮೋಚನ ತೀರ್ಥದಲ್ಲಿ ಸ್ನಾನ ಮಾಡಿ ಪಿತೃಗಳನ್ನು, ದೇವತೆಗಳನ್ನು ಪೂಜಿಸಿದರೆ ಬ್ರಹ್ಮಹತ್ಯೆಯ ಪರಿಹಾರವಾಗುತ್ತದೆ. ಹಿಂದೆ ದೇವಾಧಿದೇವನಾದ ಅಮಿತಪರಾಕ್ರಮಿಯಾದ ಭೈರವನು ಚತುರ್ಮುಖಬ್ರಹ್ಮನ ಕಪಾಲವನ್ನು ಈ ಕ್ಷೇತ್ರದಲ್ಲಿ ಸ್ಥಾಪಿಸಿದ್ದನು. ಇಲ್ಲಿ ಭೈರವರೂಪಿಯಾದ ಶಿವನನ್ನು ಪೂಜಿಸಿ, ಪಿತೃಗಳಿಗೆ ತರ್ಪಣವನ್ನು ಕೊಟ್ಟು ಸ್ನಾನ ಮಾಡಿದರೆ ಬ್ರಹ್ಮಹತ್ಯಾಪಾತಕದಿಂದ ಬಿಡುಗಡೆಯಾಗುತ್ತದೆ.

* * *

## ಅಧ್ಯಾಯ-೮೪

**ಋಷಿಗಳ ಪ್ರಶ್ನೆ :**

ಅತಿ ತೇಜಸ್ವಿಯಾದ ಶಂಕರನು ಬ್ರಹ್ಮದೇಹದ ಒಂದು ಭಾಗವಾಗಿದ್ದ ಕಪಾಲವನ್ನು ಭೂಮಿಯಲ್ಲಿ ಹೇಗೆ ಸ್ಥಾಪಿಸಿದನು ?

**ಸೂತ ಉವಾಚ :**

ಋಷಿಗಳೇ, ಇದು ಪಾಪವನ್ನು ನಾಶಮಾಡುವ ಪುಣ್ಯಕಥೆ. ದೇವೋತ್ತಮನಾದ, ಧೀಮಂತನಾದ ಮಹಾದೇವನ ಮಹಿಮೆಯ ಕಥೆ. ಇದನ್ನು ಕೇಳಿರಿ.

**ಶಂಕರ-ಬ್ರಹ್ಮ ವಿವಾದ :**

ಹಿಂದೆ ಒಮ್ಮೆ ಮೇರುಪರ್ವತದ ಶಿಖರದಲ್ಲಿ ಸಭೆ ಸೇರಿದ್ದ ಮಹರ್ಷಿಗಳು ಲೋಕಕಾರಣನಾದ ಬ್ರಹ್ಮದೇವನನ್ನು ನಮಸ್ಕರಿಸಿ ''ಅವ್ಯಯವಾದ ಪ್ರಧಾನ ತತ್ವ ಯಾವುದು?'' ಎಂದು ಕೇಳಿದರು.

ಸರ್ವಲೋಕಗಳ ಜನಕರಾದ ಬ್ರಹ್ಮದೇವರು ಮಹೇಶ್ವರನ ಮಾಯೆಯಿಂದ ಮೋಹಿತ-ರಾಗಿ, ತತ್ತ್ವವನ್ನು ಸರಿಯಾಗಿ ತಿಳಿಯದೆ "ನಾನೇ ಅವ್ಯಯವಾದ ಪ್ರಧಾನ ತತ್ತ್ವ" ಎಂದು ಹೇಳಿಕೊಂಡರು. "ನಾನೇ ಜಗತ್ತಿನ ಪೋಷಕ. ನಾನೇ ಸೃಷ್ಟಿಕರ್ತೃ. ನಾನು ಯಾರಿಂದಲೂ ಹುಟ್ಟಿಲ್ಲ. ನಾನೇ ಇದ್ದೇನೆ. ನಾನೇ ನಿಯಾಮಕರ ನಿಯಾಮಕ. ನನಗೆ ಆದಿ ಇಲ್ಲ. ನಾನೇ ಪರಬ್ರಹ್ಮ. ನನ್ನನ್ನು ಪೂಜಿಸಿದರೆ ಮುಕ್ತಿಯು ಲಭಿಸುತ್ತದೆ. ಎಲ್ಲ ದೇವತೆಗಳ ಪ್ರವೃತ್ತಿ-ನಿವೃತ್ತಿಗಳ ಪ್ರೇರಕಶಕ್ತಿ ನಾನೇ. ನನಗಿಂತ ಉತ್ತಮ ಚೇತನ ಯಾರೂ ಇಲ್ಲ" ಎಂದು ಹೇಳಿಕೊಂಡರು.

ಆಗ ಕೋಪಗೊಂಡ ಮುಕ್ಕಣ್ಣನು ನಾರಾಯಣಾಂಶ ಸಹಿತನಾಗಿ ಅಲ್ಲಿ ಪ್ರಾದುರ್ಭವಿಸಿ, ನಗುತ್ತಾ ಹೇಳಿದನು.

"ಬ್ರಹ್ಮನೇ! ಈಗ ನಿನಗೇಕೆ ಈ ಮೋಹ, ಅಜ್ಞಾನಗಳು ಉಂಟಾಗಿವೆ ? ನೀನು ಹೇಳಿಕೊಂಡ ಮಹಿಮೆಯು ನಿನ್ನಲ್ಲಿ ಇಲ್ಲ. ನಾನೇ ಈ ಜಗತ್ತಿನ ಮೊದಲನೆಯ ಕರ್ತೃ. ನಾನು ನಾರಾಯಣನಿಂದ ಹುಟ್ಟಿದವನು. ನನ್ನ ಪ್ರೇರಣೆಯಿಲ್ಲದೆ ಈ ಜಗತ್ತಿನ ಜೀವನ ನಡೆಯುವುದೇ ಇಲ್ಲ. ನಾನೇ ಪರಂಜ್ಯೋತಿ. ನಾನೇ ಸರ್ವೋತ್ತಮವಾದ ಗಮ್ಯಸ್ಥಾನ. ನೀನು ನನ್ನ ಪ್ರೇರಣೆಯಿಂದಲೇ ಈ ಲೋಕಗಳನ್ನು ಸೃಷ್ಟಿಸಿರುವಿ."

ಹೀಗೆ ಬ್ರಹ್ಮ-ರುದ್ರರು ವಿವಾದ ಮಾಡಿಕೊಳ್ಳುತ್ತಿರುವಾಗ ನಾಲ್ಕು ವೇದಗಳ ಅಭಿಮಾನಿದೇವತೆಗಳು ಅಲ್ಲಿಗೆ ಬಂದರು. ಬ್ರಹ್ಮದೇವನನ್ನೂ, ಯಜ್ಞಸಂಭವನಾದ ಶಿವನನ್ನೂ ನೋಡಿ ಭಯಕಂಪಿತರಾಗಿ ಪರಬ್ರಹ್ಮನ ಸ್ವರೂಪವನ್ನು ಕುರಿತು ಹೇಳಿದರು.

**ಋಗ್ವೇದ ಉವಾಚ :**

ಯಾರನ್ನು ಸಕಲ ಸ್ಥಾವರ-ಜಂಗಮಗಳೂ ಆಶ್ರಯಿಸಿವೆಯೋ ಯಾರಿಂದ ಎಲ್ಲವೂ ಪ್ರವೃತ್ತಿ ಮಾಡುತ್ತವೆಯೋ, ಯಾವುದನ್ನು ಪರತತ್ತ್ವ ಎಂದು ಜ್ಞಾನಿಗಳು ಹೇಳುವರೋ ಆ ದೇವ ಮಹೇಶ್ವರನೇ.

**ಯಜುರ್ವೇದ ಉವಾಚ :**

ಪ್ರಾಜ್ಞರು ಯಾರನ್ನು ಎಲ್ಲ ಯಜ್ಞಗಳಿಂದ ಮತ್ತು ಯೋಗದಿಂದ ಆರಾಧಿಸುವರೋ, ಯಾರನ್ನು ಈಶ್ವರ ಎಂದು ಹೇಳುವರೋ ಆ ದೇವತೆ ಪಿನಾಕಧಾರಿಯಾದ ಶಿವನೇ.

**ಸಾಮವೇದ ಉವಾಚ :**

ಯಾರು ಈ ಜಗತ್ತನ್ನು ತಿರುಗಿಸುತ್ತಿದ್ದಾನೆಯೋ ಈ ಬ್ರಹ್ಮಾಂಡದ ಆಕಾಶದಲ್ಲಿ ಮಂಗಳ-ಮಯವಾಗಿ ಇದ್ದಾನೋ, ಯಾರನ್ನು ಯೋಗಿಗಳು ತಿಳಿಯುತ್ತಾರೋ ಆ ತತ್ತ್ವ ಶಂಕರನೇ.

**ಅಥರ್ವವೇದ ಉವಾಚ :**

ಜ್ಞಾನಿಗಳು ಯಾರ ಸಾಕ್ಷಾತ್ಕಾರಕ್ಕಾಗಿ ಮಹಾಪ್ರಯತ್ನವನ್ನು ಮಾಡುವರೋ ಅವನನ್ನು ಮಹೇಶ. ರುದ್ರ, ಪುರುಷ ಎಂದು ತಿಳಿದಿದ್ದಾರೆ. ಭಗವಾನ್ ಶಿವನೇ ಹೀಗೆ ತಿಳಿಯಲ್ಪಟ್ಟಿರುವ, ಸಾಕ್ಷಾತ್ಕರಿಸಿಲ್ಪಡುವ ದೇವತೆ.

ಬ್ರಹ್ಮದೇವರು ವೇದಾಭಿಮಾನಿಗಳ ಈ ಮಾತುಗಳನ್ನು ಕೇಳಿ ನಕ್ಕುಬಿಟ್ಟರು. ವಿಮೋಹಿತರಾಗಿದ್ದ ಅವರು ಹೇಳಿದರು. "ಸರ್ವಸಂಗಪರಿತ್ಯಾಗ ಮಾಡಿರುವ ಪರಬ್ರಹ್ಮನಾದ ಈ ಶಿವನು ತನ್ನ ಹೆಂಡತಿಯ ಜೊತೆ ಹೇಗೆ ವಿಹರಿಸುತ್ತಾನೆ ? ಬಹಳ ಗರ್ವಿತರಾದ ಪ್ರಮಥಗಳೊಂದಿಗೆ ಅದೇನು ವಿಹಾರ ?

ಆಗ ಅಮೂರ್ತನೂ (ಭೌತ ಆಕಾರಗಳಿಲ್ಲದವನು), ಸನಾತನನೂ, ಪ್ರಣವ ಸ್ವರೂಪನೂ ಆದ ಭಗವಂತನು (ನಾರಾಯಣನು) ಮೂರ್ತರೂಪವನ್ನು ತೆಗೆದುಕೊಂಡು ಬ್ರಹ್ಮದೇವರಿಗೆ ಹೇಳಿದನು.

**ಪ್ರಣವ ಉವಾಚ :**

"ಈ ಶಿವನು ತನ್ನಲ್ಲೇ ವಿಹಾರ ಮಾಡುತ್ತಾನೆ. ತನಗಿಂತ ಬೇರೆ ಯಾರ ಜೊತೆಯಲ್ಲೂ ವಿಹರಿಸುವುದಿಲ್ಲ. ಈ ಶಿವಸ್ವಯಂಜ್ಯೋತಿ, ಸನಾತನ. ಅವನ ರಮಣಿಯಾದ ಪಾರ್ವತಿಯು ಅವನ ಆನಂದದ ಒಂದು ರೂಪ."

**ಐದನೆಯ ಮುಖದಿಂದ ಪ್ರಭೆ :**

ಪ್ರಣವಸ್ವರೂಪನಾದ ಭಗವಂತನು ಇಷ್ಟು ಹೇಳಿದರೂ ಬ್ರಹ್ಮನ ಅಜ್ಞಾನವು ಹೋಗಲಿಲ್ಲ. ಈಶ್ವರನ ಮಾಯೆಯೇ ಇದಕ್ಕೆ ಕಾರಣ.

ಈ ಸಂದರ್ಭದಲ್ಲಿ ಬ್ರಹ್ಮದೇವನು ಭಾರಿ ಬೆಳಕನ್ನು (ಪ್ರಭೆಯನ್ನು) ಆವಿಷ್ಕರಿಸಿದನು. ಈ ಬೆಳಕು ಆಕಾಶವನ್ನು ವ್ಯಾಪಿಸಿತ್ತು. ಈ ಪ್ರಭೆಯ ಮೂಲ ಬ್ರಹ್ಮದೇವನ ತಲೆ ಮತ್ತು ಮುಖವಾಗಿತ್ತು. ಅದು ಬ್ರಹ್ಮದೇವನ ಐದನೆಯ ತಲೆಯಾಗಿತ್ತು. ಆ ಐದನೆಯ ಮುಖ ಕೋಪದಿಂದ ಜ್ವಲಿಸುತ್ತಿತ್ತು.

**ಬ್ರಹ್ಮಗರ್ವ-ಶಿರಶ್ಛೇದನ :**

ತ್ರಿಶೂಲಧಾರಿಯಾಗಿದ್ದ, ಸರ್ಪಗಳನ್ನು ಜನಿವಾರದ ಆಕಾರದಲ್ಲಿ ಧರಿಸಿದ್ದ ಶಿವನು ಆ ಮುಖವನ್ನು ನೋಡಿದನು.

ಬ್ರಹ್ಮದೇವನು ಶಿವನಿಗೆ ಹೇಳಿದನು. "ಈ ಜ್ಯೋತಿರ್ಮಯವಾದ ಮುಖ ಮತ್ತು ತಲೆ ನಿನ್ನ ಹಣೆಯ ಕಣ್ಣಿಗಿಂತ ಮೊದಲೇ ನಿನಗಾಗಿ ಪ್ರಾದುರ್ಭವಿಸಿತು. ಈ ಮುಖದಿಂದಲೇ ನೀನು ಜ್ಞಾನವನ್ನು ಪಡೆದಿರುವಿ. ಆದ್ದರಿಂದ ನಿನಗಿಂತ ಉತ್ತಮನಾದ ನನ್ನನ್ನು ನಮಸ್ಕರಿಸು.

ಶಿವನು ಚತುರ್ಮುಖಬ್ರಹ್ಮನ ಗರ್ವದ ಮಾತುಗಳನ್ನು ಕೇಳಿ ಲೋಕವನ್ನೇ ಸುಡುವ ಸಾಮರ್ಥ್ಯವುಳ್ಳ ಕಾಲಭೈರವನನ್ನು ಬ್ರಹ್ಮನನ್ನು ಶಿಕ್ಷಿಸಲು ಕಳಿಸಿದನು. ಅವನು ಬ್ರಹ್ಮನ ಜೊತೆ ಘೋರಯುದ್ಧವನ್ನು ಮಾಡಿ ಅವನ ಐದನೆಯ ಮುಖವನ್ನು ಕತ್ತರಿಸಿದನು. ಈ ಮುಖಚ್ಛೇದನದಿಂದಾಗಿ ಬ್ರಹ್ಮನು ಸತ್ತುಹೋದನು. ತನ್ನ ಯೋಗಶಕ್ತಿಯಿಂದ ಪುನಃ ಬದುಕಿದನು.

## ಬ್ರಹ್ಮನಿಗೆ ಆದ ಶಿವದರ್ಶನ :

ಜೀವ ಪಡೆದು ಎದ್ದ ಬ್ರಹ್ಮದೇವನು ಪ್ರಭಾಮಂಡಲದ ಮಧ್ಯದಲ್ಲಿ ಪಾರ್ವತೀ ಸಹಿತನಾಗಿ ಕುಳಿತಿರುವ ಸನಾತನನಾದ ಮಹಾದೇವನನ್ನು ಕಂಡನು. ಕೈಗಳಿಗೆ, ತೋಳುಗಳಿಗೆ ಬಳೆಯಂತೆ ಸರ್ಪಗಳನ್ನು ಧರಿಸಿರುವ, ಚಂದ್ರನ ತುಂಡನ್ನು ಆಭರಣದಂತೆ ತಲೆಯಲ್ಲಿ ಧರಿಸಿರುವ, ಕೋಟಿಸೂರ್ಯರ ಕಾಂತಿಯನ್ನು ಹೊಂದಿರುವ, ಜಟೆಯಿಂದ ಕಂಗೊಳಿಸುತ್ತಿ-ರುವ, ಹುಲಿಯ ಚರ್ಮವನ್ನು ಧರಿಸಿರುವ, ದಿವ್ಯಮಾಲೆಯಿಂದ ಆಲಂಕೃತನಾಗಿರುವ, ಕೈಯಲ್ಲಿ ತ್ರಿಶೂಲವನ್ನು ಹಿಡಿದಿರುವ, ನೋಡಿದವರ ಕಣ್ಣುಗಳನ್ನು ಕೋರೈಸುವ, ಭಸ್ಮಾಲಂಕೃತನಾದ, ಯೋಗಿಯಾದ, ಯೋಗನಿಷ್ಠರಾದವರು ತಮ್ಮ ಹೃದಯದಲ್ಲಿ ಕಾಣುವಂತಹ, ಪ್ರಥಮತತ್ತ್ವನಾದ ಪೂರ್ಣನಾದ ಮಹಾದೇವನನ್ನು ಕಂಡನು. ಶ್ರೇಷ್ಠಳಾದ ಪಾರ್ವತಿಯು ಅವನ ಶಕ್ತಿ. ಆ ಶಕ್ತಿಗೆ ಆಕಾಶ ಎಂದು ಹೆಸರು. ಅವಳ ಪತಿಯಾದ ಶಿವನು ಅನಂತ ಐಶ್ವರ್ಯವನ್ನು ಹೊಂದಿದ್ದಾನೆ. ಇಂತಹ ಶಿವನ ದರ್ಶನ ಬ್ರಹ್ಮನಿಗೆ ಆಯಿತು.

ಶಿವನಿಗೆ ಒಂದೇ ಒಂದು ಸಲ ನಮಸ್ಕರಿಸಿದರೆ ಜನನ-ಮರಣಗಳಿಗೆ ಕಾರಣವಾದ ಮೋಹವು ನಾಶವಾಗುತ್ತದೆ. ಇಂತಹ ಶಿವನ..... ಸದಾಚಾರ ಸಂಪನ್ನರಲ್ಲದಿದ್ದರೂ ಭಕ್ತರಾಗಿರುವವರಿಗೆ ಮುಕ್ತಿಯನ್ನು ಕೊಡುವ, ಲೋಕನಿಯಾಮಕನಾದ ಶಿವನ ದರ್ಶನ..... ಬ್ರಹ್ಮಾದಿದೇವತೆಗಳೂ, ಋಷಿಗಳೂ, ಬ್ರಹ್ಮವಾದಿಗಳು ಯಾರ ಲಿಂಗವನ್ನು ಸದಾ ಪೂಜಿಸುತ್ತಾರೋ ಅಂತಹ ಶಿವನ ದರ್ಶನ...... ಸಕಲ ಜಗತ್ತನ್ನೂ ಸೃಷ್ಟಿಸುವ ವಿಜ್ಞಾನ-ಮಯವಾದ ಶರೀರವನ್ನು ಹೊಂದಿರುವ ಶಿವನ ದರ್ಶನವು.... ಹಿರಣ್ಯಗರ್ಭನ ಪುತ್ರನೂ ವಿದ್ಯಾದೇವಿಯಾದ ಪಾರ್ವತಿಯ ಪತಿಯೂ ಆದ ಶಿವನ ದರ್ಶನವು.... ಯಾರ ಪಾದಗಳಿಗೆ ಹೂಗಳನ್ನೋ, ನೀರನ್ನೋ ಅರ್ಪಿಸಿದವನು ಕೂಡ ಸಂಸಾರದಿಂದ ಮುಕ್ತಿಯನ್ನು ಪಡೆಯುತ್ತಾನೋ ಅಂತಹ ಶಿವನ ದರ್ಶನವು.... ಸರ್ವನಿಯಾಮಕನಾದ, ಕಾಲ-ನಿಯಾಮಕನೂ ಆದ ಆದ್ದರಿಂದ ಕಾಲಕಾಲ ಎಂದು ಪ್ರಸಿದ್ಧವಾದ ಶಿವನ..... ಸಕಲ-ಲೋಕಗಳ ಜೀವಧಾತುವಾಗಿರುವ, ಸಕಲ ಲೋಕಗಳಿಗೆ ಭೂಷಣನಾಗಿರುವ, ಚಂದ್ರ-ಭೂಷಣನಾದ ಶಿವನ ದರ್ಶನವು..... ಯೋಗ ತತ್ತ್ವವನ್ನು ತಿಳಿದ ಯೋಗಿಗಳು, ವಿರಕ್ತರಾಗಿ ಯಾವಾಗಲೂ ಯಾರನ್ನು ಧ್ಯಾನಿಸುತ್ತಾರೋ ಅಂತಹ ಶಿವನ...... ಪಾರ್ವತೀಸಹಿತನಾದ ಶ್ರೇಷ್ಠ ಆಸನದಲ್ಲಿ ಕುಳಿತಿರುವ ಶಿವನನ್ನು ನೋಡಿದ ಬ್ರಹ್ಮನಿಗೆ ಶ್ರೇಷ್ಠವಾದ ಸ್ಮರಣೆಯು

(ಚಿಂತನೆಯು) ಉಂಟಾಯಿತು. ಈ ದಿವ್ಯಸ್ಮೃತಿಯಿಂದ ಬ್ರಹ್ಮದೇವನು ಚಂದ್ರಭೂಷಣನಾದ ಶಿವನನ್ನು ಸ್ತುತಿಸಿದನು.

**ಬ್ರಹ್ಮದೇವರು ಮಾಡಿದ ಶಿವ-ಪಾರ್ವತಿಯರ ಸ್ತುತಿ :**

**ನಮೋ ದೇವಾಯ ಮಹತೇ ಮಹಾದೇವ್ಯೈ ನಮೋ ನಮಃ ।**
**ನಮಃ ಶಿವಾಯ ಶಾಂತಾಯ ಶಿವಾಯೈ ಸತತಂ ನಮಃ ॥**

ಮಹಾದೇವನಿಗೆ ನಮಸ್ಕಾರ. ಮಹಾದೇವಿಗೆ ನಮಸ್ಕಾರ. ಶಾಂತನಾದ ಶಿವನಿಗೆ ನಮಸ್ಕಾರ. ಶಿವಪತ್ನಿಗೆ ನಿರಂತರವಾಗಿ ನಮಸ್ಕಾರ.

**ಓಂ ನಮೋ ಬ್ರಹ್ಮಣೇ ತುಭ್ಯಂ ವಿದ್ಯಾಯೈ ತೇ ನಮೋ ನಮಃ ।**
**ಮಹೇಶಾಯ ನಮಸ್ತುಭ್ಯಂ ಮೂಲಪ್ರಕೃತಯೇ ನಮಃ ॥**

ಪೂರ್ಣನಾದ ನಿನಗೆ ನಮಸ್ಕಾರ. ವಿದ್ಯಾದೇವತೆಯೇ! ನಿನಗೆ ನಮಸ್ಕಾರ. ಮಹೇಶನೇ ನಿನಗೆ ನಮಸ್ಕಾರ. ಮೂಲಪ್ರಕೃತಿಯೇ! ನಿನಗೆ ನಮಸ್ಕಾರ.

**ನಮೋ ವಿಜ್ಞಾನದೇಹಾಯ ಚಿಂತಾಯೈ ತೇ ನಮೋ ನಮಃ ।**
**ನಮೋಽಸ್ತು ಕಾಲಕಾಲಾಯ ಈಶ್ವರಾಯೈ ನಮೋ ನಮಃ ॥**

ಜ್ಞಾನಮಯ ದೇಹವನ್ನು ಹೊಂದಿರುವ ಶಿವನಿಗೆ ನಮಸ್ಕಾರ. ಧ್ಯಾನಸ್ವರೂಪಳಾದ ದೇವಿಯೇ ನಿನಗೆ ನಮಸ್ಕಾರ. ಕಾಲನಿಯಾಮಕನಾದ ಶಿವನಿಗೆ ನಮಸ್ಕಾರ. ಶಿವಪತ್ನಿಗೆ ನಮಸ್ಕಾರ.

**ನಮೋ ನಮೋಽಸ್ತು ರುದ್ರಾಯ ರುದ್ರಾಣ್ಯೈ ತೇ ನಮೋ ನಮಃ ।**
**ನಮೋ ನಮಸ್ತೇ ಕಾಲಾಯ ಮಾಯಾಯೈ ತೇ ನಮೋ ನಮಃ ॥**

ರುದ್ರನಿಗೆ ನಮಸ್ಕಾರ, ನಮಸ್ಕಾರ. ರುದ್ರಪತ್ನಿ! ನಿನಗೆ ನಮಸ್ಕಾರ. ನಮಸ್ಕಾಸ. ಸಂಹಾರಕನಾದ ನಿನಗೆ ನಮಸ್ಕಾರ, ನಮಸ್ಕಾರ. ಪ್ರಕೃತಿನಿಯಾಮಕಳಾದ ನಿನಗೆ ನಮಸ್ಕಾರ, ನಮಸ್ಕಾರ.

**ನಿಯಂತ್ರೇ ಸರ್ವಕಾರ್ಯಾಣಾಂ ಕ್ಷೋಭಿಕಾಯೈ ನಮೋ ನಮಃ ।**
**ನಮೋಸ್ತು ತೇ ಪ್ರಕೃತಯೇ ನಮೋ ನಾರಾಯಣಾಯ ಚ ॥**

ಎಲ್ಲ ಕಾರ್ಯಗಳ ನಿಯಾಮಕನಿಗೆ ನಮಸ್ಕಾರ. ಜಗತ್ತಿಗೆ ಚಾಲನೆಯನ್ನು ಕೊಡುವ ಪಾರ್ವತಿಗೆ ನಮಸ್ಕಾರ. ಪ್ರಕೃತಿನಿಯಾಮಕಳಿಗೆ ನಮಸ್ಕಾರ. ನಾರಾಯಣ ಸ್ವರೂಪನಾದ ಶಿವನಿಗೆ ನಮಸ್ಕಾರ.

**ಯೋಗದಾಯ ನಮಸ್ತುಭ್ಯಂ ಯೋಗಿನಾಂ ಗುರವೇ ನಮಃ ।**
**ನಮಃ ಸಂಸಾರವಾಸಾಯ ಸಂಸಾರೋತ್ಪತ್ತಯೇ ನಮಃ ॥**

ಯೋಗಿಗಳಿಗೆ ಯೋಗ ಸಾಮರ್ಥ್ಯವನ್ನು ಕೊಡುವ, ಆದ್ದರಿಂದ ಗುರುವಾದ ನಿನಗೆ ನಮಸ್ಕಾರ. ಸಂಸಾರದ ಉತ್ಪತ್ತಿ-ಸ್ಥಿತಿಗಳಿಗೆ ಕಾರಣನಾದ ನಿನಗೆ ನಮಸ್ಕಾರ.

ನಿತ್ಯಾನಂದಾಯ ವಿಭವೇ ನಮೋಸ್ತ್ವಾನಂದ ಮೂರ್ತಯೇ ।
ನಮಃ ಕಾರ್ಯವಿಹೀನಾಯ ವಿಶ್ವಪ್ರಕೃತಯೇ ನಮಃ ॥

ನಿತ್ಯಾನಂದಸ್ವರೂಪನೂ, ಸರ್ವಶಕ್ತನೂ, ಆನಂದಮೂರ್ತಿಯೂ ಆದ ನಿನಗೆ ನಮಸ್ಕಾರ. ಯಾವ ಕೆಲಸವನ್ನು ಮಾಡಬೇಕಾಗಿಲ್ಲದ ನಿನಗೆ ನಮಸ್ಕಾರ. ಸಕಲಪ್ರಕೃತಿಯ ನಿಯಾಮಕನಿಗೆ ನಮಸ್ಕಾರ.

ಓಂಕಾರಮೂರ್ತಯೇ ತುಭ್ಯಂ ತದಂತಃಸಂಸ್ಥಿತಾಯ ಚ ।
ನಮಸ್ತೇ ವ್ಯೋಮಸಂಸ್ಥಾಯ ವ್ಯೋಮಶಕ್ತ್ಯೈ ನಮೋ ನಮಃ ॥

ಓಂಕಾರಪ್ರತಿಪಾದ್ಯನಾದ ನಿನಗೆ ನಮಸ್ಕಾರ. ಓಂಕಾರಾಭಿಮಾನಿಯಾದ ನಿನಗೆ ನಮಸ್ಕಾರ. ಆಕಾಶಮೂರ್ತಿಯಾದ, ಆಕಾಶದ ಶಕ್ತಿಯಾದ ನಿನಗೆ ನಮಸ್ಕಾರ.

ಬ್ರಹ್ಮದೇವರು ಹೀಗೆ ಎಂಟು ಶ್ಲೋಕಗಳಿಂದ ಶಿವಪಾರ್ವತಿಯರನ್ನು ಸ್ತುತಿಸಿ, ಶತರುದ್ರಿಯ ಎಂಬ ಮಂತ್ರಗಳನ್ನು ಹೇಳುತ್ತಾ ಅವರಿಬ್ಬರಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.

ಅನಂತರ ನಮಸ್ಕರಿಸಿದವರ ದುಃಖಗಳನ್ನು ಪರಿಹರಿಸುವ ಮಹಾದೇವನು ತನ್ನ ಕೈಗಳಿಂದ ಬ್ರಹ್ಮದೇವರನ್ನು ಎಬ್ಬಿಸಿ ''ನಾನು ಈಗ ನಿನ್ನ ಬಗ್ಗೆ ಪ್ರೀತನಾಗಿದ್ದೇನೆ'' ಎಂದು ಹೇಳಿದನು.

## ವಿಷ್ಣುವಿನ ಆಗಮನ, ಅನುಗ್ರಹ ಮತ್ತು ಆದೇಶ :

ಆಗ ಅಲ್ಲಿಗೆ ಭಗವಾನ್ ವಿಷ್ಣುವು ಬಂದನು. ಅವನು ಬ್ರಹ್ಮನಿಗೆ ಪರಮಯೋಗವನ್ನೂ, ಅತುಲೈಶ್ವರ್ಯವನ್ನೂ ಕೊಟ್ಟನು. ತನ್ನೆದುರಿಗೆ ಇದ್ದ ಶಿವನಿಗೆ ಹೇಳಿದನು. ''ಇವನು ಬ್ರಹ್ಮ, ಇಡೀ ಜಗತ್ತಿನಿಂದ ಅಗ್ರಪೂಜೆಗೆ ಅರ್ಹನು. ನಿಮ್ಮ ತಂದೆ, ನೀನು ಅವನನ್ನು ರಕ್ಷಿಸಬೇಕು. ಇವನು ಗುಣಗಳಿಂದ ನಿನಗಿಂತ ಶ್ರೇಷ್ಠ. ಇವನು ಪುರಾಣಪುರುಷ. ನೀನು ಇವನನ್ನು ಕೊಲ್ಲಬಾರದು. ಇವನು ತನ್ನ ಯೋಗಶಕ್ತಿಯಿಂದ ನನಗೇ ಶರಣಾಗತನಾಗಿದ್ದಾನೆ. ಇವನು ಯಜ್ಞಮೂರ್ತಿ. ಗರ್ವರಹಿತ. ಗರ್ವವುಳ್ಳವರನ್ನು ಮಾತ್ರ ನೀನು ಶಿಕ್ಷಿಸಬೇಕು.'' ''ನಿನಗೆ ಬ್ರಹ್ಮಹತ್ಯೆಯ ಪಾಪವು ಬಂದಿದೆ. ಅದನ್ನು ನೀನು ಪರಿಹರಿಸಿಕೊಳ್ಳಬೇಕು. ಅದಕ್ಕಾಗಿ ಪ್ರಾಯಶ್ಚಿತ್ತವ್ರತವನ್ನು ಮಾಡಬೇಕು. ಹೀಗೆ ಮಾಡಿ ಲೋಕಕ್ಕೆ ಮಾರ್ಗದರ್ಶಕನಾಗಬೇಕು. ಅದಕ್ಕಾಗಿ ಕತ್ತರಿಸಲ್ಪಟ್ಟಿರುವ ಬ್ರಹ್ಮನ ತಲೆಯನ್ನು ನೀನು ಹಿಡಿದುಕೊಂಡು ಭಿಕ್ಷಾಟನೆ ಮಾಡು. ಈ ಪ್ರಾಯಶ್ಚಿತ್ತದಿಂದ ದೇವ-ಬ್ರಾಹ್ಮಣರ ರಕ್ಷಣೆಯಾಗುತ್ತದೆ.''

ಭಗವಾನ್ ವಿಷ್ಣುವು ಶಿವನಿಗೆ ಇಷ್ಟು ಹೇಳಿ ತನ್ನ ಸ್ಥಾನಕ್ಕೆ ಹೊರಟುಹೋದನು. ಅನಂತರ ನೀಲಗೆಂಪುಬಣ್ಣದ ಜಟಾಧಾರಿಯಾದ ಶಿವನು ಬ್ರಹ್ಮನ ತಲೆಯನ್ನು ಹಿಡಿದುಕೊಳ್ಳಲು ತನ್ನ ಸೇವಕ ಕಾಲಭೈರವನಿಗೆ ಆಜ್ಞೆ ಮಾಡಿದನು.

**ಅಶರೀರ ವಾಣಿ :**

ಆಗ ಭಗವಂತನು ಅದೃಶ್ಯನಾಗಿದ್ದುಕೊಂಡು ಹೀಗೆ ಹೇಳಿದನು.

"ಶಿವನೇ! ಕಪಾಲವನ್ನು ಹಿಡಿದು ಭಿಕ್ಷೆ ಬೇಡುವ ಪ್ರಾಯಶ್ಚಿತ್ತ ವ್ರತವನ್ನು ನಿನ್ನ ಪಾಪವನ್ನು ಕಳೆದುಕೊಳ್ಳುವುದಕ್ಕಾಗಿ, ನೀನೇ ಮಾಡು. ನಿನ್ನನ್ನು ಅನುಸರಿಸಿ ಲೋಕವೂ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಮುಂದೆ ಬರುತ್ತಾರೆ. ಹೀಗೆ ನಿನ್ನ ವ್ರತವು ಲೋಕಹಿತಕರವಾಗುವುದು."

ಹೀಗೆ ಹೇಳಿ 'ಬ್ರಹ್ಮಹತ್ಯಾ' ಎಂಬ ಹೆಸರಿನ ಕನ್ಯೆಯೊಬ್ಬಳನ್ನು ಕಳಿಸಿದನು. ಅವಳ ಮುಖ ಕೋರೆಹಲ್ಲುಗಳಿಂದ ಕರಾಲವಾಗಿತ್ತು. ಜ್ವಾಲೆಯ ಮಾಲೆಯನ್ನು ಅವಳು ಧರಿಸಿದ್ದಳು.

"ಈ ಶಿವನು ವಾರಾಣಸಿಯನ್ನು ತಲುಪುವವರೆಗೆ ಭಯಂಕರ ಆಕಾರದಿಂದ ನೀನು ಅವನನ್ನು ಹಿಂಬಾಲಿಸು" ಎಂದು ಆ ಕನ್ಯೆಗೆ ಭಗವಂತನ ಆದೇಶವಿತ್ತು.

ಪುನಃ ಅಶರೀರವಾಣಿಯು ಶಿವನಿಗೆ ಹೀಗೆ ಹೇಳಿತು. "ನನ್ನ ಆದೇಶದಂತೆ ಭಿಕ್ಷೆಯನ್ನು ಬೇಡುತ್ತಾ ಇಡೀ ಲೋಕದಲ್ಲಿ ಅಲೆದಾಡು. ನಿರ್ದೋಷನಾದ, ಗುಣಪೂರ್ಣನಾದ ನಾರಾಯಣನ ದರ್ಶನವಾಗುವವರೆಗೆ ಹೀಗೆ ಮಾಡುತ್ತಿರು. ಅವನ ದರ್ಶನವಾದಾಗ ಪಾಪವನ್ನು ತೊಡೆಯುವ ಸ್ಪಷ್ಟವಾದ ಉಪಾಯವನ್ನು ನಾರಾಯಣನು ನಿನಗೆ ತೋರಿಸುತ್ತಾನೆ."

**ಶಿವನಿಂದ ಭಿಕ್ಷಾಟನೆ :**

ಶಿವನು ಭಗವಂತನ ಅಶರೀರವಾಣಿಯನ್ನು ಕೇಳಿ ಕೈಯಲ್ಲಿ ಕಪಾಲವನ್ನು ಹಿಡಿದು ಭಿಕ್ಷೆಯನ್ನು ಬೇಡುತ್ತಾ ಮೂರು ಲೋಕಗಳಲ್ಲಿ ಸಂಚರಿಸಿದನು. ಆಗ ಅವನು ವಿಕೃತವೇಷವನ್ನು ಧರಿಸಿದ್ದನು. ತೇಜಸ್ಸಿನಿಂದ ಬೆಳಗುತ್ತಿದ್ದನು. ಅವನ ಮೂರು ಕಣ್ಣುಗಳು ಕಾಂತಿಯುತವೂ, ಪವಿತ್ರವೂ, ಮನೋಹರವೂ ಆಗಿದ್ದವು. ಶಿವನು ಸಾವಿರ ಸೂರ್ಯರ ತೇಜಸ್ಸನ್ನು ಹೊಂದಿದ್ದನು. ಸಿದ್ಧರೂ, ಪ್ರಮಥಗಣಗಳೂ ಅವನನ್ನು ಸುತ್ತುವರಿದಿದ್ದರು. ಪರಮಾತ್ಮನ ಚಿಂತನೆಯ ಆನಂದಾಮೃತವನ್ನು ಅನುಭವಿಸುತ್ತಾ ಶಿವನು ಲೋಕಸಂಚಾರವನ್ನು ಮಾಡಿದನು. ರೂಪಲಾವಣ್ಯ ಸಂಪನ್ನನಾಗಿದ್ದ ಶಂಕರನನ್ನು ನೋಡಿ ಸ್ತ್ರೀಯರು ಅವನನ್ನು ಹಿಂಬಾಲಿಸಿದರು. ಅವರು ಅವನ ಸಮ್ಮುಖದಲ್ಲಿ ಹಾಡಿದರು. ನರ್ತನ ಮಾಡಿದರು. ಅವನ ಮಂದಹಾಸ ತುಂಬಿದ್ದ ಮುಖವನ್ನು ನೋಡಿ ಹುಬ್ಬಿನ ವಿಲಾಸವನ್ನು ಮಾಡಿದರು.

ಶಿವನು ದೇವತೆಗಳ- ದಾನವರ ದೇಶಗಳಲ್ಲಿ ಸುತ್ತಿ ವಿಷ್ಣುಲೋಕಕ್ಕೆ ಹೋದನು. ಶಿವನು ತನ್ನ ಗಣಗಳೊಂದಿಗೆ ವಿಷ್ಣುವಿನ ದಿವ್ಯಭವನವನ್ನು ಪ್ರವೇಶಿಸಲು ಮುಂದಾದನು.

## ಶಿವ-ವಿಶ್ವಕ್ಸೇನರ ಯುದ್ಧ :

ವಿಷ್ಣುಭವನದ ದ್ವಾರಪಾಲಕ ವಿಶ್ವಕ್ಸೇನ. ಅವನು ಶಂಖ, ಚಕ್ರ, ಗದೆಗಳನ್ನು ಕೈಯಲ್ಲಿ ಹಿಡಿದಿದ್ದನು. ಪೀತಾಂಬರವನ್ನು ಧರಿಸಿದ್ದನು. ಬಹಳ ಬಲಶಾಲಿ. ಈ ವಿಶ್ವಕ್ಸೇನನು ಶಿವನ ಮಹಿಮೆಯನ್ನು ತಿಳಿಯದೆ ಪ್ರವೇಶವನ್ನು ತಡೆದನು. ಆಗ ಶಿವಗಣವು ಅವನನ್ನು ಆಕ್ರಮಿಸಿತು. ಶಿವಗಣದ ನಾಯಕನಾದ ಭೈರವನ ಆದೇಶದಂತೆ ಕಾಲವೇಗ ಎಂಬ ಶಿವಸೇವಕನು ವಿಶ್ವಕ್ಸೇನನನ್ನು ಎದುರಿಸಿದನು. ವಿಶ್ವಕ್ಸೇನನು ಅವನನ್ನು ಸೋಲಿಸಿ ಕೋಪದಿಂದ ಶಿವನಿಗೆ ಎದುರಾಗಿ ಸುದರ್ಶನ ಚಕ್ರವನ್ನು ಎಸೆದನು. ತ್ರಿಪುರಾಂತಕನಾದ, ಶೂಲಧಾರಿಯಾದ ಶಿವನು ವಿಶ್ವಕ್ಸೇನನನ್ನು ತಿರಸ್ಕಾರದಿಂದ ನೋಡಿದನು. ಈ ಮಧ್ಯದಲ್ಲೇ ಪ್ರಲಯಾಗ್ನಿಯಂತಿದ್ದ ಶಿವಸೈನಿಕನೊಬ್ಬನು ಶೂಲದಿಂದ ವಿಶ್ವಕ್ಸೇನನ ಎದೆಯನ್ನು ಸೀಳಿ ಅವನನ್ನು ನೆಲಕ್ಕೆ ಕೆಡವಿದನು. ಈ ಪ್ರಹಾರದಿಂದ ವಿಶ್ವಕ್ಸೇನನು ಸತ್ತು ಹೋದನು.

ಶಿವನು, ವಿಶ್ವಕ್ಸೇನನ ಶವವನ್ನು ತೆಗೆದುಕೊಂಡು, ಪ್ರಮಥಗಣಗಳೊಂದಿಗೆ ವಿಷ್ಣುಭವನ-ವನ್ನು ಪ್ರವೇಶಿಸಿದನು.

## ಶಿವನಿಗೆ ರಕ್ತಭಿಕ್ಷೆ :

ಶ್ರೀಹರಿಯು ಶಿವನನ್ನು ನೋಡಿ ತನ್ನ ಹಣೆಯ ಒಂದು ಧಮನಿಯನ್ನು ಭೇದಿಸಿ ರಕ್ತಧಾರೆಯನ್ನು ಹರಿಸಿದನು. ''ಶಿವನೇ! ಅಮಿತಕಾಂತಿವಂತನೇ! ನನ್ನ ಈ ಭಿಕ್ಷೆಯನ್ನು ತೆಗೆದುಕೋ. ಇದಕ್ಕಿಂತ ಬೇರೆ ಯಾವ ಪದಾರ್ಥವೂ ನಿನಗೆ ಕೊಡಲು ಯೋಗ್ಯವಲ್ಲ'' ಎಂದು ಹೇಳಿದನು. ದೇವಮಾನದ ಒಂದು ಸಾವಿರ ವರ್ಷ ರಕ್ತಧಾರೆಯು ಹರಿಯಿತು. ಆದರೂ ಶಿವನು ಹಿಡಿದಿದ್ದ ಬ್ರಹ್ಮಕಪಾಲವು ತುಂಬಲಿಲ್ಲ.

ಅನಂತರ ಶ್ರೀಹರಿಯು ಶಿವನನ್ನು ನಾನಾ ಭಾವಗಳಿಂದ ಪ್ರಶಂಸಿಸಿ ಆದರದಿಂದ ಹೇಳಿದನು.

''ಬ್ರಹ್ಮಕಪಾಲವನ್ನು ಏಕೆ ಹಿಡಿದಿರುವಿ ?'' ಆಗ ಶಿವನು ಎಲ್ಲ ವೃತ್ತಾಂತವನ್ನು ಹೇಳಿದನು. ಶ್ರೀಹರಿಯು ಬ್ರಹ್ಮಹತ್ಯಾಕನ್ಯೆಯನ್ನು ಕರೆದು ''ಶಿವನನ್ನು ಬಿಡು'' ಎಂದು ಹೇಳಿದನು. ಅವಳು ಬಿಡಲಿಲ್ಲ. ಸರ್ವಜ್ಞನಾದ ಶ್ರೀಹರಿಯು ಬಹಳ ಹೊತ್ತು ಆಲೋಚಿಸಿ ಶಿವನಿಗೆ ಹೇಳಿದನು.

''ಶಿವನೇ ಮಂಗಳಕರವಾದ ವಾರಾಣಸಿಗೆ ಹೋಗು. ಅಲ್ಲಿ ಎಲ್ಲರ ಎಲ್ಲ ದೋಷಗಳು ಪರಿಹಾರವಾಗುತ್ತವೆ''

## ಶಿವನ ವಾರಾಣಸೀ ಯಾತ್ರೆ :

ಅನಂತರ ಶಿವನು ಲೋಕಹಿತವನ್ನು ಬಯಸುತ್ತಾ ಎಲ್ಲ ತೀರ್ಥಗಳಿಗೆ, ಕ್ಷೇತ್ರಗಳಿಗೆ ಹೋದನು. ಅವನ ಗಣಗಳು ಅವನನ್ನು ಹಿಂಬಾಲಿಸಿದವು. ಶಿವನನ್ನು ತನ್ನ ಮಹಾಯೋಗ-ಶಕ್ತಿಯಿಂದ ಕೈಯಲ್ಲಿ ವಿಶ್ವಕ್ಸೇನನ ಕಲೇವರವನ್ನು ಹಿಡಿದುಕೊಂಡು ನರ್ತನ ಮಾಡುತ್ತಾ ಯಾತ್ರೆಯನ್ನು ಮಾಡಿದನು.

ಶ್ರೀಹರಿಯು ಶಿವನ ನರ್ತನವನ್ನು ನೋಡಲು ಬಯಸಿ, ಬೇರೊಂದು ರೂಪವನ್ನು ತೆಗೆದುಕೊಂಡು ಶಿವನನ್ನು ಹಿಂಬಾಲಿಸಿ ಹೋದನು. ಶಿವನು ಶ್ರೀಹರಿಯನ್ನೇ ನೋಡುತ್ತ ಮುಗುಳ್ನಗುತ್ತ ತನ್ನ ಅನಂತ ಯೋಗಶಕ್ತಿಯನ್ನು ಉಪಯೋಗಿಸುತ್ತ ನರ್ತನ ಮಾಡಿದನು. ಶಿವನು ವಾರಾಣಸಿಯನ್ನು ತಲುಪಿದನು. ಅವನ ಹಿಂದೆಯೇ ಶ್ರೀಹರಿಯೂ ವಾರಾಣಸಿಯನ್ನು ತಲುಪಿದನು.

## ಬ್ರಹ್ಮಹತ್ಯಾ ವಿಮೋಚನೆ :

ಜಟಾಧಾರಿಯಾದ ಶಿವನು ವಾರಾಣಸಿಯನ್ನು ಪ್ರವೇಶಿಸುತ್ತಿದ್ದಂತೆಯೇ ಬ್ರಹ್ಮಹತ್ಯಾ-ಕನ್ಯೆಯು ಹಾ! ಹಾ! ಎಂದು ಕಿರಚುತ್ತ, ದುಃಖವನ್ನನುಭವಿಸುತ್ತ ಪಾತಾಳವನ್ನು ಸೇರಿದಳು. ಶಿವನು ಬ್ರಹ್ಮಕಪಾಲವನ್ನು ಗಣಗಳ ಸಮ್ಮುಖದಲ್ಲಿ ಇಟ್ಟನು. ವಿಶ್ವಕ್ಸೇನನ ಕಳೇಬರವನ್ನು, ''ಇದು ಜೀವವನ್ನು ಪಡೆಯಲಿ'' ಎಂದು ಹೇಳಿ ವಿಷ್ಣುವಿನ ಕೈಯಲ್ಲಿ ಕೊಟ್ಟನು. ಮತ್ತು ಹೀಗೆ ಹೇಳಿದನು.

## ಶಿವನ ಉಪದೇಶ :

''ನನ್ನ ಕಪಾಲಧಾರಿ ವೇಷವನ್ನು ಯಾರು ಸ್ಮರಿಸುತ್ತಾರೋ ಅವರ ಈ ಲೋಕದ, ಪರಲೋಕದ ಎಲ್ಲ ಪಾಪಗಳೂ ಕೂಡಲೇ ನಾಶನ್ನು ಹೊಂದುತ್ತವೆ.'' ''ಇಲ್ಲಿಯ ಕಪಾಲಮೋಚನತೀರ್ಥದಲ್ಲಿ ವಿಧಿಯಂತೆ ಸ್ನಾನಮಾಡಿ ಪಿತೃಗಳಿಗೆ, ದೇವತೆಗಳಿಗೆ ತರ್ಪಣವನ್ನು ಕೊಟ್ಟರೆ ಬ್ರಹ್ಮಹತ್ಯೆಯ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾರೆ.'' ''ಈ ಜಗತ್ತು ಅಶಾಶ್ವತ. ವಾರಾಣಸಿಗೆ ಹೋಗಿ, ಅಲ್ಲಿ ಪರಮಾತ್ಮನು ತತ್ವಜ್ಞಾನವನ್ನು ಕೊಡುವನು. ಮರಣಾನಂತರ ಮುಕ್ತಿಯನ್ನು ಕೊಡುವನು.''

ಶಿವನು ಹೀಗೆ ಹೇಳಿ ಶ್ರೀಹರಿಯನ್ನು ಆಲಿಂಗಿಸಿ, ತನ್ನ ಪ್ರಮಥಗಣಗಳೊಂದಿಗೆ ಅಂತರ್ಧಾನ ಹೊಂದಿದನು. ಶ್ರೀಹರಿಯೂ ಕೂಡ ಶಿವನಿಂದ ವಿಷ್ವಕ್ಸೇನನನ್ನು ಪಡೆದು ಸ್ವಸ್ಥಾನಕ್ಕೆ ಹಿಂತಿರುಗಿದನು.

## ಸೂತ ಉವಾಚ :

ಋಷಿಗಳೇ ಶಿವನ ಕಪಾಲಮೋಚನದ ಕಥೆಯನ್ನು ನಿಮಗೆ ಹೇಳಿದ್ದೇನೆ. ಇದು ಪುಣ್ಯಕರ. ಮಹಾಪಾಪಗಳನ್ನು ನಾಶಮಾಡುವ ಕಥೆ. ಶಿವನಿಗೆ ಪ್ರಿಯವಾದ ಕಥೆ. ಬ್ರಾಹ್ಮಣರ

ಸಮೀಪದಲ್ಲಿ ಈ ಕಥೆಯನ್ನು ಹೇಳಿದವರ ಕಾಯಕ, ವಾಚಿಕ, ಮಾನಸಿಕ ಪಾಪಗಳನ್ನು ದೂರವಾಗುತ್ತವೆ

* * *

## ಅಧ್ಯಾಯ-೮೫

**ವ್ಯಾಸ ಉವಾಚ :**

**ಸುರಾಪಾನಕ್ಕೆ ಪ್ರಾಯಶ್ಚಿತ್ತ :**

ಸುರಾಪಾನ ಮಾಡಿದ ಬ್ರಾಹ್ಮಣನು ಅಗ್ನಿಯಂತೆ ಕೆಂಪಾಗುವಂತೆ ಕಾಯಿಸಿದ ಸುರೆಯನ್ನು ಕುಡಿಯಬೇಕು. ಇದರಿಂದ ಅವನ ಶರೀರವು ಸುಟ್ಟು ಹೋಗುತ್ತದೆ. ಹೀಗೆ ಆದಾಗ ಸುರಾಪಾನದ ಪಾಪದಿಂದ ಬಿಡುಗಡೆಯಾಗುತ್ತಿದೆ. ಅಗ್ನಿಯಂತೆ ಕೆಂಪಾಗಿ ಕಾಯಿಸಿದ ಗೋಮೂತ್ರವನ್ನು ಅಥವಾ ಗೋಮಯ (ಸೆಗಣಿ) ದ ನೀರನ್ನು ಕುಡಿಯುವುದರಿಂದ, ಅಥವಾ ಹೀಗೆ ಕಾಯಿಸಿದ ಹಾಲನ್ನು, ತುಪ್ಪವನ್ನು ಅಥವಾ ನೀರನ್ನು ಕುಡಿಯುವುದರಿಂದ ಸುರಾಪಾನದ ಪಾಪದಿಂದ ಬಿಡುಗಡೆಯಾಗುತ್ತದೆ. ನೀರಿನಲ್ಲಿ ತೊಯ್ದಿರುವ ಬಟ್ಟೆಯನ್ನು ಧರಿಸಿ, ಜಲ ನಿವಾಸಿಯಾದ ಶ್ರೀಹರಿಯ ಧ್ಯಾನವನ್ನು ಮಾಡುತ್ತ ಬ್ರಹ್ಮಹತ್ಯೆಯ ಪಾಪದ ಪರಿಹಾರಕ್ಕಾಗಿ ಹೇಳಲಾಗಿರುವ ವ್ರತಗಳನ್ನು ಮಾಡಬೇಕು.

**ಬಂಗಾರದ ಕಳ್ಳತನಕ್ಕೆ ಪ್ರಾಯಶ್ಚಿತ್ತ :**

ಬಂಗಾರವನ್ನು ಕದ್ದ ಬ್ರಾಹ್ಮಣನು ರಾಜನ ಬಳಿ ಹೋಗಿ ತಾನು ಮಾಡಿದ ಕೆಲಸವನ್ನು ತಿಳಿಸಿ ''ನನ್ನನ್ನು ಶಿಕ್ಷಿಸು'' ಎಂದು ಕೇಳಬೇಕು. ರಾಜನು ಮೂಸಲದಿಂದ ಒಮ್ಮೆ ಅವನಿಗೆ ತಾನೇ ಹೊಡೆಯಬೇಕು. ಇದರಿಂದ ಬ್ರಾಹ್ಮಣನ ಸ್ವರ್ಣಾಪಹಾರ ಪಾಪವು ನಾಶವಾಗುತ್ತದೆ. ಬ್ರಾಹ್ಮಣನು ತಪಸ್ಸಿನಿಂದಲೂ ಈ ಪಾಪದಿಂದಲೂ ಬಿಡುಗಡೆಯನ್ನು ಸಾಧಿಸಬಹುದು. ಅಥವಾ ಮುಸಲ (ಒನಕೆ) ಖದಿರಮರದ ದಂಡ, ಚೂಪಾದ ತುದಿವುಳ್ಳ ಶಕ್ತಿ (ಈಟಿ), ಕಬ್ಬಿಣದ ಹಾರೆ - ಇವುಗಳಲ್ಲಿ ಯಾವುದಾದರೂ ಒಂದನ್ನು ತೆಗೆದುಕೊಂಡು, ಕೂದಲನ್ನು ಹರಡಿಕೊಂಡು, ಓಡುತ್ತಾ ರಾಜನ ಬಳಿ ಹೋಗಬೇಕು. ತಾನು ಮಾಡಿರುವ ಪಾಪಕೃತ್ಯವನ್ನು ಅವನಿಗೆ ತಿಳಿಸಿ 'ನನ್ನನ್ನು ಶಿಕ್ಷಿಸು' ಎಂದು ಕೇಳಬೇಕು. ರಾಜನು ಶಿಕ್ಷಿಸಿದರೂ ಅಥವಾ ಕ್ಷಮಿಸಿದರೂ ಪಾಪದಿಂದ ಬಿಡುಗಡೆಯಾಗುತ್ತದೆ. ರಾಜನು ಶಿಕ್ಷೆ ಮಾಡದಿದ್ದರೆ ಅವನಿಗೆ ಆ ಪಾಪವು ಸೇರುತ್ತದೆ. ಬಂಗಾರವನ್ನು ಕಳವು ಮಾಡಿದ ಪಾಪವನ್ನು ತಪಸ್ಸಿನಿಂದ

ಪರಿಹರಿಸಿಕೊಳ್ಳಲು ಬಯಸುವವನು ನಾರುಬಟ್ಟೆಯನ್ನು ಧರಿಸಿ ಕಾಡಿನಲ್ಲಿ ವಾಸಿಸುತ್ತಾ ಬ್ರಹ್ಮಹತ್ಯೆಯ ಪಾಪದ ಪರಿಹಾರಕ್ಕಾಗಿ ಹೇಳಿರುವ ವ್ರತಗಳನ್ನು ಮಾಡಬೇಕು. ಅಥವಾ ಅಶ್ವಮೇಧನ ಅವಭೃಥದಲ್ಲಿ ಸ್ನಾನಮಾಡಿದರೆ ಶುದ್ಧಿಯಾಗುತ್ತದೆ. ಅಥವಾ ತನ್ನ ತೂಕಕ್ಕೆ ಸಮಾನವಾದ ಬಂಗಾರವನ್ನು ದಾನ ಮಾಡಿದರೆ ಶುದ್ಧಿಯಾಗುತ್ತದೆ. ಅಥವಾ ಬ್ರಹ್ಮಚರ್ಯವನ್ನು ಪಾಲಿಸುತ್ತಾ ಒಂದುವರ್ಷ ಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು.

## ಗುರುಪತ್ನೀ ಸಮಾಗಮಕ್ಕೆ ಪ್ರಾಯಶ್ಚಿತ್ತ :

ಕಾಮಮೋಹಿತನಾಗಿ ಗುರುಪತ್ನೀ ಸಮಾಗಮವನ್ನು ಮಾಡಿದವನು ಪಾಪ ಪರಿಹಾರಕ್ಕಾಗಿ ಕಬ್ಬಿಣದ ಸ್ತ್ರೀಪ್ರತಿಮೆಯನ್ನು ಉಜ್ವಲವಾಗಿ ಕಾಯಿಸಿ ಆಲಿಂಗಿಸಿಕೊಳ್ಳಬೇಕು. ಅಥವಾ ತನ್ನ ಶಿಶ್ನ ಮತ್ತು ವೃಷಣಗಳನ್ನು ತಾನೇ ಕತ್ತರಿಸಿ ಕೈಯಲ್ಲಿ ಹಿಡಿದುಕೊಂಡು ದಕ್ಷಿಣಾಭಿಮುಖವಾಗಿ ತಾನು ಬಿದ್ದುಹೋಗುವವರೆಗೆ ಹೋಗುತ್ತಿರಬೇಕು. ಅಥವಾ ಬ್ರಹ್ಮಹತ್ಯೆಯ ಪ್ರಾಯಶ್ಚಿತ್ತ-ಕ್ಕಾಗಿ ಹೇಳಿರುವ ವ್ರತಗಳನ್ನು ಮಾಡಬೇಕು. ಅಥವಾ ಮುಳ್ಳುಗಳ ಕೊಂಬೆಯನ್ನು ತಬ್ಬಿಕೊಂಡು ಮಲಗಬೇಕು. ಒಂದುವರ್ಷ ಹೀಗೆ ಮಾಡಬೇಕು. ಅಥವಾ ನಾರುಬಟ್ಟೆಯನ್ನು ಉಟ್ಟು ಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು. ಅಥವಾ ಅಶ್ವಮೇಧದ ಅವಭೃಥದಲ್ಲಿ ಸ್ನಾನವನ್ನು ಮಾಡಬೇಕು. ಪ್ರತಿದಿನವೂ ಮೂರುಸಲ ಸ್ನಾನವನ್ನು ಮಾಡುತ್ತಾ ನಿಯಮದಿಂದ ಆಹಾರವನ್ನು ಸೇವಿಸುತ್ತಾ ಮೂರುವರ್ಷ ಬ್ರಹ್ಮಚರ್ಯವನ್ನು ಪಾಲಿಸಿದರೆ ಪಾಪವು ಪರಿಹಾರವಾಗುತ್ತದೆ. ನಾಲ್ಕು ಅಥವಾ ಐದು ಬಾರಿ ಚಾಂದ್ರಾಯಣ ವ್ರತವನ್ನು ಆಚರಿಸಿದರೆ ಪಾಪವು ಪರಿಹಾರವಾಗುತ್ತದೆ.

## ಪತಿತರ ಸಹವಾಸಕ್ಕೆ ಪ್ರಾಯಶ್ಚಿತ್ತ :

ಯಾವ ಪಾಪವನ್ನು ಮಾಡಿ ಪತಿತನಾಗಿರುತ್ತಾನೋ, ಆ ಪಾಪದ ಪರಿಹಾರಕ್ಕೆ ಹೇಳಲಾಗಿರುವ ವ್ರತವನ್ನೇ ಆ ಪತಿತನ ಸಹವಾಸವನ್ನು ಮಾಡಿದವನೂ ಮಾಡಬೇಕು. ಆರು ತಿಂಗಳು ಪತಿತನ ಸಹವಾಸವನ್ನು ಮಾಡಿದವನು ಒಂದು ವರ್ಷ ತಪ್ತಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು. ಅಥವಾ ಭೂಮಿಯಲ್ಲಿರುವ ಪುಣ್ಯತೀರ್ಥಗಳ ಯಾತ್ರೆಯನ್ನು ಮಾಡುವುದ-ರಿಂದ ಪಾಪದ ಪರಿಹಾರವಾಗುತ್ತದೆ.

## ಉಪಸಂಹಾರ :

ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ, ಗುರುಪತ್ನೀ ಸಂಗಮ ಇಂತಹ ಪತಿತರ ಸಹವಾಸ - ಈ ಪಾಪಗಳನ್ನು ಮಾಡಿದವನು ತೀರ್ಥ ಪ್ರದೇಶದಲ್ಲಿ, ಏಕಾಗ್ರತೆಯಿಂದ ಉಪವಾಸವನ್ನು ಮಾಡಬೇಕು. ಅಥವಾ ಶಿವನನ್ನು ಧ್ಯಾನಿಸಿ ಅಗ್ನಿಪ್ರವೇಶವನ್ನು ಮಾಡಬೇಕು. ಇದಕ್ಕಿಂತ ಬೇರೆ ಪ್ರಾಯಶ್ಚಿತ್ತವನ್ನು ಜ್ಞಾನಿಗಳು ಹೇಳಿಲ್ಲ.

* * *

## ಅಧ್ಯಾಯ-೮೬

### ್ಯಾಸ ಉವಾಚ :

### ಿರವನಿತಾಭೋಗಕ್ಕೆ ಪ್ರಾಯಶ್ಚಿತ್ತ :

ಮಗಳನ್ನು, ತಂಗಿಯನ್ನು, ಸೊಸೆಯನ್ನು ಭೋಗಿಸಿದವನು ಪ್ರಜ್ಞಾಪೂರ್ವಕವಾಗಿ ುರಿಯುವ ಅಗ್ನಿಯನ್ನು ಪ್ರವೇಶಿಸಬೇಕು. ತಾಯಿಯ ತಂಗಿ, ಸೋದರಮಾವನ ಹೆಂಡತಿ, ಂದೆಯ ತಂಗಿ, ತಂಗಿಯ ಮಗಳು -ಇವರನ್ನು ಭೋಗಿಸಿದವನು ಕೃಚ್ಛ್ರ ಮತ್ತು ಅತಿಕೃಚ್ಛ್ರ ಂಬ ವ್ರತಗಳನ್ನು ಮಾಡಬೇಕು. ಜೊತೆಗೆ ಚಾಂದ್ರಾಯಣವ್ರತವನ್ನೂ ಆಚರಿಸಬೇಕು. ಈ ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳುವಾಗ ಜಗಜ್ಜನ್ಮಾದಿಕಾರಣನಾದ, ಆದಿ-ಅಂತಗಳಿಲ್ಲದ ್ರೀಹರಿಯನ್ನು ಚಿಂತಿಸುತ್ತಿರಬೇಕು. ಸೋದರನ ಹೆಂಡತಿಯ ಸಮಾಗಮವನ್ನು ಾಡಿದವನು ನಾಲ್ಕು ಅಥವಾ ಐದು ಚಾಂದ್ರಾಯಣ ವ್ರತವನ್ನು ಮಾಡಬೇಕು. ೋದರತ್ತೆಯ ಮಗಳು, ತಾಯಿಯ ತಂಗಿಯ ಮಗಳು, ಸೋದರಮಾವನ ಮಗಳು - ಇವರುಗಳ ಸಮಾಗಮವನ್ನು ಮಾಡಿದವನು ಚಾಂದ್ರಾಯಣವನ್ನು ಮಾಡಬೇಕು.

ಸ್ನೇಹಿತನ ಹೆಂಡತಿಯ, ಹೆಂಡತಿಯ ತಂಗಿಯ ಸಮಾಗಮವನ್ನು ಮಾಡಿದವನು ಒಂದು ಹಗಲು-ರಾತ್ರಿ ಉಪವಾಸವನ್ನು ಮಾಡಿ ಅನಂತರ ಕೃಚ್ಛ್ರ ಎಂಬ ವ್ರತವನ್ನು ಆಚರಿಸಬೇಕು.

ರಜಸ್ವಲೆಯಾದ ಸ್ತ್ರೀಭೋಗವನ್ನು ಮಾಡಿದವನು ಮೂರು ದಿನ ಉಪವಾಸ ಮಾಡಬೇಕು. ಚಂಡಾಲ ಸ್ತ್ರೀಭೋಗವನ್ನು ಮಾಡಿದವನು ತಪ್ತಕೃಚ್ಛ್ರ ಎಂಬ ವ್ರತವನ್ನು ಮೂರು ಸಲ ಮಾಡಬೇಕು. ಅನಂತರ ಸಾಂತಪನ ಎಂಬ ಕಠಿಣವಾದ ವ್ರತವನ್ನು ಮಾಡಬೇಕು. ಬೇರೆ ಪ್ರಾಯಶ್ಚಿತ್ತ ಇಲ್ಲ. ತಾಯಿಯ ಗೋತ್ರದ ಸ್ತ್ರೀಯನ್ನು, ತನ್ನ ಪ್ರವರದವಳೇ ಆದ ಸ್ತ್ರೀಯನ್ನು ಭೋಗಿಸಿದ ಬ್ರಾಹ್ಮಣನು ಚಾಂದ್ರಾಯಣ ವ್ರತವನ್ನು ಮಾಡಬೇಕು. ಬ್ರಾಹ್ಮಣ ಪುರುಷನು ಬ್ರಾಹ್ಮಣ ಪರಸ್ತ್ರೀಯ ಭೋಗವನ್ನು ಮಾಡಿದರೆ ಕೃಚ್ಛ್ರ ಎಂಬ ವ್ರತವನ್ನು ಒಂದು ಸಲ ಮಾಡಬೇಕು. ಋತುಮತಿಯಾಗದ ಹುಡುಗಿಯನ್ನು ಭೋಗಿಸಿದವನು ಚಾಂದ್ರಾಯಣ ವ್ರತವನ್ನು ಆಚರಿಸಬೇಕು. ರಜಸ್ವಲೆಯಾದ ಅಮಾನುಷಸ್ತ್ರೀಯರ ಭೋಗವನ್ನು ಮಾಡಿದವನು, ನೀರಿನಲ್ಲಿ ರೇತಸ್ಸನ್ನು ಬೀಳಿಸಿದವನು ಸಾಂತಪನ ಎಂಬ ಕಠಿಣವ್ರತವನ್ನು ಮಾಡಬೇಕು. ವೇಶ್ಯೆಯ ಸಂಗವನ್ನು ಮಾಡಿದ ಪುರುಷನು ಪ್ರಾಜಾಪತ್ಯವ್ರತವನ್ನು ಮಾಡಬೇಕು. ಪತಿತಸ್ತ್ರೀಸಂಗವನ್ನು ಮಾಡಿದವನು ಕೃಚ್ಛ್ರ ಎಂಬ ವ್ರತವನ್ನು ಮೂರುಸಲ ಮಾಡಬೇಕು. ಪುಲ್ಕಸ ಜಾತಿಯ ಸ್ತ್ರೀಸಂಗವನ್ನು ಮಾಡಿದವನು ಕೃಚ್ಛ್ರ ಮತ್ತು ಚಾಂದ್ರಾಯಣಗಳನ್ನು ಆಚರಿಸಬೇಕು. ನಟಿ, ನರ್ತಕಿ, ಅಗಸರವಳು, ಬಿದಿರಿನ ಕೆಲಸವನ್ನು ಮಾಡುವವಳು, ಚರ್ಮದ ಕೆಲಸವನ್ನು ಮಾಡುವವಳು -ಇವರನ್ನು ಭೋಗಿಸಿದವನು ಚಾಂದ್ರಾಯಣವನ್ನು ಮಾಡಬೇಕು.

## ಬ್ರಹ್ಮಚರ್ಯ ವ್ರತಕ್ಕೆ ಭಂಗವುಂಟಾದರೆ ಪ್ರಾಯಶ್ಚಿತ್ತ :

ಬ್ರಹ್ಮಚಾರಿಯು ಏಳು ದಿನ ಭಿಕ್ಷೆಯನ್ನು ಬೇಡದಿದ್ದರೆ, ಅಗ್ನಿಯನ್ನು ಪೂಜಿಸದಿದ್ದರೆ, ವೀರ್ಯಸ್ಖಲನವು ಅವನಿಗೆ ಸಂಭವಿಸಿದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಓಂಕಾರಸಹಿತವಾಗಿ ವ್ಯಾಹೃತಿಯನ್ನು ಜಪಿಸಬೇಕು. ಭಿಕ್ಷಾನ್ನವನ್ನು ರಾತ್ರಿ ಊಟ ಮಾಡಬೇಕು. ನದೀತೀರಗಳಲ್ಲಿ, ಪುಣ್ಯಸ್ಥಳಗಳಲ್ಲಿ ಗಾಯತ್ರೀ ಮಂತ್ರವನ್ನು ಜಪಿಸಬೇಕು. ಕೋಪವನ್ನು ಬಿಟ್ಟಿರಬೇಕು. ಹೀಗೆ ಒಂದು ವರ್ಷ ಮಾಡಿದರೆ ಶುದ್ಧಿಯಾಗುತ್ತದೆ.

## ಬೇರೆ ಬೇರೆ ಹತ್ಯೆಗಳಿಗೆ ಪ್ರಾಯಶ್ಚಿತ್ತ :

ಬ್ರಾಹ್ಮಣನು ಕ್ಷತ್ರಿಯನ ಹತ್ಯೆಯನ್ನು ಮಾಡಿದರೆ ಬ್ರಹ್ಮಹತ್ಯೆಯ ಪಾಪಕ್ಕೆ ಮಾಡಬೇಕಾದ ಪ್ರಾಯಶ್ಚಿತ್ತವನ್ನೇ ಮಾಡಿಕೊಳ್ಳಬೇಕು. ಜೊತೆಗೆ ಆರು ತಿಂಗಳು ಫಲಾಪೇಕ್ಷೆಯಿಲ್ಲದೆ ಐದುನೂರು ಗೋವುಗಳ ದಾನವನ್ನು ಮಾಡಬೇಕು. ಅಥವಾ ಒಂದು ವರ್ಷ ಕಾಡಿನಲ್ಲಿ ವಾಸಿಸುತ್ತಾ ಪ್ರಾಜಾಪತ್ಯ ಸಾಂತಪನ ಮತ್ತು ತಪ್ತಕೃಚ್ಛ್ರಗಳನ್ನು ಆಚರಿಸಬೇಕು. ಪ್ರಮಾದದಿಂದ ಅಥವಾ ಉದ್ದೇಶಪೂರ್ವಕವಾಗಿ ವೈಶ್ಯನವಧೆಯನ್ನು ಮಾಡಿದ ಬ್ರಾಹ್ಮಣನು ಮೇಲೆ ಹೇಳಿದ ವ್ರತಗಳನ್ನು ಮೂರುವರ್ಷ ಮಾಡಬೇಕು. ಒಂದು ಸಾವಿರದ ಇನ್ನೂರೈವತ್ತು ಗೋವುಗಳನ್ನು ದಾನಮಾಡಬೇಕು. ಪ್ರಮಾದದಿಂದ ಶೂದ್ರವನ್ನು ಕೊಂದವನು ಒಂದು ವರ್ಷ ಕೃಚ್ಛ್ರ, ಅತಿಕೃಚ್ಛ್ರ ಮತ್ತು ಚಾಂದ್ರಾಯಣ ವ್ರತಗಳನ್ನು ಆಚರಿಸಬೇಕು. ಒಂದುಸಾವಿರದ ನೂರ ಇಪ್ಪತ್ತೈದು ಗೋವುಗಳ ದಾನವನ್ನು ಮಾಡಬೇಕು. ಕ್ಷತ್ರಿಯ ಹತ್ಯೆಯನ್ನು ಮಾಡಿದ್ದರೆ ಎಂಟುವರ್ಷ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ವೈಶ್ಯ-ಶೂದ್ರರ ಹತ್ಯೆಯನ್ನು ಮಾಡಿದ್ದರೆ ಮೂರು ವರ್ಷ. ಬ್ರಾಹ್ಮಣಸ್ತ್ರೀಯನ್ನು ಕೊಂದ ಬ್ರಾಹ್ಮಣನು ಎಂಟು ವರ್ಷ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಕ್ಷತ್ರಿಯ ಸ್ತ್ರೀಯನ್ನು ಕೊಂದವನು ಆರುವರ್ಷ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ವೈಶ್ಯಸ್ತ್ರೀಯನ್ನು ಕೊಂದಿದ್ದರೆ ಮೂರುವರ್ಷ. ಶೂದ್ರಳನ್ನು ಕೊಂದಿದ್ದರೆ ಒಂದು ವರ್ಷ. ವೈಶ್ಯ ಸ್ತ್ರೀಯನ್ನು ಕೊಂದವನು ಯಥಾಶಕ್ತಿ-ದಾನವನ್ನೂ ಮಾಡಬೇಕು.

ಅಂತ್ಯಜರ ವಧೆಯನ್ನು ಮಾಡಿದವರು ಚಾಂದ್ರಾಯಣವ್ರತವನ್ನು ಆಚರಿಸಬೇಕು. ಅಥವಾ ಪರಾಕ ವ್ರತವನ್ನು ಮಾಡಬೇಕು.

## ಪ್ರಾಣಿಹತ್ಯೆಗೆ ಪ್ರಾಯಶ್ಚಿತ್ತ :

ಕಪ್ಪೆ, ಮುಂಗುಸಿ, ಕಾಗೆ, ಬೆಕ್ಕು, ಕತ್ತೆ, ಇಲಿ, ನಾಯಿಗಳನ್ನು ಕೊಂದ ಬ್ರಾಹ್ಮಣನು ಮಹಾವ್ರತ ಎಂಬ ವ್ರತದ ಹದಿನಾರನೇ ಒಂದರಷ್ಟು ವ್ರತವನ್ನು ಪ್ರಾಯಶ್ಚಿತ್ತಕ್ಕಾಗಿ ಆಚರಿಸಬೇಕು. ನಾಯಿಯನ್ನು ಕೊಂದವನು ಮೂರುದಿನ ರಾತ್ರಿಹೊತ್ತು ಹಾಲನ್ನು ಸೇವಿಸಬೇಕು. ಬೇರೆ ಯಾವ ಆಹಾರವನ್ನೂ ತಿನ್ನಬಾರದು. ಬೆಕ್ಕನ್ನು ಅಥವಾ

ಮುಂಗುಸಿಯನ್ನು ಕೊಂದವನು ಎಂಟು ಮೈಲಿ ನಡೆಯಬೇಕು. ಕುದುರೆಯನ್ನು ಕೊಂದ ದ್ವಿಜನು ಹನ್ನೆರಡು ದಿನ ಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು. ಸರ್ಪವನ್ನು ಕೊಂದವನು ಕಬ್ಬಿಣದ ಸರ್ಪಪ್ರತಿಮೆಯನ್ನು ದಾನ ಮಾಡಬೇಕು. ನಪುಂಸಕನನ್ನು ಕೊಂದವನು ಹುಲ್ಲಿನ ಹೊರೆಗಳನ್ನು ಸ್ವಲ್ಪ ಸೀಸವನ್ನು ದಾನಮಾಡಬೇಕು. ಹಂದಿಯನ್ನು ಕೊಂದವನು ತುಪ್ಪದ ಕುಂಭವನ್ನು ದಾನಮಾಡಬೇಕು. ತಿತ್ತಿರಿಹಕ್ಕಿಯನ್ನು ಕೊಂದವನು ದೊಡ್ಡಪ್ರಮಾಣದ ಎಳ್ಳನ್ನು ದಾನ ಮಾಡಬೇಕು. ಹಸುವಿನ ಶಿಶುವನ್ನು, ಎರಡು ವರ್ಷದ ಕರುವನ್ನು, ಮೂರು ವರ್ಷದ ಕ್ರೌಂಚವನ್ನು, ಹಂಸ, ಕೊಕ್ಕರೆ, ಬಕ, ನವಿಲು, ಕಪಿ, ಶ್ಯೇನಭಾಸ ಕೊಂದವರು ಬ್ರಾಹ್ಮಣರಿಗೆ ಗೋವುಗಳನ್ನು ದಾನಮಾಡಬೇಕು. ಮಾಂಸವನ್ನು ತಿನ್ನುವ ಪ್ರಾಣಿಗಳನ್ನು ಕೊಂದವರು ಗೋದಾನವನ್ನು ಮಾಡಬೇಕು.

ಮಾಂಸವನ್ನು ತಿನ್ನದ ಎಳೆಯ ಹಸುವನ್ನು, ಒಂಟೆಯನ್ನು ಮೂಳೆಗಳಿರುವ ಪ್ರಾಣಿಯನ್ನು ಕೊಂದವರು ಬ್ರಾಹ್ಮಣರಿಗೆ ಬಂಗಾರದ ಉದ್ದಿನ ಕಾಳುಗಳ ದಾನವನ್ನು ಮಾಡಬೇಕು. ಮೂಳೆಗಳಿಲ್ಲದ ಪ್ರಾಣಿಗಳ ಸಂಹಾರವನ್ನು ಮಾಡಿದವನು ಪ್ರಾಣಾಯಾಮದಿಂದ ಶುದ್ಧನಾಗುತ್ತಾನೆ.

### ಮರಗಳನ್ನು ನಾಶಮಾಡಿದರೆ ಪ್ರಾಯಶ್ಚಿತ್ತ :

ಫಲಗಳನ್ನು ಕೊಡುವ ಮರಗಳನ್ನು ಕಡಿದವರು ನೂರು ಋಕ್‌ಗಳನ್ನು ಜಪಿಸಬೇಕು. ಪೊದೆ, ಹೂಬಿಟ್ಟಿರುವ ಬಳ್ಳಿಗಳ ನಾಶಮಾಡಿದರೆ ತುಪ್ಪವನ್ನು ತಿಂದು ಶುದ್ಧಿ ಮಾಡಿಕೊಳ್ಳಬೇಕು.

### ಹಕ್ಕಿಗಳ, ಹುಳಗಳ ಹತ್ಯೆಮಾಡಿದರೆ ಪ್ರಾಯಶ್ಚಿತ್ತ :

ಹಕ್ಕಿಗಳನ್ನು, ಬೆವರಿನಲ್ಲಿ ಹುಟ್ಟುವ ಹುಳಗಳನ್ನು ಫಲ, ಪುಷ್ಪಗಳಲ್ಲಿ ಹುಟ್ಟುವ ಹುಳಗಳನ್ನು ಕೊಂದವರಿಗೆ ತುಪ್ಪ ಕುಡಿಯುವುದೇ ಪ್ರಾಯಶ್ಚಿತ್ತ.

### ಆನೆ-ಹಸುಗಳ ವಧೆಗೆ ಪ್ರಾಯಶ್ಚಿತ್ತ :

ಆನೆಗಳನ್ನು ಕೊಂದವರು ತಪ್ತಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು. ಹಸುವನ್ನು ಕೊಂದವರು ಪರಾಕ ಎಂಬ ವ್ರತವನ್ನು ಮಾಡಬೇಕು. ಉದ್ದೇಶಪೂರ್ವಕವಾಗಿ ಹಸುವನ್ನು ಕೊಂದರೆ ಪ್ರಾಯಶ್ಚಿತ್ತವೇ ಇಲ್ಲ.

* * *

## ಅಧ್ಯಾಯ-೮೭

ವ್ಯಾಸ ಉವಾಚ :

ಮನುಷ್ಯರನ್ನು, ಸ್ತ್ರೀಯರನ್ನು, ಮನೆಯನ್ನು, ಭಾವಿಯ ನೀರನ್ನು ಕದ್ದವರು ಶುದ್ಧಿಗಾಗಿ ಚಾಂದ್ರಾಯಣವ್ರತವನ್ನು ಆಚರಿಸಬೇಕು. ಬೇರೆಯವರ ಮನೆಯಿಂದ ಸ್ವಲ್ಪ ಬೆಲೆಯ ಪದಾರ್ಥಗಳನ್ನು ಕದ್ದವರು ಅವುಗಳನ್ನು ಹಿಂತಿರುಗಿಸಿ ಶುದ್ಧಿಗಾಗಿ ಸಾಂತಪನ ಮತ್ತು ಕೃಚ್ಛ್ರ ಎಂಬ ವ್ರತಗಳನ್ನು ಮಾಡಬೇಕು.

ಬ್ರಾಹ್ಮಣನು ತನ್ನ ಜಾತಿಯವರ ಮನೆಯಿಂದಲೇ ಧಾನ್ಯ, ಧನಗಳನ್ನು ಅಪಹರಿಸಿದರೆ ಅರ್ಧಕೃಚ್ಛ್ರವ್ರತವನ್ನು ಮಾಡಬೇಕು. ಭಕ್ಷ್ಯ, ಭೋಜ್ಯ, ಯಾನ, ಆಸನ, ಹೂ, ಬೇರು, ಗಡ್ಡೆ, ಫಲ - ಇವುಗಳ ಅಪಹರಿಸಿದವನು ಪಂಚಗವ್ಯವನ್ನು ಕುಡಿಯಬೇಕು. ಹುಲ್ಲು, ಒಣಗಿದ ಮರ, ಮರ, ಒಣಗಿದ ಆಹಾರ, ಬೆಲ್ಲ ಬಟ್ಟೆ, ಚರ್ಮ, ಮಾಂಸ - ಇವುಗಳನ್ನು ಅಪಹರಿಸಿ-ದವನು ಮೂರು ರಾತ್ರಿ ಉಪವಾಸ ಮಾಡಬೇಕು.

ರತ್ನ, ಮುತ್ತು, ಹವಳ, ತಾಮ್ರ ಬೆಳ್ಳಿ, ಆಯಸ್ಕಾಂತ, ಶಿಲೆಗಳು - ಇವುಗಳನ್ನು ಕದ್ದರೆ ಹನ್ನೆರಡು ದಿನ ಹೊಲದಲ್ಲಿ ಬಿದ್ದಿದ್ದ ಧಾನ್ಯಕಣಗಳನ್ನು ಆರಿಸಿ ತಿನ್ನುವ ವ್ರತವನ್ನು ಮಾಡಬೇಕು.

ಹತ್ತಿಯನ್ನು ಅಪಹರಿಸಿದರೆ, ಒಂದು ಗೊರಸಿನ, ಎರಡು ಗೊರಸಿನ ಪ್ರಾಣಿಗಳನ್ನು, ಹೂವು, ಗಂಧ, ಔಷಧಿಗಳನ್ನು ಅಪಹರಿಸಿದರೆ ಮೂರು ದಿನ ಕೇವಲ ಹಾಲನ್ನು ಕುಡಿಯುವ ವ್ರತವನ್ನು ಮಾಡಬೇಕು. ನರಮಾಂಸವನ್ನು ತಿಂದರೆ ಚಾಂದ್ರಾಯಣವ್ರತವನ್ನು ಆಚರಿಸ-ಬೇಕು. ಕಾಗೆಯ, ನಾಯಿಯ, ಆನೆಯ ಮಾಂಸವನ್ನು ತಿಂದರೂ ಚಾಂದ್ರಾಯಣವ್ರತವನ್ನು ಮಾಡಬೇಕು. ಹಂದಿ, ಕೋಳಿ ಮಾಂಸವನ್ನು ತಿನ್ನುವ ಪ್ರಾಣಿಗಳು - ಇವುಗಳ ಮಾಂಸವನ್ನು, ಮಲವನ್ನು ತಿಂದರೆ, ಮೂತ್ರವನ್ನು ಕುಡಿದರೆ ತಪ್ತಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು. ಹಸು, ನರಿ, ಕಪಿ ಇವುಗಳ ಮಾಂಸವನ್ನು ತಿಂದರೆ ಅದೇ ವ್ರತವನ್ನು ಮಾಡಬೇಕು. ಶಿಶುಮಾರ (ಒಂದು ಬಗೆಯ ಮೀನು), ಚಾಷ ಮತ್ತು ಮೀನು - ಇವುಗಳ ಮಾಂಸವನ್ನು ತಿಂದವರು ಹನ್ನೆರಡು ದಿನ ಉಪವಾಸ ಮಾಡಿ ಕೂಷ್ಮಾಂಡಹೋಮವನ್ನು ಮಾಡಬೇಕು.

ಮುಂಗುಸಿ, ಗೂಬೆ, ಬೆಕ್ಕು - ಇವುಗಳ ಮಾಂಸವನ್ನು ತಿಂದವರು ಸಾಂತಪನ ಎಂಬ ವ್ರತವನ್ನು ಮಾಡಬೇಕು. ತೋಳ, ಒಂಟೆ, ಕತ್ತೆ - ಇವುಗಳ ಮಾಂಸವನ್ನು ತಿಂದವರು ತಪ್ತಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು. ಕೂಷ್ಮಾಂಡಹೋಮವನ್ನೂ ಮಾಡಬೇಕು. ಬಕ, ಬಲಾಕ, ಹಂಸ, ಕಾರಂಡವ, ಚಕ್ರವಾಕ - ಈ ಹಕ್ಕಿಗಳ ಮಾಂಸವನ್ನು ತಿಂದವರು ಹನ್ನೆರಡು ದಿನ ಉಪವಾಸ ಮಾಡಬೇಕು. ಕಪೋತ, ಟಿಟ್ಟಿಭ, ಗಿಣಿ, ಸಾರಸ, ಗೂಬೆ, ಹಂಸ - ಈ

ಹಕ್ಕಿಗಳ ಮಾಂಸವನ್ನು ತಿಂದವರು ಹನ್ನೆರಡು ದಿನ ಉಪವಾಸ ಮಾಡಬೇಕು. ಕಡ್ಡಿತಿನ್ನುವ ಕಟಾಹಾರ ಎಂಬ ಹಕ್ಕಿಯ ಮಾಂಸವನ್ನು ತಿಂದವರೂ ಹನ್ನೆರಡು ದಿನ ಉಪವಾಸ ಮಾಡಬೇಕು. ಕೋಗಿಲೆ, ಮೀನುತಿನ್ನುವ ಹಕ್ಕಿಗಳು, ಕಪ್ಪೆ, ಹಾವು -ಇವುಗಳ ಮಾಂಸವನ್ನು ತಿಂದವರು ಒಂದು ತಿಂಗಳು ಗೋಮೂತ್ರ ಮತ್ತು ಯಾವ ಎಂಬ ಧಾನ್ಯದ ಪದಾರ್ಥಗಳನ್ನು ಮಾತ್ರ ತಿನ್ನುವ ವ್ರತವನ್ನು ಮಾಡಬೇಕು. ಜಲಚರ ಪ್ರಾಣಿಗಳನ್ನು, ನೀರಿನಲ್ಲಿ ಹುಟ್ಟುವ ಪ್ರಾಣಿಗಳನ್ನು ಕೆಂಪು ಕಾಲಿನ ಪ್ರಾಣಿಗಳನ್ನೂ ತಿಂದವರು ಏಳು ದಿನ ಮೇಲೆ ಹೇಳಿದ ವ್ರತವನ್ನು ಮಾಡಬೇಕು. ನಾಯಿಯ ಮಾಂಸವನ್ನು, ಒಣಗಿದ ಮಾಂಸವನ್ನು ತಿಂದವರೂ ಈ ವ್ರತವನ್ನು ಮಾಡಬೇಕು.

## ಅಭೋಜ್ಯ ಸಸ್ಯಗಳನ್ನು ತಿಂದರೆ ಪ್ರಾಯಶ್ಚಿತ್ತ :

ಬದನೆಕಾಯಿ, ನೆಲಹುಲ್ಲು, ನುಗ್ಗೆ, ಕಟಕ, ಚಟಕ, ಖಡ್ಗ, ಕುಂಭೀಕ ಈ ಸಸ್ಯವರ್ಗದ ಪದಾರ್ಥಗಳನ್ನು ತಿಂದರೆ ಪ್ರಾಜಾಪತ್ಯ ಎಂಬ ಪ್ರಾಯಶ್ಚಿತ್ತವನ್ನು ಮಾಡಬೇಕು. ಈರುಳ್ಳಿ, ಬೆಳ್ಳುಳ್ಳಿಗಳನ್ನು ತಿಂದವರು ಚಾಂದ್ರಾಯಣವ್ರತವನ್ನು ಆಚರಿಸಬೇಕು. ನಾಲೀಕ ಮತ್ತು ತಂಡುಲೀಯ ಎಂಬ ಧಾನ್ಯವನ್ನು ತಿಂದರೆ ಪ್ರಾಜಾಪತ್ಯ ಎಂಬ ವ್ರತವನ್ನು ಮಾಡಬೇಕು. ಅಶ್ಮಾಂತಕ, ಪೋತ -ಇವುಗಳನ್ನು ತಿಂದರೆ ತಪ್ತಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು. ಕುಸುಂಭವನ್ನು ತಿಂದರೆ ಪ್ರಾಜಾಪತ್ಯವನ್ನು ಮಾಡಬೇಕು. ಅಲಾಬು, ಕಿಂಶುಕಗಳನ್ನು ತಿಂದರೂ ಈ ವ್ರತವನ್ನು ಮಾಡಬೇಕು. ಇವುಗಳಿಂದ ಮಾಡಿದ ಪಾನೀಯವನ್ನು ಕುಡಿದರೆ ಏಳು ದಿನ ಗೋಮೂತ್ರ ಮತ್ತು ಯವ ಎಂಬ ಧಾನ್ಯದಿಂದ ಮಾಡಿದ ಪದಾರ್ಥಗಳನ್ನು ಮಾತ್ರ ತಿನ್ನಬೇಕು. ಅತ್ತಿಹಣ್ಣನ್ನು ಬಯಸಿ ತಿಂದವನು ತಪ್ತಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು.

ಮೃತಾಶೌಚ, ಜಾತಾಶೌಚಗಳು ಇದ್ದವರ ಮನೆಯಲ್ಲಿ ಊಟ ಮಾಡಿದವರು, ಸತ್ತವರ ಮೊದಲಶ್ರಾದ್ಧದಲ್ಲಿ ಊಟ ಮಾಡಿದವರು ಚಾಂದ್ರಾಯಣವ್ರತವನ್ನು ಮಾಡಬೇಕು. ಯಾವ ಗೃಹಸ್ಥಾಶ್ರಮಿಯು ತನ್ನ ಅಗ್ನಿಯಲ್ಲಿ ಪ್ರತಿದಿನ ಹೋಮ ಮಾಡುತ್ತಾನೋ, ಆದರೆ ಬ್ರಾಹ್ಮಣಭೋಜನವನ್ನು ಮಾಡಿಸುವುದಿಲ್ಲವೋ ಅಂತಹ ಗೃಹಸ್ಥಾಶ್ರಮಿಯ ಅನ್ನವನ್ನು ಭೋಜನಮಾಡುವವನು ಚಾಂದ್ರಾಯಣ ವ್ರತವನ್ನು ಆಚರಿಸಬೇಕು. ಯಾವುದೇ ವಿಧವಾದ ಅನರ್ಹವಾದ ಆಹಾರವನ್ನು ತಿಂದಿದ್ದರೂ ತಪ್ತಕೃಚ್ಛ್ರ ಎಂಬ ವ್ರತವನ್ನು ಮಾಡಿದರೆ ಶುದ್ಧಿಯಾಗುತ್ತದೆ. ಬ್ರಾಹ್ಮಣನು ಚಂಡಾಲನ ಅನ್ನವನ್ನು ತಿಂದರೆ ಚಾಂದ್ರಾಯಣ ವ್ರತವನ್ನು ಮಾಡಬೇಕು. ಉದ್ದೇಶಪೂರ್ವಕವಾಗಿ ಚಂಡಾಲನ ಅನ್ನವನ್ನು ತಿಂದವರು ಒಂದು ವರ್ಷ ಕೃಚ್ಛ್ರ ಎಂಬ ವ್ರತವನ್ನು ಮಾಡಿ, ಉಪನಯನವನ್ನು ಮಾಡಿಕೊಳ್ಳಬೇಕು.

## ಮದ್ಯಪಾನ ಮೊದಲಾದ ಪಾಪಗಳಿಗೆ ಪ್ರಾಯಶ್ಚಿತ್ತ :

ಮದ್ಯಪಾನ ಮಾಡಿದರೆ ಚಾಂದ್ರಾಯಣ ವ್ರತವನ್ನು ಆಚರಿಸಬೇಕು. ಮಲ-ಮೂತ್ರ-ರೇತಸ್‌ಗಳ ಪ್ರಾಶನವು ಸಂಭವಿಸಿದರೆ ಪ್ರಾಜಾಪತ್ಯವ್ರತವನ್ನು ಆಚರಿಸಬೇಕು. ಅವಧಿಯನ್ನು

ಹೇಳಿರದ ಪ್ರಾಯಶ್ಚಿತ್ತವನ್ನು ಒಂದು ದಿನ ಮಾಡಿದರೆ ಸಾಕು. ಹಂದಿ, ಕತ್ತೆ, ಒಂಟೆ, ನರಿ, ಕಪಿ, ಕಾಗೆ -ಇವುಗಳ ಮಲ-ಮೂತ್ರಗಳ ಪ್ರಾಶನವು ಸಂಭವಿಸಿದರೆ ಚಾಂದ್ರಾಯಣ ವ್ರತವನ್ನು ಆಚರಿಸಬೇಕು. ಮತ್ತೆ ಉಪನಯನಸಂಸ್ಕಾರವನ್ನು ಮಾಡಿಕೊಳ್ಳಬೇಕು.

ಮಾಂಸಭಕ್ಷಕ ಪ್ರಾಣಿಗಳ, ಪಕ್ಷಿಗಳ ಮಲ-ಮೂತ್ರಗಳನ್ನು ತಿಂದರೆ-ಕುಡಿದರೆ ಮಹಾಸಾಂತಪನ ಎಂಬ ವ್ರತವನ್ನು ಮಾಡಬೇಕು. ಭಾಸ, ಕಪ್ಪೆ, ಕುರರ -ಈ ಹಕ್ಕಿಗಳ ಮಲ-ಮೂತ್ರಗಳ ಪ್ರಾಶನವಾದರೆ ಕೃಚ್ಛ್ರವನ್ನು ಆಚರಿಸಬೇಕು.

ಬ್ರಾಹ್ಮಣರು ಊಟ ಮಾಡಿ ಉಳಿದ ಪದಾರ್ಥವನ್ನು ತಿಂದರೆ ಪ್ರಾಜಾಪತ್ಯ ವ್ರತವನ್ನು ಮಾಡಬೇಕು. ಕ್ಷತ್ರಿಯನ ಉಚ್ಛಿಷ್ಟವನ್ನು ತಿಂದರೆ ತಪ್ತಕೃಚ್ಛವನ್ನೂ, ವೈಶ್ಯನ ಉಚ್ಛಿಷ್ಟವನ್ನು ತಿಂದರೆ ಅತಿಕೃಚ್ಛವನ್ನೂ, ಶೂದ್ರನ ಉಚ್ಛಿಷ್ಟವನ್ನು ತಿಂದರೆ ಚಾಂದ್ರಾಯಣವ್ರತವನ್ನು ಆಚರಿಸಬೇಕು. ಸುರೆಯ ಪಾತ್ರೆಯಲ್ಲಿರುವ ನೀರನ್ನು ಕುಡಿದರೆ ಚಾಂದ್ರಾಯಣವನ್ನು ಆಚರಿಸಬೇಕು. ಮೂತ್ರ-ಮಲಗಳ ಸಂಪರ್ಕದಿಂದ ಕೆಟ್ಟುಹೋದ ನೀರನ್ನು ಕುಡಿದರೆ ಕೃಚ್ಛ್ರಸಾಂತಪನ ಎಂಬ ವ್ರತವನ್ನು ಆಚರಿಸಬೇಕು. ಚಂಡಾಲನ ಭಾವಿಯಲ್ಲಿ ಅಥವಾ ಅವನ ಪಾತ್ರೆಯಲ್ಲಿ ತಿಳಿದೂ ನೀರನ್ನು ಕುಡಿದರೆ ಕೃಚ್ಛಸಾಂತಪನವನ್ನು ಆಚರಿಸಬೇಕು. ಚಂಡಾಲನು ಮುಟ್ಟಿದ ನೀರನ್ನು ಕುಡಿದರೆ ಮೂರುದಿನ ಉಪವಾಸ ಮಾಡಿ ಪಂಚಗವ್ಯವನ್ನು ಕುಡಿಯಬೇಕು. ಮಹಾಪಾತಕಿಯ ಸ್ಪರ್ಶವಾದರೆ, ಅವನ ಜೊತೆ ಸ್ನಾನ-ಭೋಜನಗಳನ್ನು ಮಾಡಿದರೆ ತಪ್ತಕೃಚ್ಛ್ರ ಎಂಬ ವ್ರತವನ್ನು ಆಚರಿಸಬೇಕು. ಮಹಾಪಾತಕಿಯನ್ನು ಮುಟ್ಟಿದ ನಂತರ, ರಜಸ್ವಲೆಯನ್ನು ಮುಟ್ಟಿದನಂತರ ಶುದ್ಧಿ ಮಾಡಿಕೊಳ್ಳದೆ ಊಟ ಮಾಡಿದರೆ ಮೂರು ರಾತ್ರಿ ಉಪವಾಸದಿಂದ ಶುದ್ಧಿಯಾಗುತ್ತದೆ. ಸ್ನಾನ ಮಾಡಬೇಕಾಗಿದ್ದಾಗ, ಸ್ನಾನ ಮಾಡದೆ ಊಟ ಮಾಡಿದರೆ ಒಂದು ದಿನ ಉಪವಾಸ ಮಾಡಿದರೆ ಶುದ್ಧಿಯಾಗುತ್ತದೆ. ತಂಗಳು ಪದಾರ್ಥಗಳನ್ನು ತಿಂದರೆ ಉಪವಾಸವನ್ನೂ ಪಾದಕೃಚ್ಛ್ರವನ್ನೂ ಆಚರಿಸಬೇಕು. ಗೊತ್ತಾಗದೆ ತಿಂದು ಆಗಿರಬಹುದಾದ ಅಶುದ್ಧಿಗಳ ಪರಿಹಾರಕ್ಕಾಗಿ ಪ್ರತಿವರ್ಷದ ಕೊನೆಯಲ್ಲಿ ಕೃಚ್ಛ್ರವನ್ನು ಮಾಡಬೇಕು. ತಿಳಿದೂ ತಿಂದು ಆಗಿರಬಹುದಾದ ಅಶುದ್ಧಿಗಳ ಪರಿಹಾರಕ್ಕಾಗಿ ವಿಶೇಷವಾಗಿ ಕೃಚ್ಛ್ರವನ್ನು ಆಚರಿಸಬೇಕು. ಸಂಸ್ಕಾರಹೀನ(ವ್ರಾತ್ಯ)ರಿಗೆ ಯಜ್ಞವನ್ನು ಮಾಡಿಸಿದರೆ, ಅಂತಹವರಿಗೆ ಅಂತ್ಯಕರ್ಮವನ್ನು ಮಾಡಿಸಿದರೆ, ಪರರಿಗೆ ತೊಂದರೆಯಾಗುವುದಕ್ಕಾಗಿ ಅಭಿಚಾರವನ್ನು ಮಾಡಿಸಿದರೆ ಮೂರುಸಲ ಕೃಚ್ಛ್ರವ್ರತವನ್ನು ಮಾಡಬೇಕು.

ಬ್ರಾಹ್ಮಣ ಮೊದಲಾದವರಿಂದ ಹತ್ಯೆಗೆ ಒಳಗಾದವರ ಶವಸಂಸ್ಕಾರವನ್ನು ಮಾಡಿದವರು ಪ್ರಾಜಾಪತ್ಯವ್ರತವನ್ನು ಮಾಡಬೇಕು. ಈ ಅವಧಿಯಲ್ಲಿ ಗೋಮೂತ್ರವನ್ನು ಕುಡಿಯಬೇಕು. ಯವದಿಂದ ತಯಾರಿಸಿದ ಪದಾರ್ಥವನ್ನು ಸೇವಿಸಬೇಕು. ಶರೀರಕ್ಕೆ ತೈಲ ಲೇಪನವನ್ನು ಮಾಡಿಕೊಂಡಿರುವಾಗ, ವಾಂತಿಯಾಗುತ್ತಿದ್ದಾಗ ಮಲ-ಮೂತ್ರಗಳ ವಿಸರ್ಜನೆಯಾದರೆ ಒಂದು ದಿನ ಕಳೆದ ನಂತರ ಶುದ್ಧಿಯಾಗುತ್ತದೆ. ಕ್ಷೌರ ಮಾಡಿಸಿಕೊಂಡರೆ, ಮೈಥುನವನ್ನು ಮಾಡಿದರೆ ಒಂದು ದಿನ ಕಳೆದ ನಂತರ ಶುದ್ಧಿಯಾಗುತ್ತದೆ

## ಅಗ್ನಿತ್ಯಾಗಕ್ಕೆ ಪ್ರಾಯಶ್ಚಿತ್ತ :

ಒಂದು ದಿನ ಅಗ್ನಿಯಲ್ಲಿ ಹೋಮಿಸದ ಗೃಹಸ್ಥಾಶ್ರಮಿಯು ಒಂದು ದಿನ ಉಪವಾಸ ಮಾಡಿದರೆ ಶುದ್ಧನಾಗುತ್ತಾನೆ. ಮೂರು ದಿನ ಹೋಮಿಸದಿದ್ದರೆ ಮೂರು ದಿನ ಉಪವಾಸದಿಂದ ಶುದ್ಧನಾಗುತ್ತಾನೆ. ಅದಕ್ಕಿಂತ ಹೆಚ್ಚು ದಿನ ಹೋಮಿಸದಿದ್ದರೆ ಆರು ದಿನ ಉಪವಾಸದಿಂದ ಶುದ್ಧನಾಗುತ್ತಾನೆ. ಹತ್ತು-ಹನ್ನೆರಡು ದಿನಗಳ ಕಾಲ ಅಗ್ನಿಯನ್ನು ತ್ಯಜಿಸಿದರೆ ಕೃಚ್ಛ್ರ, ಚಾಂದ್ರಾಯಣಗಳನ್ನೇ ಆಚರಿಸಬೇಕು. ಪತಿತರಿಂದ ದ್ರವ್ಯ ಪರಿಗ್ರಹಮಾಡಿದರೆ ಆ ದ್ರವ್ಯವನ್ನು ತ್ಯಜಿಸಿ ವಿಧಿಯಂತೆ ಕೃಚ್ಛ್ರ ವ್ರತವನ್ನು ಮಾಡಬೇಕು. ಹೀಗೆಂದು ಭಗವಾನ್ ಮನು ಹೇಳಿದ್ದಾನೆ.

## ಬೇರೆ ಬೇರೆ ಪಾಪಗಳಿಗೆ ಪ್ರಾಯಶ್ಚಿತ್ತ :

ವಾನಪ್ರಸ್ಥಾಶ್ರವನ್ನು ಬಿಟ್ಟವರು, ಸನ್ಯಾಸಾಶ್ರಮವನ್ನು ಬಿಟ್ಟವರು ಮೂರು ಸಲ ಕೃಚ್ಛ್ರವನ್ನೂ ಮೂರು ಸಲ ಚಾಂದ್ರಾಯಣವನ್ನು ಮಾಡಬೇಕು. ಅನಂತರ ಜಾತಕರ್ಮ ಮೊದಲಾದ ಸಂಸ್ಕಾರಗಳನ್ನು ಪುನಃ ಮಾಡಿಸಿಕೊಳ್ಳಬೇಕು. ಧರ್ಮದ ಸ್ಪಷ್ಟವಾದ ಜ್ಞಾನವಿರು-ವವರು ಈ ವ್ರತಗಳನ್ನು ಚೆನ್ನಾಗಿ ಆಚರಿಸುತ್ತಾರೆ. ಸಂಧ್ಯಾವಂದನೆಯನ್ನು ಮಾಡದವನು ಆ ಹಗಲಿನಲ್ಲಿ ಯಾವಕ ಎಂಬ ಧಾನ್ಯವನ್ನು ಮಾತ್ರ ಸೇವಿಸಬೇಕು. ಸಾಯಂಕಾಲದ ಸಂಧ್ಯಾವಂದನೆಯನ್ನು ಮಾಡದಿದ್ದರೆ ರಾತ್ರಿ ಉಪವಾಸವಿರಬೇಕು. ಬ್ರಹ್ಮಚಾರಿಯು ಸಮಿದ್ಹೋಮವನ್ನು ಮಾಡದಿದ್ದರೆ ಸ್ನಾನಮಾಡಿ, ಏಕಾಗ್ರತೆಯಿಂದ ಎಂಟುಸಾವಿರಸಲ ಗಾಯತ್ರೀ ಮಂತ್ರವನ್ನು ಜಪಿಸಬೇಕು. ಗೃಹಸ್ಥಾಶ್ರಮಿಯು ಪ್ರಮಾದದಿಂದ ಸಂಧ್ಯಾವಂದ-ನೆಯನ್ನು ಬಿಟ್ಟಿದ್ದರೆ ಉಪವಾಸವಿದ್ದು ಮುಂದಿನ ಸಂಧ್ಯಾವಂದನೆಯನ್ನು ಮಾಡಬೇಕು. ವೇದಗಳಲ್ಲಿ ಹೇಳಿರುವ ನಿತ್ಯಕರ್ಮಗಳಿಗೆ ಲೋಪವುಂಟಾದರೆ ಆ ದಿನ ಉಪವಾಸ ಮಾಡಬೇಕು. ಸ್ನಾತಕನಿಗೆ ವ್ರತಲೋಪವಾದರೆ ಆ ದಿನ ಉಪವಾಸವಿರಬೇಕು. ಬೇರೆ-ಯವರಿಗೆ ತೊಂದರೆ ಮಾಡಿದ ಬ್ರಾಹ್ಮಣನು ಒಂದು ವರ್ಷ ಕೃಚ್ಛ್ರವನ್ನು ಆಚರಿಸಬೇಕು. ಚಾಂದ್ರಾಯಣವ್ರತವನ್ನು ಮಾಡಬೇಕು. ಗೋದಾನವನ್ನು ಮಾಡಬೇಕು. ನಾಸ್ತಿಕನಾಗಿ ನಡೆದುಕೊಳ್ಳುವ ಬ್ರಾಹ್ಮಣನು ಪ್ರಾಜಪತ್ಯವ್ರತವನ್ನು ಮಾಡಬೇಕು. ದೇವದ್ರೋಹವನ್ನು, ಗುರುದ್ರೋಹವನ್ನೂ ಮಾಡಿದವರು ತಪ್ತಕೃಚ್ಛ್ರವನ್ನು ಆಚರಿಸಬೇಕು.

ಒಂಟೆಯ ಮೇಲೆ ಏರಿ, ಕತ್ತೆಯ ಮೇಲೆ ಸವಾರಿ ಮಾಡಿದರೆ ನಗ್ನನಾಗಿ ನೀರಿನಲ್ಲಿ ಪ್ರವೇಶಿಸಿದರೆ ಮೂರು ದಿನ ವ್ರತಾನುಷ್ಠಾನ ಮಾಡಿದರೆ ಶುದ್ಧಿಯಾಗುತ್ತದೆ. ಪಂಕ್ತಿಬಾಹ್ಯರಾದವರು ತಮ್ಮ ಪಾಪಗಳನ್ನು ತೊಳೆದುಕೊಳ್ಳಲು ಒಂದು ತಿಂಗಳಕಾಲ ಹಗಲಿನ ಆರನೆಯ ಭಾಗದಲ್ಲಿ ಭೋಜನ ಮಾಡಬೇಕು. ವೇದಸಂಹಿತೆಯ ಪಾರಾಯಣವನ್ನು ಮಾಡಬೇಕು. ಶಾಕಲ ಮಂತ್ರಗಳಿಂದ ಹೋಮವನ್ನು ಮಾಡಬೇಕು. ಬ್ರಾಹ್ಮಣನು ಕಪ್ಪು, ಕೆಂಪು ವಸ್ತ್ರಗಳನ್ನು ಧರಿಸಿದರೆ ಒಂದು ಹಗಲು ಒಂದು ರಾತ್ರಿ ಉಪವಾಸ ಮಾಡಬೇಕು.

ಅನಂತರ ಸ್ನಾನವನ್ನು ಮಾಡಿ ಪಂಚಗವ್ಯವನ್ನು ಕುಡಿಯಬೇಕು. ಚಂಡಾಲನಿಗೆ ವೇದ-ಧರ್ಮ-ಪುರಾಣಗಳನ್ನು ಬೋಧಿಸಿದರೆ ಚಾಂದ್ರಾಯಣವ್ರತವನ್ನು ಮಾಡಬೇಕು. ನೇಣುಹಾಕಿಕೊಳ್ಳುವುದು ಮೊದಲಾದ ವಿಧಾನದಿಂದ ಆತ್ಮಹತ್ಯೆ ಮಾಡಿಕೊಂಡವನ ಶವವನ್ನು ಮುಟ್ಟಿದರೆ ಚಾಂದ್ರಾಯಣ ಅಥವಾ ಪ್ರಾಜಾಪತ್ಯ ವ್ರತದಿಂದ ಶುದ್ಧಿಯಾಗುತ್ತದೆ.

ಉಚ್ಛಿಷ್ಟನಾದ (ಭೋಜನವನ್ನು ಮಾಡಿರುವ) ಬ್ರಾಹ್ಮಣನು ಆಚಮನವನ್ನು ಮಾಡದೆ ಪ್ರಮಾದದಿಂದ ಚಂಡಾಲ ಮೊದಲಾದವರನ್ನು ಮುಟ್ಟಿದರೆ ಆಚಮನವನ್ನು ಮಾಡಿ ಎಂಟು ಸಾವಿರಸಲ ಗಾಯತ್ರಿ ಮಂತ್ರವನ್ನು ಜಪಿಸಬೇಕು. ಅಥವಾ ಬ್ರಹ್ಮಚರ್ಯವನ್ನು ಪಾಲಿಸುತ್ತ, ಶಾಂತಚಿತ್ತನಾಗಿ ದ್ರುಪದಾಮಂತ್ರಗಳನ್ನು ಜಪಿಸುತ್ತ ಮೂರು ರಾತ್ರಿ ಉಪವಾಸ ಮಾಡಬೇಕು. ಅನಂತರ ಪಂಚಗವ್ಯವನ್ನು ಕುಡಿಯಬೇಕು. ಉಚ್ಛಿಷ್ಟ ಬ್ರಾಹ್ಮಣನು ಚಂಡಾಲ, ಪತಿತ ಮೊದಲಾದವರನ್ನು ಇಚ್ಛಾಪೂರ್ವಕವಾಗಿ ಮುಟ್ಟಿದರೆ ಶುದ್ಧಿಗಾಗಿ ಪ್ರಾಜಾಪತ್ಯವ್ರತವನ್ನು ಮಾಡಬೇಕು. ಚಂಡಾಲ, ಜಾತಾಶೌಚವುಳ್ಳವ್ಯಕ್ತಿ, ಶವ, ರಜಸ್ವಲೆಯಾದ ಸ್ತ್ರೀ -ಇವರುಗಳನ್ನು ಮುಟ್ಟಿದವರು ಶುದ್ಧಿಗಾಗಿ ಸ್ನಾನವನ್ನು ಮಾಡಬೇಕು. ಮುಟ್ಟಿದವರನ್ನು ಮುಟ್ಟಿದರೂ ಸ್ನಾನ ಮಾಡಬೇಕು. ಅನಂತರ ಆಚಮನವನ್ನು ಮಾಡಿ ಜಪವನ್ನು ಮಾಡಬೇಕು.

ಊಟ ಮಾಡುತ್ತಿರುವ ಬ್ರಾಹ್ಮಣನನ್ನು ಮುಟ್ಟಿದರೆ ಶೌಚದ ಆಚರಣೆಯನ್ನು ಮಾಡಿ, ಸ್ನಾನ ಮಾಡಬೇಕು. ಅನಂತರ ಕೂಷ್ಮಾಂಡ ಹೋಮವ್ರತವನ್ನು ಮಾಡಬೇಕು. ಚಂಡಾಲನ ಶವವನ್ನು ಮುಟ್ಟಿದರೆ ಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು. ಬ್ರಾಹ್ಮಣನು ಸುರೆಯನ್ನು ಮುಟ್ಟಿದರೆ ಮೂರು ಸಲ ಪ್ರಾಣಾಯಾಮವನ್ನು ಮಾಡಬೇಕು. ಈರುಳ್ಳಿ, ಬೆಳ್ಳುಳ್ಳಿಗಳನ್ನು ಮುಟ್ಟಿದರೆ ತುಪ್ಪವನ್ನು ಕುಡಿಯಬೇಕು. ಬ್ರಾಹ್ಮಣನಿಗೆ ನಾಯಿ ಕಚ್ಚಿದರೆ ಮೂರುದಿನ ಸಾಯಂಕಾಲ ಹಾಲನ್ನು ಕುಡಿಯಬೇಕು. ಹೊಕ್ಕಳಿನ ಮೇಲ್ಭಾಗದಲ್ಲಿ ಕಚ್ಚಲ್ಪಟ್ಟರೆ ಆರು ದಿನ ಸಾಯಂಕಾಲ ಹಾಲನ್ನು ಕುಡಿಯಬೇಕು. ತೋಳನ್ನು ಕಚ್ಚಿದರೆ ಒಂಭತ್ತು ದಿನ, ತಲೆಯನ್ನು ಕಚ್ಚಿದರೆ ಹನ್ನೆರಡು ದಿನ ಹಾಲು ಕುಡಿಯಬೇಕು. ನಾಯಿ ಕಚ್ಚಿದರೆ ಬ್ರಾಹ್ಮಣನು ಸ್ನಾನ ಮಾಡಿ ಗಾಯತ್ರಿಯನ್ನು ಜಪಿಸಬೇಕು. ಸಂಪತ್ತು ಇದ್ದಾಗಲೂ, ರೋಗಾದಿಗಳ ಪೀಡೆ ಇಲ್ಲದಿರುವಾಗಲೂ ಯಜ್ಞಗಳನ್ನು ಮಾಡದೆ ಸಂಪತ್ತನ್ನು ಅನುಭವಿಸಿದ ಬ್ರಾಹ್ಮಣನು ಅರ್ಧ ಕೃಚ್ಛ್ರವನ್ನು ಮಾಡಬೇಕು. ವಿಧಿಪೂರ್ವಕವಾಗಿ ಅಗ್ನಿಯನ್ನು ಸ್ವೀಕರಿಸಿದ ಬ್ರಾಹ್ಮಣನು ಪರ್ವಕಾಲದಲ್ಲಿ ಅನುಷ್ಠಾನ-ಉಪಸ್ಥಾನಗಳನ್ನು ಮಾಡದಿದ್ದರೆ, ತನ್ನ ಪತ್ನಿಯ ಋತುಕಾಲದಲ್ಲಿ ಸಮಾಗಮವನ್ನು ಮಾಡದಿದ್ದರೆ ಅರ್ಧಕೃಚ್ಛ್ರವನ್ನು ಆಚರಿಸಬೇಕು. ಅನವಶ್ಯಕವಾಗಿ ನೀರಿನಲ್ಲಿ ಬಹಳ ಹೊತ್ತು ಇದ್ದರೆ, ಉಟ್ಟಬಟ್ಟೆಯೊಂದಿಗೇ ನೀರಿಗೆ ಪ್ರವೇಶಿಸಿದರೆ ಗೋಸ್ಪರ್ಶದಿಂದ ಶುದ್ಧಿಯಾಗುತ್ತದೆ. ಶೂದ್ರನ ಶವಸಂಸ್ಕಾರದಲ್ಲಿ ಇಚ್ಛೆಯಿಂದ ಭಾಗವಹಿಸಿದರೆ ಬೇರೆ ಬೇರೆ ನದಿಗಳಲ್ಲಿ ಸ್ನಾನಮಾಡಿ, ನದೀ ತೀರಗಳಲ್ಲೇ ಎಂಟು ಸಹಸ್ರ-ಗಾಯತ್ರಿಯನ್ನು ಜಪಿಸಬೇಕು. ಬ್ರಾಹ್ಮಣನು ಬ್ರಾಹ್ಮಣನಿಗೆ ಮಾತುಕೊಟ್ಟು ಮೀರಿದರೆ

ಚಾಂದ್ರಾಯಣ ವ್ರತವನ್ನು ಮಾಡಬೇಕು. ಈ ಅವಧಿಯಲ್ಲಿ ನವಣೆಯ ಅನ್ನವನ್ನು ಮಾತ್ರ ತಿನ್ನಬೇಕು. ಪಂಕ್ತಿಯಲ್ಲಿರುವವರಿಗೆ ವಿಷಮವಾದ (ಬೇರೆ ಬೇರೆ ಪ್ರಮಾಣದ, ಬೆಲೆಯ) ದಾನವನ್ನು ಮಾಡಿದರೆ ಕೃಚ್ಛ್ರವ್ರತವನ್ನು ಮಾಡಬೇಕು. ಶ್ವಪಚನ ನೆರಳನ್ನು ದಾಟಿದರೆ ಸ್ನಾನ ಮಾಡಿ ತುಪ್ಪವನ್ನು ಕುಡಿಯಬೇಕು.

ಅಶುಚಿಯಾಗಿರುವಾಗ ಸೂರ್ಯನನ್ನು, ಚಂದ್ರನನ್ನು ಅಥವಾ ಅಗ್ನಿಯನ್ನು ನೋಡಿದರೆ, ಮನುಷ್ಯನ ಮೂಳೆಯನ್ನು ಮುಟ್ಟಿದರೆ ಸ್ನಾನವನ್ನು ಮಾಡಬೇಕು. ಕಪಟದಿಂದ ಅಧ್ಯಯನ-ವನ್ನು ಮಾಡಿದವನು ಒಂದು ವರ್ಷ ಭಿಕ್ಷಾಟನೆಯನ್ನು ಮಾಡಬೇಕು. ಕೃತಘ್ನನಾಗಿ ನಡೆದು-ಕೊಂಡವನು ಬ್ರಾಹ್ಮಣನ ಆಶ್ರಯದಲ್ಲಿ ಐದು ವರ್ಷಗಳ ಕಾಲ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಬ್ರಾಹ್ಮಣನನ್ನು 'ಹುಂ' ಎಂದು ಗದರಿಸಿದರೆ, ಹಿರಿಯರಿಗೆ 'ನೀನು' ಎಂದು ಹೇಳಿದರೆ ಸ್ನಾನಮಾಡಿ, ಇಡೀ ಹಗಲು ಉಪವಾಸವಿದ್ದು, ಅಂತಹವರಿಗೆ ನಮಸ್ಕರಿಸಿ ಕ್ಷಮೆಯನ್ನು ಬೇಡಬೇಕು. ಬ್ರಾಹ್ಮಣನನ್ನು ಹುಲ್ಲುಕಡ್ಡಿಯಿಂದ ಹೊಡೆದರೂ, ಕುತ್ತಿಗೆಗೆ ಬಟ್ಟೆಯನ್ನು ಬಿಗಿದರೆ, ವಾದದಲ್ಲಿ ಸೋಲಿಸಿದರೆ, ಅವನನ್ನು ನಮಸ್ಕರಿಸಿ ಕ್ಷಮೆ ಬೇಡಬೇಕು. ಬ್ರಾಹ್ಮಣನನ್ನು ಅವಾಚ್ಯಶಬ್ದಗಳಿಂದ ಬೈದರೆ ಕೃಚ್ಛ್ರ ವ್ರತವನ್ನು ಮಾಡಬೇಕು. ಅವನನ್ನು ಪೀಳಿಸಿದರೆ ಅತಿಕೃಚ್ಛ್ರ ಎಂಬ ವ್ರತವನ್ನು ಮಾಡಬೇಕು. ಅವನ ಶರೀರದಲ್ಲಿ ರಕ್ತವು ಹೊರಹರಿಯುವಂತೆ ಗಾಯವನ್ನು ಮಾಡಿದರೆ ಕೃಚ್ಛ್ರ ಮತ್ತು ಅತಿಕೃಚ್ಛ್ರಗಳನ್ನು ಮಾಡಬೇಕು.

ಗುರುಗಳಿಗೆ ಸಿಟ್ಟುಬರುವಂತೆ ನಡೆದುಕೊಂಡವನು ಪ್ರಾಯಶ್ಚಿತ್ತವನ್ನು ಮಾಡಿ ಅವನ ಸಿಟ್ಟು ದೂರವಾಗುವಂತೆ ಮಾಡಬೇಕು. ಗುರುಗಳಿಗೆ ಸಿಟ್ಟುಬರುವಂತಹ ವರ್ತನೆಗೆ ಒಂದು ರಾತ್ರಿ ಉಪವಾಸವೇ ಪ್ರಾಯಶ್ಚಿತ್ತ. ದೇವತೆಗಳ, ಋಷಿಗಳ ಎದುರು ಉಗುಳಬಾರದು. ಅವರನ್ನು ತೆಗಳಬಾರದು. ಹಾಗೆ ಮಾಡಿದರೆ ಕೊಳ್ಳಿಯಿಂದ ನಾಲಿಗೆಯನ್ನು ಸುಟ್ಟು-ಕೊಳ್ಳಬೇಕು. ಬಂಗಾರವನ್ನು ದಾನ ಮಾಡಬೇಕು. ದೇವತೆಗಳ ಉದ್ಯಾನಗಳಲ್ಲಿ ಮೂತ್ರ-ವಿಸರ್ಜನೆಯನ್ನು ಮಾಡಿದ ಬ್ರಾಹ್ಮಣನು ಶಿಶ್ನವನ್ನೇ ಕತ್ತರಿಸಿಕೊಳ್ಳಬೇಕು. ಚಾಂದ್ರಾಯಣ ವ್ರತವನ್ನು ಆಚರಿಸಬೇಕು. ದೇವತೆಗಳ-ಋಷಿಗಳ ಅವಹೇಳನವನ್ನು ಮಾಡಿದ ದ್ವಿಜೋತ್ತಮನು ಪ್ರಾಜಾಪತ್ಯ ವ್ರತವನ್ನು ಮಾಡಬೇಕು. ದೇವ-ಋಷಿಗಳ ನಿಂದನೆಯನ್ನು ಮಾಡಿದವರೊಂದಿಗೆ ಸಂಭಾಷಣೆಯನ್ನು ಮಾಡಿದರೆ ಸ್ನಾನ ಮಾಡಿ ದೇವರ ಪೂಜೆಯನ್ನು ಮಾಡಬೇಕು. ಅಂತಹವರನ್ನು ನೋಡಿದರೆ ಸೂರ್ಯನನ್ನು ನೋಡಿ ಜಗದೀಶ್ವರನನ್ನು ಸ್ಮರಿಸಬೇಕು. ಜಗದೀಶ್ವರನನ್ನು ನಿಂದಿಸಿದರೆ ಉಂಟಾಗುವ ಪಾಪವು ನೂರಾರು ವರ್ಷಗಳ ಪ್ರಾಯಶ್ಚಿತ್ತದಿಂದಲೂ ಪರಿಹಾರವಾಗುವುದಿಲ್ಲ. ಜಗದೀಶ್ವರನ ನಿಂದೆಯನ್ನು ಮಾಡಿದವನು ಕೃಚ್ಛ್ರ ಮತ್ತು ಅತಿಕೃಚ್ಛ್ರಗಳನ್ನು ಆಚರಿಸಬೇಕು. ಅನಂತರ ಪರಮಾತ್ಮನಿಗೆ ಶರಣಾಗತ-ನಾಗಬೇಕು.

## ಸರ್ವಪಾಪ ಪರಿಹಾರ :

ಸರ್ವಸ್ವ ದಾನದಿಂದ ಎಲ್ಲ ಪಾಪಗಳೂ ನಾಶವಾಗುತ್ತವೆ.

ವಿಧಿಯಂತೆ ಕೃಚ್ಛ್ರ ಮತ್ತು ಅತಿಕೃಚ್ಛ್ರಗಳನ್ನು ಮಾಡಿ, ಅನಂತರ ಚಾಂದ್ರಾಯಣ ವ್ರತವನ್ನೂ ಮಾಡಿ ಪುಣ್ಯಕ್ಷೇತ್ರಗಳ ಯಾತ್ರೆಯನ್ನು ಮಾಡಬೇಕು. ಇದರಿಂದ ಎಲ್ಲ ಪಾಪಗಳ ಪರಿಹಾರವಾಗುತ್ತದೆ. ಅಮಾವಾಸ್ಯೆಯ ದಿನ ಶಿವನ ಪೂಜೆಯನ್ನು ಮಾಡಿ ಬ್ರಾಹ್ಮಣ ಸತ್ಕಾರವನ್ನು ಮಾಡಿದರೆ ಸಕಲ ಪಾಪಗಳೂ ನಾಶವಾಗುತ್ತವೆ. ಕೃಷ್ಣಪಕ್ಷದ ಅಷ್ಟಮೀ ಮತ್ತು ಚತುರ್ದಶಿಗಳಲ್ಲಿ ಬ್ರಾಹ್ಮಣರ ಸತ್ಕಾರದ ಮೂಲಕ ಮಹಾದೇವನ ಆರಾಧನೆಯನ್ನು ಮಾಡಿದರೆ ಎಲ್ಲ ಪಾಪಗಳಿಂದ ಬಿಡುಗಡೆಯಾಗುತ್ತದೆ. ತ್ರಯೋದಶಿಯಂದು ರಾತ್ರಿಯ ಪ್ರಥಮ ಯಾಮದಲ್ಲಿ ಮುಕ್ಕಣ್ಣನ ದರ್ಶನವನ್ನು ಮಾಡಿ ಕಾಣಿಕೆಯನ್ನು ಅರ್ಪಿಸಿದರೆ ಎಲ್ಲ ಪಾಪಗಳಿಂದ ಬಿಡುಗಡೆಯಾಗುತ್ತದೆ. ಕೃಷ್ಣಪಕ್ಷದ ಚತುರ್ದಶಿಯಂದು ಉಪವಾಸ ಮಾಡಿ ಶಾಂತ ಮನಸ್ಕನಾಗಿ, ಪೂರ್ವಾಹ್ಣ ಕಾಲದಲ್ಲಿ ಸ್ನಾನಮಾಡಿ *'ಯಮಂತರ್ಪಯಾಮಿ' 'ಧರ್ಮರಾಜಂ ತರ್ಪಯಾಮಿ' 'ಮೃತ್ಯುಂ ತರ್ಪಯಾಮಿ' 'ಅಂತಕಂ ತರ್ಪಯಾಮಿ' 'ವೈವಸ್ವತಂ ತರ್ಪಯಾಮಿ' 'ಕಾಲಂ ತರ್ಪಯಾಮಿ' 'ಸರ್ವಪ್ರಾಣಹರಂ ತರ್ಪಯಾಮಿ'* ಎಂದು ಹೇಳುತ್ತಾ ಏಳು ಸಲ ತಿಲತರ್ಪಣವನ್ನು ಕೊಡಬೇಕು. ಇದರಿಂದ ಎಲ್ಲ ಪಾಪಗಳ ಪರಿಹಾರವಾಗುತ್ತದೆ.

ಮೇಲೆ ಹೇಳಿರುವ ವ್ರತಗಳನ್ನು ಮಾಡುವಾಗ ಬ್ರಹ್ಮಚರ್ಯವನ್ನು ಪಾಲಿಸಬೇಕು. ಕೆಳಗೆ ಮಲಗಬೇಕು. ಉಪವಾಸ ಮಾಡಬೇಕು. ಬ್ರಾಹ್ಮಣ ಸಮಾರಾಧನೆಯನ್ನು ಮಾಡಬೇಕು. ಶಾಂತನಾಗಿರಬೇಕು. ಅಮಾವಾಸ್ಯೆಯಂದು ಪಿತಾಮಹನಾದ ಚತುರ್ಮುಖ ಬ್ರಹ್ಮನನ್ನು ಉದ್ದೇಶಿಸಿ ಮೂರುಜನ ಬ್ರಾಹ್ಮಣರನ್ನು ಸತ್ಕರಿಸಬೇಕು. ಇದರಿಂದ ಎಲ್ಲ ಪಾಪಗಳ ಪರಿಹಾರವಾಗುತ್ತದೆ. ಶುಕ್ಲಪಕ್ಷದ ಷಷ್ಠಿಯಂದು ಉಪವಾಸ ಮಾಡಿ ಸಪ್ತಮಿಯಂದು ಶಾಂತಮನಸ್ಸಿನಿಂದ ಸೂರ್ಯಾರಾಧನೆಯನ್ನು ಮಾಡಬೇಕು. ಇದರಿಂದ ಎಲ್ಲ ಪಾಪಗಳೂ ನಾಶವಾಗುತ್ತವೆ. ಭರಣೀನಕ್ಷತ್ರ ಮತ್ತು ಚತುರ್ಥೀ ತಿಥಿ ಇರುವ ಶನಿವಾರದಂದು ಯಮನನ್ನು ಪೂಜಿಸಬೇಕು. ಇದರಿಂದ ಏಳುಜನ್ಮಗಳ ಪಾಪಗಳು ನಾಶವಾಗುತ್ತವೆ. ಶುಕ್ಲಪಕ್ಷದ ಏಕಾದಶಿಯಂದು ಉಪವಾಸವಿದ್ದು ದ್ವಾದಶಿಯಂದು ಜನಾರ್ದನನನ್ನು ಪೂಜಿಸಬೇಕು. ಇದರಿಂದ ಎಲ್ಲ ಪಾಪಗಳಿಂದಲೂ ಬಿಡುಗಡೆಯಾಗುತ್ತದೆ. ಗ್ರಹಣ ಮೊದಲಾದ ಪರ್ವಕಾಲ ಗಳಲ್ಲಿ ತಪಸ್ಸು, ಜಪ, ತೀರ್ಥಸ್ನಾನ, ಪೂಜೆ, ದೇವಬ್ರಾಹ್ಮಣ ಸಮಾರಾಧನ - ಇವುಗಳಿಂದ ಮಹಾಪಾತಕಗಳ ಪರಿಹಾರವಾಗುತ್ತದೆ. ಪುಣ್ಯತೀರ್ಥದಲ್ಲಿ ನಿಯಮಪೂರ್ವಕವಾಗಿ ಪ್ರಾಣತ್ಯಾಗ ಮಾಡಿದರೆ ಎಲ್ಲ ಪಾಪಗಳ ನಾಶವಾಗುತ್ತದೆ. ಪತ್ನಿಯು ಪತಿಯು ಮೃತನಾದಾಗ ಸಹಗಮನವನ್ನು ಮಾಡಿದರೆ ತನ್ನ ಮತ್ತು ತನ್ನ ಪತಿಯ ಬ್ರಹ್ಮಹತ್ಯೆ, ಕೃತಘ್ನತೆ ಮೊದಲಾದ ಮಹಾಪಾತಕಗಳೂ ನಾಶಹೊಂದುತ್ತವೆ. ಪತಿಸೇವೆಯನ್ನು ಪೂರ್ಣಪ್ರಮಾಣದಲ್ಲಿ ಮಾಡುವ

ಪತಿವ್ರತೆಯನ್ನು ಈ ಜನ್ಮ, ಬೇರೆ ಜನ್ಮಗಳ ಯಾವ ಪಾಪವೂ ಬಾಧಿಸುವುದಿಲ್ಲ. ಧರ್ಮನಿಷ್ಠಳಾದ ಪತಿವ್ರತೆಗೆ ಯಾವಾಗಲೂ ಒಳ್ಳೆಯದೇ ಆಗುವುದು. ಅವಳನ್ನು ಯಾರೂ ಯಾವ ವಿಷಯದಲ್ಲೂ ಸೋಲಿಸಲಾರರು. ರಾಮನ ಪತ್ನಿಯಾದ ತ್ರಿಲೋಕಪ್ರಸಿದ್ಧಳಾದ ಸೀತಾದೇವಿಯೇ ಇದಕ್ಕೆ ಉದಾಹರಣೆ. ಅವಳು ರಾವಣನನ್ನು ಎದುರಿಸಿದಳು. ಕೊನೆಗೆ ಅವನ ಸಂಹಾರವಾಯಿತು. ಸೀತೆ ರಾಮನ ಪತ್ನಿ. ಸುಂದರಿ, ವಿಶಾಲಾಕ್ಷಿ, ಯಾವುದೋ ದುರ್ಬುದ್ಧಿಯಿಂದ ಪ್ರಚೋದಿತನಾಗಿ ರಾವಣನು ಅವಳನ್ನು ಬಯಸಿದನು. ಕಪಟವೇಷದಿಂದ ಕಾಡಿನಲ್ಲಿ ಏಕಾಕಿನಿಯಾಗಿರುವ ಅವಳನ್ನು ಅಪಹರಿಸಲು ಅವನು ನಿಶ್ಚಯಿಸಿದನು. ಸೀತೆಯು ಅವನ ಅಭಿಪ್ರಾಯವನ್ನು ತಿಳಿದು ತನ್ನ ಪತಿ ರಾಮನನ್ನು ಸ್ಮರಿಸಿ ಆವಸಥ್ಯ ಎಂಬ ಅಗ್ನಿಯನ್ನು ಪ್ರಾರ್ಥಿಸಿದಳು. ಈ ಅಗ್ನಿಗೆ ಎಲ್ಲ ಲೋಕಗಳನ್ನೂ ಸುಡುವ ಬಲವಿದೆ.

**ವಹ್ನ್ಯಷ್ಟಕ :**

ನಮಸ್ಯಾಮಿ ಮಹಾಯೋಗಂ ಕೃಶಾನುಂ ಗಹ್ವರಂ ಪರಮ್ ।
ದಾಹಕಂ ಸರ್ವಭೂತಾನಾಮೀಶಾನಂ ಕಾಲರೂಪಿಣಮ್ ॥

ಪ್ರಪದ್ಯೇ ಪಾವಕಂ ದೇವಂ ಶಾಶ್ವತಂ ವಿಶ್ವರೂಪಿಣಮ್ ।
ಯೋಗಿನಂ ಕೃತ್ತಿವಸನಂ ಭೂತೇಶಂ ಪರಮಂ ಪದಮ್ ॥

ಆತ್ಮಾನಂ ದೀಪ್ತವಪುಷಂ ಸರ್ವಭೂತಹೃದಿ ಸ್ಥಿತಮ್ ।
ತಂ ಪ್ರಪದ್ಯೆ ಜಗನ್ಮೂರ್ತಿಂ ಪ್ರಭವಂ ಸರ್ವತೇಜಸಾಮ್ ॥

ಮಹಾಯೋಗೀಶ್ವರಂ ವಹ್ನಿಮಾದಿತ್ಯಂ ಪರಮೇಷ್ಠಿನಮ್ ।
ಪ್ರಪದ್ಯೇ ಶರಣಂ ರುದ್ರಂ ಮಹಾಗ್ರಾಸಂ ತ್ರಿಶೂಲಿನಮ್ ॥

ಕಾಲಾಗ್ನಿಂ ಯೋಗಿನಾಮೀಶಂ ಭೋಗಮೋಕ್ಷಫಲಪ್ರದಮ್ ।
ಪ್ರಪದ್ಯೇ ತ್ವಾಂ ವಿರೂಪಾಕ್ಷಂ ಭೂರ್ಭುವಃ ಸ್ವಃ ಸ್ವರೂಪಿಣಮ್ ॥

ಹಿರಣ್ಮಯೇ ಗೃಹೇ ಗುಪ್ತಂ ಮಹಾಂತಮಮಿತೌಜಸಮ್ ।
ವೈಶ್ವಾನರಂ ಪ್ರಪದ್ಯೇಹಂ ಸರ್ವಭೂತೇಷ್ವವಸ್ಥಿತಮ್ ॥

ಹವ್ಯಕವ್ಯವಹಂ ದೇವಂ ಪ್ರಪದ್ಯೇ ವಹ್ನಿಮೀಶ್ವರಮ್ ।
ಪ್ರಪದ್ಯೇ ತತ್ಪರಂ ತತ್ವಂ ವರೇಣ್ಯಂ ಸವಿತುಃ ಶಿವಮ್ ॥

ಸ್ವರ್ಗ್ಯಮಗ್ನಿಂ ಪರಂಜ್ಯೋತಿಃ ಸ್ವಾಕ್ಷಯಂ ಹವ್ಯವಾಹನಮ್ ॥

**ಅರ್ಥ :** ಮಹಾಸಮರ್ಥನಾದ, ತಿಳಿಯಲಾಗದ, ಸರ್ವಭೂತಗಳನ್ನೂ ಸುಡುವ, ಕಾಲರೂಪಿಯಾದ ಅಗ್ನಿಯನ್ನು ನಮಸ್ಕರಿಸುತ್ತೇನೆ. ವಿಶ್ವರೂಪಿಯಾದ, ಗಜಚರ್ಮಧಾರಿಯಾದ, ಭೂತೇಶನಾದ, ಯೋಗಿಯಾದ ಅಗ್ನಿದೇವನನ್ನು ನಮಸ್ಕರಿಸುತ್ತೇನೆ.

ಸರ್ವಾಂತರ್ಯಾಮಿಯಾದ, ಬೆಳಗುವ ಶರೀರವುಳ್ಳ, ವಿಶ್ವವನ್ನೇ ಶರೀರವಾಗಿ ಹೊಂದಿರುವ, ಎಲ್ಲ ತೇಜಸ್ಸುಗಳ ಮೂಲವಾದ ಅಗ್ನಿದೇವನನ್ನು ನಮಸ್ಕರಿಸುತ್ತೇನೆ. ಮಹಾಯೋಗೀಶ್ವರನೂ, ಆದಿತ್ಯರೂಪನೂ ಆದ, ಪಿತಾಮಹನಾದ ಸರ್ವಸಂಹಾರಕನೂ, ತ್ರಿಶೂಲಧಾರಿಯೂ ಆದ ರುದ್ರದೇವನೇ ಆದ ಅಗ್ನಿದೇವನಿಗೆ ನಮಸ್ಕಾರ. ಕಾಲಾಗ್ನಿಯೂ, ಭೋಗ-ಮೋಕ್ಷಗಳನ್ನು ಕೊಡುವ, ಯೋಗಿಗಳ ಈಶನಾದ, ಭೂಃ, ಭುವಃ, ಸ್ವ ಎಂಬ ಲೋಕಗಳಳ ಅಧಿಪತಿಯಾದ ವಿರೂಪಾಕ್ಷನಾದ ಅಗ್ನಿದೇವನಿಗೆ ನಮಸ್ಕಾರ. ಬಂಗಾರದಂತೆ ಹೊಳೆಯುವ, ಆಕರ್ಷಕವಾದ ಜಗತ್ತಿನಲ್ಲಿ ಅಡಗಿರುವ, ಅಮಿತ ತೇಜಸ್ವಿಯಾದ, ಸರ್ವಾಂತರ್ಯಾಮಿಯಾದ ಅಗ್ನಿದೇವನನ್ನು ನಮಸ್ಕರಿಸುತ್ತೇನೆ. ಹವ್ಯ-ಕವ್ಯಗಳನ್ನು ಆಯಾಯಾ ದೇವತೆಗಳಿಗೆ ತಲುಪಿಸುವ ಪರತತ್ವವಾದ, ಎಲ್ಲರೂ ಬಯಸುವಂತಿರುವ ಶಿವ-ಸ್ವರೂಪನಾದ ಅಗ್ನಿದೇವನನ್ನು ನಮಸ್ಕರಿಸುತ್ತೇನೆ. ಮೋಕ್ಷಸಾಧನವಾದ, ಪರಂಜ್ಯೋತಿಯಾದ, ತನ್ನ ಭಕ್ತರಿಗೆ ಅಕ್ಷಯಫಲವನ್ನು ಕೊಡುವ, ಅಗ್ನಿದೇವನನ್ನು ನಮಸ್ಕರಿಸುತ್ತೇನೆ.

ಸೀತೆಯು ಹೀಗೆ ವಹ್ನ್ಯಷ್ಟಕವನ್ನು (ಅಗ್ನಿಯನ್ನು ಸ್ತುತಿಸುವ ಎಂಟು ಶ್ಲೋಕಗಳನ್ನು) ಜಪಿಸಿ ರಾಮನನ್ನೇ ಧ್ಯಾನಿಸುತ್ತ ಇದ್ದಳು.

## ಸ್ತೋತ್ರದ ಫಲ :

ಆಗ ಭಗವಾನ್ ಅಗ್ನಿದೇವನು ಉಜ್ವಲ ತೇಜಸ್ವಿಯಾಗಿ ಸುಟ್ಟಬಿಡುವನೋ ಎಂಬ ಭಾವವನ್ನು ಉಂಟುಮಾಡುತ್ತಾ ಅಗ್ನಿಕುಂಡದಿಂದ ಆವಿರ್ಭವಿಸಿದನು. ರಾವಣನ ವಧೆ-ಯಾಗಬೇಕೆಂದು ಬಯಸಿದ್ದ ಅಗ್ನಿದೇವನು ಮಾಯಾಮಯವಾದ ಸೀತೆಯ ಆಕೃತಿಯನ್ನು ನಿರ್ಮಿಸಿ ರಾಮಪತ್ನಿ ಸೀತೆಯನ್ನು ಕರೆದುಕೊಂಡು ಅಂತರ್ಧಾನನಾದನು. ರಾಕ್ಷಸೇಶ್ವರನಾದ ರಾವಣನು ಮಾಯಾಸೀತೆಯನ್ನು ನೋಡಿ ಅವಳನ್ನು ಎತ್ತಿಕೊಂಡು ಸಾಗರದ ಮಧ್ಯ-ದಲ್ಲಿರುವ ಲಂಕಾಪಟ್ಟಣಕ್ಕೆ ಹೋದನು.

ಅನಂತರ ರಾಮನು ಲಕ್ಷ್ಮಣನ ಜೊತೆಗೂಡಿ ರಾವಣನನ್ನು ಕೊಂದನು. ಸೀತೆಯ ಬಗ್ಗೆ ಮನಸ್ಸಿನಲ್ಲಿ ಸಂಶಯವುಳ್ಳವನಾದನು. ಜನಗಳಿಗೆ ವಿಶ್ವಾಸ ಉಂಟುಮಾಡುವುದಕ್ಕಾಗಿ ಮಾಯಾಮಯೀ ಸೀತೆಯು ಅಗ್ನಿಯನ್ನು ಪ್ರವೇಶಿಸಿದಳು. ಅಗ್ನಿಯು ಮಾಯಾಸೀತೆಯನ್ನು ಸುಟ್ಟು ನಿಜಸೀತೆಯನ್ನು ರಾಮನಿಗೆ ಒಪ್ಪಿಸಿದನು. ಸೀತೆಯು ಪತಿಯ ಪಾದಗಳಿಗೆ ನಮಸ್ಕರಿಸಿದಳು. ಇದನ್ನು ನೋಡಿ ಸಂತುಷ್ಟನಾದ ರಾಮನು ಆಶ್ಚರ್ಯ ತುಂಬಿದ ಕಣ್ಣುಗಳುಳ್ಳವನಾಗಿ ಅಗ್ನಿದೇವನಿಗೆ ಶಿರಸಾ ನಮಸ್ಕರಿಸಿದನು. ಅಗ್ನಿಯನ್ನು ಕೇಳಿದನು.

''ಇವಳನ್ನು ನೀನು ಸುಟ್ಟುಹಾಕಿದ್ದನ್ನು ನೋಡಿದೆವು. ಅನಂತರ ಇವಳೇ ಪುನಃ ನನ್ನ ಬಳಿಗೆ ಬಂದಳು. ಇದು ಹೇಗೆ?''

ಅಗ್ನಿದೇವನು ಎಲ್ಲ ಜನಗಳ ಸನ್ನಿಧಿಯಲ್ಲಿ ನಡೆದ ವೃತ್ತಾಂತವನ್ನು ರಾಮನಿಗೆ ವಿವರಿಸಿದನು.

''ಈ ಸೀತೆ ಪರಮಸಾಧ್ವಿ, ಶಿವನಿಗೆ ಪಾರ್ವತಿಯಂತೆ ನಿನಗೆ ಪ್ರಿಯಳು. ಪಾರ್ವತಿ ದೇವಿಗೆ ಇವಳ ಮೇಲೆ ಬಹಳ ಪ್ರೀತಿ. ಪತಿಸೇವಾ ಪರಾಯಣೆ. ಸುಶೀಲೆ, ರಾವಣನಿಂದ ಕದಿಯಲ್ಪಟ್ಟ ಇವಳನ್ನು ನಾನು ರಕ್ಷಿಸಿದೆ. ನಾನು ಸೃಷ್ಟಿಸಿದ ಮಾಯಾಸೀತೆಯನ್ನು ರಾವಣನು ಅಪಹರಿಸಿದನು. ನಿನ್ನಿಂದ ಅವನ ವಧೆಯಾಗಬೇಕೆಂಬ ಇಚ್ಛೆಯಿಂದಲೇ ನಾನು ಮಾಯಾ-ಸೀತೆಯನ್ನು ನಿರ್ಮಿಸಿದೆನು. ಆದ್ದರಿಂದಲೇ ನಿನ್ನಿಂದ ಲೋಕಕಂಟಕನಾದ ರಾವಣನ ವಧೆಯಾಯಿತು. ಈಗ ನಾನು ಮಾಯಾಸೀತೆಯನ್ನು ಸುಟ್ಟು ನಿಜಸೀತೆಯನ್ನು ನಿನಗೆ ಒಪ್ಪಿಸಿದ್ದೇನೆ. ಶುದ್ಧಳಾದ ಇವಳನ್ನು ನೀನು ಸ್ವೀಕರಿಸು. ನೀನು ಜಗಜ್ಜನ್ಮಾದಿಕಾರಣನಾದ ನಾರಾಯಣ.''

ಹೀಗೆ ಹೇಳಿ ರಾಮನಿಂದ ಸಮ್ಮಾನಿತನಾಗಿ ಅಗ್ನಿದೇವನು ಅಂತರ್ಧಾನ ಹೊಂದಿದನು.

ಇದು ಪತಿವ್ರತೆಯರ ಮಹಿಮೆ. ಪತಿಸೇವೆ ಸ್ತ್ರೀಯರ ಎಲ್ಲ ಪಾಪವನ್ನೂ ಪರಿಹರಿಸುವ ಪ್ರಾಯಶ್ಚಿತ್ತ. ಎಲ್ಲ ವಿಧವಾದ ಪಾಪಗಳನ್ನು ಮಾಡಿದ ಪುರುಷನು ಜಿತೇಂದ್ರಿಯನಾಗಿ ಪುಣ್ಯತೀರ್ಥದಲ್ಲಿ ದೇಹತ್ಯಾಗ ಮಾಡಿದರೆ ಎಲ್ಲ ಪಾಪಗಳಿಂದ ಬಿಡುಗಡೆ ಹೊಂದುವನು.

ಪೃಥಿವಿಯಲ್ಲಿರುವ ಎಲ್ಲ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿದರೆ ಎಲ್ಲ ಪಾಪಗಳಿಂದ ಬಿಡುಗಡೆಯಾಗುತ್ತದೆ.

**ವ್ಯಾಸ ಉವಾಚ :**

ಮಹೇಶನ ಆರಾಧನೆಗಾಗಿ ಮಾನವಧರ್ಮವನ್ನೂ, ಜ್ಞಾನಯೋಗವನ್ನೂ ನಿಮಗೆ ಹೇಳಿದ್ದೇನೆ. ಜ್ಞಾನಮಾರ್ಗದಲ್ಲಿ ಸಾಗಿದವನಿಗೆ ಮಾತ್ರ ಮಹಾದೇವನ ದರ್ಶನವಾಗುತ್ತದೆ. ಬೇರೆಯವರಿಗೆ ನೂರಾರು ಕಲ್ಪಗಳು ಕಳೆದರೂ ಮಹಾದೇವನ ಸಾಕ್ಷಾತ್ಕಾರವಾಗುವುದಿಲ್ಲ. ಯಾರು ಲೋಕದಲ್ಲಿ ಪರಮಧರ್ಮವನ್ನು, ಪರಮೇಶ್ವರನ ಜ್ಞಾನವನ್ನೂ ಸ್ಥಾಪಿಸುವರೋ ಅವನು ದೊಡ್ಡ ಯೋಗಿ. ಅವನಿಗಿಂತ ದೊಡ್ಡ ಯೋಗಿ ಇಲ್ಲ. ಜ್ಞಾನಸ್ಥಾಪನೆಗೆ ಸಮರ್ಥನಾಗಿದ್ದರೂ ಯಾರು ಆ ಕೆಲಸವನ್ನು ಮಾಡುವುದಿಲ್ಲವೋ, ಅವನು ಯೋಗ-ಮಾರ್ಗಾನುಯಾಯಿಯಾದ ಮುನಿಯಾಗಿದ್ದರೂ ಭಗವತ್ಪ್ರಿಯನಲ್ಲ.

ನನ್ನ ಮತ್ತು ನಿಮ್ಮ ಈ ಸಂವಾದವನ್ನು ಓದಿದವರು ಸಕಲ ಪಾಪಗಳಿಂದ ಬಿಡುಗಡೆಯನ್ನು ಹೊಂದಿ ಪರಮಗತಿಯನ್ನು ಹೊಂದುವರು. ಶ್ರಾದ್ಧಸಮಯದಲ್ಲಿ ಅಥವಾ ದೇವಕಾರ್ಯದ ಸಮಯದಲ್ಲಿ ಬ್ರಾಹ್ಮಣರ ಸನ್ನಿಧಿಯಲ್ಲಿ ಶುದ್ಧಮನಸ್ಸಿನಿಂದ ಇದನ್ನು ಓದಬೇಕು. ದ್ವಿಜರು ಕೇಳಬೇಕು. ಇದರ ಅರ್ಥವನ್ನು ಮನನ ಮಾಡಿ ಯುಕ್ತವಾದ ಮನಸ್ಸನ್ನು ಹೊಂದಿ ದ್ವಿಜರಿಗೆ

ಶ್ರವಣ ಮಾಡಿಸುವವನು ದೋಷಗಳನ್ನು ಕಳೆದುಕೊಂಡು ಮಹೇಶ್ವರನ ಸನ್ನಿಧಿಗೆ ಹೋಗುತ್ತಾನೆ.

ಸತ್ಯವತೀ ಸುತರಾದ ಭಗವಾನ್ ವ್ಯಾಸರು ಇವೆಲ್ಲವನ್ನೂ ಹೇಳಿ ಮುನಿಗಳಿಗೆ, ಸೂತರಿಗೆ ಆಶ್ವಾಸನೆಯನ್ನು ಕೊಟ್ಟು ಹೊರಟುಹೋದರು.

* * *

## ಅಧ್ಯಾಯ-೮೮

**ಋಷಯ ಊಚು :**

ರೋಮಹರ್ಷಣರೇ! ಈ ಲೋಕದಲ್ಲಿ ಪ್ರಸಿದ್ಧವಾದ, ಶ್ರೇಷ್ಠತೀರ್ಥಗಳ ಬಗ್ಗೆ ದಯವಿಟ್ಟು ತಿಳಿಸಿರಿ.

**ರೋಮಹರ್ಷಣ ಉವಾಚ :**

ಬ್ರಹ್ಮವಾದಿಗಳಾದ ಮುನಿಗಳು ಹೇಳಿರುವ ವಿವಿಧ ತೀರ್ಥಗಳ ಬಗ್ಗೆ ಹೇಳುವೆನು. ಕೇಳಿರಿ.

ನಾನು ಮುಂದೆ ವಿವರಿಸುವ ಪುಣ್ಯತೀರ್ಥಗಳಲ್ಲಿ ಸ್ನಾನ, ಜಪ, ಹೋಮ, ಶ್ರಾದ್ಧ, ದಾನ ಮೊದಲಾದ ಸತ್ಕರ್ಮಗಳನ್ನು ಮಾಡಬೇಕು. ಇವುಗಳಲ್ಲಿ ಪ್ರತಿಒಂದು ಕರ್ಮವೂ, ಕುಲದ ಏಳನೆಯ ತಲೆಮಾರಿನವರೆಗಿನ ಜನರನ್ನು ಪವಿತ್ರಗೊಳಿಸುತ್ತದೆ. ಪ್ರಯಾಗಕ್ಷೇತ್ರ ಐದು ಯೋಜನ ವಿಸ್ತಾರವಿದೆ. ಬ್ರಹ್ಮದೇವರೇ ಇದಕ್ಕೆ ಅಭಿಮಾನಿಗಳು. ಇದರ ಮಹಿಮೆಯನ್ನು ಹಿಂದೆ ವರ್ಣಿಸಲಾಗಿದೆ.

**ಕುರುತೀರ್ಥ :** ದೇವತೆಗಳೂ ಈ ತೀರ್ಥವನ್ನು ಪೂಜಿಸುತ್ತಾರೆ. ಈ ತೀರ್ಥದ ಪರಿಸರದಲ್ಲಿ ಋಷಿಗಳ ಆಶ್ರಮಗಳು ಇವೆ. ಈ ತೀರ್ಥ ಸಕಲಪಾಪವನ್ನು ಪರಿಹರಿಸುತ್ತದೆ. ಈ ತೀರ್ಥದಲ್ಲಿ ಸ್ನಾನ ಮಾಡಿ, ದಂಭಮಾತ್ಸರ್ಯಗಳನ್ನು ಬಿಟ್ಟು ಸ್ವಲ್ಪ ದಾನವನ್ನು ಮಾಡಿದರೂ ಎರಡು ಕುಲಗಳ ಶುದ್ಧಿಯಾಗುತ್ತದೆ.

**ಗಯಾತೀರ್ಥ :** ಇದು ಅತ್ಯಂತ ರಹಸ್ಯ ತೀರ್ಥ. ಪಿತೃಗಳಿಗೂ ಇದು ದುರ್ಲಭ. ಇಲ್ಲಿ ಪಿಂಡಪ್ರದಾನ ಮಾಡಿದರೆ ಪಿತೃಗಳಿಂದ ಪಾಪಗಳಿಂದ ಬಿಡುಗಡೆಯನ್ನು ಪಡೆದು

ಸದ್ಗತಿಯನ್ನು ಹೊಂದುತ್ತಾರೆ. ಅಲ್ಲಿ ರುದ್ರದೇವರು ಲೋಕಹಿತಕ್ಕಾಗಿ ಬಂಡೆಯ ಮೇಲೆ ಹೆಜ್ಜೆಯ ಗುರುತನ್ನು ಮೂಡಿಸಿದ್ದಾರೆ. ಆ ರುದ್ರಪಾದದ ಮೇಲೆ ಪಿತೃಗಳಿಗೆ ಪಿಂಡಪ್ರದಾನವನ್ನು ಮಾಡಿ, ಅವರನ್ನು ಸಂತೋಷಗೊಳಿಸಬೇಕು. ಗಯೆಗೆ ಹೋಗಲು ಸಮರ್ಥನಾಗಿದ್ದರೂ ಯಾರು ಹೋಗುವುದಿಲ್ಲವೋ ಅವನ ಬಗ್ಗೆ ಪಿತೃಗಳು, 'ಅವನ ಜೀವನವೇ ವ್ಯರ್ಥವಾಯಿತು,' ಎಂದು ಶೋಕಪಡುತ್ತಾರೆ. ಗಯೆಗೆ ಹೋದವನ ಪಿತೃಗಳು ಅವನನ್ನು ಹಾಡಿ ಪ್ರಶಂಸಿಸುತ್ತಾರೆ. ತಮ್ಮನ್ನು ದಾಟಿಸುತ್ತಾನೆ ಎಂದು ಸಂತೋಷಪಡುತ್ತಾರೆ. ಮಹರ್ಷಿಗಳೂ ಹೀಗೆಯೇ ಗಯೆಗೆ ಹೋದವನನ್ನು ಪ್ರಶಂಸಿಸುತ್ತಾರೆ. ಸ್ವಧರ್ಮ-ಪರಿತ್ಯಾಗವನ್ನು ಮಾಡಿದವರು, ಬೇರೆ ಪಾಪಗಳನ್ನೂ ಮಾಡಿದವರು, ತಮ್ಮ ಕುಲದವ-ನೊಬ್ಬನು ಗಯೆಗೆ ಹೋದರೆ ''ಇವನು ನಮ್ಮನ್ನು ಉದ್ಧರಿಸುತ್ತಾನೆ'' ಎಂದು ಸಂತೋಷಪಡುತ್ತಾರೆ.

ಶೀಲವಂತರೂ, ಗುಣಸಂಪನ್ನರೂ ಆದ ಬಹಳ ಮಕ್ಕಳನ್ನು ಪಡೆಯಬೇಕು. ಅವರಲ್ಲಿ ಒಬ್ಬನಾದರೂ ಗಯೆಗೆ ಹೋಗಬಹುದು. ಇದು ಪ್ರಾಚೀನರ ಆಲೋಚನೆ. ಆದ್ದರಿಂದ ಬ್ರಾಹ್ಮಣನ ಎಲ್ಲ ಪ್ರಯತ್ನಗಳನ್ನು ಮಾಡಿ ಗಯೆಗೆ ಹೋಗಿ ಸಮಾಧಾನ ಚಿತ್ತದಿಂದ ಪಿತೃಗಳಿಗೆ ಪಿಂಡವನ್ನು ದಾನ ಮಾಡಬೇಕು.

ಗಯೆಗೆ ಹೋಗಿ ಪಿಂಡ ಪ್ರದಾನ ಮಾಡುವವರು ಧನ್ಯರು. ಅವರು ತಂದೆ-ತಾಯಿಯ ಕುಲದ ಏಳು ತಲೆಮಾರಿನವರೆಗಿನ ಪೂರ್ವಜರ ಉದ್ಧಾರವನ್ನು ಮಾಡುತ್ತಾರೆ.

**ಪ್ರಭಾಸತೀರ್ಥ** : ಇದೂ ಶ್ರೇಷ್ಠತೀರ್ಥ. ಸಿದ್ಧವಾಸ ಎಂದು ಇದು ಪ್ರಸಿದ್ಧ. ಇಲ್ಲಿ ಭಗವಾನ್ ಶಿವನು ಸನ್ನಿಹಿತನಾಗಿದ್ದಾನೆ. ಈ ತೀರ್ಥದಲ್ಲಿ ಸ್ನಾನಮಾಡಿ, ಶ್ರಾದ್ಧ ಮತ್ತು ಬ್ರಾಹ್ಮಣಾರಾಧನೆಯನ್ನು ಮಾಡುವ ಬ್ರಾಹ್ಮಣನು ಉತ್ತಮವಾದ, ಅಕ್ಷಯವಾದ ಲೋಕವನ್ನು ಹೊಂದುತ್ತಾನೆ.

**ತ್ರ್ಯಯಂಬಕತೀರ್ಥ** : ಈ ತೀರ್ಥವನ್ನು ಎಲ್ಲ ದೇವತೆಗಳೂ ಗೌರವಿಸುತ್ತಾರೆ. ಇಲ್ಲಿ ಸುವರ್ಣಾಕ್ಷ ಎಂದು ಪ್ರಸಿದ್ಧನಾಗಿ ಸನ್ನಿಹಿತನಾಗಿರುವ, ಜಟಾಜೂಟಧರನಾದ, ಮಹಾದೇವನಾದ ರುದ್ರನನ್ನು ಪೂಜಿಸಿದರೆ ಜ್ಯೋತಿಷ್ಟೋಮಯಾಗವನ್ನು ಮಾಡಿದ ಫಲವು ಲಭಿಸುತ್ತದೆ. ಇಲ್ಲಿ ಬ್ರಾಹ್ಮಣರನ್ನು ಪೂಜಿಸಿದರೆ ಗಣಾಧಿಪತಿಯ ಸ್ಥಾನವನ್ನು ಹೊಂದುತ್ತಾನೆ.

**ಸೋಮೇಶ್ವರನ ತೀರ್ಥ** : ಇಲ್ಲಿ ಪರಮೇಷ್ಠಿಯಾದ ರುದ್ರನ ಸನ್ನಿಧಾನವಿದೆ. ಇಲ್ಲಿ ಸ್ನಾನ, ಪೂಜೆ ಇತ್ಯಾದಿಗಳನ್ನು ಮಾಡಿದರೆ ಎಲ್ಲ ವ್ಯಾಧಿಗಳ ಪರಿಹಾರವೂ ಆಗುತ್ತದೆ. ರುದ್ರಸಾಲೋಕ್ಯವೂ ಲಭಿಸುತ್ತದೆ.

**ವಿಜಯತೀರ್ಥ** : ಇದೂ ತೀರ್ಥಗಳ ತೀರ್ಥ. ಇಲ್ಲಿ ವಿಜಯ ಎಂಬ ಹೆಸರಿನ ಶಿವಲಿಂಗವು ಇದೆ. ಇಲ್ಲಿ ಆರು ತಿಂಗಳು ಬ್ರಹ್ಮಚರ್ಯವನ್ನು ಪಾಲಿಸುತ್ತಾ, ಮಿತ ಆಹಾರವನ್ನು ಸೇವಿಸುತ್ತಾ ಧ್ಯಾನವನ್ನು ಮಾಡಿದರೆ ಮುಕ್ತಿಯು ಲಭಿಸುತ್ತದೆ.

ಪೂರ್ವದೇಶದಲ್ಲಿ ಮತ್ತೊಂದು ತೀರ್ಥವಿದೆ. ಇದು ಶಿವನ ಏಕಾಂತಸ್ಥಾನ. ಇಲ್ಲಿ ಸೇವೆಯನ್ನು ಮಾಡಿದವರಿಗೆ ಗಣಾಧಿಪತಿಯ ಸ್ಥಾನವು ಲಭಿಸುತ್ತದೆ. ಇಲ್ಲಿ ಶಿವಭಕ್ತರಿಗೆ ಸ್ವಲ್ಪ ಭೂಮಿಯನ್ನು ದಾನ ಮಾಡಿದರೆ ಸರ್ವಭೂಮಿಯ ಅಧಿಪತಿಯಾದ ರಾಜನೆ ಆಗುತ್ತಾನೆ. ಹೀಗೆ ದಾನ ಮಾಡಿದವನು ಮೋಕ್ಷವನ್ನು ಬಯಸಿದರೆ ಅದನ್ನೇ ಪಡೆಯುತ್ತಾನೆ.

**ಮಹಾನದಿ :** ಇದರ ನೀರು ಬಹಳ ಪವಿತ್ರ. ಎಲ್ಲ ಪಾಪಗಳನ್ನು ಇದು ಪರಿಹರಿಸುತ್ತದೆ. ಗ್ರಹಣ ಕಾಲದಲ್ಲಿ ಇಲ್ಲಿ ಸ್ನಾನಮಾಡಿದರೆ ಎಲ್ಲ ಪಾಪಗಳೂ ನಾಶವಾಗುತ್ತವೆ.

**ವಿರಜಾ :** ಈ ನದಿ ಮೂರುಲೋಕದಲ್ಲಿ ಪ್ರಸಿದ್ಧ. ಇಲ್ಲಿ ಸ್ನಾನ ಮಾಡಿದವನು ಬ್ರಹ್ಮಲೋಕದಲ್ಲಿ ಮಹನೀಯ ಸ್ಥಾನವನ್ನು ಪಡೆಯುತ್ತಾನೆ.

**ಪುರುಷೋತ್ತಮ ತೀರ್ಥ :** ನಾರಾಯಣನ ಸನ್ನಿಧಾನವನ್ನು ಹೊಂದಿರುವ ಈ ತೀರ್ಥದಲ್ಲಿ ಸ್ನಾನಮಾಡಿ, ವಿಷ್ಣುವನ್ನು ಪೂಜಿಸಿ ಬ್ರಾಹ್ಮಣರನ್ನು ಪೂಜಿಸಿದರೆ ವಿಷ್ಣುಲೋಕವನ್ನು ಹೊಂದುವನು.

**ಗೋಕರ್ಣತೀರ್ಥ :** ಇದು ಪರಮತೀರ್ಥ. ಸರ್ವಪಾಪಹರ. ಪರಮೇಷ್ಠಿಯಾದ ಶಂಭುವಿನ ವಾಸಸ್ಥಾನ. ಇಲ್ಲಿರುವ ಮಹಾಬಲೇಶ್ವರ ಲಿಂಗದ ದರ್ಶನವನ್ನು ಮಾಡುವವನ ಎಲ್ಲ ಅಪೇಕ್ಷೆಗಳೂ ಈಡೇರುತ್ತವೆ. ಅವನು ರುದ್ರನಿಗೆ ಪ್ರಿಯನಾಗುತ್ತಾನೆ.

ಗೋಕರ್ಣದ ಉತ್ತರ ದಿಕ್ಕಿನಲ್ಲಿರುವ ಶೂಲಧಾರಿಯಾದ ಶಿವನ ದರ್ಶನವನ್ನು ಮಾಡಿ, ಪೂಜಿಸಿದವನು ಶಿವಸಾಯುಜ್ಯವನ್ನೇ ಪಡೆಯುವನು. ಉತ್ತರಗೋಕರ್ಣದಲ್ಲಿರುವ ಶಿವನು ಸ್ಥಾಣು ಎಂದು ಪ್ರಸಿದ್ಧನಾಗಿದ್ದಾನೆ. ಇವನ ದರ್ಶನದಿಂದ ಎಲ್ಲ ಪಾಪಗಳೂ ನಾಶವಾಗುತ್ತವೆ.

**ಕುಬ್ಜಾಶ್ರಮ :** ಇದು ಮಹಾತ್ಮನಾದ ವಿಷ್ಣುವಿನ ಕ್ಷೇತ್ರ. ಇಲ್ಲಿ ವಿಷ್ಣುವಿನ ಆರಾಧನೆಯನ್ನು ಮಾಡುವವನು ಶ್ವೇತದ್ವೀಪದಲ್ಲಿ ಮಹತ್ವದ ಸ್ಥಾನವನ್ನು ಪಡೆಯುತ್ತಾನೆ. ಇಲ್ಲಿ ತ್ರಿಪುರಾರಿಯಾದ ಶಿವನೂ, ನಾರಾಯಣನೂ ದಕ್ಷಯಜ್ಞದ ಭಂಗವನ್ನು ಮಾಡಿದರು. ಈ ಕ್ಷೇತ್ರ ಒಂದು ಯೋಜನ ವಿಸ್ತಾರವಾಗಿದೆ. ಸಿದ್ಧರೂ, ಋಷಿಗಳೂ ಇಲ್ಲಿ ಇದ್ದಾರೆ.

**ಕೋಕಾಮುಖ ವಿಷ್ಣುತೀರ್ಥ :** ಕೋಕಾಮುಖ ಎಂಬ ಕ್ಷೇತ್ರದಲ್ಲಿ ಈ ತೀರ್ಥವಿದೆ. ಇಲ್ಲಿ ಸ್ನಾನ ಮೊದಲಾದ ಅನುಷ್ಠಾನಗಳನ್ನು ಮಾಡಿದವನು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು ವಿಷ್ಣು ಸಾರೂಪ್ಯವನ್ನು ಹೊಂದುವನು.

**ಸಾಲಿಗ್ರಾಮ ತೀರ್ಥ :** ಇದು ವಿಷ್ಣುಭಕ್ತಿಯನ್ನು ಬೆಳೆಸುವ ಮಹಾತೀರ್ಥ. ಇಲ್ಲಿ ಮರಣವುಂಟಾದರೆ ವಿಷ್ಣುವಿನ ಸಾಕ್ಷಾತ್ಕಾರವುಂಟಾಗುತ್ತದೆ.

ಸದ್ಗತಿಯನ್ನು ಹೊಂದುತ್ತಾರೆ. ಅಲ್ಲಿ ರುದ್ರದೇವರು ಲೋಕಹಿತಕ್ಕಾಗಿ ಬಂಡೆಯ ಮೇಲೆ ಹೆಜ್ಜೆಯ ಗುರುತನ್ನು ಮೂಡಿಸಿದ್ದಾರೆ. ಆ ರುದ್ರಪಾದದ ಮೇಲೆ ಪಿತೃಗಳಿಗೆ ಪಿಂಡಪ್ರದಾನವನ್ನು ಮಾಡಿ, ಅವರನ್ನು ಸಂತೋಷಗೊಳಿಸಬೇಕು. ಗಯೆಗೆ ಹೋಗಲು ಸಮರ್ಥನಾಗಿದ್ದರೂ ಯಾರು ಹೋಗುವುದಿಲ್ಲವೋ ಅವನ ಬಗ್ಗೆ ಪಿತೃಗಳು, 'ಅವನ ಜೀವನವೇ ವ್ಯರ್ಥವಾಯಿತು,' ಎಂದು ಶೋಕಪಡುತ್ತಾರೆ. ಗಯೆಗೆ ಹೋದವನ ಪಿತೃಗಳು ಅವನನ್ನು ಹಾಡಿ ಪ್ರಶಂಸಿಸುತ್ತಾರೆ. ತಮ್ಮನ್ನು ದಾಟಿಸುತ್ತಾನೆ ಎಂದು ಸಂತೋಷಪಡುತ್ತಾರೆ. ಮಹರ್ಷಿಗಳೂ ಹೀಗೆಯೇ ಗಯೆಗೆ ಹೋದವನನ್ನು ಪ್ರಶಂಸಿಸುತ್ತಾರೆ. ಸ್ವಧರ್ಮ-ಪರಿತ್ಯಾಗವನ್ನು ಮಾಡಿದವರು, ಬೇರೆ ಪಾಪಗಳನ್ನೂ ಮಾಡಿದವರು, ತಮ್ಮ ಕುಲದವ-ನೊಬ್ಬನು ಗಯೆಗೆ ಹೋದರೆ ''ಇವನು ನಮ್ಮನ್ನು ಉದ್ಧರಿಸುತ್ತಾನೆ'' ಎಂದು ಸಂತೋಷಪಡುತ್ತಾರೆ.

ಶೀಲವಂತರೂ, ಗುಣಸಂಪನ್ನರೂ ಆದ ಬಹಳ ಮಕ್ಕಳನ್ನು ಪಡೆಯಬೇಕು. ಅವರಲ್ಲಿ ಒಬ್ಬನಾದರೂ ಗಯೆಗೆ ಹೋಗಬಹುದು. ಇದು ಪ್ರಾಚೀನರ ಆಲೋಚನೆ. ಆದ್ದರಿಂದ ಬ್ರಾಹ್ಮಣನ ಎಲ್ಲ ಪ್ರಯತ್ನಗಳನ್ನು ಮಾಡಿ ಗಯೆಗೆ ಹೋಗಿ ಸಮಾಧಾನ ಚಿತ್ತದಿಂದ ಪಿತೃಗಳಿಗೆ ಪಿಂಡವನ್ನು ದಾನ ಮಾಡಬೇಕು.

ಗಯೆಗೆ ಹೋಗಿ ಪಿಂಡ ಪ್ರದಾನ ಮಾಡುವವರು ಧನ್ಯರು. ಅವರು ತಂದೆ-ತಾಯಿಯ ಕುಲದ ಏಳು ತಲೆಮಾರಿನವರೆಗಿನ ಪೂರ್ವಜರ ಉದ್ಧಾರವನ್ನು ಮಾಡುತ್ತಾರೆ.

**ಪ್ರಭಾಸತೀರ್ಥ** : ಇದೂ ಶ್ರೇಷ್ಠತೀರ್ಥ. ಸಿದ್ಧವಾಸ ಎಂದು ಇದು ಪ್ರಸಿದ್ಧ. ಇಲ್ಲಿ ಭಗವಾನ್ ಶಿವನು ಸನ್ನಿಹಿತನಾಗಿದ್ದಾನೆ. ಈ ತೀರ್ಥದಲ್ಲಿ ಸ್ನಾನಮಾಡಿ, ಶ್ರಾದ್ಧ ಮತ್ತು ಬ್ರಾಹ್ಮಣಾರಾಧನೆಯನ್ನು ಮಾಡುವ ಬ್ರಾಹ್ಮಣನು ಉತ್ತಮವಾದ, ಅಕ್ಷಯವಾದ ಲೋಕವನ್ನು ಹೊಂದುತ್ತಾನೆ.

**ತ್ರ್ಯಂಬಕತೀರ್ಥ** : ಈ ತೀರ್ಥವನ್ನು ಎಲ್ಲ ದೇವತೆಗಳೂ ಗೌರವಿಸುತ್ತಾರೆ. ಇಲ್ಲಿ ಸುವರ್ಣಾಕ್ಷ ಎಂದು ಪ್ರಸಿದ್ಧನಾಗಿ ಸನ್ನಿಹಿತನಾಗಿರುವ, ಜಟಾಜೂಟಧರನಾದ, ಮಹಾದೇವನಾದ ರುದ್ರನನ್ನು ಪೂಜಿಸಿದರೆ ಜ್ಯೋತಿಷ್ಟೋಮಯಾಗವನ್ನು ಮಾಡಿದ ಫಲವು ಲಭಿಸುತ್ತದೆ. ಇಲ್ಲಿ ಬ್ರಾಹ್ಮಣರನ್ನು ಪೂಜಿಸಿದರೆ ಗಣಾಧಿಪತಿಯ ಸ್ಥಾನವನ್ನು ಹೊಂದುತ್ತಾನೆ.

**ಸೋಮೇಶ್ವರನ ತೀರ್ಥ** : ಇಲ್ಲಿ ಪರಮೇಷ್ಠಿಯಾದ ರುದ್ರನ ಸನ್ನಿಧಾನವಿದೆ. ಇಲ್ಲಿ ಸ್ನಾನ, ಪೂಜೆ ಇತ್ಯಾದಿಗಳನ್ನು ಮಾಡಿದರೆ ಎಲ್ಲ ವ್ಯಾಧಿಗಳ ಪರಿಹಾರವೂ ಆಗುತ್ತದೆ. ರುದ್ರಸಾಲೋಕ್ಯವೂ ಲಭಿಸುತ್ತದೆ.

**ವಿಜಯತೀರ್ಥ** : ಇದೂ ತೀರ್ಥಗಳ ತೀರ್ಥ. ಇಲ್ಲಿ ವಿಜಯ ಎಂಬ ಹೆಸರಿನ ಶಿವಲಿಂಗವು ಇದೆ. ಇಲ್ಲಿ ಆರು ತಿಂಗಳು ಬ್ರಹ್ಮಚರ್ಯವನ್ನು ಪಾಲಿಸುತ್ತಾ, ಮಿತ ಆಹಾರವನ್ನು ಸೇವಿಸುತ್ತಾ ಧ್ಯಾನವನ್ನು ಮಾಡಿದರೆ ಮುಕ್ತಿಯು ಲಭಿಸುತ್ತದೆ.

ಪೂರ್ವದೇಶದಲ್ಲಿ ಮತ್ತೊಂದು ತೀರ್ಥವಿದೆ. ಇದು ಶಿವನ ಏಕಾಂತಸ್ಥಾನ. ಇಲ್ಲಿ ಸೇವೆಯನ್ನು ಮಾಡಿದವರಿಗೆ ಗಣಾಧಿಪತಿಯ ಸ್ಥಾನವು ಲಭಿಸುತ್ತದೆ. ಇಲ್ಲಿ ಶಿವಭಕ್ತರಿಗೆ ಸ್ವಲ್ಪ ಭೂಮಿಯನ್ನು ದಾನ ಮಾಡಿದರೆ ಸರ್ವಭೂಮಿಯ ಅಧಿಪತಿಯಾದ ರಾಜನೆ ಆಗುತ್ತಾನೆ. ಹೀಗೆ ದಾನ ಮಾಡಿದವನು ಮೋಕ್ಷವನ್ನು ಬಯಸಿದರೆ ಅದನ್ನೇ ಪಡೆಯುತ್ತಾನೆ.

**ಮಹಾನದಿ :** ಇದರ ನೀರು ಬಹಳ ಪವಿತ್ರ. ಎಲ್ಲ ಪಾಪಗಳನ್ನು ಇದು ಪರಿಹರಿಸುತ್ತದೆ. ಗ್ರಹಣ ಕಾಲದಲ್ಲಿ ಇಲ್ಲಿ ಸ್ನಾನಮಾಡಿದರೆ ಎಲ್ಲ ಪಾಪಗಳೂ ನಾಶವಾಗುತ್ತವೆ.

**ವಿರಜಾ :** ಈ ನದಿ ಮೂರುಲೋಕದಲ್ಲಿ ಪ್ರಸಿದ್ಧ. ಇಲ್ಲಿ ಸ್ನಾನ ಮಾಡಿದವನು ಬ್ರಹ್ಮಲೋಕದಲ್ಲಿ ಮಹನೀಯ ಸ್ಥಾನವನ್ನು ಪಡೆಯುತ್ತಾನೆ.

**ಪುರುಷೋತ್ತಮ ತೀರ್ಥ :** ನಾರಾಯಣನ ಸನ್ನಿಧಾನವನ್ನು ಹೊಂದಿರುವ ಈ ತೀರ್ಥದಲ್ಲಿ ಸ್ನಾನಮಾಡಿ, ವಿಷ್ಣುವನ್ನು ಪೂಜಿಸಿ ಬ್ರಾಹ್ಮಣರನ್ನು ಪೂಜಿಸಿದರೆ ವಿಷ್ಣುಲೋಕವನ್ನು ಹೊಂದುವನು.

**ಗೋಕರ್ಣತೀರ್ಥ :** ಇದು ಪರಮತೀರ್ಥ. ಸರ್ವಪಾಪಹರ. ಪರಮೇಷ್ಠಿಯಾದ ಶಂಭುವಿನ ವಾಸಸ್ಥಾನ. ಇಲ್ಲಿರುವ ಮಹಾಬಲೇಶ್ವರ ಲಿಂಗದ ದರ್ಶನವನ್ನು ಮಾಡುವವನ ಎಲ್ಲ ಅಪೇಕ್ಷೆಗಳೂ ಈಡೇರುತ್ತವೆ. ಅವನು ರುದ್ರನಿಗೆ ಪ್ರಿಯನಾಗುತ್ತಾನೆ.

ಗೋಕರ್ಣದ ಉತ್ತರ ದಿಕ್ಕಿನಲ್ಲಿರುವ ಶೂಲಧಾರಿಯಾದ ಶಿವನ ದರ್ಶನವನ್ನು ಮಾಡಿ, ಪೂಜಿಸಿದವನು ಶಿವಸಾಯುಜ್ಯವನ್ನೇ ಪಡೆಯುವನು. ಉತ್ತರಗೋಕರ್ಣದಲ್ಲಿರುವ ಶಿವನು ಸ್ಥಾಣು ಎಂದು ಪ್ರಸಿದ್ಧನಾಗಿದ್ದಾನೆ. ಇವನ ದರ್ಶನದಿಂದ ಎಲ್ಲ ಪಾಪಗಳೂ ನಾಶವಾಗುತ್ತವೆ.

**ಕುಬ್ಜಾಶ್ರಮ :** ಇದು ಮಹಾತ್ಮನಾದ ವಿಷ್ಣುವಿನ ಕ್ಷೇತ್ರ. ಇಲ್ಲಿ ವಿಷ್ಣುವಿನ ಆರಾಧನೆಯನ್ನು ಮಾಡುವವನು ಶ್ವೇತದ್ವೀಪದಲ್ಲಿ ಮಹತ್ವದ ಸ್ಥಾನವನ್ನು ಪಡೆಯುತ್ತಾನೆ. ಇಲ್ಲಿ ತ್ರಿಪುರಾರಿಯಾದ ಶಿವನೂ, ನಾರಾಯಣನೂ ದಕ್ಷಯಜ್ಞದ ಭಂಗವನ್ನು ಮಾಡಿದರು. ಈ ಕ್ಷೇತ್ರ ಒಂದು ಯೋಜನ ವಿಸ್ತಾರವಾಗಿದೆ. ಸಿದ್ಧರೂ, ಋಷಿಗಳೂ ಇಲ್ಲಿ ಇದ್ದಾರೆ.

**ಕೋಕಾಮುಖ ವಿಷ್ಣುತೀರ್ಥ :** ಕೋಕಾಮುಖ ಎಂಬ ಕ್ಷೇತ್ರದಲ್ಲಿ ಈ ತೀರ್ಥವಿದೆ. ಇಲ್ಲಿ ಸ್ನಾನ ಮೊದಲಾದ ಅನುಷ್ಠಾನಗಳನ್ನು ಮಾಡಿದವನು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು ವಿಷ್ಣು ಸಾರೂಪ್ಯವನ್ನು ಹೊಂದುವನು.

**ಸಾಲಿಗ್ರಾಮ ತೀರ್ಥ :** ಇದು ವಿಷ್ಣುಭಕ್ತಿಯನ್ನು ಬೆಳೆಸುವ ಮಹಾತೀರ್ಥ. ಇಲ್ಲಿ ಮರಣವುಂಟಾದರೆ ವಿಷ್ಣುವಿನ ಸಾಕ್ಷಾತ್ಕಾರವುಂಟಾಗುತ್ತದೆ.

**ಅಶ್ವತೀರ್ಥ** : ಇಲ್ಲಿ ನಾರಾಯಣನ ಹಯಗ್ರೀವ ರೂಪವು ಇದೆ. ಸಿದ್ಧರು ಇಲ್ಲಿ ವಾಸಿಸುತ್ತಾರೆ. ಬಹಳ ರಮಣೀಯ.

**ಬ್ರಹ್ಮತೀರ್ಥ** : ಇದು ಮೂರೂ ಲೋಕಗಳಲ್ಲಿ ಪ್ರಸಿದ್ಧ. ಸಿದ್ಧರು ಇಲ್ಲಿ ವಾಸಿಸುತ್ತಾರೆ. ಬಹಳ ಪುಣ್ಯಪ್ರದ.

**ಪುಷ್ಕರ ತೀರ್ಥ** : ಇದು ಎಲ್ಲ ಪಾಪಗಳನ್ನೂ ಪರಿಹರಿಸುತ್ತದೆ. ಇಲ್ಲಿ ಮೃತರಾದರೆ ಬ್ರಹ್ಮಲೋಕ ಪ್ರಾಪ್ತಿಯಾಗುತ್ತದೆ. ಈ ತೀರ್ಥದ ಸ್ಮರಣೆಯೇ ಎಲ್ಲ ಪಾಪಗಳನ್ನು ಪರಿಹರಿಸುತ್ತದೆ. ಇಂದ್ರಲೋಕದಲ್ಲಿ ಅವನ ಜೊತೆ ಸುಖವನ್ನನುಭವಿಸುತ್ತಾನೆ. ಇಲ್ಲಿ ದೇವತೆಗಳು, ಗಂಧರ್ವರು, ಯಕ್ಷರು, ನಾಗಗಳು, ರಾಕ್ಷಸರು, ಸಿದ್ಧರು ಕಮಲದಲ್ಲಿ ಹುಟ್ಟಿದ ಬ್ರಹ್ಮನ ಉಪಾಸನೆಯನ್ನು ಮಾಡುತ್ತಾರೆ. ಈ ತೀರ್ಥದಲ್ಲಿ ಸ್ನಾನವನ್ನು ಮಾಡಿ ಶುದ್ಧನಾಗಿ ಬ್ರಹ್ಮಧ್ಯಾನವನ್ನು ಮಾಡಬೇಕು. ಇಲ್ಲಿ ಬ್ರಾಹ್ಮಣ ಸತ್ಕಾರವನ್ನು ಮಾಡಿದರೆ ಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ. ಇಲ್ಲಿ ಮಹಾತ್ಮನಾದ ಇಂದ್ರನ ಆರಾಧನೆಯನ್ನು ಮಾಡಿದರೆ ಅವನ ಸಾರೂಪ್ಯವನ್ನೇ ಹೊಂದುತ್ತಾನೆ. ಆಗ ಅವನ ಎಲ್ಲ ಅಪೇಕ್ಷೆಗಳೂ ಈಡೇರುತ್ತವೆ.

**ಸಪ್ತಸಾರಸ್ವತ ತೀರ್ಥ** : ಬ್ರಹ್ಮಾದಿದೇವತೆಗಳೂ ಈ ತೀರ್ಥಕ್ಕೆ ಬರುತ್ತಾರೆ. ಇಲ್ಲಿ ರುದ್ರನ ಸನ್ನಿಧಾನವಿದೆ. ಇಲ್ಲಿ ರುದ್ರದೇವರ ಪೂಜೆಯನ್ನು ಮಾಡಿದರೆ ಅಶ್ವಮೇಧದ ಫಲವು ಲಭಿಸುತ್ತದೆ. ಇಲ್ಲಿ ಮಂಕಣಕ ಎಂಬ ಮುನಿಯು ವೃಷಭವಾಹನನಾದ ಶಿವನನ್ನು ಕುರಿತು ತಪಸ್ಸನ್ನು ಮಾಡಿದನು. ತಪಸ್ಸಿನ ತೇಜಸ್ಸಿನಿಂದ ಆ ಮುನಿಯು ಜ್ವಲಿಸುತ್ತಿದ್ದನು. ಅಲ್ಲಿಗೆ ರುದ್ರನು ಬಂದನು. ಆಗ ಸಂತೋಷಾತಿರೇಕದಿಂದ ಅವನು ಕುಣಿದನು. ರುದ್ರನು ಅವನನ್ನು "ಏಕೆ ಈ ನರ್ತನೆ?" ಎಂದು ಕೇಳಿದನು. ಮಂಕಣಕನು ಶಿವನನ್ನು ನೋಡಿಯೂ ನರ್ತನವನ್ನು ನಿಲ್ಲಿಸಲಿಲ್ಲ. ಗರ್ವದಿಂದ ನರ್ತನ ಮಾಡುತ್ತಲೇ ಇದ್ದನು. ಅವನ ಗರ್ವ ಶಾಂತಿಗಾಗಿ ಶಿವನು ತನ್ನ ಶರೀರವನ್ನು ಸೀಳಿ ಬೂದಿಯ ರಾಶಿಯನ್ನು ತೋರಿಸಿ ಹೇಳಿದನು.

"ಬ್ರಾಹ್ಮಣ ಶ್ರೇಷ್ಠನೇ! ನನ್ನ ಶರೀರದಿಂದ ಹುಟ್ಟಿದ ಈ ಭಸ್ಮರಾಶಿಯನ್ನು ನೋಡು. ಇದು ನನ್ನ ತಪಸ್ಸಿನ ಮಹಿಮೆ. ಆದ್ದರಿಂದ ನಿನ್ನಂತಹ ತಪಸ್ವಿ ನೀನೊಬ್ಬನೇ ಅಲ್ಲ. ನಿನಗೆ ಇಂತಹ ಗರ್ವ ಸಲ್ಲದು. ನಾನು ನಿನಗಿಂತ ಬಹಳ ದೊಡ್ಡವನು."

ಶಿವನು ಹೀಗೆ ಪರಮತತ್ವವನ್ನು ಹೇಳಿ ಸಹಸ್ರಶೀರ್ಷನೂ, ಸಹಸ್ರಾಕ್ಷನೂ, ಸಹಸ್ರಪಾದವುಳ್ಳವನೂ, ಕೋರೆಹಲ್ಲಿನಿಂದ ಕರಾಳವಾದ ಮುಖವುಳ್ಳವನೂ, ಜ್ವಾಲೆಯಮಾಲೆಯನ್ನು ಧರಿಸಿದವನೂ ಆಗಿ ಭಯಂಕರ ರೂಪದಿಂದ ನರ್ತನ ಮಾಡಿದನು. ನರ್ತನ ಮುಗಿಯುತ್ತಿದ್ದಂತೆಯೇ ಶಿವನ ಪಾರ್ಶ್ವದಲ್ಲಿ ಮುನಿಯು ದೇವಿಯೊಬ್ಬಳನ್ನು ಕಂಡನು. ಅವಳಿಗೆ ವಿಶಾಲವಾದ ಕಣ್ಣುಗಳಿದ್ದವು. ಅವಳ ವಿಲಾಸ ಮನೋಹರವಾಗಿತ್ತು. ಹತ್ತು ಸಾವಿರ

ಸೂರ್ಯರ ತೇಜಸ್ಸನ್ನು ಹೊಂದಿದ್ದಳು. ಆದರೂ ಪ್ರಸನ್ನಳೂ, ಮಂಗಳಕರಳೂ ಆಗಿದ್ದಳು. ವಿಶ್ವೇಶನಾದ ಶಿವನು ಅಪ್ರತಿಮಕಾಂತಿಯಿಂದ ಕಂಗೊಳಿಸುತ್ತಿದ್ದನು. ಶಿವನನ್ನು, ದೇವಿಯನ್ನೂ ನೋಡಿ ಮಂಕಣಕನು ಹೆದರಿ ನಡುಗಿದನು. ರುದ್ರಾಧ್ಯಾಯ ಮಂತ್ರಗಳನ್ನು ಜಪಿಸುತ್ತಾ ಶಿವನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಭಕ್ತವತ್ಸಲನಾದ ಶಿವನು ಪ್ರಸನ್ನನಾಗಿ ತನ್ನ ಎಂದಿನ ರೂಪವನ್ನು ಧರಿಸಿದನು. ಆ ದೇವಿಯೂ ಅದೃಶ್ಯಳಾದಳು. ಶಿವನು ಭಕ್ತ ಮಂಕಣನನ್ನು ಆಲಿಂಗಿಸಿ "ಭಕ್ತ! ಹೆದರಬೇಡ. ನಿನಗೇನು ಕೊಡಲಿ" ಎಂದು ಕೇಳಿದನು.

ಸಂತುಷ್ಟನಾದ ಮುನಿಯು ತ್ರಿಪುರಾರಿ ಹರನಿಗೆ ಪುನಃ ನಮಸ್ಕರಿಸಿ ವಿಜ್ಞಾಪಿಸಿದನು.

"ಮಹಾದೇವ! ಮಹೇಶ್ವರ! ನಿನಗೆ ನಮಸ್ಕಾರ. ನೀನು ಆಗ ತೋರಿಸಿದ, ಘೋರವಾದ ರೂಪ ಯಾವುದು ? ನಿನ್ನ ಜೊತೆ ಕಾಣಿಸಿ ಅದೃಶ್ಯಳಾದ ಆ ದೇವಿ ಯಾರು ? ದಯವಿಟ್ಟು ತಿಳಿಸು."

ಶಿವನು ಹೇಳಿದನು- "ನಾನು ಇಡೀ ಜಗತ್ತನ್ನು ನೋಡವವನು. ಆದ್ದರಿಂದ ನನಗೆ ಸಾವಿರ ಕಣ್ಣುಗಳು. ನಾನು ಎಲ್ಲರ ಒಳಗೆ ಇದ್ದು ನಿಯಂತ್ರಣವನ್ನು ಮಾಡುತ್ತೇನೆ. ನನ್ನ ಮುಖ ಎಲ್ಲ ಕಡೆ ಪ್ರಕಟವಾಗಬಹುದು. ಆದ್ದರಿಂದ ನಾನು ವಿಶ್ವತೋಮುಖ. ಎಲ್ಲರ ಪಾಪಗಳನ್ನೂ ಸುಡುತ್ತೇನೆ. ನಾನು ಯಮನಿಗೂ ನಿಯಾಮಕ. ಚೇತನಾಚೇತನಾತ್ಮಕವಾದ ಈ ಇಡೀ ಪ್ರಪಂಚವು ನನ್ನ ಪ್ರೇರಣೆಯಿಂದಲೇ ನಡೆಯುತ್ತದೆ. ನಾನು ಪುರುಷೋತ್ತಮ. ನನ್ನ ಪಾರ್ಶ್ವದಲ್ಲಿ ಕಾಣಿಸಿಕೊಂಡ ದೇವಿಯು ಪ್ರಕೃತಿ. ಸತ್ವ, ರಜಸ್ ಮತ್ತು ತಮಸ್ ಎಂಬ ಮೂರು ಗುಣಗಳು ಅವಳ ಸ್ವರೂಪ. ಅವಳಿಗೆ ಮಾಯಾ ಎಂದೂ ಹೆಸರು. ಸನಾತನಳಾದ ಅವಳಿಂದಲೇ ಈ ಜಗತ್ತಿನ ಸೃಷ್ಟಿಯಾಗುತ್ತದೆ. ಪುರುಷೋತ್ತಮನಾದ ನಾನು ಈ ಪ್ರಕೃತಿಯ ಮೂಲಕವೇ ಜಗತ್ತಿಗೆ ಮೋಹವನ್ನುಂಟುಮಾಡುತ್ತೇನೆ. ನಾನೇ ನಾರಾಯಣ. ನನ್ನನ್ನೇ ರುದ್ರ ಎಂದು ಜ್ಞಾನಿಗಳು ಹೇಳುತ್ತಾರೆ. ಆ ದೇವಿ ನನ್ನ ಪರಶಕ್ತಿ. ಅವಳಿಗೆ ವಿದ್ಯಾ ಎಂದು ಹೆಸರು."

"ವಿಷ್ಣು, ಬ್ರಹ್ಮಾ ಮತ್ತು ರುದ್ರ ಈ ತ್ರಿಮೂರ್ತಿಗಳು ಪರಬ್ರಹ್ಮನ ರೂಪಗಳೇ. ಹೀಗೆ ಶ್ರುತಿಗಳು ಹೇಳುತ್ತವೆ. ಈ ಮೂರ್ತಿಗಳಿಗೆ ಆದಿ, ಅಂತ್ಯಗಳು ಇಲ್ಲ. ಪರಬ್ರಹ್ಮನು ಸರ್ವಾಂತರ್ಯಾಮಿ, ಅವ್ಯಕ್ತ ಮತ್ತು ಅಕ್ಷರ ಎಂದು ಶ್ರುತಿಗಳು ಹೇಳುತ್ತವೆ. ಆನಂದರೂಪ, ಚಿನ್ಮಾತ್ರ, ಪರಮಪದ ಎಂದೂ ಹೇಳುತ್ತವೆ. ಈ ಬ್ರಹ್ಮತತ್ವವು ಆಕಾಶದಂತೆ ನಿರ್ವಿಕಾರವಾದುದು."

"ನೀನು ಹೀಗೆ ತಿಳಿದುಕೊಂಡು ಭಕ್ತಿಯೋಗದಿಂದ ನನ್ನನ್ನು ಆರಾಧಿಸಬೇಕು. ಆಗ ನಿನಗೆ ಈಶ್ವರನ ಸಾಕ್ಷಾತ್ಕಾರವಾಗುತ್ತದೆ"

ಶಿವನು ಮಂಕಣ ಮುನಿಗೆ ಹೀಗೆ ಉಪದೇಶಿಸಿ ಅದೃಶ್ಯನಾದನು. ಮುನಿಯು ಈ ಸಪ್ತಸಾರಸ್ವತತೀರ್ಥದಲ್ಲೇ ಭಕ್ತಿಯಿಂದ ರುದ್ರನನ್ನು ಆರಾಧಿಸಿದನು. ಈ ತೀರ್ಥವು ಬಹಳ ಪವಿತ್ರ- ಅಸದೃಶ. ಬ್ರಹ್ಮರ್ಷಿಗಳು ಇಲ್ಲಿ ಸಾಧನೆಯನ್ನು ಮಾಡಿದ್ದಾರೆ. ಇಲ್ಲಿ ಅನುಷ್ಠಾನವನ್ನು ಮಾಡಿದ ಬ್ರಾಹ್ಮಣನು ಜ್ಞಾನಿಯಾಗಿ ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.

* * *

## ಅಧ್ಯಾಯ-೪೯

**ಸೂತ ಉವಾಚ :**

**ರುದ್ರಕೋಟ ತೀರ್ಥ** : ಇದು ದೊಡ್ಡ ತೀರ್ಥ. ಮೂರು ಲೋಕಗಳಲ್ಲಿ ಪ್ರಸಿದ್ಧ. ಇಲ್ಲಿ ಸರ್ವೋತ್ತಮನಾದ ರುದ್ರನ ವಿಶೇಷ ಸನ್ನಿಧಾನವಿದೆ. ಹಿಂದೆ ಒಮ್ಮೆ ಅತ್ಯಂತ ಪುಣ್ಯಕರವಾದ ಕಾಲದಲ್ಲಿ ರುದ್ರದೇವರ ದರ್ಶನಕ್ಕಾಗಿ ಜಿತೇಂದ್ರಿಯರಾದ ಒಂದು ಕೋಟಿ ಬ್ರಹ್ಮರ್ಷಿಗಳು ಅಲ್ಲಿಗೆ ಬಂದರು. ಭಕ್ತರಾದ ಅವರಲ್ಲಿ ಪ್ರತಿಯೊಬ್ಬನಿಗೂ ''ನಾನು ಮೊದಲು ಶಿವನನ್ನು ನೋಡುತ್ತೇನೆ, ನಾನು ಮೊದಲು ನೋಡುತ್ತೇನೆ'' ಎಂದು ಉತ್ಸಾಹದ ವಿವಾದ ನಡೆದಿತ್ತು. ಯೋಗಿಗಳ ಗುರುವಾದ ರುದ್ರನು ಅವರ ಭಕ್ತಿಯನ್ನು ನೋಡಿ ಒಂದು ಕೋಟಿ ರೂಪಗಳನ್ನು ಪಡೆದನು. ಆ ಬ್ರಹ್ಮರ್ಷಿಗಳೆಲ್ಲರೂ ಏಕಕಾಲದಲ್ಲಿ ಮಹಾದೇವರ ದರ್ಶನವನ್ನು ಪಡೆದು ಸಂತುಷ್ಟರಾದರು. ಅವರ ಜ್ಞಾನವೂ ಪುಷ್ಟಿಯನ್ನು ಪಡೆಯಿತು. ಭಕ್ತಿಯಿಂದ ಶಿವನನ್ನು ಧ್ಯಾನಿಸಿದರು. ಪರಮಪದವನ್ನು ಹೊಂದಲು ಬಯಸಿದ್ದ ಅವರೆಲ್ಲರೂ ಆಕಾಶದಲ್ಲಿ ಮಹತ್ತರವೂ, ನಿರ್ಮಲವೂ ಆದ ಜ್ಯೋತಿರ್ಮಂಡಲವನ್ನು ನೋಡಿದರು.

ಈ ತೀರ್ಥದಲ್ಲಿ ರುದ್ರದೇವರು ಕೋಟಿರೂಪಗಳಿಂದ ಸನ್ನಿಹಿತರಾಗಿರುವುದರಿಂದ ಇದು ಅತ್ಯಂತ ಪುಣ್ಯಕರವಾದ ತೀರ್ಥ. ಇಲ್ಲಿ ರುದ್ರರೂಪಗಳ ದರ್ಶನವನ್ನು ಮಾಡಿ ಪೂಜಿಸುವವರು ರುದ್ರದೇವರ ಸಾಮೀಪ್ಯವನ್ನು ಹೊಂದುತ್ತಾರೆ.

**ಮಧುವನ ತೀರ್ಥ** : ಈ ತೀರ್ಥಕ್ಕೆ ಹೋಗಿ ತಪಸ್ಸನ್ನು ಮಾಡುವವರು ಇಂದ್ರಸಿಂಹಾಸನದ ಅರ್ಧದಲ್ಲಿ ಕುಳಿತುಕೊಳ್ಳುವ ಅವಕಾಶವನ್ನು ಪಡೆಯುವರು.

**ಪದ್ಮನಗರೀ ಕ್ಷೇತ್ರ** : ಇಲ್ಲಿಗೆ ಹೋಗಿ ಪಿತೃಗಳ ಆರಾಧನೆಯನ್ನು ಮಾಡಿದರೆ ಕುಲದಲ್ಲಿ ಜನಿಸಿದ ನೂರು ಮಂದಿ ಪೂರ್ವಜರ ಉದ್ಧಾರವಾಗುತ್ತದೆ.

**ಕಾಲಂಜರ ತೀರ್ಥ** : ಇಲ್ಲಿ ಭಕ್ತಪ್ರಿಯನಾದ ಹರನ ಸನ್ನಿಧಾನವಿದೆ. ಇಲ್ಲಿ ಶಿವನನ್ನು ಆರಾಧಿಸಿದವರು ರುದ್ರಲೋಕವನ್ನು ಪಡೆಯುತ್ತಾರೆ.

ಹಿಂದೆ ರಾಜರ್ಷಿಯಾಗಿದ್ದ ಶ್ವೇತ ಎಂಬ ಶಿವಭಕ್ತನು ಸ್ತೋತ್ರ, ನಮಸ್ಕಾರಗಳಿಂದ ಶಿವನನ್ನು ಪೂಜಿಸಿದನು. ಶಾಸ್ತ್ರವಿಧಿಯಂತೆ ಭಕ್ತಿಯಿಂದ ಶಿವನನ್ನು ಪ್ರತಿಷ್ಠಾಪಿಸಿ, ಅವನಲ್ಲೇ ಮನಸ್ಸನ್ನಿಟ್ಟು ನಿರಂತರ ರುದ್ರಮಂತ್ರವನ್ನು ಜಪಿಸಿದನು. ಆಗ ಯಮನು ಕಪ್ಪುಬಣ್ಣದ, ಕಬ್ಬಿಣದ, ಹೊಳೆಯುತ್ತಿದ್ದ ಭಯಂಕರವಾದ ಶೂಲವನ್ನು ಹಿಡಿದು ಆ ರಾಜನಿದ್ದ ಸ್ಥಳಕ್ಕೆ ಅವನನ್ನು ಕರೆದೊಯ್ಯುವುದಕ್ಕಾಗಿ ಬಂದನು.

ಘೋರನೂ, ಭಯಂಕರನೂ ಆದ ಯಮನನ್ನು ನೋಡಿ ಭಯಗೊಂಡ ರಾಜನು ಎರಡೂ ಕೈಗಳಿಂದ ಶಿವಲಿಂಗವನ್ನು ಮುಟ್ಟಿ ತಲೆಬಾಗಿಸಿ ನಮಸ್ಕರಿಸಿ ಶತರುದ್ರಿಯ ಮಂತ್ರಗಳನ್ನು ಜಪಿಸಿದನು. ಜಪಿಸುತ್ತಾ ಶಿವನಿಗೆ ನಮಸ್ಕರಿಸುತ್ತಿದ್ದ ರಾಜನ ಬಳಿ ನಿಂತು ಯಮನು ನಗುತ್ತಾ 'ಬಾ ಬಾ' ಎಂದು ಕರೆದನು. ರುದ್ರ ಪರಾಯಣನಾದ ರಾಜನು ''ರುದ್ರಾರಾಧನೆಯನ್ನು ಮಾಡುತ್ತಿರುವವರನ್ನು ಬಿಟ್ಟು ಇತರರನ್ನು ಕೊಲ್ಲು'' ಎಂದು ಯಮನಿಗೆ ಹೇಳಿದನು. ಹೆದರಿದ ರಾಜನಿಗೆ ಯಮನು ಹೇಳಿದನು. ''ರುದ್ರನನ್ನು ಅರ್ಚಿಸಲಿ, ಬಿಡಲಿ ಎಲ್ಲರೂ ನನಗೆ ವಶರಾಗಲೇಬೇಕು.'' ಹೀಗೆ ಹೇಳಿ ಯಮನು ರಾಜನನ್ನು ಪಾಶಗಳಿಂದ ಕಟ್ಟಿದನು. ರಾಜನು ಶತರುದ್ರಿಯವನ್ನು ಜಪಿಸುತ್ತಲೇ ಇದ್ದನು.

ಆಗ ಆಕಾಶದಲ್ಲಿ ಭೂತಾಧಿಪತಿಯಾದ ಶಿವನ ತೇಜೋಮಂಡಲವು ರಾಜನಿಗೆ ಕಾಣಿಸಿತು. ಅದು ವಿಶಾಲವಾಗಿತ್ತು. ಉಜ್ವಲವಾಗಿತ್ತು. ಜ್ವಾಲೆಗಳ ಮಾಲೆಗಳ ಮಂಡಲವನ್ನು ಸುತ್ತುವರಿದಿದ್ದವು. ಅದು ವಿಶ್ವವ್ಯಾಪಿಯಾಗಿತ್ತು. ಆ ತೇಜೋಮಂಡಲದ ಮಧ್ಯದಲ್ಲಿ ತೇಜಸ್ವಿಯಾದ, ಬಂಗಾರದ ವರ್ಣದ ಶಿವನನ್ನು ನೋಡಿದನು. ಅವನ ಜೊತೆ ಪಾರ್ವತಿಯೂ ಇದ್ದಳು. ಆ ಪರಮಪುರುಷನನ್ನು ನೋಡಿ ರಾಜರ್ಷಿಯು ''ದೇವನು ನನ್ನ ರಕ್ಷಣೆಗಾಗಿಯೇ ಬರುತ್ತಿದ್ದಾನೆ'' ಎಂದು ಭಾವಿಸಿ ಬಹಳ ಸಂತುಷ್ಟನಾದನು. ಯಮನು ಅತಿಹತ್ತಿರದಲ್ಲೇ ಬರುತ್ತಿದ್ದ ಪಾರ್ವತಿ ಸಹಿತ ಪರಮೇಶ್ವರನನ್ನು ನೋಡಿದರೂ ಭಯಪಡದೆ ಆ ರಾಜರ್ಷಿಯನ್ನು ತನ್ನ ಜೊತೆ ಕರೆದೊಯ್ಯುವ ತನ್ನ ನಿರ್ಣಯವನ್ನು ಕೈಬಿಡಲಿಲ್ಲ. ಭೂತಾಧಿಪತಿಯಾದ ಶಿವನು ಯಮನನ್ನು ನೋಡಿ ''ಇವನು ನನ್ನ ಭಕ್ತ, ಇವನನ್ನು ಬಿಟ್ಟುಬಿಡು'' ಎಂದು ದೂರದಿಂದಲೇ ಹೇಳಿದನು. ಯಮನು ಶಿವನ ಮಾತನ್ನು ಲೆಕ್ಕಿಸದೆ ''ಇದು ನನ್ನ ಸ್ವಭಾವ'' ಎಂದು ಹೇಳುತ್ತಾ ರಾಜರ್ಷಿಯನ್ನು ಪಾಶಗಳಿಂದ ಕಟ್ಟಿದನು. ಆಗ ಶಿವನು ರೌದ್ರರೂಪವನ್ನು ತಾಳಿ ವೇಗದಿಂದ ಅಲ್ಲಿಗೆ ಬಂದನು. ಕಾಲನಿಯಾಮಕನಾದ ಯಮನೂ ಕೂಡ ಪಾರ್ವತಿಯನ್ನೇ ನೋಡುತ್ತಾ ಶಿವನ ಕಡೆ ಧಾವಿಸಿದನು. ಆಗ ಶಿವನು ತಿರಸ್ಕಾರದಿಂದ ಅವನನ್ನು ತನ್ನ ಎಡಕಾಲಿನಿಂದ ಒದ್ದನು.

ಶಿವನ ಪಾದಪ್ರಹಾರದಿಂದ ಯಮನು ಸತ್ತುಬಿದ್ದನು. ಪಿನಾಕಧಾರಿಯಾದ ಶಿವನು ಉಮೆಯ ಜೊತೆ ಶೋಭಿಸಿದನು. ರಾಜರ್ಷಿಯು ಶಿವನನ್ನು ನೋಡಿ ಸಂತುಷ್ಟನಾಗಿ ನಮಸ್ಕರಿಸಿದನು. ಹೀಗೆ ಹೇಳುತ್ತಾ ನಮಸ್ಕರಿಸಿದನು.

ನಮೋ ಭವಾಯ ಹೇತವೇ ಹರಾಯ ವಿಶ್ವಶಂಭವೇ ।
ನಮಃ ಶಿವಾಯ ಧೀಮತೇ ನಮೋಽಪವರ್ಗದಾಯಿನೆ ॥

ನಮೋ ನಮೋ ನಮೋ ನಮೋ ಮಹಾವಿಭೂತಯೇ ನಮಃ ।
ವಿಭಾಗಹೀನರೂಪಿಣೇ ನಮೋ ನರಾಧಿಪಾಯತೇ ॥

ನಮೋಽಸ್ತುತೇ ಗಣೇಶ್ವರ ಪ್ರಸನ್ನ ದುಃಖಶಾಸನ ।
ಅನಾದಿನಿತ್ಯಭೂತಯೇ ವರಾಹಶೃಂಗಧಾರಿಣೆ ॥

ನಮೋ ವೃಷಧ್ವಜಾಯತೇ ಕಪಾಲಮಾಲಿನೇ ನಮಃ ।
ನಮೋ ಮಹಾನಗಾಯತೇ ಶಿವಾಯ ಶಂಕರಾಯತೇ ॥

ವಿಶ್ವಕಾರಣನಿಗೆ ಶಿವನಿಗೆ ನಮಸ್ಕಾರ. ವಿಶ್ವಕ್ಕೆ ಸುಖವುಂಟು ಮಾಡುವ ಹರನಿಗೆ ನಮಸ್ಕಾರ. ಧೀಮಂತನಾದ ಶಿವನಿಗೆ ನಮಸ್ಕಾರ. ಮುಕ್ತಿಯನ್ನು ಕೊಡುವ ಶಿವನಿಗೆ ನಮಸ್ಕಾರ. ಮಹಾವಿಭೂತಿಯಾದ ಶಿವನಿಗೆ ಪುನಃಪುನಃ ನಮಸ್ಕಾರ. ಸರ್ವಶಕ್ತನಾದ ಶಿವನಿಗೆ ನಮಸ್ಕಾರ. ನರಾಧಿಪತಿಗೆ ನಮಸ್ಕಾರ. ಗಣಾಧಿಪತಿಯೇ! ದುಃಖನಾಶಕನೇ! ನಿನಗೆ ನಮಸ್ಕಾರ. ಆದಿಯಿಲ್ಲದ, ಸದಾ ವಿಭೂತಿರೂಪನಾದ ನಿನಗೆ ನಮಸ್ಕಾರ. ವರಾಹಶೃಂಗವನ್ನು ಹಿಡಿದಿರುವ ನಿನಗೆ ನಮಸ್ಕಾರ. ವೃಷಭಚಿಹ್ನೆಯನ್ನು ಹೊಂದಿದ ನಿನಗೆ ನಮಸ್ಕಾರ. ಕಪಾಲಮಾಲೆಯನ್ನು ಧರಿಸಿದ ನಿನಗೆ ನಮಸ್ಕಾರ. ಕೈಲಾಸಾಧಿಪತಿಯೇ! ಶಿವನೇ! ಶಂಕರನೇ! ನಿನಗೆ ನಮಸ್ಕಾರ.

ಅನಂತರ ನಮಸ್ಕಾರ ನಿರತನಾದ ರಾಜರ್ಷಿಗೆ ಶಿವನು ತನ್ನ ಗಣಗಳ ಅಧಿಪತಿತ್ವವನ್ನೂ, ತನ್ನ ಸಾರೂಪ್ಯವನ್ನು ಕೊಟ್ಟನು. ಕೂಡಲೇ ಶಿವನು ರಾಜರ್ಷಿಯೊಡನೆ ಮತ್ತು ತನ್ನ ಸೇವಕರೊಡನೆ ಅದೃಶ್ಯನಾದನು.

ಯಮನು ಶಿವನಿಂದ ಹತನಾದದ್ದನ್ನು ನೋಡಿದ ಬ್ರಹ್ಮದೇವನು ''ಇವನನ್ನು ಬದುಕಿಸಬೇಕು'' ಎಂದು ಶಿವನನ್ನು ಬೇಡಿದನು. ''ವೃಷಭವಾಹನನಾದ ಶಿವನೇ! ಯಮನದು ಏನೂ ತಪ್ಪಿಲ್ಲ. ಅವನ ಕೆಲಸವನ್ನು ಅವನು ಮಾಡಿದ್ದಾನೆ. ಮುಂದೆಯೂ ಇವನೇ ಯಮನಾಗಲಿ'' ಎಂದೂ ಹೇಳಿದನು.

ಶಿವನು ಬ್ರಹ್ಮನ ಮಾತನ್ನು ಒಪ್ಪಿ ಹಾಗೆಯೇ ಆಗಲಿ ಎಂದನು. ಯಮನು ಬದುಕಿದನು.

ಕಾಲ ಎಂಬ ಹೆಸರಿನ ಯಮನನ್ನು ಈ ಕ್ಷೇತ್ರದಲ್ಲಿ ಶಿವನು ನಾಶ ಮಾಡಿದ್ದರಿಂದ ಈ ತೀರ್ಥಕ್ಕೆ ಕಾಲಂಜರತೀರ್ಥ ಎಂದು ಹೆಸರು. ಈ ತೀರ್ಥಕ್ಕೆ ಹೋಗಿ ಮಹಾದೇವನನ್ನು ಆರಾಧಿಸುವವನು ಗಣಾಧಿಪತಿ ಸ್ಥಾನವನ್ನು ಪಡೆಯುತ್ತಾನೆ.

* * *

## ಅಧ್ಯಾಯ-೯೦

**ಸೂತ ಉವಾಚ :**

**ಮಹಾಲಯ ಕ್ಷೇತ್ರ** : ಇದು ಪವಿತ್ರಕ್ಷೇತ್ರ. ರಹಸ್ಯ ಸ್ಥಳಗಳಲ್ಲಿ ರಹಸ್ಯ ಸ್ಥಳ. ಇಲ್ಲಿ ಶಿವನ ಸನ್ನಿಧಾನವಿದೆ. ಇಲ್ಲಿ ತ್ರಿಪುರಾಂತಕನಾದ ಶಿವನು ಒಂದು ಶಿಲೆಯ ಮೇಲೆ ತನ್ನ ಪಾದದ ಗುರುತನ್ನು ಮೂಡಿಸಿದ್ದಾನೆ. ಇದು ನಾಸ್ತಿಕರಿಗೆ ಬೋಧಿಸಲು ನಿದರ್ಶನವಾಗಿದೆ. ಇಲ್ಲಿ ಶಿವಭಕ್ತರು ಶರೀರಕ್ಕೆ ಭಸ್ಮವನ್ನು ಲೇಪಿಸಿಕೊಂಡು, ವಿರಕ್ತರಾಗಿ, ವೇದಾಧ್ಯಯನವನ್ನು ಮಾಡುತ್ತಾ ಶಿವನ ಉಪಾಸನೆಯನ್ನು ಮಾಡುತ್ತಾರೆ. ಈ ಕ್ಷೇತ್ರದಲ್ಲಿ ಸ್ನಾನ ಮಾಡಿ, ಭಕ್ತಿಯಿಂದ ಶಿವಪಾದದ ದರ್ಶನವನ್ನು ಮಾಡಿ ತಲೆಬಾಗಿಸಿ ನಮಸ್ಕರಿಸುವವರು ಶಿವನ ಸಾಮೀಪ್ಯವನ್ನು ಹೊಂದುವರು.

**ಕೇದಾರ** : ಇದೂ ಶಿವನ ಸನ್ನಿಧಾನವಿರುವ ಕ್ಷೇತ್ರ. ಇದು ಸಿದ್ಧರ ವಾಸಸ್ಥಳ. ಇಲ್ಲಿ ಸ್ನಾನ ಮಾಡಿ, ಶಿವಾರಾಧನೆಯನ್ನು ಮಾಡಿ, ಇಲ್ಲಿಯ ಶುದ್ಧವಾದ ನೀರನ್ನು ಕುಡಿದವರು ಶಿವನ ಗಣಾಧಿಪತಿಯ ಸ್ಥಾನವನ್ನು ಪಡೆಯುತ್ತಾರೆ. ಇಲ್ಲಿ ಶ್ರಾದ್ಧ, ದಾನ ಮೊದಲಾದ ಕರ್ಮಗಳನ್ನು ಮಾಡಿದರೆ ಅಕ್ಷಯಫಲವು ಲಭಿಸುತ್ತದೆ.

**ಪ್ಲಕ್ಷಾವತರಣ ತೀರ್ಥ** : ಮನಸ್ಸನ್ನು ಗೆದ್ದ ಯೋಗಿಗಳು ಈ ತೀರ್ಥದ ಪರಿಸರದಲ್ಲಿದ್ದು ಸಾಧನೆಯನ್ನು ಮಾಡುತ್ತಾರೆ. ಇಲ್ಲಿ ಅನುಷ್ಠಾನ ಮೊದಲಾದವುಗಳನ್ನು ಮಾಡಿದರೆ ಎಲ್ಲ ಪಾಪಗಳೂ ನಾಶವಾಗುತ್ತವೆ. ಇಲ್ಲಿ ಶ್ರೀನಿವಾಸನ ಸನ್ನಿಧಾನವಿದೆ. ಇಲ್ಲಿ ಅವನ ಆರಾಧನೆಯನ್ನು ಮಾಡಿದವರು ವಿಷ್ಣುಲೋಕದಲ್ಲಿ ಗೌರವದ ಸ್ಥಾನವನ್ನು ಪಡೆಯುತ್ತಾರೆ.

**ಮಗಧಾರಣ್ಯತೀರ್ಥ** : ಈ ಕ್ಷೇತ್ರಕ್ಕೆ ಹೋಗಿ ಅನುಷ್ಠಾನಗಳನ್ನು ಮಾಡಿದವರು ಅಕ್ಷಯವಾದ ಸ್ವರ್ಗಸುಖವನ್ನು ಪಡೆಯುತ್ತಾರೆ.

**ಕನಖಲ ತೀರ್ಥ** : ಮಹಾಪಾತಕಗಳನ್ನು ನಾಶಮಾಡುವ ಪ್ರಭಾವವನ್ನು ಈ ತೀರ್ಥವು ಹೊಂದಿದೆ. ಈ ಸ್ಥಳದಲ್ಲೇ ಶಿವನು ದಕ್ಷನ ಯಜ್ಞವನ್ನು ನಾಶಮಾಡಿದನು. ಇದು ಗಂಗೆ

ಇಲ್ಲಿಯ ಗಂಗೆಯಲ್ಲಿ ಭಕ್ತಿಯಿಂದ ಸ್ನಾನ ಮಾಡಿದವರ ಎಲ್ಲ ಪಾಪಗಳೂ ನಾಶವಾಗುತ್ತವೆ. ಅವರು ಬ್ರಹ್ಮಲೋಕದಲ್ಲಿ ಉತ್ತಮ ಸ್ಥಾನವನ್ನು ಪಡೆಯುತ್ತಾರೆ.

**ಮಹಾತೀರ್ಥ :** ಇದು ನಾರಾಯಣನಿಗೆ ಪ್ರಿಯವಾದ ತೀರ್ಥ. ಇಲ್ಲಿ ಸನ್ನಿಹಿತನಾಗಿರುವ ಹೃಷೀಕೇಶನನ್ನು ಆರಾಧಿಸುವವರು ಶ್ವೇತದ್ವೀಪಕ್ಕೆ ಹೋಗುತ್ತಾರೆ.

**ಶ್ರೀಪರ್ವತತೀರ್ಥ :** ಇಲ್ಲಿ ಪಾರ್ವತೀಪರಮೇಶ್ವರರ ಸನ್ನಿಧಾನವಿದೆ. ಇಲ್ಲಿ ಮೃತರಾದವರು ರುದ್ರಪ್ರಿಯರಾಗುತ್ತಾರೆ. ಇಲ್ಲಿ ಸ್ನಾನ, ಶ್ರಾದ್ಧ, ದಾನಗಳನ್ನು ಮಾಡಿದರೆ ಅಕ್ಷಯಫಲವು ಲಭಿಸುತ್ತದೆ.

**ಗೋದಾವರಿ ನದಿ :** ಇದು ಎಲ್ಲ ಪಾಪಗಳನ್ನೂ ನಾಶಮಾಡುವ ತೀರ್ಥ. ಇಲ್ಲಿ ಸ್ನಾನಮಾಡಿ ವಿಧಿಗನುಗುಣವಾಗಿ ದೇವತೆಗಳಿಗೆ, ಪಿತೃಗಳಿಗೆ ತರ್ಪಣವನ್ನು ಕೊಟ್ಟರೆ ಸರ್ವಪಾಪಗಳೂ ನಾಶವಾಗುತ್ತವೆ. ಸಾವಿರ ಗೋವುಗಳನ್ನು ದಾನಮಾಡಿದರೆ ಬರುವಷ್ಟು ಫಲವೂ ಬರುತ್ತದೆ.

**ಕಾವೇರಿ ನದಿ :** ಇದು ವಿಶಾಲವಾದ ನದಿ. ಇದರ ನೀರು ಬಹಳ ಪವಿತ್ರ. ಇಲ್ಲಿ ಸ್ನಾನ ಮಾಡಿ ತರ್ಪಣವನ್ನು ಕೊಟ್ಟರೆ ಎಲ್ಲ ಪಾಪಗಳಿಂದ ಬಿಡುಗಡೆಯಾಗುತ್ತದೆ.

### ತೀರ್ಥಸೇವೆಯ ಕ್ರಮ

ತೀರ್ಥಸೇವೆಯನ್ನು ಮಾಡುವವರು ತೀರ್ಥಗಳಲ್ಲಿ ಮೂರು ದಿನ ಉಪವಾಸ ಮಾಡಬೇಕು. ಒಂದು ದಿನವಾದರೂ ಉಪವಾಸ ಮಾಡಬೇಕು. ಮಾತು-ಮನಸ್ಸುಗಳೂ, ಕೈ-ಕಾಲುಗಳೂ ಶುದ್ಧವಾಗಿರಬೇಕು. ಆಸೆ-ಚಾಂಚಲ್ಯಗಳು ಇರಬಾರದು. ಹೀಗಿದ್ದು ತೀರ್ಥಸೇವೆಯನ್ನು ಮಾಡಿದರೆ ಪೂರ್ಣಫಲವು ಲಭಿಸುತ್ತದೆ.

**ಸ್ವಾಮಿತೀರ್ಥ :** ಇದು ಮೂರು ಲೋಕಗಳಲ್ಲಿ ಪ್ರಸಿದ್ಧವಾದ ತೀರ್ಥ. ಇಲ್ಲಿ ಸ್ಕಂಧನ ಸನ್ನಿಧಾನವಿದೆ. ಅವನಿಗೆ ದೇವತೆಗಳು ನಿತ್ಯವೂ ನಮಸ್ಕರಿಸುತ್ತಾರೆ. ಇಲ್ಲ ಕುಮಾರಧಾರಾ ಎಂಬ ನದಿಯು ಹರಿಯುತ್ತದೆ. ಇಲ್ಲಿ ಷಣ್ಮುಖನ ಆರಾಧನೆಯನ್ನು ಮಾಡಿದರೆ ಅವನ ಸಾಮೀಪ್ಯವು ಲಭಿಸುತ್ತದೆ.

**ತಾಮ್ರಪರ್ಣಿ ನದಿ :** ಇದು ಮೂರು ಲೋಕಗಳಲ್ಲಿ ಪ್ರಸಿದ್ಧವಾದ ನದಿ. ಇಲ್ಲಿ ಸ್ನಾನ ಮಾಡಿ ಭಕ್ತಿಯಿಂದ ಪಿತೃಗಳಿಗೆ ತರ್ಪಣವನ್ನು ಕೊಟ್ಟರೆ ಪಾಪಮಾಡಿದ ಪಿತೃಗಳೂ ಅವುಗಳಿಂದ ಬಿಡುಗಡೆಯನ್ನು ಪಡೆಯುತ್ತಾರೆ.

**ಚಂದ್ರತೀರ್ಥ :** ಕಾವೇರಿಯ ಉಗಮಸ್ಥಾನದಲ್ಲಿ ಈ ತೀರ್ಥವಿದೆ. ಇಲ್ಲಿ ಶ್ರಾದ್ಧವನ್ನು ಮಾಡಿದರೆ ಮೃತರಿಗೆ ಸದ್ಗತಿಯಾಗುತ್ತದೆ.

**ವಿಂಧ್ಯಪಾದಕ್ಷೇತ್ರ** : ಇಲ್ಲಿ ದೇವೋತ್ತಮನಾದ ಶಿವನ ಸನ್ನಿಧಾನವಿದೆ. ಅವನ ದರ್ಶನಮಾಡುವ ಭಕ್ತರಿಗೆ ಯಮನ ದರ್ಶನವಾಗುವುದಿಲ್ಲ.

**ವೃಷತೀರ್ಥ** : ದೇವಿಕಾನದಿಯ ಒಂದು ಭಾಗ ವೃಷತೀರ್ಥ. ಸಿದ್ಧರು ಇದನ್ನು ಆಶ್ರಯಿಸಿದ್ದರು. ಇಲ್ಲಿ ಸ್ನಾನ ಮಾಡಿ ತರ್ಪಣವನ್ನು ಕೊಟ್ಟವರು ಯೋಗಸಿದ್ಧಿಯನ್ನು ಹೊಂದುತ್ತಾರೆ.

**ದಶಾಶ್ವಮೇಧಿಕತೀರ್ಥ** : ಇಲ್ಲಿ ಸ್ನಾನ-ಅನುಷ್ಠಾನಗಳನ್ನು ಮಾಡಿದವರು ಹತ್ತು ಅಶ್ವಮೇಧವನ್ನು ಮಾಡಿದ ಫಲವನ್ನು ಪಡೆಯುತ್ತಾರೆ. ಅವರ ಎಲ್ಲ ಪಾಪಗಳೂ ನಾಶವಾಗುತ್ತವೆ.

**ಪುಂಡರೀಕ ತೀರ್ಥ** : ಇದರ ಪರಿಸರದಲ್ಲಿ ಬಹಳ ಜನ ಬ್ರಾಹ್ಮಣರು ವಾಸಿಸುತ್ತಾರೆ. ಅವರಿಂದ ಈ ತೀರ್ಥವು ಮಹತ್ವವನ್ನು ಪಡೆದಿದೆ. ಈ ತೀರ್ಥಕ್ಕೆ ಹೋಗಿ ಜಿತೇಂದ್ರಿಯನಾಗಿ ಅನುಷ್ಠಾನಗಳನ್ನು ಮಾಡಿದರೆ ಪುಂಡರೀಕ ಯಾಗದ ಫಲವು ಲಭಿಸುವುದು.

**ಬ್ರಹ್ಮತೀರ್ಥ** : ಇದು ತೀರ್ಥಗಳ ತೀರ್ಥ. ಇಲ್ಲಿ ಬ್ರಹ್ಮದೇವರನ್ನು ಆರಾಧಿಸಿದವರು ಬ್ರಹ್ಮಲೋಕವನ್ನು ಪಡೆಯುತ್ತಾರೆ.

**ವಿನಶನ ತೀರ್ಥ, ಪ್ಲಕ್ಷಪ್ರಸ್ರವಣತೀರ್ಥ, ವ್ಯಾಸತೀರ್ಥ** : ಇವುಗಳು ಸರಸ್ವತೀ ತೀರದಲ್ಲಿರುವ ಉತ್ತಮ ತೀರ್ಥಗಳು.

**ಮೈನಾಕ ಪರ್ವತ** : ಇದು ಪವಿತ್ರ ಕ್ಷೇತ್ರ.

**ಗಂಧಕಾಲೀ ನದಿ** : ಈ ನದಿ ಪಿತೃದೇವತೆಗಳ ನದಿ. ಇಲ್ಲಿ ಸ್ನಾನ ಮಾಡಿದವರು ಸ್ವರ್ಗವನ್ನು ಪಡೆಯುವರು. ಇಲ್ಲಿ ಮೃತರಾದವರು ಪುನಃ ಹುಟ್ಟಿದಾಗ, ಜನ್ಮಾಂತರದ ನೆನಪು ಇರುತ್ತದೆ.

**ಕುಬೇರತುಂಗತೀರ್ಥ** : ಪಾಪವನ್ನು ನಾಶಮಾಡುವ ಈ ತೀರ್ಥದಲ್ಲಿ ಸಿದ್ಧರು, ಚಾರಣರು ಅನುಷ್ಠಾನವನ್ನು ಮಾಡುತ್ತಾರೆ. ಇಲ್ಲಿ ಮೃತರಾದವರು ಕುಬೇರನ ಅನುಯಾಯಿಗಳಾಗುತ್ತಾರೆ.

**ಉಮಾತುಂಗತೀರ್ಥ** : ಇಲ್ಲಿ ಪಾರ್ವತಿಯ ಸನ್ನಿಧಾನವಿದೆ. ಇಲ್ಲಿ ಶಿವನ ಪೂಜೆಯನ್ನು ಮಾಡಿದವರಿಗೆ ಸಾವಿರ ಗೋವುಗಳನ್ನು ದಾನ ಮಾಡಿದ ಫಲವು ಬರುತ್ತದೆ.

**ಭೃಗುತುಂಗ** : ಇಲ್ಲಿ ಆಚರಿಸಲ್ಪಡುವ ತಪಸ್ಸು, ಮಾಡಲ್ಪಡುವ ಶ್ರಾದ್ಧ ಮತ್ತು ದಾನಗಳು ತಂದೆ-ತಾಯಿಯರ ಕುಲದ ಏಳನೆಯವರೆಗಿನ ಪೂರ್ವಜರನ್ನು ಪವಿತ್ರಗೊಳಿಸುತ್ತದೆ.

**ಕಾಶ್ಯಪತೀರ್ಥ** : ಇದು ಕಾಲಸರ್ಪತೀರ್ಥ ಎಂದೂ ಪ್ರಸಿದ್ಧವಾಗಿದೆ. ಇಲ್ಲಿ ಶ್ರಾದ್ಧವನ್ನು ಮಾಡಿದರೆ ಎಲ್ಲ ಪಾಪಗಳು ನಾಶವಾಗುತ್ತವೆ.

**ದಶಾರ್ಣತೀರ್ಥ** : ಇಲ್ಲಿ ಮಾಡಲ್ಪಡುವ ದಾನ, ಶ್ರಾದ್ಧ, ಹೋಮ, ತಪಸ್ಸು, ಜಪ -ಇವುಗಳು ಅಕ್ಷಯ ಫಲವನ್ನು ಕೊಡುತ್ತವೆ.

**ಕುರುಜಾಂಗಲತೀರ್ಥ** : ಇಲ್ಲಿ ದ್ವಿಜರು ಅನುಷ್ಠಾನವನ್ನು ಮಾಡುತ್ತಾರೆ. ದಾನವನ್ನು ಮಾಡಿದರೆ ಬ್ರಹ್ಮಲೋಕದಲ್ಲಿ ಪೂಜ್ಯ ಸ್ಥಾನವನ್ನು ಪಡೆಯುತ್ತಾನೆ.

ವೈತರಣಿ, ಸ್ವರ್ಣವೇದಿ, ಧರ್ಮಪೃಷ್ಠ, ಬ್ರಹ್ಮಕಪಾಲ, ಭರತಾಶ್ರಮ, ಗೃಧ್ರವನ, ಕೌಶಿಕೀ ಸರೋವರ -ಈ ಮಹಾತೀರ್ಥಗಳಲ್ಲಿ ಸ್ನಾನ ಮಾಡಿ ದಾನಮಾಡಿದರೆ ಅಕ್ಷಯಫಲವು ಲಭಿಸುತ್ತದೆ.

**ಮುಂಡಪೃಷ್ಠತೀರ್ಥ** : ಇಲ್ಲಿ ಶಿಲೆಯೊಂದರ ಮೇಲೆ ಶಿವನು ತನ್ನ ಪಾದದ ಗುರುತನ್ನು ಮೂಡಿಸಿದ್ದಾನೆ. ಈ ಪಾದದ ಅರ್ಚನೆಯು ಹಿತವುಂಟುಮಾಡುತ್ತದೆ. ಇದು ಆಸ್ತಿಕ್ಯಕ್ಕೆ ನಿದರ್ಶನವಾಗಿದೆ. ಇಲ್ಲಿ ಸ್ವಲ್ಪ ಕಾಲ ಧರ್ಮಾಚರಣೆ ಮಾಡಿದರೂ ಕೂಡ, ಹಾವು ಜೀರ್ಣವಾದ ಪೊರೆಯನ್ನು ಬಿಡುವಂತೆ, ಪಾಪಗಳನ್ನು ಬಿಡಲು ಸಾಧ್ಯ.

**ಕನಕನಂದತೀರ್ಥ** : ಇದು ತ್ರಿಲೋಕಪ್ರಸಿದ್ಧವಾದ ತೀರ್ಥ. ಬ್ರಹ್ಮಪೃಷ್ಠಕ್ಷೇತ್ರದ ಉತ್ತರದಿಕ್ಕಿನಲ್ಲಿ ಈ ತೀರ್ಥವು ಇದೆ. ಬ್ರಹ್ಮರ್ಷಿಗಳು ಇಲ್ಲಿ ತಪೋನಿರತರಾಗಿದ್ದಾರೆ. ಇಲ್ಲಿ ಸ್ನಾನಮಾಡುವ ದ್ವಿಜರು ಸಶರೀರಿಗಳಾಗಿ ಸ್ವರ್ಗಕ್ಕೆ ಹೋಗುತ್ತಾರೆ. ಇಲ್ಲಿ ಮಾಡಲ್ಪಡುವ ಶ್ರಾದ್ಧವು ಅಕ್ಷಯಫಲವನ್ನು ಕೊಡುತ್ತದೆ. ಇಲ್ಲಿ ಸ್ನಾನ ಮಾಡಿದರೆ ದೇವ-ಋಷಿ-ಪಿತೃ ಋಣಗಳು ತೀರಿಹೋಗುತ್ತವೆ. ಪಾಪಗಳು ನಾಶವಾಗುತ್ತವೆ.

**ಮಾನಸ ಸರೋವರ** : ಇಲ್ಲಿ ಸ್ನಾನ ಮಾಡಿದವರು ಇಂದ್ರನ ಆಸನದ ಅರ್ಧವನ್ನು ಪಡೆಯಲು ಅರ್ಹರಾಗುತ್ತಾರೆ.

**ಉತ್ತರಮಾನಸತೀರ್ಥ** : ಇಲ್ಲಿಗೆ ಹೋಗಿ ಅನುಷ್ಠಾನವನ್ನು ಮಾಡಿದವರು ಅಸದೃಶ ಸಿದ್ಧಿಯನ್ನು ಪಡೆಯುತ್ತಾರೆ. ಇಲ್ಲಿ ಶಕ್ತಿಯಿದ್ದಷ್ಟು ಚೆನ್ನಾಗಿ ಶ್ರಾದ್ಧವನ್ನು ಮಾಡಬೇಕು. ಇದರಿಂದ ದಿವ್ಯವಾದ ಭೋಗಪದಾರ್ಥಗಳ ಆಸೆಯು ಈಡೇರುತ್ತದೆ. ಮೋಕ್ಷಮಾರ್ಗವೂ ತಿಳಿಯುತ್ತದೆ. ಆ ದಾರಿಯಲ್ಲಿ ಸಾಗುವ ಸಾಮರ್ಥ್ಯವೂ ಉಂಟಾಗುತ್ತದೆ.

**ಹಿಮಾಲಯ** : ಇದು ಸಾವಿರಾರು ಯೋಜನ ಉದ್ದವಾಗಿರುವ ಪರ್ವತ. ನಾನಾ ಧಾತುಗಳಿಂದ ಅಲಂಕೃತ. ಸಿದ್ಧರು, ಚಾರಣರು, ದೇವತೆಗಳೂ, ಋಷಿಗಳೂ ಇಲ್ಲಿ ಇದ್ದಾರೆ. ಈ ಪರ್ವತದಲ್ಲಿ ಸುಷುಮ್ನಾ ಎಂಬ ರಮ್ಯವಾದ ಪುಷ್ಕರಿಣಿ ಇದೆ. ಬ್ರಹ್ಮಹತ್ಯೆಯನ್ನು ಮಾಡಿದ

ದ್ವಿಜನು ಇಲ್ಲಿಗೆ ಹೋಗಿ ಸ್ನಾನಮಾಡಿದರೆ ಬ್ರಹ್ಮಹತ್ಯೆಯ ಪಾಪವು ನಾಶವಾಗುತ್ತದೆ. ಇಲ್ಲಿ ಮಾಡಲ್ಪಡುವ ಶ್ರಾದ್ಧವು ಅಕ್ಷಯವಾಗುತ್ತದೆ. ಅಭ್ಯುದಯವನ್ನು ತರುತ್ತದೆ. ತನ್ನ ಹಿಂದಿನ ಮತ್ತು ಮುಂದಿನ ಹತ್ತು ಪಿತೃಗಳು ಸದ್ಗತಿಯನ್ನು ಪಡೆಯುತ್ತಾರೆ. ಹಿಮಾಲಯದ ಎಲ್ಲ ಪ್ರದೇಶಗಳೂ ಪವಿತ್ರ. ಗಂಗೆಯೂ ತಾನು ಹರಿಯುವ ಎಲ್ಲ ಕಡೆ ಪವಿತ್ರ. ಸಮುದ್ರಕ್ಕೆ ಸೇರುವ ನದಿಗಳು ಪವಿತ್ರ. ಸಮುದ್ರವು ನದಿಗಳಿಗಿಂತ ಹೆಚ್ಚು ಪವಿತ್ರ.

**ಬದರಿಕಾಶ್ರಮ :** ಬದರಿಕಾಶ್ರಮಕ್ಕೆ ಹೋದವರು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆಯುತ್ತಾರೆ. ಇಲ್ಲಿ ಪರಮಪೂಜ್ಯಪುರುಷನಾದ ನಾರಾಯಣನು ನರನೊಡನೆ ಇದ್ದಾನೆ. ಇಲ್ಲಿ ಮಾಡಲ್ಪಡುವ ಶ್ರಾದ್ಧ-ದಾನಗಳು ಅಕ್ಷಯವಾಗುತ್ತವೆ.

**ಮಹಾದೇವತೀರ್ಥ :** ಇದು ಬಹಳ ಪವಿತ್ರತೀರ್ಥ. ಇಲ್ಲಿ ಶ್ರಾದ್ಧವನ್ನು ಮಾಡಿದರೆ ಎಲ್ಲ ಪಿತೃಗಳೂ ಸದ್ಗತಿಯನ್ನು ಹೊಂದುತ್ತಾರೆ.

**ದೇವದಾರು ವನ :** ಇದು ಪುಣ್ಯಕ್ಷೇತ್ರ. ಸಿದ್ಧರು, ಗಂಧರ್ವರು ಇಲ್ಲಿ ಇದ್ದಾರೆ. ದೇವೋತ್ತಮನಾದ ಶಿವನು ಇಲ್ಲಿ ಒಂದು ತೀರ್ಥವನ್ನು ನಿರ್ಮಿಸಿದನು. ಇದು ಮಹೇಶ್ವರತೀರ್ಥ. ಇಲ್ಲಿ ಒಮ್ಮೆ ಮಹೇಶ್ವರನು ಸಿದ್ಧಗಂಧರ್ವನ ಮೋಹಕ್ಕೆ ಒಳಪಡಿಸಿ ಅನಂತರ ಅವರ ಮೋಹವನ್ನು ಪರಿಹರಿಸಿ ಅವರಿಂದ ಪೂಜಿತನಾದನು.

ಭಕ್ತಿಪರವಶರಾದ ಮುನಿಗಳಿಗೆ ಮಹೇಶ್ವರನು ಹೇಳಿದನು: ''ರಮ್ಯವಾದ ಈ ಆಶ್ರಮದಲ್ಲಿ ವಾಸಮಾಡಿರಿ. ಭಕ್ತರಾದ ನಿಮಗೆ ಸಿದ್ಧಿಯು ಲಭಿಸುತ್ತದೆ. ಇಲ್ಲಿ ನನ್ನನ್ನು ಪೂಜಿಸುವ ಧರ್ಮಪರಾಯಣರಿಗೆ ನಾನು ಗಣಾಧಿಪತಿಯ ಸ್ಥಾನವನ್ನು ಕೊಡುತ್ತೇನೆ. ಇಲ್ಲಿ ನಾನು ಮತ್ತು ನಾರಾಯಣ ಯಾವಾಗಲೂ ಇರುತ್ತೇವೆ. ಇಲ್ಲಿ ಮೃತರಾದವರಿಗೆ ಪುನರ್ಜನ್ಮವಿಲ್ಲ. ಬೇರೆ ದೂರ ಸ್ಥಳಗಳಲ್ಲಿ ಇರುವ ಜನರು ಈ ಆಶ್ರಮದ ಸ್ಮರಣೆ ಮಾಡಿದರೆ ಅವರ ಎಲ್ಲ ಪಾಪಗಳನ್ನೂ ನಾಶಮಾಡುತ್ತೇನೆ. ಇಲ್ಲಿ ಮಾಡಲ್ಪಡುವ ಶ್ರಾದ್ಧ, ದಾನ, ತಪಸ್ಸು, ಹೋಮ, ಪಿಂಡನಿರ್ವಾಪ, ಧ್ಯಾನ, ಜಪ, ವ್ರತ - ಇವೆಲ್ಲವೂ ಅಕ್ಷಯಫಲವನ್ನು ಕೊಡುತ್ತವೆ. ಆದ್ದರಿಂದ ದ್ವಿಜರು ಎಲ್ಲ ಪ್ರಯತ್ನಗಳನ್ನೂ ಮಾಡಿ ದೇವದಾರು ವನಕ್ಕೆ ಯಾತ್ರೆ ಮಾಡಬೇಕು. ಎಲ್ಲಿ ಮಹೇಶ್ವರನ ಸನ್ನಿಧಾನವಿದೆಯೋ, ಪುರುಷೋತ್ತಮನಾದ ವಿಷ್ಣುವಿನ ಸನ್ನಿಧಾನವಿದೆಯೋ ಅಲ್ಲಿ ಗಂಗೆಯ ಮತ್ತು ಎಲ್ಲ ದೇವತೆಗಳ ಸನ್ನಿಧಾನವಿರುತ್ತದೆ''

* * *

## ಅಧ್ಯಾಯ-೯೧

**ಋಷಯ ಊಚು :**

ಷಡ್ಗುಣೈಶ್ವರ್ಯಸಂಪನ್ನನೂ, ವೃಷಭಧ್ವಜನೂ ಆದ ಶಿವನು ದೇವದಾರು ವನಕ್ಕೆ ಹೋಗಿ ಮುನಿಜನರಿಗೆ ಹೇಗೆ ಮೋಹವುಂಟು ಮಾಡಿದನು? ದಯವಿಟ್ಟು ತಿಳಿಸಿರಿ.

**ಸೂತ ಉವಾಚ :**

ಹಿಂದೆ ದೇವತೆಗಳೂ, ಸಿದ್ಧರೂ ವಾಸಕ್ಕಾಗಿ ಬರುತ್ತಿದ್ದಂತಹ ದೇವದಾರು ವನದಲ್ಲಿ ಸಾವಿರಾರು ಜನ ವಿಪ್ರರು ತಪಸ್ಸು ಮಾಡಿದರು. ಈ ವಿಪ್ರರು ಹೆಂಡತಿ-ಮಕ್ಕಳನ್ನು ಹೊಂದಿದ ಸಂಸಾರಿಗಳಾಗಿದ್ದರು. ಇವರು ವಿವಿಧ ಕಾಮ್ಯಕರ್ಮಗಳನ್ನು ಮಾಡುತ್ತಿದ್ದರು. ವಿವಿಧ ಯಜ್ಞಗಳನ್ನೂ, ತಪಸ್ಸನ್ನೂ ಫಲಾಪೇಕ್ಷೆಯಿಂದ ಮಾಡುತ್ತಿದ್ದರು. ಪ್ರವೃತ್ತಿಮಾರ್ಗ (ಕಾಮ್ಯ-ಕರ್ಮಾಚರಣೆ)ದಲ್ಲಿ ನಿರತರಾದ ಅವರಿಗೆ ಈ ಮಾರ್ಗದ ದೋಷಗಳನ್ನು ತೋರಿಸುವುದಕ್ಕಾಗಿ ಒಮ್ಮೆ ಶಿವನು ದಾರು ವನಕ್ಕೆ ಹೋದನು. ತನ್ನ ವಿಷ್ಣುವನ್ನು ಕರೆದುಕೊಂಡುಹೋದನು.

ಶಿವನು ಇಪ್ಪತ್ತು ವರ್ಷ ವಯಸ್ಸಿನ ಸುಂದರ ರೂಪವನ್ನು ತಾಳಿದನು. ಅವನ ಬಾಹುಗಳು ದೊಡ್ಡದಾಗಿದ್ದವು. ಅಂಗಗಳು ಪುಷ್ಟವಾಗಿದ್ದವು. ಕಣ್ಣುಗಳು ಸುಂದರವಾಗಿದ್ದವು. ಬಹಳ ವಿಲಾಸಿಯಾಗಿದ್ದನು. ಅವನ ದೇಹವು ಬಂಗಾರದ ಬಣ್ಣವನ್ನು ಹೊಂದಿತ್ತು. ಮುಖ ಪೂರ್ಣಚಂದ್ರನಂತೆ ಕಂಗೊಳಿಸುತ್ತಿತ್ತು. ದಿಗಂಬರನಾದ ಜಗದೀಶ್ವರನು ಸರ್ವರತ್ನಗಳಿಂದ ಭೂಷಿತವಾದ ಬಂಗಾರದ ಸರವನ್ನು ಧರಿಸಿದ್ದನು. ಮುಗುಳ್ನಗೆ ಸೂಸುತ್ತಾ ಗಜಗಾಮಿಯಾಗಿ ವಿಪ್ರರ ಬಳಿಗೆ ಬಂದನು.

ಜಗಜ್ಜನ್ಮಾದಿಕಾರಣನಾದ, ಪರಮಪುರುಷನಾದ ಹರಿಯು ಸ್ತ್ರೀ ವೇಷವನ್ನು ಧರಿಸಿ ಶಿವನನ್ನು ಹಿಂಬಾಲಿಸಿದನು. ಹರಿಯ ಸ್ತ್ರೀರೂಪದ ಮುಖ ಪೂರ್ಣಚಂದ್ರನಂತೆ ಕಂಗೊಳಿಸುತ್ತಿತ್ತು. ಪುಷ್ಟವೂ, ಎತ್ತರವೂ ಆದ ಕುಚಗಳು ಅವಳಿಗೆ ಇದ್ದವು. ಶುಭ್ರವಾದ ಮಂದಹಾಸ, ಪ್ರಸನ್ನತೆಗಳು ಬಹಳ ಆಕರ್ಷಕವಾಗಿದ್ದವು. ದಿವ್ಯವಾದ ಪೀತಾಂಬರವನ್ನು ಧರಿಸಿದ್ದ ಆ ರೂಪದ ಬಣ್ಣ ಶ್ಯಾಮಲವಾಗಿತ್ತು. ಕಣ್ಣುಗಳು ಬಹಳ ಸುಂದರವಾಗಿದ್ದವು. ಅವಳು ಹಂಸಗಮನೆಯಾಗಿದ್ದಳು. ವಿಲಾಸಿಯೂ, ಮನೋಹರಳೂ ಆಗಿದ್ದಳು.

ಹೀಗೆ ಭಗವಾನ್ ಶಿವನು ಶ್ರೀಹರಿಯ ಜೊತೆ ಮಾಯೆಯಿಂದ ಜಗತ್ತಿಗೆ ಮೋಹ-ವನ್ನುಂಟು ಮಾಡುತ್ತಾ ದಾರು ವನಕ್ಕೆ ಬಂದನು. ಓಡಾಡುತ್ತಿರುವ ಶಿವನನ್ನು (ಸುಂದರಾಂಗನನ್ನು) ನೋಡಿ, ಅವನ ಮಾಯೆಯಿಂದ, ಮೋಹಕ್ಕೊಳಗಾದ ಮಹಿಳೆಯರು ಅವನನ್ನು ಹಿಂಬಾಲಿಸಿದರು. ಆ ಮಹಿಳೆಯರು ಕಾಮಪೀಡಿತರಾಗಿ ನಾಚಿಕೆಯನ್ನು ಬಿಟ್ಟು, ಅವನ ಜೊತೆ ವಿಲಾಸಿನಿಯರಾಗಿ ಸಂಚರಿಸಿದರು.

ಇಲ್ಲಿಯವರೆಗೆ ಜಿತೇಂದ್ರಿಯರಾಗಿದ್ದ, ತರುಣರಾದ ಋಷಿಪುತ್ರರು ತರುಣಿಯ ವೇಷದಲ್ಲಿರುವ ವಿಷ್ಣುವನ್ನು ನೋಡಿ ಕಾಮಪೀಡಿತರಾಗಿ ಅವನನ್ನೇ ಹಿಂಬಾಲಿಸಿದರು.

ಮಹಿಳೆಯರು ಪತ್ನೀ ಸಹಿತನಾದ ಬಹಳ ಆಕರ್ಷಕನಾಗಿರುವ ಆ ಶಿವನನ್ನು ನೋಡಿ ತಮ್ಮ ನಾಯಕನಂತೆ ಬಗೆದು ವಿಲಾಸಗಳನ್ನು ಮಾಡುತ್ತಾ ಕುಣಿಯಲು, ಹಾಡಲು, ಆರಂಭಿಸಿದರು. ಅವನನ್ನು ಆಲಿಂಗಿಸಿದರು. ಮುನಿಪುತ್ರರಲ್ಲಿ ಕೆಲವರು ಲಕ್ಷ್ಮೀಪತಿಯೂ, ಆದಿದೇವನೂ ಆದ ತರುಣಿಯ ವೇಷದಲ್ಲಿರುವ ವಿಷ್ಣುವನ್ನು ನೋಡಿ ಹತ್ತಿರ ಹೋಗಿ ಮಂದಹಾಸವನ್ನು ಬೀರಿದರು. ಕೆಲವರು ಹಾಡಿದರು. ಹೀಗೆ ಮಾಡುತ್ತಾ ಅವನ ಜೊತೆ ಸಂಚರಿಸಿದರು. ಮಾಯೆಗಳ ಅಧಿಪತಿಯಾದ ಮುರಾರಿ ವಾಸುದೇವನು ಮಾನವರ ಹೃದಯದಲ್ಲಿ ಆಸೆಗಳನ್ನು ಉಂಟುಮಾಡುವನು. ಆಸೆಗಳಿಂದಾಗಿ ಕಾಮ್ಯಕರ್ಮಗಳನ್ನು ಮಾಡುತ್ತಾನೆ. ಆದರಿಂದ ಭೋಗಗಳು ಉಂಟಾಗುತ್ತವೆ.

ಸ್ತ್ರೀಯರಿಗೆ ಮೋಹವುಂಟು ಮಾಡುತ್ತಿರುವ ಶಿವನನ್ನು ಮತ್ತು ತಮ್ಮ ಪುತ್ರರಿಗೆ ಮೋಹವುಂಟು ಮಾಡುತ್ತಿರುವ ವಿಷ್ಣುವನ್ನು ನೋಡಿ ಮುನಿಗಳು ಬಹಳ ಕೋಪಗೊಂಡು ಶಿವನನ್ನು ಕಠೋರವಾಗಿ ಮಾತನಾಡಿದರು. ನಾನಾ ರೀತಿಯಿಂದ ನಿಂದಿಸಿದರು. ಮುನಿಗಳ ಈ ವರ್ತನೆಗೆ ಶಿವನ ಮಾಯೆಯೇ ಕಾರಣ. ಆಕಾಶದಲ್ಲಿ ಮಿನುಗುವ ನಕ್ಷತ್ರಗಳು ಸೂರ್ಯನ ಮೇಲೆ ತಮ್ಮ ಪ್ರಭಾವವನ್ನು ಬೀರಲಾರವು. ಅಂತೆಯೇ ಮುನಿಗಳ ತಪಸ್ಸು ರುದ್ರದೇವರ ಮೇಲೆ ಯಾವ ಪ್ರಭಾವವನ್ನೂ ಬೀರಲಿಲ್ಲ. ಆದರೂ ಆ ಮುನಿಗಳು ಮೋಹಕ್ಕೊಳಗಾಗಿ ಶಿವನನ್ನು ಗದರಿಸಿ "ನೀನು ಯಾರು ?" ಎಂದು ಕೇಳಿದರು.

ಶಿವನು ಹೇಳಿದನು : "ನಾನು ಈ ಪ್ರದೇಶದಲ್ಲಿ ನಿಮ್ಮೊಡನೆ ತಪಸ್ಸನ್ನಾಚರಿಸಲು ಪತ್ನೀಸಹಿತನಾಗಿ ಬಂದಿದ್ದೇನೆ"

ಅವನ ಮಾತನ್ನು ಕೇಳಿ ಭೃಗು ಮೊದಲಾದ ಮಹರ್ಷಿಗಳು "ಭಾರ್ಯೆಯ ಜೊತೆ ತಪಸ್ಸನ್ನು ಮಾಡಲಾಗುವುದಿಲ್ಲ. ಅವಳನ್ನು ಬಿಟ್ಟು ತಪಸ್ಸು ಮಾಡು" ಎಂದು ಹೇಳಿದರು. ಅವರ ಮಾತನ್ನು ಕೇಳಿ ಶಿವನಿಗೆ ನಗು ಬಂದಿತು. ನಗುತ್ತಾ ತನ್ನ ಪಕ್ಕದಲ್ಲಿರುವ ಜಗಜ್ಜನ್ಮಾದಿಕಾರಣನಾದ ಹರಿಯನ್ನು ನೋಡುತ್ತಾ ಹೇಳಿದನು.

"ನೀವು ಧರ್ಮವನ್ನು ತಿಳಿದವರು. ಶಾಂತವಾದ ಮನಸ್ಸನ್ನು ಹೊಂದಿರುವವರು. ನೀವೇ ನಿಮ್ಮ ಹೆಂಡತಿಯರ ರಕ್ಷಣೆಯಲ್ಲಿ ಉತ್ಸುಕರಾಗಿದ್ದೀರಿ. ನನಗೆ 'ಹೆಂಡತಿಯನ್ನು ಬಿಡು' ಎಂದು ಉಪದೇಶಿಸುತ್ತಿದ್ದೀರಿ. ಇದೇನು ವಿಚಿತ್ರ ?"

ಋಷಿಗಳು ಹೇಳಿದರು : "ಧರ್ಮವನ್ನು ಉಲ್ಲಂಘಿಸುವ ಭಾರ್ಯೆಯರನ್ನು ಬಿಡಬೇಕು. ನಮ್ಮ ಹೆಂಡತಿಯರು ಧರ್ಮನಿಷ್ಠರು. ಭಕ್ತರು. ಇವರನ್ನು ಬಿಡಬೇಕಿಲ್ಲ."

ಶಿವನು ಹೇಳಿದನು : ''ಈ ನನ್ನ ಪತ್ನಿಯು ಯಾವ ಉಲ್ಲಂಘನೆಯನ್ನೂ ಮಾಡಿಲ್ಲ. ಆದ್ದರಿಂದ ಇವಳನ್ನು ಬಿಡಬೇಕಿಲ್ಲ.''

ಋಷಿಗಳು ಹೇಳಿದರು : ''ಎಲೈ ಪುರುಷಾಧಮ! ನಿನ್ನ ಹೆಂಡತಿಯು ಪರಪುರುಷರಲ್ಲಿ ಆಸಕ್ತಿ ತೋರಿಸಿದ್ದನ್ನು ನಾವು ನೋಡಿದ್ದೇವೆ. ಆದ್ದರಿಂದ ಅವಳು ವ್ಯಭಿಚಾರಿಣಿ. ನೀನು ಸುಳ್ಳು ಹೇಳುತ್ತಿರುವಿ. ನೀನು ಇಲ್ಲಿಂದ ಕೂಡಲೇ ಹೊರಟುಹೋಗು.''

ಶಿವನು ಹೇಳಿದನು : ''ನಾನು ಸುಳ್ಳು ಹೇಳಿಲ್ಲ. ಸತ್ಯವನ್ನೇ ಹೇಳಿದ್ದೇನೆ. ಇವಳು ವ್ಯಭಿಚಾರಿಣಿ ಎಂದು ನಿಮ್ಮ ಕಲ್ಪನೆಯಷ್ಟೆ''

ಹೀಗೆ ಹೇಳಿ ಶಿವನು ಶ್ರೀಹರಿಯ ಜೊತೆ ಮುನಿಶ್ರೇಷ್ಠರಾದ, ಮಹಾತ್ಮರಾದ ವಸಿಷ್ಠರ ಆಶ್ರಮಕ್ಕೆ ಭಿಕ್ಷೆಗಾಗಿ ಹೋದನು. ತಮ್ಮ ಮನೆಗೆ ಬಂದು ಭಿಕ್ಷೆ ಕೇಳುತ್ತಿರುವ ಶಿವನನ್ನು ನೋಡಿ ವಸಿಷ್ಠನ ಪ್ರಿಯಪತ್ನಿ ಅರುಂಧತಿಯು ಅವನನ್ನು ಸ್ವಾಗತಿಸಿ ನಮಸ್ಕರಿಸಿದಳು. ಅವನ ಪಾದಗಳನ್ನು ತೊಳೆದು ಉತ್ತಮವಾದ ಆಸನವನ್ನು ಕೊಟ್ಟಳು. ಬ್ರಾಹ್ಮಣರ ಹೊಡೆತದಿಂದ ಶಿಥಿಲವಾಗಿದ್ದ ಶರೀರವನ್ನು ನೋಡಿ, ಅರುಂಧತಿಗೆ ವಿಷಾದವಾಯಿತು. ಔಷಧೋಪಚಾರವನ್ನು ಮಾಡಿ ಗಾಯಗಳನ್ನು ಗುಣಪಡಿಸಿದಳು. ದೊಡ್ಡರೀತಿಯಿಂದ ಸತ್ಕಾರವನ್ನು ಮಾಡಿದಳು. ಶಿವನ ಭಾರ್ಯೆಯ ಮೂಲಕ ಪ್ರಾರ್ಥಿಸಿದಳು.

''ನೀನು ಯಾರು ? ಎಲ್ಲಿಂದ ಬಂದದ್ದು ? ನೀವು ಏನು ಮಾಡುವಿರಿ ? ದಯವಿಟ್ಟು ಹೇಳಿರಿ.''

''ನಾನು ಒಬ್ಬ ಶ್ರೇಷ್ಠಸಿದ್ಧಪುರುಷ. ಬ್ರಹ್ಮನೇ ನನಗೆ ಆಧಾರ'' ಎಂದು ಶಿವನು ಹೇಳಿದನು. ಪತಿವ್ರತೆಯಾದ ಅರುಂಧತಿಯನ್ನು ಅನುಗ್ರಹಿಸಿ ಶಿವನು ಅಲ್ಲಿಂದ ಹೊರಟನು.

ನಗ್ನನಾಗಿ, ವಿಕೃತನಾಗಿ ಸಂಚರಿಸುತ್ತಿದ್ದ ಶಿವನನ್ನು ನೋಡಿ ಅಲ್ಲಿದ್ದ ದ್ವಿಜರು ದಂಡಗಳಿಂದ, ಮಣ್ಣಿನ ಹೆಂಟೆಗಳಿಂದ, ಮುಷ್ಟಿಗಳಿಂದ ಹೊಡೆದರು. ''ದುರ್ಬುದ್ಧಿಯವನೇ! ನಿನ್ನ ಈ ಲಿಂಗವನ್ನು ಕಿತ್ತುಹಾಕು'' ಎಂದು ಹೇಳಿದರು.

ಮಹಾಯೋಗಿಯಾದ ಶಿವನು ''ನನ್ನ ಲಿಂಗದ ಮೇಲೆ ನಿಮಗೆ ದ್ವೇಷವಿದ್ದರೆ ಅದನ್ನು ಕಿತ್ತು ಹಾಕುವೆನು'' ಎಂದು ಹೇಳಿ ಕಿತ್ತು ಹಾಕಿದನು.

ಆಗ ದ್ವಿಜರಿಗೆ ಶಿವನಾಗಲಿ, ಅವನ ಅಂಗವಾಗಲಿ, ವಿಷ್ಣುವಾಗಲಿ ಕಾಣಿಸಲಿಲ್ಲ. ಲೋಕಗಳಿಗೆ ಭಯಸೂಚಕ ಭೂಮಿ ಕಂಪಿಸಿತು. ಗ್ರಹಗಳೆಲ್ಲವೂ ಕಳೆಗುಂದಿದವು. ಸಮುದ್ರದಲ್ಲಿ ಕ್ಷೋಭೆ ಉಂಟಾಯಿತು.

ಆಗ ಪತಿವ್ರತೆಯಾದ ಅತ್ರಿ ಮಹರ್ಷಿಗಳ ಪತ್ನಿ ಅನಸೂಯೆಗೆ ಒಂದು ಸ್ವಪ್ನ-ವುಂಟಾಯಿತು. ಭಯಾಕ್ರಾಂತಳಾಗಿ ಅನಸೂಯೆಯು ವಿಪ್ರರಿಗೆ ಹೇಳಿದಳು.

''ತನ್ನ ತೇಜಸ್ಸಿನಿಂದ ಇಡೀ ಜಗತ್ತನ್ನು ಪ್ರಕಾಶಗೊಳಿಸುವ ಶಿವನು, ಶ್ರೀಮನ್ನಾರಾಯಣ-ನೊಡನೆ ಬಂದು ನಮ್ಮ ಮನೆಯಲ್ಲಿ ಭಿಕ್ಷೆ ಬೇಡಿದನು.''

ಅವಳ ಮಾತನ್ನು ಕೇಳಿ ಸಂಶಯವನ್ನು ಹೊಂದಿದ ಮಹರ್ಷಿಗಳು, ಸೃಷ್ಟಿಕರ್ತ್ಯನೂ, ಮಹಾಯೋಗೇಶ್ವರನೂ ಆದ ಬ್ರಹ್ಮದೇವರ ಬಳಿ ಹೋದರು. ಇವರು ಅಲ್ಲಿಗೆ ತಲುಪಿದಾಗ ಬ್ರಹ್ಮಜ್ಞಾನಿಗಳಾದ ಯೋಗಿಗಳು. ಶರೀರಧಾರಿಗಳಾದ ನಾಲ್ಕು ವೇದಗಳೂ, ಗಾಯತ್ರೀ ಮಂತ್ರವೂ ಬ್ರಹ್ಮದೇವರ ಉಪಾಸನೆಯನ್ನು ಮಾಡುತ್ತಿದ್ದರು. ಬ್ರಹ್ಮದೇವರ ಆಸನ ನಾನಾ ಆಶ್ಚರ್ಯದ ಸಂಗತಿಗಳನ್ನು ಹೊಂದಿತ್ತು. ಇಂತಹ ಆಸನಲ್ಲಿ ಶೋಭಿಸುತ್ತಿದ್ದ. ಮಂದಹಾಸ-ಯುಕ್ತನಾಗಿದ್ದ. ಹೊಳೆಯುವ ಕಣ್ಣುಗಳನ್ನು ಹೊಂದಿದ್ದ, ಸಕಲ ವೇದಾಭಿಮಾನಿಯಾದ ಬ್ರಹ್ಮದೇವರನ್ನು ನೋಡಿ ಸಾಷ್ಟಾಂಗ ನಮಸ್ಕಾರ ಮಾಡಿದರು. ಪ್ರಸನ್ನರಾಗಿದ್ದ ಚತುರ್ಮುಖ ಬ್ರಹ್ಮದೇವರು ಆ ವಿಪ್ರರನ್ನು ''ಮುನಿಶ್ರೇಷ್ಠರೇ! ನೀವು ಬಂದ ಕಾರಣವೇನು?'' ಎಂದು ಕೇಳಿದರು.

ಮುನಿಗಳು ತಲೆಯ ಮೇಲೆ ಕೈಜೋಡಿಸಿ ನಡೆದ ವೃತ್ತಾಂತವನ್ನು ತಿಳಿಸಿದರು.

**ಋಷಯ ಊಚು :**

''ದೇವದಾರು ವನ ಎಂಬ ಪುಣ್ಯಕ್ಷೇತ್ರ. ಅಲ್ಲಿಗೆ ಬಹಳ ಸುಂದರನಾದ ಪುರುಷನೊಬ್ಬನು ಸುಂದರಿಯಾದ ಪತ್ನಿಯೊಂದಿಗೆ ನಗ್ನನಾಗಿ ಪ್ರವೇಶಿಸಿದನು. ಅಲ್ಲಿದ್ದ ಸ್ತ್ರೀಯರೆಲ್ಲರೂ ಅವನನ್ನು ನೋಡಿ ಮೋಹಕ್ಕೊಳಗಾದರು. ಆಶ್ರಮದ ಹುಡುಗರೂ ಆ ಸ್ತ್ರೀಯನ್ನು ನೋಡಿ ಕಾಮವಿಕಾರಕ್ಕೆ ಒಳಗಾದರು. ನಾವು ವಿವಿಧ ಶಾಪಗಳನ್ನು ಕೊಟ್ಟೆವು. ಯಾವುದೂ ಸಫಲವಾಗಲಿಲ್ಲ. ನಾವು ಬಹಳ ಹೊಡೆದೆವು. ಅವನ ಲಿಂಗವನ್ನು ಬೀಳಿಸಿದೆವು. ಅವನು ಭಾರ್ಯಾಸಹಿತನಾಗಿ ಅದೃಶ್ಯನಾದನು. ಲಿಂಗವೂ ಅದೃಶ್ಯವಾಯಿತು. ಬಹಳ ಉತ್ಪಾತಗಳು ಉಂಟಾದವು.''

''ಪುರುಷೋತ್ತಮನೇ! ಆ ಪುರುಷ ಯಾರು? ನಾವು ಹೆದರಿ ನಿನ್ನನ್ನು ಆಶ್ರಯಿಸಿದ್ದೇವೆ. ನೀನು ಈ ಜಗತ್ತಿನಲ್ಲಿ ನಡೆಯುವ ಎಲ್ಲ ವಿಚಾರಗಳನ್ನೂ ತಿಳಿದವನು. ನಮ್ಮನ್ನು ದಯವಿಟ್ಟು ರಕ್ಷಿಸು.''

ಹೀಗೆ ಮುನಿಗಳಿಂದ ಪ್ರಾರ್ಥಿತರಾದ ಚತುರ್ಮುಖಬ್ರಹ್ಮದೇವರು ತ್ರಿಶೂಲಧಾರಿಯಾದ ಶಿವನನ್ನು ಧ್ಯಾನಿಸಿ ಕೈಮುಗಿದು ಮಾತನಾಡಿದರು.

**ಬ್ರಹ್ಮಾ ಉವಾಚ :**

"ಅಯ್ಯೋ! ನಿಮಗೆ ಸರ್ವಪುರುಷಾರ್ಥಗಳನ್ನು ನಾಶ ಮಾಡುವ ಕಷ್ಟವು ಉಂಟಾಗಿದೆ. ನಿಮ್ಮ ತಪೋಬಲಕ್ಕೆ ಧಿಕ್ಕಾರ. ನಿಮ್ಮ ತಪಸ್ಸಿಗೆ ಧಿಕ್ಕಾರ. ನಿಮ್ಮ ತಪಸ್ಸು ವ್ಯರ್ಥ. ನಿಮ್ಮ ಪುಣ್ಯದಿಂದ ನಿಮ್ಮ ಹತ್ತಿರ ಬಂದಿದ್ದ ಮಹಾನಿಧಿಯನ್ನು ನೀವು ತಿರಸ್ಕರಿಸಿದ್ದೀರಿ. ಇದಕ್ಕೆ ಮೋಹವೇ ಕಾರಣ. ನಿಮ್ಮ ಆಚರಣೆಗಳು ಸಾರ್ಥಕವಾಗಿ ನಡೆದಿಲ್ಲ. ಆದ್ದರಿಂದಲೇ ಹೀಗೆ ಆಗಿದೆ."

"ಜಿತೇಂದ್ರಿಯರಾದ ಯೋಗಿಗಳು ಯಾವ ನಿಧಿಯನ್ನು ಬಯಸಿ ಮಹಾಪ್ರಯತ್ನವನ್ನು ಮಾಡುತ್ತಾರೋ ಆ ನಿಧಿ ನಿಮ್ಮ ಹತ್ತಿರವೇ ಬಂದಿತ್ತು. ಅದನ್ನು ನೀವು ತಿರಸ್ಕರಿಸಿದ್ದೀರಿ. ವೇದವಾದಿಗಳು ಯಾವ ನಿಧಿಯನ್ನು ಪಡೆಯುವುದಕ್ಕಾಗಿ ವಿವಿಧ ಯಜ್ಞಗಳನ್ನು ಮಾಡುತ್ತಾರೋ ಆ ನಿಧಿ ನಿಮ್ಮ ಹತ್ತಿರವೇ ಬಂದಿದ್ದಾಗ ತಿರಸ್ಕರಿಸಿದ್ದೀರಿ. ನಾನು ಯಾರನ್ನು ಪೂಜಿಸಿ ಈ ಪದವಿಯನ್ನು ಪಡೆದಿರುವೆನೋ ಆ ದೇವನನ್ನು ಮಹಾನಿಧಿಯನ್ನು ನೀವು ತಿರಸ್ಕರಿಸಿದ್ದೀರಿ. ನೀವು ಭಾಗ್ಯಹೀನರು. ಯಾವನು ಸಕಲ ದಿವ್ಯ ಐಶ್ವರ್ಯಗಳ ಮೂಲನಿಧಿಯಾಗಿದ್ದಾನೋ ನಿಮ್ಮಲ್ಲಿಗೆ ಬಂದ ಸುಂದರಪುರುಷ ಮಹೇಶ್ವರನೇ. ಅವನು ಸರ್ವೋತ್ತಮದೇವತೆ. ದೇವತೆಗಳಿಗೆ, ಋಷಿಗಳಿಗೆ, ಪಿತೃಗಳಿಗೆ ಎಲ್ಲರಿಗೂ ಅವನೇ ಗಮ್ಯಸ್ಥಾನ. ಒಂದುಸಾವಿರ ಯುಗಚಕ್ರವು ಕಳೆದಾಗ ಈ ಮಹೇಶ್ವರನು ಕಾಲರೂಪಿಯಾಗಿ (ರುದ್ರರೂಪದಿಂದ) ಜಗತ್ತನ್ನು ಸಂಹರಿಸುತ್ತಾನೆ. ಇವನೇ ತನ್ನ ಸಾಮರ್ಥ್ಯದಿಂದ ಎಲ್ಲ ಪ್ರಜೆಗಳನ್ನೂ ಸೃಷ್ಟಿಸುತ್ತಾನೆ. ಇವನೇ ಚಕ್ರಪಾಣಿ. ಶ್ರೀವತ್ಸ ಇವನ ಲಾಂಛನ. ಇವನೇ ಜಗತ್ತಿನ ಚಕ್ರವರ್ತಿ. ಈ ಮಹೇಶ್ವರನು ಕೃತಯುಗದಲ್ಲಿ ಯೋಗಾಭ್ಯಾಸಕ್ಕೆ ಅಭಿಮಾನಿಯಾಗಿ ಯೋಗಿ ಎಂದು ಪ್ರಸಿದ್ಧನಾಗಿರುತ್ತಾನೆ. ತ್ರೇತಾಯುಗದಲ್ಲಿ ಯಜ್ಞಗಳಿಗೆ ಅಭಿಮಾನಿಯಾಗಿ ಯಜ್ಞ ಎಂಬ ಹೆಸರಿನಿಂದ ಪ್ರಸಿದ್ಧನಾಗಿರುತ್ತಾನೆ. ದ್ವಾಪರದಲ್ಲಿ ಇವನಿಗೆ ಕಾಲ ಎಂದು ಹೆಸರು. ಕಲಿಯುಗದಲ್ಲಿ ಧರ್ಮವನ್ನು ಲಾಂಛನವಾಗಿ ಹೊಂದಿ ಧರ್ಮಕೇತುವಾಗಿರುತ್ತಾನೆ.

ರುದ್ರನಿಗೆ ಮೂರು ಮೂರ್ತಿಗಳು. ತಮೋಗುಣಮಯವಾದ ಅಗ್ನಿ. ರಜೋಗುಣಕ್ಕೆ ಅಭಿಮಾನಿಯಾದ ಬ್ರಹ್ಮ ಮತ್ತು ಸತ್ವಗುಣಕ್ಕೆ ಅಭಿಮಾನಿಯಾದ ವಿಷ್ಣು. ಈ ಮೂರ್ತಿಗಳು ವಿಶ್ವವನ್ನು ವ್ಯಾಪಿಸಿವೆ. ಇವಲ್ಲದೆ ಶಿವನ ದಿಗಂಬರ ಮೂರ್ತಿಯೂ ಪ್ರಸಿದ್ಧ. ಇದು ಮಂಗಳಕರ ಮತ್ತು ಶಾಶ್ವತ. ಈ ಮೂರ್ತಿಯಲ್ಲಿ ಬ್ರಹ್ಮನು ಯೋಗಮಹಿಮೆಯಿಂದ ಇದ್ದಾನೆ.

ನಿಮಗೆ ಕಾಣಿಸಿದ ಪುರುಷನ ಪಕ್ಕದಲ್ಲಿ ಇದ್ದ ಅವನ ಹೆಂಡತಿಯಾಗಿ ನಿಮಗೆ ಕಾಣಿಸಿದ ವ್ಯಕ್ತಿ ಸ್ತ್ರೀ ಅಲ್ಲ. ಪುರುಷನೆ. ಅವನು ಸನಾತನನಾದ, ಪರಮಾತ್ಮನಾದ ನಾರಾಯಣ. ನಾರಾಯಣನಿಂದಲೇ ಈ ಇಡೀ ಜಗತ್ತು ಹುಟ್ಟಿದೆ. ಅವನಲ್ಲೇ ಲಯವನ್ನು ಹೊಂದುತ್ತದೆ. ಮುಕ್ತಿಯನ್ನು ಕೊಡುವವನೂ ಅವನೇ. ಇವನೇ ಎಲ್ಲರಿಗೂ ಅಂತಿಮ ಆಶ್ರಯ. ಇವನನ್ನು ಸಹಸ್ರಶಿರ್ಷ, ಸಹಸ್ರಾಕ್ಷ, ಸಹಸ್ರಪಾತ್, ಏಕಶೃಂಗ, ಮಹಾನ್‌ಆತ್ಮ, ಪುರುಷ, ನಾರಾಯಣ

ಎಂದು ಶ್ರುತಿಯು ವರ್ಣಿಸುತ್ತದೆ. ಇವನಿಂದಲೇ ನೀರಿನ ಸೃಷ್ಟಿ ಆಯಿತು. ಇವನು ಮಾಯಾನಿಯಾಮಕ. ಮೋಕ್ಷವನ್ನು ಅಪೇಕ್ಷಿಸುವ ಬ್ರಾಹ್ಮಣರು ವಿವಿಧ ಮಂತ್ರಗಳಿಂದ ಇವನನ್ನು ಸ್ತುತಿಸುತ್ತಾರೆ. ಕಲ್ಪದ ಕೊನೆಯಲ್ಲಿ ಈ ಪುರುಷೋತ್ತಮನು ಜಗತ್ತನ್ನು ಸಂಹರಿಸಿ ತಾನೊಬ್ಬನೇ ಇರುತ್ತಾನೆ. ಇವನಿಗೆ ಜನ್ಮ-ಮರಣ-ವೃದ್ಧಿಗಳಿಲ್ಲ. ಇವನೇ ಅವ್ಯಕ್ತವಾದ ಮೂಲಪ್ರಕೃತಿ ಎಂದು ವೇದಜ್ಞರು ಹೇಳುತ್ತಾರೆ. ಜಗತ್ತಿನ ಪ್ರಲಯಕಾಲ ಮುಗಿಯುತ್ತ ಬಂದಾಗ ಪುನಃ ಜಗತ್ತನ್ನು ಸೃಷ್ಟಿಸಲು ಬಯಸಿ ಜಗತ್ತಿನ ಬೀಜವನ್ನು ಬ್ರಹ್ಮನ ನಾಭಿಯಲ್ಲಿ ಇಡುತ್ತಾನೆ. ಆ ಬ್ರಹ್ಮನೇ ನಾನು.

ಜಗಜ್ಜನಕನಾದ ಅವನನ್ನು, ಅವನ ಮಾಯೆಯಿಂದ ಮೋಹಿತರಾದ ನೀವು ಗುರುತಿಸಲಿಲ್ಲ. ನಿಮಗೆ ಕಾಣಿಸಿದವನು ಅನಾದಿಯಾದ ಹರ. ಅವನು ವಿಷ್ಣುವಿನ ಜೊತೆಗೆ ಈ ಜಗತ್ತಿನ ಸೃಷ್ಟಿಯನ್ನೂ, ಸಂಹಾರವನ್ನೂ ಮಾಡುತ್ತಾನೆ. ಅವನನ್ನು ಚೆನ್ನಾಗಿ ತಿಳಿದು ಆಶ್ರಯಿಸಿರಿ. ನಿಮಗೆ ಮುಕ್ತಿಯಾಗುತ್ತದೆ.

ಹೀಗೆ ಬ್ರಹ್ಮದೇವರಿಂದ ಉಪದೇಶಿಸಲ್ಪಟ್ಟ ಮರೀಚಿ ಮೊದಲಾದ ಮುನಿಗಳು ಅವರನ್ನು ನಮಸ್ಕರಿಸಿ ಪುನಃ ಕೇಳಿದರು.

* * *

## ಅಧ್ಯಾಯ-೬೨

**ಮುನಿಯ ಊಚು :**

''ದೇವ! ಪಿನಾಕಧರನಾದ ಶಿವನನ್ನು ನಾವು ನೋಡುವ ದಾರಿ ಯಾವುದು ? ದಯವಿಟ್ಟು ತಿಳಿಸಬೇಕು. ನೀನು ಶರಣಾಗತ ರಕ್ಷಕ.''

**ಬ್ರಹ್ಮ ಉವಾಚ :**

''ನೀವು ಯಾವ ಈಶ್ವರಲಿಂಗವನ್ನು ನೆಲಕ್ಕೆ ಬೀಳಿಸಿದಿರೋ ಅದನ್ನು ಹೋಲುವ, ಶ್ರೇಷ್ಠವಾದ ಲಿಂಗವನ್ನು ನಿರ್ಮಿಸಿ ಪತ್ನಿ-ಪುತ್ರರೊಡನೆ ಪೂಜಿಸಿರಿ. ವೇದೋಕ್ತನಿಯಮ-ಗಳನ್ನು ಅನುಸರಿಸಿರಿ. ಬ್ರಹ್ಮಚರ್ಯವನ್ನು ಪಾಲಿಸಿರಿ.

ಋಗ್ವೇದ-ಯಜುರ್ವೇದ-ಸಾಮವೇದಗಳಲ್ಲಿರುವ ಶಿವಮಹಿಮೆಯನ್ನು ಪ್ರತಿಪಾದಿಸುವ ಮಂತ್ರಗಳಿಂದ ಶಿವಲಿಂಗವನ್ನು ಸ್ಥಾಪಿಸಿರಿ. ಶ್ರೇಷ್ಠವಾದ ತಪಸ್ಸನ್ನು ಮಾಡುತ್ತಾ ಶತರುದ್ರಿಯ

ಮಂತ್ರಗಳನ್ನು ಹೇಳುತ್ತಾ, ಏಕಾಗ್ರತೆಯಿಂದ ಪೂಜಿಸಿರಿ. ಮಕ್ಕಳು-ಬಂಧುಗಳು ಎಲ್ಲರೂ ಕೈಮುಗಿದು ಶೂಲಪಾಣಿಯನ್ನು ಆಶ್ರಯಿಸಿರಿ.

ಹೀಗೆ ಮಾಡಿದಾಗ ತಪಸ್ಸನ್ನಾಚರಿಸದ ಜನರಿಗೆ ದರ್ಶನವನ್ನು ಕೊಡದ ಶಿವನ ಸಾಕ್ಷಾತ್ಕಾರ ನಿಮಗೆ ಆಗುತ್ತದೆ. ಅದು ಎಲ್ಲ ಅಜ್ಞಾನ, ಅಧರ್ಮಗಳನ್ನು ನಾಶಮಾಡುತ್ತದೆ.''

ಅನಂತರ ಮುನಿಗಳು ಅಮಿತತೇಜಸ್ವಿಯಾದ ಬ್ರಹ್ಮನಿಗೆ ನಮಸ್ಕರಿಸಿ, ಸಂತುಷ್ಟರಾಗಿ ದೇವದಾರು ವನಕ್ಕೆ ಹಿಂತಿರುಗಿದರು.

**ಮುನಿಗಳ ತಪಸ್ಸು :**

ಬ್ರಹ್ಮದೇವರು ಹೇಳಿದಂತೆ ರಾಗ-ದ್ವೇಷಗಳಿಲ್ಲದೆ ಶಿವನ ಆರಾಧನೆಯನ್ನು ಮಾಡಲು ಆರಂಭಿಸಿದರು. ವಿವಿಧ ಯಜ್ಞಭೂಮಿಗಳಲ್ಲಿ, ಪರ್ವತಗಳ ಗುಹೆಗಳಲ್ಲಿ ನಿರ್ಜನವಾದ ನದೀತೀರದ ಪವಿತ್ರವಾದ ಮರಳುಗಳ ಮೇಲೆ ಶಿವನ ಆರಾಧನೆಯನ್ನು ಮಾಡಿದರು. ಶಿವಾರಾಧನೆಯ ದಿನಗಳಲ್ಲಿ ಕೆಲವರು ಶೈವಾಲ ಎಂಬ ಒಂದು ಬಗೆಯ ಜಲಸಸ್ಯವನ್ನು ಮಾತ್ರ ಸೇವಿಸುತ್ತಿದ್ದರು. ಕೆಲವರು ನೀರಿನೊಳಗೆ ಇದ್ದು ಧ್ಯಾನಮಾಡಿದರು. ಕೆಲವರು ಕಾಲಿನ ಹೆಬ್ಬೆರಳಿನ ಮೇಲೆ ಮಾತ್ರ ನಿಂತು ಧ್ಯಾನಮಾಡಿದರು. ಕೆಲವರು ಕಲ್ಲಿನಿಂದ ಜಜ್ಜಿ ತಿನ್ನ-ಬಹುದಾದ ಆಹಾರವನ್ನು ಮಾತ್ರ ಸೇವಿಸುತ್ತಿದ್ದರು. ಕೆಲವರು ತರಕಾರಿಗಳನ್ನು, ಎಲೆಗಳನ್ನು ಮಾತ್ರ ತಿನ್ನುತ್ತಿದ್ದರು. ಕೆಲವರು ಕಿರಣಗಳನ್ನು ಮಾತ್ರ ಸೇವಿಸುತ್ತಿದ್ದರು. ಶಿವಾರಾಧನೆಯಲ್ಲಿ ನಿರತರಾಗಿದ್ದ ಮುನಿಗಳಲ್ಲಿ ಕೆಲವರು ಮರದ ಕೆಳಗೆ ವಾಸಮಾಡುತ್ತಿದ್ದರು. ಕೆಲವರು ಬಂಡೆಗಳ ಮೇಲೆ ಮಲಗುತ್ತಿದ್ದರು.

**ಮುನಿಗಳಿಗೆ ಶಿವದರ್ಶನ :**

ಶರಣಾಗತರಾದವರ ದುಃಖವನ್ನು ಪರಿಹರಿಸುವ ವೃಷಭಧ್ವಜನಾದ ಹರನು ಮುನಿಗಳಿಗೆ ತತ್ತ್ವಜ್ಞಾನವನ್ನು ಕೊಟ್ಟು ಅನುಗ್ರಹಿಸಲು ನಿರ್ಧರಿಸಿದನು. ಈ ಘಟನೆ ಕೃತಯುಗದಲ್ಲಿ ನಡೆಯಿತು. ಹಿಮಾಲಯದ ಮಂಗಳಕರವಾದ ಶಿಬಿರದಲ್ಲಿರುವ ದೇವದಾರು ವನಕ್ಕೆ ಶಿವನು ಹೋದನು. ಆಗ ಶಿವ ತನ್ನ ಶರೀರಕ್ಕೆ ಭಸ್ಮವನ್ನು ಲೇಪಿಸಿಕೊಂಡಿದ್ದನು. ನಗ್ನನಾಗಿದ್ದನು. ವಿಕಾರವಾಗಿದ್ದನು. ಕೈಯಲ್ಲಿ ಕೊಳ್ಳಿಯನ್ನು ಹಿಡಿದಿದ್ದನು. ಕಣ್ಣುಗಳು ಕೆಂಪಾಗಿದ್ದವು.

ಇಂತಹ ಶಿವ ದೇವದಾರು ವನದಲ್ಲಿ ಕೆಲವು ಕಡೆ ನಿಂತು ಅಟ್ಟಹಾಸ ಮಾಡಿದನು. ಮತ್ತೆ ಕೆಲವು ಕಡೆ ಮಂದಹಾಸದಿಂದ ಹಾಡಿದನು. ಕೆಲವು ಕಡೆ ಅಲಂಕರಿಸಿಕೊಂಡು ನರ್ತನ ಮಾಡಿದನು. ಇನ್ನೂ ಕೆಲವು ಕಡೆ ಪದೇ ಪದೇ ದೊಡ್ಡಧ್ವನಿಯಿಂದ ಕಿರುಚಿದನು. ಆಶ್ರಮಗಳಿಗೆ ಹೋಗಿ ಭಿಕ್ಷೆಯನ್ನು ಬೇಡಿದನು. ಈಗ ಶಿವನ ಜೊತೆ ಪಾರ್ವತಿಯೂ ಇದ್ದಳು.

ಮುನಿಗಳು ದೇವೀಸಹಿತನಾದ ಶಿವನನ್ನು ನೋಡಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು. ಪಾರ್ವತೀ-ಪರಮೇಶ್ವರರನ್ನು ವಿವಿಧ ವೈದಿಕಮಂತ್ರಗಳಿಂದ ಸ್ತೋತ್ರಗಳಿಂದ, ಅಥರ್ವಶಿರಸ್ ಮಂತ್ರಗಳಿಂದ, ಶತರುದ್ರಿಯ ಮಂತ್ರಗಳಿಂದ ಸ್ತುತಿಸಿ ಸಂತೋಷ ಪಡಿಸಿದರು.

## ಮುನಿಗಳ ಶಿವಸ್ತೋತ್ರ

**ನಮೋ ದೇವಾಧಿದೇವಾಯ ಮಹಾದೇವಾಯತೇ ನಮಃ ।**
**ತ್ರ್ಯಂಬಕಾಯ ನಮಸ್ತುಭ್ಯಂ ತ್ರಿಶೂಲವರಧಾರಿಣೇ ॥**

ದೇವಾಧಿದೇವ! ನಿನಗೆ ನಮಸ್ಕಾರ. ಮಹಾದೇವ! ನಿನಗೆ ನಮಸ್ಕಾರ. ಮುಕ್ಕಣ್ಣ ! ನಿನಗೆ ನಮಸ್ಕಾರ. ಶ್ರೇಷ್ಠ ತ್ರಿಶೂಲಧರನೆ! ನಿನಗೆ ನಮಸ್ಕಾರ.

**ನಮೋ ದಿಗ್ವಾಸಸೇ ತುಭ್ಯಂ ವಿಕೃತಾಯ ಪಿನಾಕಿನೇ ।**
**ಸರ್ವಪ್ರಣತದೇವಾಯ ಸ್ವಯಂಪ್ರಣತಾತ್ಮನೇ ॥**

ದಿಗಂಬರನಾದ ನಿನಗೆ ನಮಸ್ಕಾರ. ಪಿನಾಕಧಾರಿಯಾದ ವಿಕೃತನಾದ ನಿನಗೆ ನಮಸ್ಕಾರ. ಎಲ್ಲರಿಂದ ನಮಸ್ಕರಿಸಲ್ಪಡುವ, ಯಾರಿಗೂ ನಮಸ್ಕರಿಸದ ನಿನಗೆ ನಮಸ್ಕಾರ.

**ಅಂತಕಾಂತಕೃತೆ ತುಭ್ಯಂ ಸರ್ವಸಂಹರಣಾಯ ಚ ।**
**ನಮೋಽಸ್ತು ನೃತ್ಯಶೀಲಾಯ ನಮೋ ಭೈರವರೂಪಿಣೇ ॥**

ಅಂತಕನನ್ನೂ ಸಂಹಾರಮಾಡುವ, ಸರ್ವಸಂಹಾರವನ್ನು ಮಾಡುವ ನಿನಗೆ ನಮಸ್ಕಾರ. ನರ್ತನ ಮಾಡುವ ಸ್ವಭಾವವನ್ನು ಹೊಂದಿರುವ, ಭೈರವ ರೂಪನೆ ನಿನಗೆ ನಮಸ್ಕಾರ.

**ನರನಾರೀ ಶರೀರಾಯ ಯೋಗಿನಾಂ ಗುರವೇ ನಮಃ ।**
**ನಮೋ ದಾಂತಾಯ ಶಾಂತಾಯ ತಾಪಸಾಯ ಹರಾಯ ಚ ॥**

ನರನಾರೀ ಶರೀರವನ್ನು ಹೊಂದಿರುವ, ಯೋಗಿಗಳ ಗುರುವಾದ ನಿನಗೆ ನಮಸ್ಕಾರ. ಜಿತೇಂದ್ರಿಯನಾದ, ಶಾಂತನಾದ, ತಪಸ್ವಿಯಾದ ಹರನೇ! ನಿನಗೆ ನಮಸ್ಕಾರ.

**ವಿಭೀಷಣಾಯ ರುದ್ರಾಯ ನಮಸ್ತೇ ಕೃತ್ತಿವಾಸಸೇ ।**
**ನಮಸ್ತೇ ಲೇಲಿಹಾನಾಯ ತ್ರಿಕಂಠಾಯ ಚ ತೇ ನಮಃ ॥**

ಬಹಳ ಭಯಕಾರಿಯಾದ, ಗಜಚರ್ಮಧಾರಿಯಾದ ನಿನಗೆ ನಮಸ್ಕಾರ. ಪ್ರಲಯ-ಕಾಲದಲ್ಲಿ ಎಲ್ಲವನ್ನೂ ನುಂಗುವ ನಿನಗೆ ನಮಸ್ಕಾರ. ವಿಷಕಂಠನಾದ ನಿನಗೆ ನಮಸ್ಕಾರ.

**ಅಘೋರಘೋರರೂಪಾಯ ವಾಮದೇವಾಯ ವೈನಮಃ ।**
**ನಮಃ ಕನಕಮಾಲಾಯ ದೇವ್ಯಾಃ ಪ್ರಿಯಕರಾಯ ಚ ॥**

ಅಘೋರರೂಪವನ್ನು ಮತ್ತು ಘೋರರೂಪವನ್ನೂ ಹೊಂದಿರುವ ವಾಮದೇವನೇ! ನಿನಗೆ ನಮಸ್ಕಾರ. ಸುವರ್ಣಮಾಲೆಯನ್ನು ಧರಿಸಿರುವ ನಿನಗೆ ನಮಸ್ಕಾರ. ದೇವಿಗೆ ಪ್ರಿಯಕರನಾದ ನಿನಗೆ ನಮಸ್ಕಾರ.

**ಗಂಗಾಸಲಿಲಧಾರಾಯ ಶಂಭವೇ ಪರಮೇಷ್ಠಿನೇ ।**
**ನಮೋ ಯೋಗಾಧಿಪತಯೇ ಭೂತಾಧಿಪತಯೇ ನಮಃ ॥**

ಗಂಗಾಧರನೆ! ಸುಖಕರನೇ! ಪರಮೇಷ್ಠಿಯೇ! ನಿನಗೆ ನಮಸ್ಕಾರ. ಯೋಗಾಧಿಪತಿಯೂ, ಭೂತಾಧಿಪತಿಯೂ ಆದ ನಿನಗೆ ನಮಸ್ಕಾರ.

**ಪ್ರಾಣಾಯ ಚ ನಮಸ್ತುಭ್ಯಂ ನಮೋ ಭಸ್ಮಾಂಗಧಾರಿಣೇ ।**
**ನಮಸ್ತೇ ಹವ್ಯವಾಹಾಯ ದಂಷ್ಟ್ರಿಣೇ ಹವ್ಯರೇತಸೇ ॥**

ಪ್ರಾಣಸ್ವರೂಪನೇ! ನಿನಗೆ ನಮಸ್ಕಾರ. ಭಸ್ಮವನ್ನು ಧರಿಸಿರುವ ನಿನಗೆ ನಮಸ್ಕಾರ. ಹವ್ಯಗಳನ್ನು ದೇವತೆಗಳಿಗೆ ತಲುಪಿಸುವ, ರೇತಸ್ಸನ್ನು ಹವ್ಯವಾಗಿಸಿ ಸೃಷ್ಟಿಮಾಡುವ, ಕೋರೆ ಹಲ್ಲುಗಳನ್ನು ಹೊಂದಿರುವವನೆ ನಿನಗೆ ನಮಸ್ಕಾರ.

**ಬ್ರಹ್ಮಣಶ್ಚ ಶಿರೋಹರ್ತ್ರೇ ನಮಸ್ತೇ ಕಾಲರೂಪಿಣೇ ।**
**ಆಗತಿಂ ತೇ ನ ಜಾನೀಮೋ ಗತಿಂ ನೈವ ಚ ನೈವ ಚ ॥**

ಚತುರ್ಮುಖಬ್ರಹ್ಮನ ತಲೆಯನ್ನು ಕತ್ತರಿಸಿದ, ಉಗ್ರರೂಪಿಯಾದ ನಿನಗೆ ನಮಸ್ಕಾರ. ನಿನ್ನ ಆಗಮನವೂ ನಮಗೆ ತಿಳಿದಿಲ್ಲ. ಗಮನವೂ ತಿಳಿದಿಲ್ಲ.

**ವಿಶ್ವೇಶ್ವರ ಮಹಾದೇವ ಯೋಽಸಿ ಸೋಽಸಿ ನಮೋಸ್ತು ತೇ ।**
**ನಮಃ ಪ್ರಮಥನಾಥಾಯ ದಾತ್ರೇ ಚ ಶುಭಸಂಪದಾಮ್ ॥**

ವಿಶ್ವಕ್ಕೆ ಈಶ್ವರನೇ! ಮಹಾದೇವನೇ! ನೀನು ಯಾರು ಆಗಿರುವಿಯೋ ಅವನೇ ಆಗಿರುವಿ. ನಿನ್ನನ್ನೇ ನಾವು ತಿಳಿಯಲಾರೆವು. ಪ್ರಮಥನಾಥನೇ! ಶುಭಸಂಪತ್ತುಗಳನ್ನು ಕೊಡುವವನೇ! ನಿನಗೆ ನಮಸ್ಕಾರ.

**ಕಪಾಲಪಾಣಯೇ ತುಭ್ಯಂ ನಮೋ ಜುಷ್ಟತಮಾಯ ತೇ ।**
**ನಮಃಕನಕಪಿಂಗಾಯ ವಾರಿಲಿಂಗಾಯ ತೇ ನಮಃ ॥**

ಕೈಯಲ್ಲಿ ಕಪಾಲವನ್ನು ಹಿಡಿದಿರುವ ನಿನಗೆ ನಮಸ್ಕಾರ. ಎಲ್ಲರಿಗಿಂತ ಹೆಚ್ಚಾಗಿ ಭಕ್ತರಿಂದ ಪ್ರೀತಿಸಲ್ಪಟ್ಟ ನಿನಗೆ ನಮಸ್ಕಾರ. ಸುವರ್ಣಪಿಂಗಳವರ್ಣದ ನಿನಗೆ ನಮಸ್ಕಾರ. ನೀರು ನಿನ್ನ ಶರೀರ. ಅಂತಹ ನಿನಗೆ ನಮಸ್ಕಾರ.

**ನಮೋ ವಹ್ನ್ಯರ್ಕಲಿಂಗಾಯ ಜ್ಞಾನಲಿಂಗಾಯ ತೇ ನಮಃ ।**
**ನಮೋ ಭುಜಂಗಹಾರಾಯ ಕರ್ಣಿಕಾರಪ್ರಿಯಾಯ ಚ ॥**

ಅಗ್ನಿ, ಸೂರ್ಯರೂ ನಿನ್ನ ಶರೀರವೇ. ಜ್ಞಾನವೂ ನಿನ್ನ ಶರೀರವೇ. ಅಂತಹ ನಿನಗೆ ನಮಸ್ಕಾರ. ಸರ್ಪಗಳನ್ನು ಮಾಲೆಯಾಗಿ ಧರಿಸುವ ನಿನಗೆ ನಮಸ್ಕಾರ. ಕರ್ಣಿಕಾರಪುಷ್ಪಗಳ ಮೇಲೆ ಪ್ರೀತಿ ಇರುವ ನಿನಗೆ ನಮಸ್ಕಾರ.

**ಕಿರೀಟಿನೇ ಕುಂಡಲಿನೇ ಕಾಲಕಾಲಾಯ ತೇ ನಮಃ ।**

ಕಿರೀಟಧಾರಿಯಾದ, ಕುಂಡಲಧಾರಿಯಾದ, ಸಂಹಾರಕರನ್ನು ಸಂಹಾರಮಾಡುವ ನಿನಗೆ ನಮಸ್ಕಾರ.

**ಮಹಾದೇವ ಮಹಾದೇವ ದೇವದೇವ ತ್ರಿಲೋಚನ ।**
**ಕ್ಷಮ್ಯತಾಂ ಯತ್ಕೃತಂ ಮೋಹಾತ್ ತ್ವಮೇವ ಶರಣಂ ಹಿನಃ ॥**

ದೇವೋತ್ತಮ! ಮುಕ್ಕಣ್ಣ! ಮಹಾದೇವ! ಮೋಹದಿಂದ ನಾವು ಮಾಡಿದ ಅಪರಾಧಗಳನ್ನು ಕ್ಷಮಿಸು. ನೀನೇ ನಮಗೆ ಗತಿ.

**ಚರಿತಾನಿ ವಿಚಿತ್ರಾಣಿ ಗುಹ್ಯಾನಿ ಗಹನಾನಿ ಚ ।**
**ಬ್ರಹ್ಮಾದೀನಾಂ ಚ ಸರ್ವೇಷಾಂ ದುರ್ವಿಜ್ಞೆಯೋ ಹಿ ಶಂಕರಃ ॥**

ನಿನ್ನ ಕಾರ್ಯಗಳು ವಿಚಿತ್ರ. ಗಹನ. ಅರ್ಥವಾಗುವುದಿಲ್ಲ. ಬ್ರಹ್ಮಾದಿ ದೇವತೆಗಳಿಗೂ ಶಿವನನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ.

**ಅಜ್ಞಾನಾದ್ಯದಿ ವಾ ಜ್ಞಾನಾದ್ಯಂತ್ಕಿಂಚಿತ್ಕುರುತೇ ನರಃ ।**
**ತತ್ಸರ್ವಂ ಭಗವಾನೇವ ಕುರುತೇ ಯೋಗಮಾಯಯಾ ॥**

ಯಾವುದೇ ಮನುಷ್ಯ ಜ್ಞಾನದಿಂದ ಅಥವಾ ಅಜ್ಞಾನದಿಂದ ಯಾವ ಕೆಲಸಗಳನ್ನು ಮಾಡುತ್ತಾನೋ ಅದೆಲ್ಲವೂ ಶಿವನ ಪ್ರೇರಣೆಯಿಂದಲೇ ನಡೆಯುತ್ತದೆ. ಸರ್ವಪ್ರೇರಕನಾಗಿರುವ ಯೋಗಶಕ್ತಿ ಶಿವನಿಗಿದೆ.

ಶಿವನ ಮಹಿಮೆಯ ಅನುಸಂಧಾನದಲ್ಲಿ ಮುಳುಗಿದ್ದ ಮುನಿಗಳೆಲ್ಲರೂ ಹೀಗೆ ಶಿವನನ್ನು ಸ್ತುತಿಸಿ, ನಮಸ್ಕರಿಸಿ ''ನಿನ್ನ ಎಂದಿನ ರೂಪವನ್ನು ತೋರಿಸಬೇಕು'' ಎಂದು ಪ್ರಾರ್ಥಿಸಿದರು.

ಅವರ ಸ್ತೋತ್ರವನ್ನು ಕೇಳಿ ಪಾರ್ವತೀ ಸಹಿತನಾದ ಚಂದ್ರಶೇಖರನಾದ ಶಿವನು ತನ್ನ ಎಂದಿನ ರೂಪವನ್ನು ತೋರಿಸಿದನು.

ಮುನಿಗಳೆಲ್ಲರೂ ಸಮಾಧಾನದಿಂದ ಸಮಸ್ಕರಿಸಿದರು.

ಭೃಗು, ಆಂಗೀರಸ್, ವಸಿಷ್ಠ, ವಿಶ್ವಾಮಿತ್ರ, ಗೌತಮ, ಅತ್ರಿ, ಸುಕೇಶ, ಪುಲಸ್ತ್ಯ ಪುಲಹ, ಕ್ರತು, ಮರೀಚಿ, ಕಶ್ಯಪ, ಸಂವರ್ತಕ - ಇವರು ದೇವೋತ್ತಮನಾದ ಶಿವನಿಗೆ ಪುನಃ ನಮಸ್ಕರಿಸಿ,

''ದೇವೋತ್ತಮ! ನಿನ್ನನ್ನು ಯಾವ ಯೋಗದಿಂದ ಆರಾಧಿಸಬೇಕು? ಜ್ಞಾನಯೋಗ-ದಿಂದ ? ಅಥವಾ ಕರ್ಮಯೋಗದಿಂದ? ಯಾವ ಯಾವ ಪದಾರ್ಥಗಳು ಸ್ವೀಕಾರಾರ್ಹ ? ಯಾವುದು ಅಲ್ಲ? ದಯವಿಟ್ಟು ತಿಳಿಸಬೇಕು'' ಎಂದು ಪ್ರಾರ್ಥಿಸಿದರು.

**ಶಿವನ ಉಪದೇಶ : ಸಾಂಖ್ಯಯೋಗ**

ಮುನಿಗಳೇ! ಹಿಂದೆ ಬ್ರಹ್ಮನು ಶಿವನ ಬಗ್ಗೆ ಹೇಳಿದ ಗಹನವಾದ, ಉತ್ತಮವಾದ ವಿಷಯವನ್ನು ನಿಮಗೆ ಹೇಳುವೆ.

ಕರ್ಮಯೋಗಸಹಿತವಾದ ಸಾಂಖ್ಯಯೋಗವು ಪುರುಷಾರ್ಥಸಾಧನ. ಕೇವಲ ಕರ್ಮಯೋಗವು ಪುರುಷಾರ್ಥಸಾಧನವಲ್ಲ, ಕೇವಲ ಜ್ಞಾನಯೋಗವು ಮುಕ್ತಿಗೆ ಸಾಧನವಾಗಬಲ್ಲದು. ನೀವು ಸಾಂಖ್ಯಯೋಗವನ್ನು ಬಿಟ್ಟು ಕೇವಲ ಕರ್ಮಯೋಗದಿಂದ ಮುಕ್ತಿಯನ್ನು ಸಾಧಿಸಲು ಪ್ರಯತ್ನ ಮಾಡುತ್ತಿದ್ದಿರಿ. ಕೇವಲ ಕರ್ಮಮಾರ್ಗವು ಮೋಹವನ್ನುಂಟುಮಾಡುತ್ತದೆ ಎಂದು ನಿಮಗೆ ತಿಳಿಸುವುದಕ್ಕಾಗಿ ನಾನು ಇಲ್ಲಿಗೆ ಬಂದಿರುವೆನು. ಜ್ಞಾನ (ಸಾಂಖ್ಯ) ಯೋಗವೇ ಮುಕ್ತಿಸಾಧನ. ಆದ್ದರಿಂದ ಪ್ರಯತ್ನಪಟ್ಟು ಆತ್ಮಜ್ಞಾನವನ್ನು ಸಂಪಾದಿಸಬೇಕು.

ಆತ್ಮಾ ಅದ್ವಿತೀಯ, ಸರ್ವವ್ಯಾಪಿ, ಸ್ವತಂತ್ರ, ಜ್ಞಾನರೂಪ, ಆನಂದರೂಪ, ನಿರ್ಮಲ. ಇದೇ ಸಾಂಖ್ಯದರ್ಶನ. ಇದು ಮೋಕ್ಷಕ್ಕೆ ಸಾಧನ. ಮೋಕ್ಷ ಎಂದರೆ ಬ್ರಹ್ಮಭಾವ. ಅಂದರೆ, ಬ್ರಹ್ಮನ ಹತ್ತಿರ ಇರುವುದು ಮತ್ತು ಬ್ರಹ್ಮನಲ್ಲಿ ಇರುವುದು. ಈ ಯೋಗವನ್ನು ಆಶ್ರಯಿಸಿದ ಮಹಾತ್ಮರು ನನ್ನ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ.

ಮುಕ್ತಿಗೆ ಅನೇಕ ಸಾಧನಗಳನ್ನು ಜನಗಳು ಹೇಳುತ್ತಾರೆ. ಅವುಗಳಲ್ಲಿ ಜ್ಞಾನ ಅತ್ಯಂತ ಶ್ರೇಷ್ಠವಾದ ಸಾಧನ. ಯಾರು ನನ್ನ ಜ್ಞಾನವನ್ನು ಪಡೆದು ಭಕ್ತರಾಗಿ ಎಲ್ಲ ದೋಷಗಳನ್ನು ಪರಿಹರಿಸಿಕೊಳ್ಳುತ್ತಾರೋ ಅವರನ್ನು ನಾನು ಸಂಸಾರಬಂಧನದಿಂದ ಬಿಡುಗಡೆ ಮಾಡುತ್ತೇನೆ.

**ಪಾಶುಪತವ್ರತ :**

ಸಾಧಕರಿಗಾಗಿ ಪಾಶುಪತ ವ್ರತವನ್ನು ನಾನು ಆವಿಷ್ಕರಿಸಿದ್ದೇನೆ. ಇದು ವೇದಗಳ ಸಾರ. ಬಹಳಸೂಕ್ಷ್ಮ. ಸಾಧಕರು ಪ್ರಶಾಂತರೂ, ಜಿತೇಂದ್ರಿಯರೂ ಆಗಿ ಭಸ್ಮಲೇಪನವನ್ನು ಮಾಡಿಕೊಂಡು, ನಗ್ನರಾಗಿ, ಬ್ರಹ್ಮಚರ್ಯದಿಂದ ಈ ವ್ರತವನ್ನು ಆಚರಿಸಬೇಕು.

ಅಥವಾ ಕೌಪೀನಧಾರಿಯಾಗಿ ವೇದಾಭ್ಯಾಸವನ್ನು ಮಾಡುತ್ತಾ ಶಿವನ ಧ್ಯಾನವನ್ನು ಮಾಡಬೇಕು.

ಒಂದೇ ವಸ್ತ್ರವನ್ನು ಧರಿಸಿಯೂ ಈ ವ್ರತವನ್ನು ಮಾಡಬಹುದು. ಈ ವ್ರತವನ್ನು ಫಲಾಪೇಕ್ಷೆಯಿಲ್ಲದೆ ಮಾಡಬೇಕು.

ರಾಗ, ಭಯ, ಕ್ರೋಧಗಳನ್ನು ತ್ಯಜಿಸದೆ, ನನ್ನನ್ನೇ ಆಶ್ರಯಿಸಿದ ಬಹಳ ಜನರು ಈ ವ್ರತದಿಂದ ಪವಿತ್ರರಾಗಿ ಮುಕ್ತಿಯನ್ನು ಹೊಂದಿದ್ದಾರೆ.

### ಸ್ವೀಕಾರಾನರ್ಹ ಶಾಸ್ತ್ರಗಳು :

ವೇದವಿರುದ್ಧವಾದ ಅನೇಕ ಶಾಸ್ತ್ರಗಳನ್ನು ನಾನೇ ರಚಿಸಿದ್ದೇನೆ. ಅವುಗಳಿಂದ ಮೋಹವೇ ಉಂಟಾಗುತ್ತದೆ. ವಾಮ, ಪಾಶುಪತ, ಸೋಮ, ಲಾಕುಶ, ಭೈರವ - ಇವು ಅವೈದಿಕ ಶಾಸ್ತ್ರಗಳ ಹೆಸರು. ಇವುಗಳನ್ನು ಆಶ್ರಯಿಸಬಾರದು.

ಬ್ರಾಹ್ಮಣರೇ! ವೇದಗಳು ನನ್ನನ್ನೇ ಪ್ರತಿಪಾದಿಸುತ್ತವೆ. ಆದ್ದರಿಂದ ನಾನು ವೇದಮೂರ್ತಿ. ಅವೈದಿಕ ಶಾಸ್ತ್ರಗಳನ್ನು ಆಶ್ರಯಿಸಿದರೆ ನನ್ನ ಸ್ವರೂಪದ ಜ್ಞಾನವು ಆಗುವುದಿಲ್ಲ. ಆದ್ದರಿಂದ ನಿಷ್ಕಾಮಕರ್ಮಯೋಗ ಅಥವಾ ಸಾಂಖ್ಯಾಯೋಗವನ್ನು ಅನುಸರಿಸಿರಿ. ಮಹೇಶ್ವರನನ್ನು ಪೂಜಿಸಿರಿ. ನಿಮಗೆ ಬೇಗನೆ ಶ್ರೇಷ್ಠವಾದ ಜ್ಞಾನವು ಹುಟ್ಟುತ್ತದೆ. ಸಂಶಯವಿಲ್ಲ. ನಿಮಗೆ ನನ್ನಲ್ಲಿ ವಿಪುಲಭಕ್ತಿಯು ಉಂಟಾಗಲಿ. ನೀವು ನನ್ನನ್ನು ಚಿಂತಿಸಿದಾಗ ನಾನು ನಿಮಗೆ ದರ್ಶನವನ್ನು ಕೊಡುತ್ತೇನೆ.

### ಮುನಿಗಳ ಸಾಂಖ್ಯಯೋಗದ ಅನುಷ್ಠಾನ :

ಇಷ್ಟು ಉಪದೇಶಿಸಿ ಮಹೇಶ್ವರನು ಅಂತರ್ಧಾನ ಹೊಂದಿದನು. ಆ ಮುನಿಗಳೆಲ್ಲರೂ ಬ್ರಹ್ಮಚರ್ಯವ್ರತನಿಷ್ಠರಾಗಿ, ಶಾಂತರಾಗಿ, ಜ್ಞಾನವನ್ನು ಸಂಪಾದಿಸಿದರು. ಜ್ಞಾನಕ್ಕಾಗಿ ನಾನಾ-ವಿಧವಾದ ವಾದಗಳನ್ನು ಮಾಡಿದರು. ಜ್ಞಾನಕ್ಕಾಗಿ ಶಂಕರನ ಆರಾಧನೆಯನ್ನು ಮಾಡಿದರು.

''ಈ ಜಗತ್ತಿನ ಮೂಲ ಯಾವುದು? ನಮ್ಮ ನಿಯಾಮಕ ಯಾರು? ಎಲ್ಲ ಪದಾರ್ಥಗಳಿಗೂ ಕಾರಣ ಮತ್ತು ನಿಯಾಮಕ ಇರಲೇ ಬೇಕು.'' ಹೀಗೆ ಆ ಮುನಿಗಳು ಮನನ ಮಾಡುತ್ತಿದ್ದರು.

### ಪಾರ್ವತೀ ದರ್ಶನ :

ಆಗ ಅವರ ಎದುರು ಹಿಮವಂತನ ಪುತ್ರಿಯಾದ ಶಿವನ ಪತ್ನಿ ಪಾರ್ವತಿಯು ಆವಿರ್ಭವಿಸಿದಳು. ಅವಳಲ್ಲಿ ಒಂದುಕೋಟಿ ಸೂರ್ಯರ ಕಾಂತಿ ಇತ್ತು. ಅವಳ ಸುತ್ತಲೂ ಜ್ವಾಲಾಮಾಲೆಗಳು ಇದ್ದವು. ಅವಳ ನಿರ್ಮಲಕಾಂತಿಯು ಆಕಾಶವನ್ನು ವ್ಯಾಪಿಸಿತ್ತು.

ಇಂತಹ ದೇವಿಯನ್ನು ನೋಡಿ ಮುನಿಗಳೆಲ್ಲರೂ ಅವಳಿಗೆ ನಮಸ್ಕರಿಸಿದರು. ಸರ್ವೇಶ್ವರನಾದ ಶಿವನ ಪತ್ನಿ ಎಂದು ಅವರಿಗೆ ತಿಳಿಯಿತು. ಅವಳಲ್ಲಿ ಅವರಿಗೆ ಇಡೀ ವಿಶ್ವವೇ ಕಾಣಿಸಿತು. ''ಇವಳಿಗೆ ಆಕಾಶ ಎಂದೂ ಹೆಸರು. ಇವಳೇ ನಮಗೆ ಗತಿ'' ಎಂದು ತಿಳಿದರು.

**ಶಿವದರ್ಶನ :**

ಅಷ್ಟು ಹೊತ್ತಿಗೆ ಜಗಜ್ಜನ್ಮಾದಿಕಾರಣನೂ, ಸರ್ವನಿಯಾಮಕನೂ, ಸರ್ವಜ್ಞನೂ, ಪುರಾಣಪುರುಷನೂ, ಪೂರ್ಣನೂ ಆದ ಶಿವನು ಅವರಿಗೆ ಕಾಣಿಸಿಕೊಂಡನು.

ಮುನಿಗಳೆಲ್ಲರೂ ಪಾರ್ವತೀ-ಪರಮೇಶ್ವರರಿಗೆ ನಮಸ್ಕರಿಸಿದರು. ಅವರೆಲ್ಲರೂ ದರ್ಶನ-ದಿಂದ ಪರಮಾನಂದವನ್ನು ಅನುಭವಿಸಿದರು. ಸಂಸಾರ ಬಂಧನವನ್ನು ಪರಿಹರಿಸುವ ಮಹಾಜ್ಞಾನವನ್ನು ಪರಮೇಶ್ವರನ ಪ್ರಸಾದದಿಂದ ಮುನಿಗಳೆಲ್ಲರೂ ಪಡೆದರು.

**ಮುನಿಗಳು ಪಡೆದ ಮಹಾಜ್ಞಾನ :**

''ಈ ಪಾರ್ವತಿಯೇ ಜಗತ್ತಿನ ಉಪಾದಾನ ಕಾರಣವಾದ ಜಡಪ್ರಕೃತಿಯ ನಿಯಾಮಕಳು. ಆದ್ದರಿಂದ ಇವಳೇ ಜಗತ್ತಿನ ಉತ್ಪತ್ತಿಗೆ ಕಾರಣ. ಇವಳೇ ಸರ್ವಾಂತರ್ಯಾಮಿ. ಸರ್ವನಿಯಾಮಕಳು. ಇವಳಿಗೆ ಆಕಾಶ ಎಂದು ಹೆಸರು. ಇವಳಿಗೆ ಈ ಶಕ್ತಿಯನ್ನು ಕೊಟ್ಟವನು ಪರಮೇಶ್ವರ. ಇವನು ಸರ್ವೋತ್ತಮ. ಎಲ್ಲ ವಸ್ತುಗಳಲ್ಲಿ ಗೂಢವಾಗಿ ಇದ್ದಾನೆ. ಇವನಿಗೆ ಅಂಶಗಳು ಇವೆ. ಆದರೆ ಭಿನ್ನವಲ್ಲ. ಆದ್ದರಿಂದ ನಿಷ್ಕಲ. ಇವನು ದೇವಿಯ ನಿಯಾಮಕನೂ ಆಗಿದ್ದಾನೆ. ಇದನ್ನು ತಿಳಿದವರು ಮುಕ್ತರಾಗುತ್ತಾರೆ.'' ಇಷ್ಟು ಜ್ಞಾನವನ್ನು ಮುನಿಗಳಿಗೆ ಉಂಟುಮಾಡಿ ಶಿವನು ದೇವಿಯೊಂದಿಗೆ ಅದೃಶ್ಯನಾದನು. ಆ ಮುನಿಗಳೆಲ್ಲರೂ ದೇವೋತ್ತಮನಾದ ರುದ್ರನ ಆರಾಧನೆಯಲ್ಲಿ ನಿರತರಾದರು.

**ಸೂತ ಉವಾಚ :**

ದೇವದಾರು ವನದಲ್ಲಿ ನಡೆದ ಘಟನೆಯನ್ನು, ಶಿವನ ಮಹಿಮೆಯನ್ನು ನಾನು ನಿಮಗೆ ಹೇಳಿದ್ದೇನೆ.

ಇದನ್ನು ಪ್ರತಿದಿನ ಕೇಳುವವನ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ದ್ವಿಜರಿಗೆ ಶ್ರವಣ ಮಾಡಿಸಿದರೆ ಪರಮಗತಿಯನ್ನು ಹೊಂದುತ್ತಾರೆ.

* * *

## ಅಧ್ಯಾಯ-೯೩

**ಸೂತ ಉವಾಚ :**

**ನರ್ಮದಾ ನದಿ :** ಇದು ಅತ್ಯಂತ ಪುಣ್ಯಕರವಾದ ನದಿ. ಲೋಕಪ್ರಸಿದ್ಧಿ. ದೇವತೆಗಳೂ, ಗಂಧರ್ವರೂ ಇಲ್ಲಿ ಸ್ನಾನ ಅನುಷ್ಠಾನಗಳನ್ನು ಮಾಡುತ್ತಾರೆ. ಮಾರ್ಕಂಡೇಯ ಮುನಿಗಳು ಇದರ ಮಹಿಮೆಯನ್ನು ಯುಧಿಷ್ಠಿರನಿಗೆ ಹೇಳಿದ್ದರು. ಸರ್ವಪಾಪಗಳನ್ನೂ ನಾಶಮಾಡುವ, ಶುಭವಾದ ಈ ಮಹಿಮೆಯನ್ನು ಹೇಳುವೆನು, ಕೇಳಿರಿ.

**ಯುಧಿಷ್ಠಿರ ಉವಾಚ :**

ಮಹಾಮುನಿಗಳೇ! ನೀವು ನಮ್ಮ ಮೇಲೆ ಅನುಗ್ರಹಬುದ್ಧಿಯಿಂದ ವಿವಿಧ ಧರ್ಮಗಳನ್ನೂ, ಪ್ರಯಾಗದ ಮತ್ತು ಬೇರೆ ವಿವಿಧ ತೀರ್ಥಗಳ ಮಹಿಮೆಯನ್ನು ತಿಳಿಸಿದ್ದೀರಿ. ನರ್ಮದೆಯು ಎಲ್ಲ ತೀರ್ಥಗಳಿಗಿಂತ ಶ್ರೇಷ್ಠ ಎಂದು ನೀವು ಹೇಳಿದ್ದೀರಿ. ಆದ್ದರಿಂದ ಅದರ ಮಹಿಮೆಯನ್ನು ದಯವಿಟ್ಟು ಈಗ ಹೇಳಿರಿ.

**ಮಾರ್ಕಂಡೇಯ ಉವಾಚ :**

ನರ್ಮದೆಯು ನದಿಗಳಲ್ಲಿ ಶ್ರೇಷ್ಠ. ಇದು ರುದ್ರದೇವದಿಂದ ಹರಿದಿದೆ. ಈ ನದಿ ಎಲ್ಲ ಸ್ಥಾವರಗಳನ್ನೂ ಜಂಗಮಗಳನ್ನೂ ಉದ್ಧರಿಸುತ್ತದೆ. ಪುರಾಣಗಳಲ್ಲಿ ಪ್ರಸಿದ್ಧವಾಗಿರುವ, ನಾನು ಕೇಳಿರುವ ಇದರ ಮಹಿಮೆಯನ್ನು ಹೇಳುವೆನು. ಏಕಾಗ್ರತೆಯಿಂದ ಕೇಳಿರಿ.

ಗಂಗಾನದಿಯು ಕನಖಲ ಎಂಬ ಕ್ಷೇತ್ರದಲ್ಲಿ ಪವಿತ್ರವಾದುದು. ಸರಸ್ವತಿಯು ಕುರುಕ್ಷೇತ್ರದಲ್ಲಿ ಪವಿತ್ರ. ನರ್ಮದೆಯು ಗ್ರಾಮಗಳಲ್ಲಿ ಅರಣ್ಯದಲ್ಲಿ ಎಲ್ಲ ಕಡೆಯೂ ಪವಿತ್ರ. ಸರಸ್ವತಿಯ ನೀರು, ಅದರಲ್ಲಿ ಮೂರುದಿನ ಸ್ನಾನ- ಅನುಷ್ಠಾನಗಳಿಂದ ಪವಿತ್ರಗೊಳಿಸುತ್ತದೆ. ಯಮುನೆಯ ನೀರು ಏಳು ದಿನಗಳಲ್ಲಿ ಪವಿತ್ರಗೊಳಿಸುತ್ತದೆ. ಗಂಗೆಯ ನೀರು ಕೂಡಲೇ ಪವಿತ್ರಗೊಳಿಸುತ್ತದೆ. ನರ್ಮದಾ ತೀರ್ಥವು ದರ್ಶನದಿಂದಲೇ ಪವಿತ್ರಗೊಳಿಸುತ್ತದೆ. ಕಲಿಂಗದೇಶದ ಪಶ್ಚಿಮಾರ್ಧದ ಅಮರಕಂಟಕ ಎಂಬ ಪರ್ವತದಲ್ಲಿ ಮೂರು ಲೋಕಗಳಲ್ಲಿ ವಿಖ್ಯಾತವಾದ, ರಮ್ಯವಾದ ಈ ತೀರ್ಥವು ಉದ್ಭವಿಸುತ್ತದೆ. ರಾಜೇಂದ್ರ! ದೇವತೆಗಳು, ಅಸರರು, ಗಂಧರ್ವರು ತಪೋಧನರಾದ ಋಷಿಗಳು ಈ ತೀರ್ಥದಲ್ಲಿ ತಪಸ್ಸು ಮಾಡಿ ಪರಮಸಿದ್ಧಿಯನ್ನು ಪಡೆದರು. ಈ ತೀರ್ಥದಲ್ಲಿ ಸ್ನಾನಮಾಡಿ, ಜಿತೇಂದ್ರಿಯನಾಗಿ ನಿಯಮ-ನಿಷ್ಠನಾಗಿ ಒಂದು ರಾತ್ರಿ, ಉಪವಾಸ ಮಾಡಿದರೆ, ಅವನ ವಂಶದ ನೂರು ಜನರ ಉದ್ಧಾರವಾಗುತ್ತದೆ. ಈ ನದಿ ಒಂದು ನೂರು ಯೋಜನ ಉದ್ದವಿದೆ. ಎರಡು ಯೋಜನ ಅಗಲವಿದೆ.

**ಬೇರೆ ತೀರ್ಥಗಳು :**

ಅಮರಕಂಟಕ ಪರ್ವತದ ಸುತ್ತಲೂ ಅರವತ್ತು ಕೋಟಿ ಅರವತ್ತು ಸಾವಿರ ತೀರ್ಥಗಳಿವೆ.

ಈ ತೀರ್ಥಗಳಲ್ಲಿ, ಬ್ರಹ್ಮಚಾರಿಯೂ, ಶುಚಿಯೂ, ಕ್ರೋಧವನ್ನು ಗೆದ್ದವನೂ, ಜಿತೇಂದ್ರಿಯನೂ, ಹಿಂಸೆಯನ್ನು ಮಾಡದವನೂ, ಸರ್ವಭೂತಹಿತದಲ್ಲಿ ಆಸಕ್ತನೂ ಆದ ವ್ಯಕ್ತಿಯು ಮೃತನಾದರೆ, ಅವನಿಗೆ ಸಿಗುವ ಪುಣ್ಯಫಲಗಳನ್ನು ಕುರಿತು ಹೇಳುವೆನು. ರಾಜನೇ! ಕೇಳು.

ನೂರು ವರ್ಷ ಸ್ವರ್ಗದಲ್ಲಿ ಅಪ್ಸರೆಯರ, ದಿವ್ಯಸ್ತ್ರೀಯರ ಸಹವಾಸದಲ್ಲಿ ಸುಖಪಡುತ್ತಾನೆ. ದಿವ್ಯಗಂಧಗಳನ್ನು ಲೇಪಿಸಿಕೊಂಡು, ದಿವ್ಯಪುಷ್ಪಗಳಿಂದ ಅಲಂಕರಿಸಿಕೊಂಡು ದಿವ್ಯಲೋಕದಲ್ಲಿ ದೇವತೆಗಳ ಜೊತೆ ವಿಹರಿಸುತ್ತಾನೆ. ಸ್ವರ್ಗದಿಂದ ಭೂಮಿಗೆ ಬರುವ ಅವನು ಧಾರ್ಮಿಕನಾದ ರಾಜನಾಗುತ್ತಾನೆ. ನಾನಾ ರತ್ನಗಳಿಂದ ಶೋಭಿತವಾದ ಮನೆಯನ್ನು ಪಡೆಯುತ್ತಾನೆ. ಮಣಿಗಳಿಂದ ಮಾಡಲ್ಪಟ್ಟ ಸ್ತಂಭಗಳು ಆ ಮನೆಗೆ ಆಧಾರವಾಗಿರುತ್ತವೆ. ವಜ್ರ ವೈಢೂರ್ಯಗಳು ಮನೆಯನ್ನು ಅಲಂಕರಿಸಿರುತ್ತವೆ. ನೂರಾರು ದಾಸಿಯರು ಅಲ್ಲಿ ಸೇವೆಗಾಗಿ ಇರುತ್ತಾರೆ. ಈ ಪುಣ್ಯವಂತನು ರಾಜನು ಕುಬೇರನನ್ನು ಮೀರಿಸುವ ಐಶ್ವರ್ಯವನ್ನು ಹೊಂದಿ, ಎಲ್ಲ ಸ್ತ್ರೀಯರಿಗೆ ವಲ್ಲಭನಾಗಿ, ಸಕಲಭೋಗಗಳನ್ನು ಅನುಭವಿಸುತ್ತಾ ನೂರು ವರ್ಷ ಜೀವಿಸುತ್ತಾನೆ. ಅಮರಕಂಟಕಪರ್ವತದ ಸುತ್ತಲೂ ಇರುವ ಯಾವುದಾದರೂ ಒಂದು ತೀರ್ಥದಲ್ಲಿ ಪ್ರಾಣತ್ಯಾಗಮಾಡಿದರೆ ಅಥವಾ ಈ ಕ್ಷೇತ್ರದಲ್ಲಿ ಉಪವಾಸ ಮಾಡಿ ಮೃತನಾದರೆ ಅಥವಾ ಅಗ್ನಿಪ್ರವೇಶವನ್ನು ಮಾಡಿದರೆ ಅವನ ಸದ್ಗತಿಗೆ ತಡೆಯೇ ಇರುವುದಿಲ್ಲ. ಆಕಾಶದಲ್ಲಿ ಗಾಳಿ ಹೇಗೋ ಹಾಗೆ.

**ಜಲೇಶ್ವರತೀರ್ಥ** : ಅಮರಕಂಟಕದ ಪಶ್ಚಿಮ ತಪ್ಪಲಿನಲ್ಲಿ ಜಲೇಶ್ವರ ಎಂಬ ತೀರ್ಥವಿದೆ. ಇದು ಸರ್ವಪಾಪಗಳನ್ನೂ ಪರಿಹರಿಸುತ್ತದೆ. ಮೂರು ಲೋಕಗಳಲ್ಲಿ ಪ್ರಸಿದ್ಧವಾಗಿದೆ. ಇಲ್ಲಿ ಪಿಂಡಪ್ರದಾನವನ್ನು ಮಾಡಿದರೆ ಪಿತೃಗಳಿಗೆ ಹತ್ತುಸಾವಿರ ವರ್ಷ ತೃಪ್ತಿಯಾಗುತ್ತದೆ. ಸಂಧ್ಯಾವಂದನೆಯನ್ನು ಮಾಡಿದರೆ ಮಹಾಫಲವಿದೆ.

**ಕಪಿಲತೀರ್ಥ** : ನರ್ಮದಾನದಿಯ ದಕ್ಷಿಣ ತೀರದಲ್ಲಿ ಕಪಿಲಾ ಎಂಬ ಮಹಾನದಿಯು ಇದೆ. ಇದು ಬಹಳ ಪವಿತ್ರ. ಇದರ ತೀರದಲ್ಲಿ ಅರ್ಜುನವೃಕ್ಷಗಳು ದಟ್ಟವಾಗಿ ಬೆಳೆದಿವೆ. ಇದರಲ್ಲಿ ನೂರುಕೋಟಿ ತೀರ್ಥಗಳ ಸನ್ನಿಧಾನವಿದೆ. ಕಾಲಕ್ರಮೇಣ ಮುದಿಯಾಗಿ ಆ ತೀರ್ಥದಲ್ಲಿ ಬೀಳುವ ಮರಗಳು ನರ್ಮದಾನೀರಿನ ಸ್ಪರ್ಶದಿಂದ ಸದ್ಗತಿಯನ್ನು ಹೊಂದುತ್ತವೆ.

**ವಿಶಲ್ಯಕರಣೀತೀರ್ಥ** : ಕಪಿಲತೀರ್ಥದ ಪಕ್ಕದಲ್ಲೇ ಈ ತೀರ್ಥವಿದೆ. ಇಲ್ಲಿ ಸ್ನಾನಮಾಡಿದರೆ ಶರೀರಕ್ಕೆ ಚುಚ್ಚಿದ ಶಲ್ಯಗಳಿಂದ ಆದ ವ್ರಣಗಳು ವಾಸಿಯಾಗುತ್ತದೆ. ಶಲ್ಯಗಳು ಬಿದ್ದುಹೋಗುತ್ತವೆ.

ಲೋಕಗಳಿಗೆ ಹಿತವುಂಟುಮಾಡುವ ಇಚ್ಛೆಯಿಂದಲೇ ಮಹೇಶ್ವರನು ಈ ಎರಡು ನದಿಗಳನ್ನು ಕಲ್ಪಿಸಿದನು. ಈ ತೀರ್ಥಗಳಲ್ಲಿ ಉಪವಾಸವ್ರತವನ್ನು ಮಾಡಿದರೆ ಎಲ್ಲ ಪಾಪಗಳು ತೊಳೆದುಹೋಗಿ ರುದ್ರಲೋಕದಲ್ಲಿ ಮಹತ್ವವಾದ ಸ್ಥಾನವು ದೊರೆಯುತ್ತದೆ. ಇಲ್ಲಿ ಸ್ನಾನ ಮಾಡಿದರೆ ಅಶ್ವಮೇಧವನ್ನು ಮಾಡಿದ ಫಲವು ಬರುತ್ತದೆ. ಈ ತೀರ್ಥದ ಉತ್ತರತೀರದಲ್ಲಿ ವಾಸಮಾಡಿದರೆ ರುದ್ರಲೋಕದ ವಾಸವು ಲಭಿಸುತ್ತದೆ.

ಯುಧಿಷ್ಠಿರ! ಸರಸ್ವತಿಯಲ್ಲಿ, ಗಂಗೆಯಲ್ಲಿ ಮತ್ತು ನರ್ಮದೆಯಲ್ಲಿ ಸ್ನಾನ, ದಾನಗಳಿಗೆ ಸಮವಾದ ಫಲವನ್ನು ಉಂಟುಮಾಡುತ್ತದೆ. ನನಗೆ ಶಿವನೇ ಹೇಳಿದ್ದಾನೆ. ಅಮರಕಂಟಕ ಪರ್ವತದಲ್ಲಿ ಮೃತನಾದವನು ರುದ್ರಲೋಕದಲ್ಲಿ ಒಂದು ನೂರುಕೋಟಿವರ್ಷ ವಾಸ-ಮಾಡುತ್ತಾನೆ. ನೊರೆ, ಅಲೆಗಳಿಂದ ಕೂಡಿದ ನರ್ಮದೆಯ ನೀರನ್ನು ತಲೆಯ ಮೇಲೆ ಧರಿಸಿದರೆ ಎಲ್ಲ ಪಾಪಗಳೂ ನಾಶವಾಗುತ್ತವೆ. ಇಲ್ಲಿ ಹಗಲು-ರಾತ್ರಿ ಉಪವಾಸ ಮಾಡಿದರೆ ಬ್ರಹ್ಮಹತ್ಯೆಯ ಪಾಪವೂ ನಾಶವಾಗುತ್ತದೆ.

**ಜಾಲೇಶ್ವರತೀರ್ಥ** : ಇದು ಎಲ್ಲ ಪಾಪಗಳನ್ನೂ ಪರಿಹರಿಸುತ್ತದೆ. ಇಲ್ಲಿ ನಿಯಮದಿಂದ ಅನುಷ್ಠಾನಗಳನ್ನು ಮಾಡುವವನ ಎಲ್ಲ ಆಸೆಗಳೂ ನೆರವೇರುತ್ತವೆ.

ಚಂದ್ರಗ್ರಹಣ-ಸೂರ್ಯಗ್ರಹಣ ಕಾಲದಲ್ಲಿ ಅಮರಕಂಟಕಕ್ಕೆ ಹೋಗಿ ಅನುಷ್ಠಾನ ಮಾಡಿದರೆ ಅಶ್ವಮೇಧಕ್ಕಿಂತ ಹತ್ತುಪಟ್ಟು ಹೆಚ್ಚು ಫಲವು ಲಭಿಸುತ್ತದೆ. ನಾನಾ ವಿಧವಾದ ಮರ-ಬಳ್ಳಿಗಳಿಂದ, ಪುಷ್ಪಗಳಿಂದ ದಟ್ಟವಾಗಿರುವ ಈ ಪರ್ವತಕ್ಕೆ ದೇವತೆಗಳೂ, ಗಂಧರ್ವರೂ ಬರುತ್ತಾರೆ. ರಾಜನೇ! ಇಲ್ಲಿ ಪಾರ್ವತೀ-ಪರಮೇಶ್ವರರ ಸನ್ನಿಧಾನವಿದೆ. ಬ್ರಹ್ಮ-ವಿಷ್ಣುಗಳ ಸನ್ನಿಧಾನವೂ ಇದೆ. ವಿದ್ಯಾಧರರೂ ಇಲ್ಲಿದ್ದಾರೆ. ಈ ಅಮರ ಕಂಟಕಪರ್ವತದ ಪ್ರದಕ್ಷಿಣೆ-ಯನ್ನು ಮಾಡಿದವರು ಪುಂಡರೀಕ ಯಾಗದ ಫಲವನ್ನು ಪಡೆಯುತ್ತಾರೆ. ನರ್ಮದೆಯ ಸಂಗಮದಲ್ಲಿ ಸ್ನಾನ ಮಾಡಿದರೆ ರುದ್ರಲೋಕದಲ್ಲಿ ಮಹತ್ವದ ಸ್ಥಾನವು ಲಭಿಸುತ್ತದೆ.

**ಕಾವೇರಿ ನದಿ** : ಇದೂ ಸಕಲಪಾಪವನ್ನು ಪರಿಹರಿಸುವ ನದಿ. ಇಲ್ಲಿ ಸ್ನಾನ ಮಾಡಿ ವೃಷಭಧ್ವಜನಾದ ಶಿವನನ್ನು ಪೂಜಿಸಬೇಕು.

* * *

## ಅಧ್ಯಾಯ-೯೪

**ಮಾರ್ಕಂಡೇಯ ಉವಾಚ :**

ನರ್ಮದೆಯು ನದಿಗಳಲ್ಲಿ ಶ್ರೇಷ್ಠ. ಸರ್ವಪಾಪಗಳನ್ನೂ ಇದು ಪರಿಹರಿಸುತ್ತದೆ ಎಂದು ಬ್ರಹ್ಮದೇವರು ಮುನಿಗಳಿಗೆ ಹೇಳಿದ್ದರು. ರುದ್ರದೇವರ ಶರೀರದಿಂದ ಹರಿದ ಈ ನದಿಯನ್ನು ಮುನಿಗಳು ಸ್ತುತಿಸಿದ್ದಾರೆ. ದೇವತೆಗಳೂ, ಗಂಧರ್ವರೂ, ಅಪ್ಸರೆಯರು ಈ ನದಿಯನ್ನು ಸರ್ವಪಾಪಹರ ಎಂದು ಸ್ತುತಿಸಿದ್ದಾರೆ.

**ಭದ್ರೇಶ್ವರತೀರ್ಥ** : ನರ್ಮದೆಯ ಉತ್ತರ ತೀರದಲ್ಲಿ ಈ ತೀರ್ಥವಿದೆ. ಇದೂ ಸರ್ವಪಾಪಹರ. ಇಲ್ಲಿ ಸ್ನಾನ ಮಾಡಿದವರಿಗೆ ದೇವತೆಗಳ ಜೊತೆ ಸುಖವನ್ನನುಭವಿಸುವ ಅವಕಾಶವು ಲಭಿಸುತ್ತದೆ.

**ವಿಮಲೇಶ್ವರತೀರ್ಥ** : ಇಲ್ಲಿ ಸ್ನಾನ ಮಾಡಿದರೆ ಸಾವಿರ ಗೋವುಗಳನ್ನು ದಾನ ಮಾಡಿದ ಫಲವು ಲಭಿಸುತ್ತದೆ.

**ಅಂಗಾರಕೇಶ್ವರತೀರ್ಥ** : ಇಲ್ಲಿಗೆ ಹೋಗಿ ಸ್ನಾನ-ಅನುಷ್ಠಾನಗಳನ್ನು ಮಾಡಿದವರು ಎಲ್ಲ ಪಾಪಗಳನ್ನು ಕಳೆದುಕೊಂಡು ರುದ್ರಲೋಕದಲ್ಲಿ ಮಾನ್ಯ ಸ್ಥಾನವನ್ನು ಪಡೆಯುತ್ತಾರೆ.

**ಕೇದಾರ** : ಇಲ್ಲಿ ಸ್ನಾನ ಮಾಡಿ, ನೀರನ್ನು ಕುಡಿದವರ ಎಲ್ಲ ಆಸೆಗಳೂ ನೆರವೇರುತ್ತವೆ.

**ನಿಷ್ಫಲೇಶತೀರ್ಥ** : ಸರ್ವಪಾಪವನ್ನೂ ಪರಿಹರಿಸುವ ಈ ತೀರ್ಥದಲ್ಲಿ ಸ್ನಾನಮಾಡಿದರೆ ರುದ್ರಲೋಕದಲ್ಲಿ ಮಾನ್ಯಸ್ಥಾನವವು ದೊರೆಯುತ್ತದೆ.

· **ಬಾಣತೀರ್ಥ** : ಇಲ್ಲಿ ಮೃತರಾದವರು ರುದ್ರಲೋಕಕ್ಕೆ ಹೋಗುತ್ತಾರೆ.

**ಪುಷ್ಕರಿಣಿ** : ಇಲ್ಲಿ ಸ್ನಾನಮಾಡಿದರೆ ಸಿಂಹಾಸನಕ್ಕೆ ಅಧಿಪತಿಯಾಗುವ ಅವಕಾಶವು ಲಭಿಸುತ್ತದೆ.

**ಶಾಕತೀರ್ಥ** : ನರ್ಮದೆಯ ದಕ್ಷಿಣತೀರದಲ್ಲಿರುವ ಈ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಇಂದ್ರನ ಅರ್ಧಾಸನವು ಲಭಿಸುತ್ತದೆ.

**ಶೂಲಭೇದತೀರ್ಥ** : ಇಲ್ಲಿ ಸ್ನಾನ ಮಾಡಿ ತೀರ್ಥವನ್ನು ಪಾನಮಾಡಿದವರಿಗೆ ಸಾವಿರ ಗೋವುಗಳನ್ನು ದಾನಮಾಡಿದ ಫಲವು ಲಭಿಸುತ್ತದೆ. ಈ ತೀರ್ಥದಲ್ಲಿ ಒಂದು ರಾತ್ರಿ ಉಪವಾಸ ಮಾಡಿ, ವಿಧಿಯಂತೆ ಸ್ನಾನಮಾಡಿ ದೇವೋತ್ತಮನಾದ ವಿಷ್ಣುವಿನ ಆರಾಧನೆಯನ್ನು ಮಾಡಬೇಕು. ಮಾಡಿದವರು ಸಾವಿರಗೋವುಗಳನ್ನು ದಾನ ಮಾಡಿದ ಫಲವನ್ನು ಪಡೆಯುತ್ತಾರೆ. ವಿಷ್ಣುಲೋಕಕ್ಕೆ ಹೋಗುತ್ತಾರೆ.

**ಋಷಿತೀರ್ಥ :** ಎಲ್ಲ ಪಾಪಗಳನ್ನೂ ಪರಿಹರಿಸುವ ಈ ತೀರ್ಥದಲ್ಲಿ ಸ್ನಾನಮಾಡಿದರೆ ಶಿವಲೋಕದಲ್ಲಿ ಮಾನ್ಯಸ್ಥಾನವು ಲಭಿಸುತ್ತದೆ.

**ನಾರದತೀರ್ಥ :** ಬಹಳ ಮಂಗಳಕರವಾದ ಈ ತೀರ್ಥದಲ್ಲಿ ಸ್ನಾನಮಾಡಿದರೆ ಸಾವಿರ ಗೋವುಗಳನ್ನು ದಾನ ಮಾಡಿದ ಫಲವು ಲಭಿಸುತ್ತದೆ. ಇಲ್ಲಿ ಹಿಂದೆ ನಾರದರು ತಪಸ್ಸು ಮಾಡಿದರು. ಸುಪ್ರೀತನಾದ ಮಹೇಶ್ವರನು ಅವರಿಗೆ ಯೋಗವನ್ನು ಉಪದೇಶಿಸಿದನು.

**ಬ್ರಹ್ಮೇಶ್ವರತೀರ್ಥ :** ಇಲ್ಲಿ ಹಿಂದೆ ಬ್ರಹ್ಮದೇವರು ಶಿವಲಿಂಗವನ್ನು ನಿರ್ಮಿಸಿ ಆರಾಧನೆಯನ್ನು ಮಾಡಿದ್ದರು. ಇಲ್ಲಿ ಸ್ನಾನಮಾಡಿದವರಿಗೆ ಬ್ರಹ್ಮಲೋಕದಲ್ಲಿ ಮಾನ್ಯವಾದ ಸ್ಥಾನವು ದೊರೆಯುತ್ತದೆ.

**ಋಣತೀರ್ಥ :** ಇಲ್ಲಿ ಸ್ನಾನ ಮಾಡಿದವರ ಎಲ್ಲ ಸಾಲಗಳು ತೀರಿ ಹೋಗುತ್ತವೆ. ಸಂಶಯವೇ ಬೇಡ.

**ವಟೇಶ್ವರತೀರ್ಥ :** ಇಲ್ಲಿಗೆ ಹೋದರೆ ಜನ್ಮವು ಸಾರ್ಥಕವಾಗುವುದು.

**ಭೀಮೇಶ್ವರತೀರ್ಥ :** ಇದು ಸಕಲ ವ್ಯಾಧಿಗಳನ್ನೂ ಪರಿಹರಿಸುತ್ತದೆ. ಇಲ್ಲಿ ಸ್ನಾನ ಮಾಡಿದ ನರನು ಎಲ್ಲ ದುಃಖಗಳಿಂದ ಬಿಡುಗಡೆಯನ್ನು ಪಡೆಯುತ್ತಾನೆ.

**ಪಿಂಗಲೇಶ್ವರತೀರ್ಥ :** ಇಲ್ಲಿ ಒಂದು ಹಗಲು ಮತ್ತು ರಾತ್ರಿ ಉಪವಾಸ ಮಾಡಿದವರಿಗೆ ತ್ರಿರಾತ್ರವ್ರತವನ್ನು ಮಾಡಿದ ಫಲವು ಲಭಿಸುತ್ತದೆ.

ಈ ತೀರ್ಥದಲ್ಲಿ ಕಪಿಲಬಣ್ಣದ ಹಸುವನ್ನು ದಾನಮಾಡಿದವರಿಗೆ ಅದರ ಶರೀರದಲ್ಲಿ ಎಷ್ಟು ರೋಮಗಳಿರುತ್ತವೋ, ಅದರ ಸಂತತಿಯ ಗೋವುಗಳಲ್ಲಿ ಎಷ್ಟು ರೋಮ-ಗಳಿರುತ್ತವೋ ಅಷ್ಟು ವರ್ಷ ರುದ್ರಲೋಕದಲ್ಲಿ ವೈಭವದಿಂದ ಇರುತ್ತಾನೆ. ಈ ತೀರ್ಥದಲ್ಲಿ ಮೃತರಾದವರು ಚಂದ್ರ-ಸೂರ್ಯರು ಇರುವಷ್ಟು ದಿನ ಸುಖವಾಗಿರುತ್ತಾರೆ. ನರ್ಮದಾ ತೀರದಲ್ಲಿದ್ದು ಅನುಷ್ಠಾನವನ್ನು ಮಾಡುತ್ತಾ ಮೃತರಾದವರು ಸ್ವರ್ಗವನ್ನು ಪಡೆಯುತ್ತಾರೆ.

**ದೀಪ್ತೇಶ್ವರ ತೀರ್ಥ ಮತ್ತು ವ್ಯಾಸತೀರ್ಥ :** ವ್ಯಾಸರು ವಾಸ ಮಾಡಿದ ಸ್ಥಳವೇ ವ್ಯಾಸತೀರ್ಥ. ಅಲ್ಲಿ ಉಕ್ಕಿ ಹರಿದ ನದಿಯು ವ್ಯಾಸರಿಗೆ ಹೆದರಿ ಹಿಂತಿರುಗಿತು. ಇದೇ ದೀಪ್ತೇಶ್ವರತೀರ್ಥ. ಈ ತೀರ್ಥಕ್ಕೆ ಪ್ರದಕ್ಷಿಣೆ ಮಾಡಿದರೆ ವ್ಯಾಸರಿಗೆ ಸಂತೋಷವಾಗುತ್ತದೆ. ಆದರಿಂದ ಅಪೇಕ್ಷಿತ ಫಲವನ್ನು ಜನರು ಪಡೆಯುತ್ತಾರೆ.

ಇಕ್ಷುನದಿ ಸಂಗಮ : ಇಲ್ಲಿಂದ ಇಕ್ಷುನದಿ ಸಂಗಮಕ್ಕೆ ಹೋಗಬೇಕು. ಇದು ತ್ರಿಲೋಕಪ್ರಸಿದ್ಧ. ಇಲ್ಲಿ ಶಿವನ ಸನ್ನಿಧಾನವಿದೆ. ಇಲ್ಲಿ ಸ್ನಾನಮಾಡಿದವರು ಶಿವಗಣಗಳ ಅಧಿಪತಿಗಳಾಗುವರು.

**ಋಣತೀರ್ಥ** : ಇದು ಇನ್ನೊಂದು ಋಣತೀರ್ಥ. ಇಲ್ಲಿ ಸ್ನಾನಮಾಡಿದವರ ಸಾಲಗಳು ತೀರಿಹೋಗುತ್ತವೆ. ಹುಟ್ಟಿದಂದಿನಿಂದ ಮಾಡಿದ ಪಾಪಗಳೂ ನಾಶವಾಗುತ್ತವೆ. ಇಲ್ಲಿ ದೇವತೆಗಳೂ ಗಂಧರ್ವರೂ ಶಕ್ತಿ ಎಂಬ ಆಯುಧವನ್ನು ಧರಿಸಿದ ಷಣ್ಮುಖನನ್ನು ಆರಾಧಿಸುತ್ತಾರೆ.

**ಆಂಗೀರಸತೀರ್ಥ** : ಇಲ್ಲಿ ಸ್ನಾನಮಾಡಿದವರು ಸಾವಿರ ಗೋವುಗಳನ್ನು ದಾನ ಮಾಡಿದ ಫಲವನ್ನು ಪಡೆಯುತ್ತಾರೆ. ರುದ್ರಲೋಕಕ್ಕೆ ಹೋಗುತ್ತಾರೆ. ಇಲ್ಲಿ ಬ್ರಹ್ಮಪುತ್ರರಾದ ಆಂಗೀರಸ ಮಹರ್ಷಿಯು ತಪಸ್ಸಿನಿಂದ ಶಿವನನ್ನು ಆರಾಧಿಸಿ ಉತ್ತಮವಾದ ಯೋಗವನ್ನು ಹೊಂದಿದನು.

**ಕುಶತೀರ್ಥ** : ಇದು ಎಲ್ಲ ಪಾಪವನ್ನೂ ಪರಿಹರಿಸುವ ತೀರ್ಥ. ಇಲ್ಲಿ ಸ್ನಾನವನ್ನು ಮಾಡಿದರೆ ಅಶ್ವಮೇಧ ಯಾಗದ ಫಲವು ಲಭಿಸುತ್ತದೆ.

**ಕೋಟಿತೀರ್ಥ** : ಇಲ್ಲಿ ಸ್ನಾನಮಾಡಿದರೆ ಹುಟ್ಟಿದಾಗಿನಿಂದ ಮಾಡಿದ ಪಾಪವು ನಾಶವಾಗುತ್ತದೆ.

**ಚಂದ್ರಭಾಗಾನದಿ** : ಇಲ್ಲಿ ಸ್ನಾನ ಮಾಡಿದವರು ಚಂದ್ರಲೋಕದಲ್ಲಿ ಮಾನ್ಯ ಸ್ಥಾನವನ್ನು ಪಡೆಯುತ್ತಾರೆ.

**ಸಂಗಮೇಶ್ವರತೀರ್ಥ** : ಇಲ್ಲಿ ಸ್ನಾನ ಮಾಡಿದವರು ಎಲ್ಲ ಯಜ್ಞಗಳನ್ನೂ ಮಾಡಿದ ಫಲವನ್ನು ಪಡೆಯುತ್ತಾರೆ.

**ಆದಿತ್ಯಾಯತನತೀರ್ಥ** : ಈ ತೀರ್ಥ ನರ್ಮದಾನದಿಯ ಉತ್ತರತೀರದಲ್ಲಿದೆ. ಇದು ಬಹಳ ರಮ್ಯವಾದ ತೀರ್ಥ ಎಂದು ಈಶ್ವರನು ಪ್ರಶಂಸಿಸಿದ್ದಾನೆ. ಇಲ್ಲಿ ಸ್ನಾನ ಮಾಡಿ ಶಕ್ತಿಗನುಸಾರವಾಗಿ ದಾನಮಾಡಿದವರು ಅಕ್ಷಯಫಲವನ್ನು ಪಡೆಯುತ್ತಾರೆ. ಬಡತನ, ವ್ಯಾಧಿ, ದುಷ್ಕರ್ಮಗಳು ದೂರವಾಗುತ್ತವೆ. ಸೂರ್ಯಲೋಕವನ್ನೂ ಪಡೆಯುತ್ತಾರೆ.

**ಮಾತೃತೀರ್ಥ** : ಇಲ್ಲಿ ಸ್ನಾನಮಾಡಿದವರು ಸ್ವರ್ಗಲೋಕವನ್ನು ಪಡೆಯುತ್ತಾರೆ.

**ಮರುತಾಶಯತೀರ್ಥ** : ನರ್ಮದೆಯ ಪಶ್ಚಿಮಭಾಗದಲ್ಲಿ ಈ ತೀರ್ಥವಿದೆ. ಇಲ್ಲಿ ಸ್ನಾನ ಮಾಡಿ ಶುಚಿಯೂ, ಶಾಂತನೂ ಆಗಿ ತನ್ನ ಐಶ್ವರ್ಯಕ್ಕನುಗುಣವಾಗಿ ಬಂಗಾರವನ್ನು ಯತಿಗೆ ದಾನವನ್ನು ಮಾಡಬೇಕು. ಹೀಗೆ ಮಾಡಿದವನು ಪುಷ್ಪಕವಿಮಾನದಲ್ಲಿ ವಾಯುಲೋಕಕ್ಕೆ ಹೋಗುತ್ತಾನೆ.

**ಅಹಲ್ಯಾತೀರ್ಥ** : ಚೈತ್ರಮಾಸದ ಶುಕ್ಲಪಕ್ಷದ ತ್ರಯೋದಶಿ ಕಾಮದೇವನ ದಿನ. ಆ ದಿನ ಈ ತೀರ್ಥದಲ್ಲಿ ಸ್ನಾನ ಮಾಡಿ ಅಹಲ್ಯೆಯನ್ನು ಪೂಜಿಸಬೇಕು. ಹೀಗೆ ಮಾಡಿದವನು

ಯಾವುದೇ ಅಪ್ರಸಿದ್ಧ ಪ್ರದೇಶದಲ್ಲಿ ಹುಟ್ಟಿದವನಾಗಿದ್ದರೂ ಮತ್ತೊಬ್ಬ ಕಾಮದೇವನಂತೆ ಕಾಂತಿವಂತನಾಗಿ ಸ್ತ್ರೀವಲ್ಲಭನಾಗುತ್ತಾನೆ. ಅಪ್ಸರೆಯರ ಜೊತೆ ಬಹಳ ಕಾಲ ವಿಹರಿಸುತ್ತಾನೆ.

**ಇಂದ್ರತೀರ್ಥ** : ಇದು ನರ್ಮದೆಯ ಒಂದು ಭಾಗ. ಇಲ್ಲಿ ಸ್ನಾನ ಮಾಡಿದವನಿಗೆ ಒಂದುಸಾವಿರ ಗೋವುಗಳ ದಾನವನ್ನು ಮಾಡಿದ ಫಲವು ಬರುತ್ತದೆ.

**ಸೋಮತೀರ್ಥ** : ಇಲ್ಲಿ ಸ್ನಾನಮಾಡಿದರೆ ಎಲ್ಲ ಪಾಪಗಳಿಂದ ಬಿಡುಗಡೆಯಾಗುತ್ತದೆ. ಇಲ್ಲಿ ಚಂದ್ರಗ್ರಹಣ ಕಾಲದಲ್ಲಿ ಸ್ನಾನಮಾಡಿದರೆ ಸಕಲ ಪಾಪಗಳೂ ನಾಶವಾಗುತ್ತವೆ. ಇಲ್ಲಿ ಚಾಂದ್ರಾಯಣ ವ್ರತವನ್ನು ಶಾಂತಮನಸ್ಸಿನಿಂದ ಮಾಡಿದರೆ ಸಕಲಪಾಪಗಳಿಂದ ಬಿಡುಗಡೆ ಪಡೆದು ಶುದ್ಧನಾಗಿ ಚಂದ್ರಲೋಕಕ್ಕೆ ಹೋಗುವನು. ಇಲ್ಲಿ ಅಗ್ನಿಪ್ರವೇಶವನ್ನು ಮಾಡಿದರೆ ಅಥವಾ ನೀರಿನಲ್ಲಿ ಇದ್ದು ಉಪವಾಸವನ್ನು ಮಾಡಿದರೆ ಪುನರ್ಜನ್ಮವಿಲ್ಲ.

**ಸ್ತಂಭತೀರ್ಥ** : ಇಲ್ಲಿ ಸ್ನಾನಮಾಡಿದವರು ಚಂದ್ರಲೋಕದಲ್ಲಿ ಮಹತ್ವದ ಸ್ಥಾನವನ್ನು ಪಡೆಯುತ್ತಾರೆ.

**ವಿಷ್ಣುತೀರ್ಥ** : ಇಲ್ಲಿ ಭಗವಾನ್ ವಾಸುದೇವನು ಕೋಟಿಗಟ್ಟಲೆ ಅಸುರರ ಜೊತೆ ಯುದ್ಧ ಮಾಡಿದನು. ಆದ್ದರಿಂದ ಇದಕ್ಕೆ ಯೋಧೀಪುರ ಎಂದು ಹೆಸರು. ಇಲ್ಲಿ ಉದ್ಭವಿಸಿದ ತೀರ್ಥವೇ ವಿಷ್ಣುತೀರ್ಥ. ಇಲ್ಲಿ ಸ್ನಾನ ಮಾಡಿದವನು ವಿಷ್ಣುವಿನ ಕಾಂತಿಯನ್ನು ಹೋಲುವ ಕಾಂತಿಯನ್ನು ಪಡೆಯುವನು. ಇಲ್ಲಿ ಒಂದು ಹಗಲು ಮತ್ತು ಒಂದು ರಾತ್ರಿ ಉಪವಾಸ ಮಾಡುವುದರಿಂದ ಬ್ರಹ್ಮಹತ್ಯೆಯ ಪಾಪವು ನಾಶವಾಗುತ್ತದೆ.

**ಕಾಮತೀರ್ಥ** : ಇದು ನರ್ಮದಾನದಿಯ ದಕ್ಷಿಣ ತೀರದಲ್ಲಿದೆ. ಇಲ್ಲಿ ಮನ್ಮಥನು ನಾರಾಯಣನ ಆರಾಧನೆಯನ್ನು ಮಾಡಿದನಂತೆ. ಇಲ್ಲಿ ಸ್ನಾನ ಮಾಡಿ ಉಪವಾಸ ಮಾಡಿದವರು ಮನ್ಮಥನಂತೆ ಸುಂದರರಾಗಿ ರುದ್ರಲೋಕದಲ್ಲಿ ಮಾನ್ಯ ಸ್ಥಾನವನ್ನು ಪಡೆಯುತ್ತಾರೆ.

**ಬ್ರಹ್ಮತೀರ್ಥ** : ಇದು ಉಮಾಹಕ ಎಂದು ಪ್ರಸಿದ್ಧ. ಇಲ್ಲಿ ಹುಣ್ಣಿಮೆ ಮತ್ತು ಅಮಾವಾಸ್ಯೆಗಳಲ್ಲಿ ಪಿತೃಶ್ರಾದ್ಧವನ್ನು ಮಾಡಬೇಕು. ಈ ತೀರ್ಥದಲ್ಲಿ ನೀರಿನ ಮಧ್ಯದಲ್ಲಿ ಆನೆಯ ಆಕಾರದ ಬಂಡೆಯು ಇದೆ. ವೈಶಾಖಮಾಸದಲ್ಲಿ ಶಾಂತಮನಸ್ಸಿನಿಂದ ಈ ಬಂಡೆಯ ಮೇಲೆ ಪಿಂಡಪ್ರದಾನವನ್ನು ಮಾಡಬೇಕು. ಇದರಿಂದ ಪಿತೃಭೂಮಿಯು ಇರುವಷ್ಟು ಕಾಲ ತೃಪ್ತರಾಗಿರುತ್ತಾರೆ.

**ವಿಶ್ವೇಶ್ವರತೀರ್ಥ** : ಇಲ್ಲಿ ಸ್ನಾನ ಮಾಡಿದವನು ಶಿವಗಣಗಳ ಅಧಿಪತಿಯ ಸ್ಥಾನವನ್ನು ಪಡೆಯುವನು.

**ಜನಾರ್ಧನಲಿಂಗತೀರ್ಥ** : ಇಲ್ಲಿ ಶ್ರೀಮನ್ನಾರಾಯಣನು ಲಿಂಗರೂಪದಿಂದ ಇದ್ದಾನೆ. ಈ ಲಿಂಗಕ್ಕೆ ಜನಾರ್ಧನ ಎಂದು ಹೆಸರು. ಶ್ರೀಮನ್ನಾರಾಯಣನು ಉಪಾಸನೆಯಿಂದ

ಪರಿಪಕ್ವಸ್ಥಿತಿಯನ್ನು ಪಡೆದ ಮುನಿಗಳಿಗೆ ಲಿಂಗರೂಪದಿಂದ ದರ್ಶನವನ್ನು ಕೊಟ್ಟನು. ಆದ್ದರಿಂದ ಬಹಳ ಉತ್ತಮವಾದ ತೀರ್ಥ. ಇಲ್ಲಿ ಸ್ನಾನ ಮಾಡಿದ ನರನು ವಿಷ್ಣುಲೋಕದಲ್ಲಿ ಮಾನ್ಯಸ್ಥಾನವನ್ನು ಪಡೆಯುತ್ತಾನೆ.

**ಅಕೋಲ್ಲತೀರ್ಥ** : ಇದು ಸಕಲಪಾಪಗಳನ್ನು ಪರಿಹರಿಸುವ ತೀರ್ಥ. ಇಲ್ಲಿ ಪಿಂಡಪ್ರದಾನವನ್ನು ಮಾಡಿದರೆ, ಸತ್ತನಂತರ ಅನಂತಫಲವು ಲಭಿಸುತ್ತದೆ. ಪಿಂಡಕ್ಕಾಗಿ ಇಲ್ಲಿರುವ ತ್ರಯಂಬಕ ಎಂಬ ಹೆಸರಿನ ನೀರಿನಿಂದ ಚರುವನ್ನು ಬೇಯಿಸಬೇಕು. ಈ ತೀರ್ಥದ ಮೂಲದಲ್ಲಿ ವಿಧಿಗೆ ಅನುಗುಣವಾಗಿ ಪಿಂಡದಾನವನ್ನು ಮಾಡಬೇಕು. ಇದರಿಂದ ಪಿತೃಗಳು ಚಂದ್ರ-ಸೂರ್ಯರು ಇರುವವರೆಗೆ ತೃಪ್ತರಾಗುತ್ತಾರೆ.

**ತಾಪಸೇಶ್ವರತೀರ್ಥ** : ಇಲ್ಲಿ ಸ್ನಾನ ಮಾಡಿದವರಿಗೆ ಉತ್ತಮ ತಪಸ್ಸು ಮಾಡಿದ ಫಲವು ಬರುತ್ತದೆ.

**ಶುಕ್ಲತೀರ್ಥ** : ಇದು ಸರ್ವಪಾಪಹರ. ನರ್ಮದೆಯಲ್ಲಿ ಇದಕ್ಕೆ ಸಮಾನವಾದ ತೀರ್ಥವಿಲ್ಲ. ಈ ತೀರ್ಥದ ದರ್ಶನದಿಂದ, ಇಲ್ಲಿ ಸ್ನಾನ-ದಾನ-ತಪಸ್ಸು-ಜಪಗಳಿಂದ ಹೋಮ-ಉಪವಾಸಗಳಿಂದ ಮಹಾಫಲವು ಲಭಿಸುವುದು. ಈ ತೀರ್ಥ ಒಂದು ಯೋಜನ ಉದ್ದವುಳ್ಳದ್ದು. ಇಲ್ಲಿ ಒಂದು ಮರವಿದೆ. ಅದರ ತುದಿಯನ್ನು ನೋಡಿದವರ ಬ್ರಹ್ಮಹತ್ಯಾ-ಪಾಪವು ನಾಶವಾಗುತ್ತದೆ. ಇಲ್ಲಿ ಪರಮೇಶ್ವರನು ಪಾರ್ವತಿಯೊಡನೆ ಸನ್ನಿಹಿತನಾಗಿದ್ದಾನೆ. ವೈಶಾಖಮಾಸದ ಕೃಷ್ಣಪಕ್ಷದ ಚತುರ್ದಶಿಯಂದು ತನ್ನ ಲೋಕದಿಂದ ಇಲ್ಲಿಗೆ ಬಂದು ಸನ್ನಿಹಿತನಾಗಿರುತ್ತಾನೆ. ದೇವತೆಗಳೂ, ದಾನವರೂ, ಗಂಧರ್ವರೂ, ಸಿದ್ಧರೂ, ವಿದ್ಯಾಧರರೂ ಅಪ್ಸರೆಯರೂ, ನಾಗಗಳೂ ಇಲ್ಲಿ ಇದ್ದಾರೆ. ನೀರಿನಿಂದ ಸ್ವಚ್ಛಗೊಳಿಸಲ್ಪಟ್ಟ ಬಟ್ಟೆಯು ಸ್ವಚ್ಛವಾಗುವಂತೆ ಹುಟ್ಟಿದಾಗಿನಿಂದ ಮಾಡಲ್ಪಟ್ಟ ಪಾಪಗಳೆಲ್ಲವೂ ಇಲ್ಲಿ ನಾಶವಾಗಿ ವ್ಯಕ್ತಿಯು ಶುದ್ಧನಾಗುತ್ತಾನೆ. ಇಲ್ಲಿ ಮಾಡಲ್ಪಡುವ ಸ್ನಾನ-ದಾನ-ತಪಸ್ಸು-ಶ್ರಾದ್ಧಗಳು ಅನಂತಫಲವನ್ನು ಕೊಡುತ್ತವೆ. ಶುಕ್ಲತೀರ್ಥಕ್ಕಿಂತ ಹೆಚ್ಚು ಪವಿತ್ರವಾದ ತೀರ್ಥವು ಮುಂದೆಂದೂ ಉದ್ಭವಿಸುವುದಿಲ್ಲ. ಮಾನವನು ತನ್ನ ಪೂರ್ವವಯಸ್ಸಿನಲ್ಲಿ ಮಾಡಿದ ಪಾಪಗಳು ಇಲ್ಲಿ ಒಂದು ಹಗಲು ಮತ್ತು ಒಂದು ರಾತ್ರಿ ಉಪವಾಸದಿಂದ ನಾಶವಾಗುತ್ತವೆ.

ಈ ತೀರ್ಥದಲ್ಲಿ ಕಾರ್ತೀಕ ಮಾಸದ ಕೃಷ್ಣಪಕ್ಷದ ಚತುರ್ದಶಿಯಂದು ಉಪವಾಸವಿದ್ದು ಪರಮೇಶ್ವರನಿಗೆ ತುಪ್ಪದಿಂದ ಅಭಿಷೇಕಮಾಡಬೇಕು. ಹೀಗೆ ಮಾಡಿದವನ ಕುಲದ ಇಪ್ಪತ್ತೊಂದು ತಲೆಯ ಜನಗಳು ಈಶ್ವರಲೋಕದಲ್ಲಿ ಶಾಶ್ವತಸ್ಥಾನವನ್ನು ಪಡೆಯುತ್ತಾರೆ. ಶುಕ್ಲತೀರ್ಥದಲ್ಲಿ ತಪಸ್ಸು-ಬ್ರಹ್ಮಚರ್ಯ-ಯಜ್ಞ-ದಾನಗಳಿಂದ ಪಡೆಯುವ ಸದ್ಗತಿಯನ್ನು ಬೇರೆ ಯಾವ ತೀರ್ಥದಲ್ಲಿ ಮಾಡಿದ ಅನುಷ್ಠಾನದಿಂದಲೂ ಪಡೆಯಲಾಗುವುದಿಲ್ಲ. ಋಷಿಗಳೂ, ಸಿದ್ಧರೂ ಅನುಷ್ಠಾನಗಳನ್ನು ಮಾಡುವ ಈ ತೀರ್ಥದಲ್ಲಿ ಸ್ನಾನ ಮಾಡಿದವನು ಪುನರ್ಜನ್ಮವನ್ನು ಹೊಂದುವುದಿಲ್ಲ.

ಅಯನಗಳಲ್ಲಿ ಚತುರ್ದಶಿಯಲ್ಲಿ, ಸಂಕ್ರಮಣದಿನಗಳಲ್ಲಿ, ವಿಷುವ ಕಾಲದಲ್ಲಿ ಈ ತೀರ್ಥದಲ್ಲಿ ಸ್ನಾನ ಮಾಡಿ, ಉಪವಾಸವಿದ್ದು, ಜಿತೇಂದ್ರಿಯನಾಗಿ ಶಕ್ತಿಯಿದ್ದಷ್ಟು ದಾನವನ್ನು ಮಾಡಬೇಕು. ಇದರಿಂದ ಹರಿ-ಹರರು ಪ್ರೀತರಾಗುತ್ತಾರೆ. ಈ ತೀರ್ಥದ ಪ್ರಭಾವ ಎಲ್ಲ ಆಚರಣೆಗಳೂ ಅಕ್ಷಯಫಲವನ್ನು ಕೊಡುತ್ತವೆ. ಅನಾಥರಿಗೆ, ಬಡವರಿಗೆ ಅಥವಾ ಅನುಕೂಲವಿದ್ದವರಿಗೆ ಈ ತೀರ್ಥದಲ್ಲಿ ಮದುವೆಯನ್ನು ಮಾಡಿದರೆ ಆ ವಧೂ-ವರರ ಮತ್ತು ಅವರ ಸಂತತಿಯ ಶರೀರದಲ್ಲಿ ಇರುವ ರೋಮಗಳ ಸಂಖ್ಯೆ ಎಷ್ಟೋ ಅಷ್ಟು ಸಾವಿರ ವರ್ಷ ರುದ್ರಲೋಕದಲ್ಲಿ ಮಾನ್ಯಸ್ಥಾನವನ್ನು ಪಡೆಯುತ್ತಾನೆ.

**ಯಮತೀರ್ಥ :** ಈ ತೀರ್ಥದಲ್ಲಿ ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯಂದು ಸ್ನಾನ ಮಾಡಿ ಹಗಲು ಉಪವಾಸವಿದ್ದು ರಾತ್ರಿ ಊಟಮಾಡಿದರೆ ಪುನರ್ಜನ್ಮವೇ ಇಲ್ಲ.

**ಏರಂಡೀತೀರ್ಥ :** ಇದು ಸಂಗಮ. ಇಲ್ಲಿ ಈ ತೀರ್ಥದ ಮೃತಿಕೆಯನ್ನು ತಲೆಗೆ ಧರಿಸಿ ಭಕ್ತಿಯಿಂದ ಸ್ನಾನ ಮಾಡಬೇಕು. ಈ ತೀರ್ಥದಲ್ಲಿ ನರ್ಮದೆಯ ನೀರೂ ಸೇರಿದೆ. ಸ್ನಾನ ಮಾಡಿದವನ ಸಕಲಪಾಪಗಳೂ ನಾಶವಾಗುತ್ತವೆ. ಇಲ್ಲಿ ಉಪವಾಸ ಮಾಡಿ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೆ ಒಂದುಕೋಟಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದ ಫಲವು ಬರುತ್ತದೆ

**ಕಲ್ಲೋಲಕೇಶ್ವರತೀರ್ಥ :** ಇಲ್ಲಿ ಪುಣ್ಯಕಾಲಗಳಲ್ಲಿ ಗಂಗೆಯು ಅವತರಿಸುವಳು. ಇಲ್ಲಿ ವಿಧಿಗೆ ಅನುಗುಣ ಸ್ನಾನಮಾಡಿ, ದಾನಮಾಡಿ, ನೀರನ್ನು ಕುಡಿದರೆ ಎಲ್ಲ ಪಾಪಗಳೂ ನಾಶವಾಗಿ ಬ್ರಹ್ಮಲೋಕದಲ್ಲಿ ಮಾನ್ಯಸ್ಥಾನವನ್ನು ಪಡೆಯುತ್ತಾನೆ.

**ನಂದೀತೀರ್ಥ :** ಇಲ್ಲಿ ನಂದೀಶ್ವರನ ಸನ್ನಿಧಾನವಿದೆ. ಇಲ್ಲಿ ಸ್ನಾನ ಮಾಡಿದರೆ ಅವನು ಪ್ರೀತನಾಗುತ್ತಾನೆ. ಸ್ನಾನಮಾಡಿದವನಿಗೆ ವಿಷ್ಣುಲೋಕದಲ್ಲಿ ಮಾನ್ಯಸ್ಥಾನವು ಲಭಿಸುತ್ತದೆ

**ಅನರಕತೀರ್ಥ :** ಇಲ್ಲಿ ಸ್ನಾನ ಮಾಡಿದವರಿಗೆ ನರಕ ದರ್ಶನವಾಗುವುದಿಲ್ಲ. ಈ ತೀರ್ಥದಲ್ಲಿ ತನ್ನ ಅಸ್ಥಿಗಳನ್ನು ವಿಸರ್ಜಿಸಿದರೆ ಮುಂದಿನ ಜನ್ಮದಲ್ಲಿ ರೂಪವಂತನೂ, ಧನವಂತನೂ, ಭೋಗವಂತನೂ ಆಗುತ್ತಾನೆ.

**ಕಪಿಲಾತೀರ್ಥ :** ಅಲ್ಲಿಂದ ಕಪಿಲಾ ತೀರ್ಥಕ್ಕೆ ಹೋಗಬೇಕು. ಇಲ್ಲಿ ಸ್ನಾನಮಾಡಿದರೆ ಸಾವಿರ ಗೋವುಗಳನ್ನು ದಾನಮಾಡಿದ ಫಲವು ಬರುತ್ತದೆ. ಜ್ಯೇಷ್ಠಮಾಸದ ಚತುರ್ದಶಿ-ಯಂದು ಇಲ್ಲಿ ಉಪವಾಸ ಮಾಡಿ ಭಕ್ತಿಯಿಂದ ತುಪ್ಪದ ದೀಪವನ್ನು ದಾನ ಮಾಡಬೇಕು. ರುದ್ರದೇವರಿಗೆ ತುಪ್ಪದ ಅಭಿಷೇಕವನ್ನು ಮಾಡಬೇಕು. ಇದರಿಂದ ಸಂಪತ್ತು ಲಭಿಸುವುದು. ಘಂಟೆಗಳನ್ನು ಕಟ್ಟಿ ಅಲಂಕರಿಸಲ್ಪಟ್ಟ ಕಪಿಲಬಣ್ಣದ ಹಸುವನ್ನು ದಾನಮಾಡಬೇಕು. ಇದರಿಂದ ದಾನಮಾಡಿದವನಿಗೆ ಶಿವಬಲಕ್ಕೆ ಸಮಾನವಾದ ಬಲವು ಬರುವುದು. ಎಲ್ಲ ಆಭರಣಗಳ

ಅಲಂಕಾರವನ್ನೂ ಮಾಡಿಕೊಳ್ಳುವ ಯೋಗವೂ ಉಂಟಾಗುತ್ತದೆ. ಶಿವನಂತೆ ವಿಹಾರದ ಯೋಗವನ್ನು ಪಡೆಯುತ್ತಾನೆ.

ಮಂಗಳವಾರದಂದು ಚತುರ್ಥೀ ತಿಥಿಯು ಬಂದರೆ ಇಲ್ಲಿ ಶಿವನಿಗೆ ಅಭಿಷೇಕವನ್ನು ಮಾಡಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಮಾಡಿಸುವವನು ವಿಮಾನದಲ್ಲಿ ದೇವೇಂದ್ರನ ಲೋಕಕ್ಕೆ ಹೋಗಿ ಇಂದ್ರನ ಜೊತೆ ಸುಖವನ್ನು ಅನುಭವಿಸುತ್ತಾನೆ. ಸ್ವರ್ಗದಿಂದ ಭೂಮಿಗೆ ಹಿಂತಿರುಗಿದ ಮೇಲೆ ಧೈರ್ಯಶಾಲಿಯೂ, ಭೋಗಶಾಲಿಯೂ ಆಗುತ್ತಾನೆ. ಮಂಗಳವಾರದಂದು ನವಮಿ ಬಂದರೆ ಮತ್ತು ಅಮಾವಾಸ್ಯೆಯಲ್ಲಿ ಶಿವನಿಗೆ ಅಭಿಷೇಕವನ್ನು ಮಾಡಿದರೆ ರೂಪವಂತನೂ, ಭಾಗ್ಯವಂತನೂ ಆಗುತ್ತಾನೆ.

**ಗಣೇಶ್ವರತೀರ್ಥ** : ಇದಕ್ಕಿಂತ ಉತ್ತಮವಾದ ತೀರ್ಥವಿಲ್ಲ. ಶ್ರಾವಣಮಾಸದ ಕೃಷ್ಣಪಕ್ಷದ ಚತುರ್ದಶಿಯಂದು ಇಲ್ಲಿ ಸ್ನಾನಮಾಡಿದವರು ರುದ್ರಲೋಕದಲ್ಲಿ ಮಾನ್ಯಸ್ಥಾನವನ್ನು ಪಡೆಯುತ್ತಾರೆ. ಇಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಟ್ಟರೆ ದೇವ-ಋಷಿ-ಪಿತೃ ಎಂಬ ಮೂರು ಋಣಗಳಿಂದ ಬಿಡುಗಡೆಯಾಗತ್ತದೆ.

**ಗಂಗಾವದನ** : ಈ ಶ್ರೇಷ್ಠವಾದ ತೀರ್ಥವು ಗಂಗೇಶ್ವರ ಎಂಬ ಪ್ರದೇಶಕ್ಕೆ ಹತ್ತಿರದಲ್ಲಿದೆ. ಮನುಷ್ಯನು ಫಲಾಪೇಕ್ಷೆಯಿಂದ ಅಥವಾ ಫಲಾಪೇಕ್ಷೆ ಇಲ್ಲದೆ ಇಲ್ಲಿ ಸ್ನಾನ ಅನುಷ್ಠಾನಗಳನ್ನು ಮಾಡಿದರೆ ಹುಟ್ಟಿದಾಗಿನಿಂದ ಮಾಡಿದ ಎಲ್ಲ ಪಾಪಗಳೂ ದೂರವಾಗುತ್ತವೆ.

**ದಶಾಶ್ವಮೇಧಿಕತೀರ್ಥ** : ಗಂಗಾವದನದ ಹತ್ತಿರ ಈ ತೀರ್ಥವಿದೆ. ಇದು ಮೂರು ಲೋಕಗಳಲ್ಲಿ ಪ್ರಸಿದ್ಧ. ಭಾದ್ರಪದಮಾಸದ ಅಮಾವಾಸ್ಯೆಯಂದು ಉಪವಾಸಮಾಡಿ ಹರನಿಗೆ ಅಭಿಷೇಕಮಾಡಿ ಪೂಜಿಸಬೇಕು. ಹೀಗೆ ಮಾಡಿದವನಿಗೆ ಕಿರುಘಂಟೆಗಳ ಸಾಲಿನಿಂದ ಅಲಂಕೃತವಾದ ಬಂಗಾರದ ವಿಮಾನದಲ್ಲಿ ರುದ್ರಪುರಕ್ಕೆ ಹೋಗಿ ರುದ್ರನ ಜೊತೆ ಸುಖವನ್ನನುಭವಿಸುವ ಅವಕಾಶವು ಉಂಟಾಗುತ್ತದೆ. ಈ ತೀರ್ಥದ ಯಾವುದೇ ಭಾಗದಲ್ಲಿ ಯಾವುದೇ ದಿವಸದಲ್ಲಿ ಸ್ನಾನ ಮಾಡಿ ಪಿತೃಗಳಿಗೆ ತರ್ಪಣವನ್ನು ಕೊಟ್ಟರೆ ಅಶ್ವಮೇಧದ ಫಲವು ಲಭಿಸುತ್ತದೆ.

* * *

## ಅಧ್ಯಾಯ-೯೫

ಮಾರ್ಕಂಡೇಯ ಉವಾಚ :

**ಭೃಗುತೀರ್ಥ :** ಇಲ್ಲಿ ಹಿಂದೆ ಭೃಗುವು ಶಿವನನ್ನು ಕುರಿತು ತಪಸ್ಸು ಮಾಡಿದನು. ಆದ್ದರಿಂದ ಈ ತೀರ್ಥಕ್ಕೆ ಭೃಗುತೀರ್ಥ ಎಂದು ಹೆಸರು. ಇಲ್ಲಿ ಸನ್ನಿಹಿತನಾಗಿರುವ ಶಿವನ ದರ್ಶನದಿಂದ ಪಾಪಗಳೆಲ್ಲವೂ ಕೂಡಲೇ ದೂರವಾಗುತ್ತವೆ. ಇಲ್ಲಿ ಸ್ನಾನ ಮಾಡಿ ಮೃತರಾದವರಿಗೆ ಪುನರ್ಜನ್ಮವಿಲ್ಲ. ಈ ತೀರ್ಥದಲ್ಲಿ ಪಾದರಕ್ಷೆ, ಬಂಡಿ, ಅನ್ನ, ಬಂಗಾರ ಇವುಗಳನ್ನು ದಾನಮಾಡಿದರೆ ಅಕ್ಷಯಫಲವು ಲಭಿಸುವುದು. ಬೇರೆ ಕಡೆ ಮಾಡಿದ ಪುಣ್ಯದ ಫಲಗಳು ಮುಗಿಯುತ್ತವೆ. ಭೃಗುತೀರ್ಥದಲ್ಲಿ ಮಾಡಿದ ಪುಣ್ಯವು ಅಕ್ಷಯವಾಗಿರುತ್ತದೆ. ಭೃಗು-ಮಹರ್ಷಿಯು ಮಾಡಿದ ಉಗ್ರತಪಸ್ಸಿನ ಫಲವಾಗಿಯೇ ಈ ತೀರ್ಥದಲ್ಲಿ ತ್ರಿಪುರಾರಿಯಾದ ಶಿವನ ಸನ್ನಿಧಾನವು ಇದೆ

**ಗೌತಮೇಶ್ವರ ತೀರ್ಥ :** ಇಲ್ಲಿ ಗೌತಮ ಋಷಿಗಳು ಶಿವನನ್ನು ಆರಾಧಿಸಿ ಉತ್ತಮ-ಸಿದ್ಧಿಯನ್ನು ಪಡೆದರು. ಆದ್ದರಿಂದ ಈ ಕ್ಷೇತ್ರಕ್ಕೆ ಗೌತಮರ ಹೆಸರು. ಇಲ್ಲಿ ಸ್ನಾನ ಮಾಡಿ ಉಪವಾಸ ಮಾಡಿದವರಿಗೆ ಬಂಗಾರದ ವಿಮಾನದಲ್ಲಿ ಬ್ರಹ್ಮಲೋಕಕ್ಕೆ ಹೋಗುವ ಅವಕಾಶವು ಬರುತ್ತದೆ. ಅಲ್ಲಿ ಮಾನ್ಯವಾದ ಸ್ಥಾನವನ್ನು ಪಡೆಯುತ್ತಾನೆ.

**ವೃಷೋತ್ಸರ್ಗತೀರ್ಥ :** ವಿಷ್ಣುಮಾಯೆಯಿಂದ ಮೋಹಿತರಾದ ಜನರಿಗೆ ಈ ತೀರ್ಥದ ಪರಿಚಯವೇ ಆಗುವುದಿಲ್ಲ. ಇಲ್ಲಿಗೆ ಹೋದವರು ಶಾಶ್ವತಸ್ಥಾನವನ್ನು ಹೊಂದುವರು.

**ಧೌತಪಾಪತೀರ್ಥ :** ಇದು ನರ್ಮದಾ ತೀರದಲ್ಲಿದೆ. ಶಿವನ ವಾಹನವಾದ ಎತ್ತು ಇಲ್ಲಿಯ ದೋಷಗಳೆಲ್ಲವನ್ನೂ ತೊಳೆದಿದೆ. ಇಲ್ಲಿ ಸ್ನಾನಮಾಡಿದರೆ ಬ್ರಹ್ಮಹತ್ಯೆಯ ಪಾಪವು ನಾಶವಾಗುತ್ತದೆ. ಇಲ್ಲಿ ಸ್ನಾನ ಮಾಡಿ ಮೃತರಾದವರು ನಾಲ್ಕು ಭುಜವುಳ್ಳವರೂ, ಮೂರು ಕಣ್ಣುಳ್ಳವರೂ ಆಗುತ್ತಾರೆ. ಶಿವನ ಬಲಕ್ಕೆ ಸಮಾನವಾದ ಬಲವು ಅವರಿಗೆ ಬರುತ್ತದೆ. ಶಿವಲೋಕದಲ್ಲಿ ಹತ್ತುಸಾವಿರ ಕಲ್ಪ ವಾಸಮಾಡುತ್ತಾರೆ. ಅನಂತರ ಭೂಮಿಯಲ್ಲಿ ಹುಟ್ಟಿ ಸಾರ್ವಭೌಮರಾಗುತ್ತಾರೆ.

**ಹಸ್ತತೀರ್ಥ :** ಇಲ್ಲಿ ಸ್ನಾನ ಮಾಡಿದ ನರನು ಬ್ರಹ್ಮಲೋಕದಲ್ಲಿ ಮಾನ್ಯಸ್ಥಾನವನ್ನು ಪಡೆಯುತ್ತಾನೆ.

**ವರಾಹತೀರ್ಥ :** ಇಲ್ಲಿ ಶ್ರೀಮನ್ನಾರಾಯಣನು ಸಿದ್ಧರೂಪದಿಂದ ಸನ್ನಿಹಿತನಾಗಿದ್ದಾನೆ. ಇಲ್ಲಿ ಸ್ನಾನ ಮೊದಲಾದವುಗಳನ್ನು ಮಾಡಿದರೆ ವಿಷ್ಣುಲೋಕವು ಲಭಿಸುತ್ತದೆ

**ಚಂದ್ರತೀರ್ಥ :** ಹುಣ್ಣಿಮೆಯಂದು ಇಲ್ಲಿ ಸ್ನಾನಮಾಡಬೇಕು. ಈ ಸ್ನಾನ ವಿಶೇಷ ಫಲಗಳನ್ನು ಕೊಡುತ್ತದೆ. ಭೂಮಂಡಲದ ಸಾರ್ವಭೌಮನಾಗುವ ಯೋಗವು ಉಂಟಾಗುತ್ತದೆ

**ದೇವತೀರ್ಥ** : ದೇವತೆಗಳೆಲ್ಲರೂ ಈ ತೀರ್ಥವನ್ನು ನಮಸ್ಕರಿಸುತ್ತಾರೆ. ಇಲ್ಲಿ ಸ್ನಾನ ಮಾಡಿದವರು ದೇವತೆಗಳ ಜೊತೆ ಸುಖವಾಗಿರುತ್ತಾರೆ.

**ಶಂಖತೀರ್ಥ** : ಇಲ್ಲಿ ಮಾಡಲ್ಪಡುವ ದಾನವು ಕೋಟಿಪಟ್ಟು ಫಲವನ್ನು ಕೊಡುತ್ತದೆ.

**ಪೈತಾಮಹತೀರ್ಥ** : ಇಲ್ಲಿ ಮಾಡಲ್ಪಡುವ ಶ್ರಾದ್ಧವು ಅಕ್ಷಯಫಲವನ್ನು ಕೊಡುತ್ತದೆ.

**ಸಾವಿತ್ರೀತೀರ್ಥ** : ಇಲ್ಲಿ ಮೃತರಾದವರ ಎಲ್ಲ ಪಾಪಗಳೂ ನಾಶವಾಗುತ್ತವೆ. ಬ್ರಹ್ಮಲೋಕದಲ್ಲಿ ಉತ್ತಮ ಸ್ಥಾನವು ಲಭಿಸುತ್ತದೆ

**ಮನೋಹರತೀರ್ಥ** : ಸಾವಿತ್ರೀ ತೀರ್ಥದ ಹತ್ತಿರದಲ್ಲಿಯೇ ಈ ತೀರ್ಥವಿದೆ. ಇಲ್ಲಿ ಸ್ನಾನ ಮಾಡಿದವರು ರುದ್ರಲೋಕದಲ್ಲಿ ಉತ್ತಮ ಸ್ಥಾನವನ್ನು ಪಡೆಯುತ್ತಾರೆ.

**ಕನ್ಯಾತೀರ್ಥ** : ಇಲ್ಲಿ ಸ್ನಾನಮಾಡಿದರೆ ಎಲ್ಲ ಪಾಪಗಳೂ ನಾಶವಾಗುತ್ತವೆ. ಶುಕ್ಲಪಕ್ಷದ ತೃತೀಯಾದಂದು ಈ ತೀರ್ಥದಲ್ಲಿ ಸ್ನಾನ ಮಾಡಿದರೆ ಸಾರ್ವಭೌಮನಾಗುವನು.

**ಸರ್ಗಬಿಂದುತೀರ್ಥ** : ದೇವತೆಗಳೆಲ್ಲರೂ ಈ ತೀರ್ಥವನ್ನು ನಮಸ್ಕರಿಸುತ್ತಾರೆ. ಇಲ್ಲಿ ಸ್ನಾನ ಮಾಡಿದವರು ಯಾವ ದುರ್ಗತಿಯನ್ನೂ ಹೊಂದುವುದಿಲ್ಲ.

**ಅಪ್ಸರೇಶತೀರ್ಥ** : ಇಲ್ಲಿ ಸ್ನಾನಮಾಡಿದರೆ ಸ್ವರ್ಗಲೋಕದಲ್ಲಿ ಅಪ್ಸರೆಯರ ಜೊತೆ ವಿಹರಿಸುವ ಅವಕಾಶವು ಬರುತ್ತದೆ.

**ಭಾರಭೂತಿತೀರ್ಥ** : ಇಲ್ಲಿ ಉಪವಾಸ ಮಾಡಿ ರುದ್ರನ ಪೂಜೆಯನ್ನು ಮಾಡಿದರೆ ರುದ್ರಲೋಕದಲ್ಲಿ ಗಣ್ಯಸ್ಥಾನವನ್ನು ಪಡೆಯುತ್ತಾನೆ. ಈ ತೀರ್ಥದಲ್ಲಿ ಮೃತರಾದವರು ಗಣಗಳ ಅಧಿಪತಿಯ ಸ್ಥಾನವನ್ನು ಪಡೆಯುತ್ತಾರೆ. ಇಲ್ಲಿ ಕಾರ್ತೀಕ ಮಾಸದಲ್ಲಿ ಪಾರ್ವತೀಪತಿಯಾದ ಶಿವನನ್ನು ಅರ್ಚಿಸಬೇಕು. ಇದರಿಂದ ಅಶ್ವಮೇಧದ ಫಲಕ್ಕಿಂತ ಹತ್ತುಪಟ್ಟು ಹೆಚ್ಚು ಫಲವು ಲಭಿಸುವುದೆಂದು ಪ್ರಾಜ್ಞರು ಹೇಳುತ್ತಾರೆ. ಇಲ್ಲಿ ಮಾಘಮಲ್ಲಿಗೆಯಂತೆ ಅಥವಾ ಚಂದ್ರಬಿಂಬದಂತೆ ಕಾಂತಿಯನ್ನು ಹೊಂದಿರುವ ವೃಷಭವನ್ನು ದಾನಮಾಡಿದರೆ, ವೃಷಭ ವಾಹನದಲ್ಲಿಯೇ ಕುಳಿತು ರುದ್ರಲೋಕಕ್ಕೆ ಹೋಗುತ್ತಾನೆ. ಈ ತೀರ್ಥಕ್ಕೆ ಹೋಗಿ ಮೃತರಾದವರು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಹೊಂದಿ ರುದ್ರಲೋಕಕ್ಕೆ ಹೋಗುತ್ತಾರೆ. ಈ ತೀರ್ಥದಲ್ಲಿ ಮುಳುಗಿ ಮರಣಹೊಂದಿದವರು ಹಂಸವಾಹನವನ್ನು ಏರಿ ಸ್ವರ್ಗಲೋಕಕ್ಕೆ ಹೋಗುತ್ತಾರೆ.

**ಜಮದಗ್ನಿತೀರ್ಥ** : ಇದು ನರ್ಮದಾನದಿ ಮತ್ತು ಸಮುದ್ರಗಳ ಸಂಗಮ. ಇಲ್ಲಿ ಜನಾರ್ದನನ ಸನ್ನಿಧಾನವಿದೆ. ಈ ಸಂಗಮದಲ್ಲಿ ಸ್ನಾನ ಮಾಡಿದವನು ಅಶ್ವಮೇಧದ ಫಲದ ಮೂರುಪಟ್ಟು ಫಲವನ್ನು ಪಡೆಯುತ್ತಾನೆ.

**ಪಿಂಗಲೇಶ್ವರತೀರ್ಥ :** ಇಲ್ಲಿ ಸ್ನಾನಮಾಡಿದವರು ಬ್ರಹ್ಮಲೋಕದಲ್ಲಿ ಗಣ್ಯ ಸ್ಥಾನವನ್ನು ಪಡೆಯುತ್ತಾರೆ. ಇಲ್ಲಿ ಉಪವಾಸ ಮಾಡಿ, ಸನ್ನಿಹಿತನಾಗಿರುವ ವಿಮಲೇಶ್ವರನ ದರ್ಶನವನ್ನು ಮಾಡಿದರೆ ಏಳು ಜನ್ಮಗಳಲ್ಲಿ ಮಾಡಿದ ಪಾಪವು ನಾಶವಾಗಿ ಶಿವಲೋಕವನ್ನು ಹೊಂದುತ್ತಾನೆ.

**ಆಲಿತೀರ್ಥ :** ಇಲ್ಲಿ ಒಂದು ರಾತ್ರಿ ಉಪವಾಸ ಮಾಡಿ, ನಿಯಮನಿಷ್ಠನಾಗಿ, ನಿಯತವಾದ ಆಹಾರವನ್ನು ಸೇವಿಸುತ್ತಾ ತಪಸ್ಸು ಮಾಡಿದರೆ ಬ್ರಹ್ಮಹತ್ಯೆಯ ಪಾಪದಿಂದ ಬಿಡುಗಡೆಯಾಗುತ್ತದೆ.

ಯುಧಿಷ್ಠಿರ! ಇಲ್ಲಿಯವರೆಗೆ ಪ್ರಧಾನತೀರ್ಥಗಳ ಬಗ್ಗೆ ಸಂಕ್ಷೇಪವಾಗಿ ಹೇಳಿದ್ದೇನೆ. ವಿಸ್ತರದಿಂದ ಹೇಳಲು ಸಾಧ್ಯವೇ ಇಲ್ಲ.

ನರ್ಮದಾನದಿ ಬಹಳ ಪವಿತ್ರ. ಮೂರುಲೋಕಗಳಲ್ಲಿ ಪ್ರಸಿದ್ಧ. ನದಿಗಳಲ್ಲಿ ಶ್ರೇಷ್ಠನದಿ. ಪರಮೇಶ್ವರನಿಗೆ ಪ್ರಿಯವಾದ ನದಿ. ಈ ನರ್ಮದೆಯ ಸ್ಮರಣೆಯನ್ನು ಮಾಡಿದರೂ ಕೂಡ ನೂರು ಚಾಂದ್ರಾಯಣವ್ರತವನ್ನು ಮಾಡಿದ ಫಲವು ಬರುತ್ತದೆ. ಈ ಬಗ್ಗೆ ಶ್ರದ್ಧೆ ಇಲ್ಲದ ನಾಸ್ತಿಕರು, ಘೋರ ನಾಸ್ತಿಕರಾಗಿ ಘೋರ ನರಕದಲ್ಲಿ ಬೀಳುತ್ತಾರೆ ಎಂದು ಪರಮೇಶ್ವರನು ಹೇಳಿದ್ದಾನೆ. ಈ ನದಿಯನ್ನು ಪರಮೇಶ್ವರನೇ ನಿತ್ಯವೂ ಸೇವಿಸುತ್ತಾನೆ. ಆದ್ದರಿಂದ ಇದು ಬ್ರಹ್ಮಹತ್ಯೆಯ ದೋಷವನ್ನು ಪರಿಹರಿಸುವ ಪುಣ್ಯನದಿ.

* * *

## ಅಧ್ಯಾಯ-೯೬

**ಸೂತ ಉವಾಚ :**

ನೈಮಿಷಾರಣ್ಯವೆಂಬ ಉತ್ತಮವಾದ ಕ್ಷೇತ್ರವು ಮೂರು ಲೋಕಗಳಲ್ಲಿ ಪ್ರಸಿದ್ಧ. ರುದ್ರದೇವರಿಗೆ ಪ್ರಿಯವಾದ ಕ್ಷೇತ್ರ ಇದು. ಎಲ್ಲ ಪಾಪಗಳನ್ನೂ ನಾಶ ಮಾಡುವ ಕ್ಷೇತ್ರ. ಮಹಾರುದ್ರದೇವರ ಸಾಕ್ಷಾತ್ಕಾರವನ್ನು ಬಯಸಿದ ಮುನಿಗಳಿಗೆ, ತಪಸ್ಸನ್ನು ಆಚರಿಸಲು ಬ್ರಹ್ಮದೇವರು ಈ ಕ್ಷೇತ್ರವನ್ನು ನಿರ್ಮಿಸಿದರು. ಹಿಂದೆ ಒಮ್ಮೆ ಮರೀಚಿ, ವಸಿಷ್ಠ, ಕ್ರತು, ಭೃಗು, ಆಂಗೀರಸ್, ಪುಲಹ -ಈ ಆರು ಮಹರ್ಷಿಗಳ ವಂಶಗಳಲ್ಲಿ ಹುಟ್ಟಿದ ಮುನಿಗಳು ಚತುರ್ಮುಖ ಬ್ರಹ್ಮದೇವರ ಬಳಿ ಹೋಗಿ ನಮಸ್ಕರಿಸಿ ಪ್ರಾರ್ಥಿಸಿದರು.

''ಭಗವಾನ್! ಜಟಾಧಾರಿಯಾದ, ದೇವೋತ್ತಮನಾದ ಶಿವನ ಸಾಕ್ಷಾತ್ಕಾರವನ್ನು ಪಡೆಯುವ ಉಪಾಯ ಯಾವುದು ? ದಯವಿಟ್ಟು ತಿಳಿಸಿರಿ.''

**ಬ್ರಹ್ಮಾ ಉವಾಚ :**

''ಮಾತು ಮತ್ತು ಮನಸ್ಸಿನ ದೋಷಗಳನ್ನು ಪರಿಹರಿಸಿಕೊಂಡು ಒಂದು ಸಾವಿರ ವರ್ಷ ಸತ್ರಯಾಗವನ್ನು ಆಚರಿಸಿರಿ. ಯಾವ ಪ್ರದೇಶದಲ್ಲಿ ಯಾಗವನ್ನು ಆಚರಿಸಬೇಕು ಎಂದು ಹೇಳುವೆ.'' ಹೀಗೆ ಹೇಳಿ ತಮ್ಮ ಮನಸ್ಸಿನಿಂದ ಒಂದು ಚಕ್ರವನ್ನು ನಿರ್ಮಿಸಿ ಅದನ್ನು ಎಸೆದು ಮುನಿಗಳಿಗೆ ಹೇಳಿದರು.

''ಮುನಿಗಳೇ! ಈ ಚಕ್ರವನ್ನು ಹಿಂಬಾಲಿಸಿ ಹೋಗಿರಿ. ಎಲ್ಲಿ ಇದರ ನೇಮಿಯು (ಚಕ್ರದ ಸುತ್ತಲಿನ ಪಟ್ಟಿ) ಶಿಥಿಲವಾಗಿ ಬೀಳುವುದೋ ಆ ಪ್ರದೇಶ ಯಾಗಕ್ಕೆ ಪ್ರಶಸ್ತವಾದುದು.''

ನೇಮಿಯು ಎಲ್ಲಿ ಶಿಥಿಲವಾಗಿ ಬಿದ್ದಿತೋ ಆ ಪ್ರದೇಶವೇ ನೈಮಿಷ. ಸಿದ್ಧರು, ಚಾರಣರು, ಯಕ್ಷರು, ಗಂಧರ್ವರು ಶಿವನ ವಿಶೇಷ ಸನ್ನಿಧಾನವಿರುವ ಈ ಪ್ರದೇಶಕ್ಕೆ ಬಂದು ಶಿವನ ಆರಾಧನೆಯನ್ನು ಮಾಡುತ್ತಾರೆ. ದೇವತೆಗಳು, ಗಂಧರ್ವರು, ಯಕ್ಷರು, ನಾಗಗಳು, ರಾಕ್ಷಸರು - ಇಲ್ಲಿ ಹಿಂದೆ ತಪಸ್ಸು ಮಾಡಿ ಉತ್ತಮವಾದ ವರಗಳನ್ನು ಪಡೆದಿದ್ದಾರೆ. ಭೃಗು ಮೊದಲಾದವರ ವಂಶಜರು, ಶಾಂತಮನಸ್ಸಿನಿಂದ ಸತ್ರಯಾಗದಿಂದ ಇಲ್ಲಿ ಮಹೇಶ್ವರನನ್ನು ಆರಾಧಿಸಿ ಅವನ ಸಾಕ್ಷಾತ್ಕಾರವನ್ನು ಪಡೆದರು. ಇಲ್ಲಿ ಮಾಡಲ್ಪಡುವ ಅನ್ನದಾನ, ಶ್ರಾದ್ಧ, ಯಾಗ ಮೊದಲಾದವುಗಳು, ಆಚರಿಸಲ್ಪಡುವ ತಪಸ್ಸು - ಇವುಗಳಲ್ಲಿ ಒಂದೊಂದು ಕೂಡ ಏಳು ಜನ್ಮಗಳಲ್ಲಿ ಮಾಡಿದ ಪಾಪವನ್ನು ನಾಶಮಾಡುತ್ತದೆ. ಇಲ್ಲಿ ಹಿಂದೆ ಸತ್ರಯಾಗವನ್ನು ಮಾಡುತ್ತಿದ್ದ ಋಷಿಗಳಿಗೆ ಪೂಜ್ಯನಾದ ಮಹೇಶ್ವರನು ಬ್ರಹ್ಮಾಂಡಪುರಾಣವನ್ನು ಉಪದೇಶಿಸಿದರು. ಇಲ್ಲಿ ಸರ್ವಜ್ಞರಾದ ಮಹಾದೇವನು ಪಾರ್ವತಿಯೊಂದಿಗೆ ಈಗಲೂ ವಿಹರಿಸುತ್ತಿದ್ದಾನೆ. ಪ್ರಮಥಗಣಗಳು ಸೇವೆಯನ್ನು ಮಾಡುತ್ತಿವೆ. ಇಲ್ಲಿ ಮೃತರಾದವರು ಬ್ರಹ್ಮಲೋಕಕ್ಕೆ ಹೋಗುತ್ತಾರೆ. ಅವರಿಗೆ ಪುನರ್ಜನ್ಮ ಇಲ್ಲ.

**ಜಾಪ್ಯೇಶ್ವರತೀರ್ಥ** : ಇಲ್ಲಿ ಶಿವನ ದೊಡ್ಡಗಣಕ್ಕೆ ಅಧಿಪತಿಯಾದ ನಂದಿಯು ರುದ್ರಮಂತ್ರಗಳ ಜಪವನ್ನು ನಿರಂತರ ಮಾಡಿದನು. ಪ್ರೀತನಾದ ಪರಮೇಶ್ವರನು ಅವನಿಗೆ ತನ್ನ ಸಾಮ್ಯವನ್ನೂ, ಅಮರತ್ವವನ್ನೂ ಕೊಟ್ಟನು.

ಆ ಕಥೆ ಹೀಗಿದೆ : ಶಿಲಾದ ಎಂಬ ಮಹರ್ಷಿಯೊಬ್ಬನಿದ್ದನು. ಅವನು ಧರ್ಮವನ್ನು ತಿಳಿದಿದ್ದನು. ವೃಷಧ್ವಜನಾದ ಶಿವನ ಅನುಗ್ರಹವನ್ನು ಬಯಸಿ ಅವನನ್ನು ಕುರಿತು ತಪಸ್ಸನ್ನು ಮಾಡಿದನು. ಒಂದು ಸಾವಿರ ವರ್ಷದ ಕೊನೆಯಲ್ಲಿ ಸರ್ವಜ್ಞನಾದ ಶಿವನು ಪಾರ್ವತೀ ಸಹಿತನಾಗಿ, ಗಣಗಳೊಂದಿಗೆ ದರ್ಶನವನ್ನು ಕೊಟ್ಟು ವರವನ್ನು ಕೊಡುವುದಾಗಿ ಹೇಳಿದನು.

ಶಿಲಾದನು ''ನಿನಗೆ ಸದೃಶನಾದ, ಯೋನಿಯಿಂದ ಜನಿಸದ, ಮೃತ್ಯುಹೀನನಾದ ಮಗ ಬೇಕು'' ಎಂದು ಕೇಳಿದನು.

''ಹಾಗೆಯೇ ಆಗಲಿ'' ಎಂದು ಹೇಳಿ ಶಿವನು ತನ್ನ ಪರಿವಾರದೊಂದಿಗೆ ಅಂತರ್ಧಾನವನ್ನು ಹೊಂದಿದನು.

ಅನಂತರ ಶಿಲಾದನು ತಾನು ತಪಸ್ಸು ಮಾಡಿದ ಪ್ರದೇಶದ ಭೂಮಿಯನ್ನು ನೇಗಿಲಿನಿಂದ ಕೃಷಿ ಮಾಡಿದನು. ಆಗ ಒಂದು ಸುಂದರವಾದ, ಪ್ರಲಯಕಾಲದ ಸಾಂವರ್ತಕ ಎಂಬ ಅಗ್ನಿಯಂತಿದ್ದ ಶಿಶುವು, ತನ್ನ ತೇಜಸ್ಸಿನಿಂದ ದಿಕ್ಕುಗಳಲ್ಲಿ ಬೆಳಕನ್ನು ಹರಡುತ್ತಾ, ಮುಗುಳ್ನಗುತ್ತಾ ಭೂಮಿಯನ್ನು ಭೇದಿಸಿ ಮೇಲೆ ಬಂದಿತು. ಷಣ್ಮುಖನಂತಿದ್ದ ಆ ಮಗು ಮೋಡದಂತೆ ಗಂಭೀರವಾದ ಧ್ವನಿಯಿಂದ ಶಿಲಾದನನ್ನು ''ತಾತ! ತಾತ!'' (ಅಪ್ಪ, ಅಪ್ಪ) ಎಂದು ಹೇಳಿತು. ಶಿಲಾದನು ಆ ಮಗುವನ್ನು ತಬ್ಬಿಕೊಂಡು, ಅಲ್ಲಿ ಆಶ್ರಮನಿವಾಸಿಗಳಾಗಿದ್ದ ಮುನಿಗಳಿಗೆ ತೋರಿಸಿದನು. ಶಿಶುವಿಗೆ ಜಾತಕರ್ಮ ಮೊದಲಾದ ಸಂಸ್ಕಾರಗಳನ್ನು ಮಾಡಿದನು. ಶಾಸ್ತ್ರೋಕ್ತವಿಧಾನದಿಂದ ಉಪನಯನವನ್ನು ಮಾಡಿ ತಾನೇ ವೇದಾಧ್ಯಯನವನ್ನು ಮಾಡಿಸಿದನು. ಇವನಿಗೆ ನಂದೀ ಎಂದು ಹೆಸರು. ವೇದಾಧ್ಯಯನ ಸಂಪನ್ನನಾದ ಇವನು ''ಮಹೇಶ್ವರನ ಸಾಕ್ಷಾತ್ಕಾರವನ್ನು ಸಾಧಿಸಿ ಮೃತ್ಯುವನ್ನು ಗೆಲ್ಲುತ್ತೇನೆ'' ಎಂದು ನಿರ್ಧರಿಸಿ ಸಮುದ್ರತೀರಕ್ಕೆ ಹೋಗಿ, ಶ್ರದ್ಧೆಯಿಂದ ರುದ್ರಮಂತ್ರಗಳನ್ನು ನಿರಂತರವಾಗಿ ಜಪಿಸಿದನು.

ಒಂದು ಕೋಟಿ ಜಪವು ಮುಗಿದಾಗ ಭಕ್ತವತ್ಸಲವಾದ ಶಿವನು ದರ್ಶನವನ್ನು ಕೊಟ್ಟು ''ವರವನ್ನು ಕೊಡುತ್ತೇನೆ'' ಎಂದು ಹೇಳಿದನು.

ನಂದಿಯು ''ಇನ್ನೂ ಒಂದು ಕೋಟಿ ಜಪವನ್ನು ಮಾಡುವ ಸಾಮರ್ಥ್ಯವನ್ನು ಕೊಡು. ಅನಂತರ ಸಂಸಾರದಿಂದ ಮುಕ್ತಿಯನ್ನು ಕೊಡು'' ಎಂದು ಕೇಳಿದನು.

ಶಿವನು ''ಹಾಗೆಯೇ ಆಗಲಿ'' ಎಂದು ಹೇಳಿ ಅದೃಶ್ಯನಾದನು ನಂದಿಯು ಶಿವನಲ್ಲೇ ಮನಸ್ಸಿಟ್ಟು ಮತ್ತೆ ಒಂದು ಕೋಟಿ ಜಪವನ್ನು ಮಾಡಿದನು.

ಪುನಃ ಶಿವನು ದರ್ಶನವನ್ನು ಕೊಟ್ಟು ''ವರವನ್ನು ಕೊಡುತ್ತೇನೆ'' ಎಂದು ಹೇಳಿದನು. ಇನ್ನೂ ಒಂದುಕೋಟಿ ಜಪ ಮಾಡುವ ಆಸೆಯನ್ನು ನಂದಿಯು ವ್ಯಕ್ತಪಡಿಸಿದನು. ''ಹಾಗೆಯೇ ಆಗಲಿ'' ಎಂದು ಹೇಳಿ ಶಿವನು ಅದೃಶ್ಯನಾದನು. ಒಟ್ಟು ಮೂರುಕೋಟಿ ಜಪವು ಮುಗಿದನಂತರ ಶಿವನು ಪುನಃ ದರ್ಶನವನ್ನು ಕೊಟ್ಟು ''ವರ ಕೊಡುವೆನು'' ಎಂದು ಹೇಳಿದನು. ನಂದಿಯು ಇನ್ನೂ ಒಂದು ಕೋಟಿ ಜಪಮಾಡುವ ಇಚ್ಛೆಯನ್ನು ವ್ಯಕ್ತಪಡಿಸಿದನು.

ಶಿವನು ''ಇನ್ನು ಜಪಿಸುವುದು ಬೇಡ; ನೀನು ಅಮರನಾಗಿ ನನ್ನ ಜೊತೆಯೇ ಸದಾ ಇರು; ದೊಡ್ಡಗಣಗಳ ಅಧಿಪತಿಯಾಗು; ದೇವಿಯ ಮಗನಾಗಿರು; ನೀನು ಯೋಗೇಶ್ವರ; ಮಹಾಯೋಗಿ, ಎಲ್ಲ ಲೋಕಗಳನ್ನೂ ನೀನು ಜಯಿಸುವೆ; ನಿನಗೆ ನನ್ನ ಜ್ಞಾನವು ಅಂಗೈಯಲ್ಲಿ ನೆಲ್ಲೀಕಾಯಿ ಇದ್ದಂತೆ ಇರುತ್ತದೆ; ಪ್ರಲಯದವರೆಗೆ ನಿನಗೆ ಅಧಿಕಾರ, ಅನಂತರ ಪರಮಪದವನ್ನು ಹೊಂದುವಿ'' ಎಂದು ಹೇಳಿದನು.

ಅನಂತರ ಶಿವನು ತನ್ನ ಗಣಗಳನ್ನು ಕರೆದು ನಂದೀಶ್ವರನಿಗೆ ಅಧಿಕಾರದಲ್ಲಿ ಅಭಿಷೇಕವನ್ನು ಮಾಡಿದನು. ಮರುದ್ದೇವತೆಗಳ ಮಗಳನ್ನು ಕೊಟ್ಟು ಮದುವೆಯನ್ನೂ ಮಾಡಿಸಿದನು.

ಇದು ದೇವೋತ್ತಮವಾದ ಶಿವನ ಸನ್ನಿಧಾನವನ್ನು ಹೊಂದಿರುವ ಜಪ್ಯೇಶ್ವರತೀರ್ಥ. ಇಲ್ಲಿ ಮೃತನಾದವನು ರುದ್ರಲೋಕದಲ್ಲಿ ಗಣ್ಯಸ್ಥಾನವನ್ನು ಹೊಂದುತ್ತಾನೆ.

* * *

## ಅಧ್ಯಾಯ-೯೭

**ಸೂತ ಉವಾಚ :**

**ಪಂಚನದತೀರ್ಥ :** ಇದು ಜಪ್ಯೇಶ್ವರತೀರ್ಥದ ಹತ್ತಿರ ಇದೆ. ಇಲ್ಲಿ ಮೂರು ರಾತ್ರಿ ವಾಸ ಮಾಡಿ ಮಹೇಶ್ವರನನ್ನು ಪೂಜಿಸಿದರೆ ಎಲ್ಲ ಪಾಪಗಳಿಂದ ದೂರನಾಗಿ ರುದ್ರಲೋಕದಲ್ಲಿ ಗಣ್ಯಸ್ಥಾನವನ್ನು ಪಡೆಯುತ್ತಾನೆ.

**ಮಹಾಭೈರವತೀರ್ಥ :** ಇಲ್ಲಿ ಇಂದ್ರನ ಸನ್ನಿಧಾನವಿದೆ. ಈ ತೀರ್ಥ ಎಲ್ಲ ಪಾಪಗಳನ್ನೂ ಪರಿಹರಿಸುತ್ತದೆ.

**ವಿತಸ್ತಾತೀರ್ಥ :** ಇದು ಒಂದು ನದಿ. ತೀರ್ಥಗಳಲ್ಲಿ ಶ್ರೇಷ್ಠತೀರ್ಥ. ಹಿಮಾಲಯದಲ್ಲಿ ಹುಟ್ಟುವ ಈ ನದಿ ಬಹಳ ಪವಿತ್ರ. ಎಲ್ಲ ಪಾಪಗಳನ್ನೂ ಪರಿಹರಿಸುತ್ತದೆ.

**ಪಂಚತಪಸ್ತೀರ್ಥ :** ಇಲ್ಲಿ ಶಿವನ ಸನ್ನಿಧಾನವಿದೆ. ಇಲ್ಲಿ ಬ್ರಹ್ಮದೇವರು ದೇವೇಂದ್ರನಿಗೋಸ್ಕರ ಶಿವನನ್ನು ಪೂಜಿಸಿದರು. ಇಲ್ಲಿ ಪಿಂಡದಾನ ಮೊದಲಾದವುಗಳನ್ನು ಮಾಡಿದರೆ ಮರಣಾನಂತರ ಅನಂತಫಲವು ಲಭಿಸುವುದು. ಇಲ್ಲಿ ಮೃತರಾದವರು ಬ್ರಹ್ಮಲೋಕದಲ್ಲಿ ಮಹನೀಯ ಸ್ಥಾನವನ್ನು ಪಡೆಯುತ್ತಾರೆ.

**ಕಾಯಾವರೋಹಣತೀರ್ಥ :** ಇಲ್ಲಿ ಶಿವನ ಸನ್ನಿಧಾನವಿದೆ. ಇಲ್ಲಿ ಮುನಿಗಳು ಶೈವಧರ್ಮವನ್ನು ಚೆನ್ನಾಗಿ ಅನುಷ್ಠಾನ ಮಾಡಿದರು. ಇಲ್ಲಿ ಮಾಡಲ್ಪಡುವ ಶ್ರಾದ್ಧ-ದಾನ-ತಪಸ್ಸು-ಹೋಮ-ಉಪವಾಸಗಳು ಅಕ್ಷಯ ಫಲವನ್ನು ಕೊಡುತ್ತವೆ. ಇಲ್ಲಿ ಮೃತರಾದವರು ರುದ್ರಲೋಕಕ್ಕೆ ಹೋಗುತ್ತಾರೆ.

**ಕನ್ಯಾತೀರ್ಥ :** ಇಲ್ಲಿ ಮೃತರಾದವರು ಶಾಶ್ವತ ಲೋಕಗಳನ್ನು ಪಡೆಯುತ್ತಾರೆ.

**ಪರಶುರಾಮತೀರ್ಥ** : ಪರಶುರಾಮನ ಸನ್ನಿಧಾನವಿರುವ ಈ ತೀರ್ಥದಲ್ಲಿ ಸ್ನಾನಮಾಡಿದರೆ ಒಂದು ಸಾವಿರ ಗೋವುಗಳನ್ನು ದಾನ ಮಾಡಿದ ಫಲವು ಬರುತ್ತದೆ.

**ಮಹಾಕಾಲತೀರ್ಥ** : ಇದು ಲೋಕಪ್ರಸಿದ್ಧ ತೀರ್ಥ. ಇಲ್ಲಿ ಮೃತರಾದವರು ಗಣಾಧಿಪತಿಯ ಸ್ಥಾನವನ್ನು ಪಡೆಯುತ್ತಾರೆ.

**ನಕುಲೀಶ್ವರತೀರ್ಥ** : ಇದು ಬಹಳ ರಹಸ್ಯ ತೀರ್ಥ. ಇಲ್ಲಿ ನಕುಲೀಶ್ವರನ ಸನ್ನಿಧಾನವಿದೆ.

**ಗಂಗಾದ್ವಾರ** : ರಮ್ಯವಾದ ಹಿಮಾಲಯದ ಶಿಖರದಲ್ಲಿ ಈ ತೀರ್ಥವಿದೆ. ಇಲ್ಲಿ ಶಿವನು ಉಮೆಯೊಂದಿಗೆ ಮತ್ತು ಶಿಷ್ಯರೊಂದಿಗೆ ಇದ್ದಾನೆ. ಅವನು ಶಿಷ್ಯರು ಇಲ್ಲಿ ಅವನ ಸೇವೆಯನ್ನು ಮಾಡುತ್ತಿದ್ದಾರ. ಇಲ್ಲಿ ಸ್ನಾನ ಮಾಡಿ ಶಿವನ ಪೂಜೆಯನ್ನು ಮಾಡುವವನು ಎಲ್ಲ ಪಾಪಗಳಿಂದ ದೂರನಾಗಿ ಮರಣಾನಂತರ ಮಹೇಶ್ವರನ ಜ್ಞಾನವನ್ನು ಪಡೆಯುತ್ತಾನೆ.

**ಭೀಮೇಶ್ವರತೀರ್ಥ** : ಇಲ್ಲಿ ಕೂಡ ಶಿವನ ಸನ್ನಿಧಾನವಿದೆ. ಇಲ್ಲಿಗೆ ಹೋದವರ ಪಾಪಗಳು ನಾಶವಾಗುತ್ತವೆ.

**ಚಂಡವೇಗಾಸಂಗಮ** : ಇದು ಒಂದು ಸಂಗಮ. ಇಲ್ಲಿ ಸ್ನಾನ ಮಾಡಿದವನ, ಈ ನೀರನ್ನು ಕುಡಿದವನ ಬ್ರಹ್ಮಹತ್ಯಾದೋಷವು ನಾಶವಾಗುತ್ತದೆ.

**ವಾರಾಣಸಿಕ್ಷೇತ್ರ** : ಮೇಲೆ ವಿವರಿಸಲ್ಪಟ್ಟ ಎಲ್ಲ ತೀರ್ಥಕ್ಷೇತ್ರಗಳಿಗಿಂತಲೂ ಕೋಟಿಕೋಟಿಪಟ್ಟು ಹೆಚ್ಚು ಪವಿತ್ರವಾದುದು ಈ ಕ್ಷೇತ್ರ. ಇದರ ಮಹಿಮೆಯನ್ನು ಹಿಂದೆ ಹೇಳಲಾಗಿದೆ. ಬೇರೆ ಯಾವ ಸ್ಥಳದಲ್ಲಿ ಕೂಡ, ಯೋಗಾಭ್ಯಾಸದಿಂದ ಕೂಡ ಒಂದೇ ಜನ್ಮದಲ್ಲಿ ಮುಕ್ತಿಯಾಗುವುದಿಲ್ಲ.

ಮೇಲೆ ಹೇಳಲ್ಪಟ್ಟ ತೀರ್ಥಗಳೆಲ್ಲವೂ ಮಾನವನ ಪಾಪಗಳನ್ನು ಪರಿಹರಿಸುವ ತೀರ್ಥಗಳು. ಅಲ್ಲಿಗೆ ಹೋಗಿ ನೂರಾರು ಜನ್ಮಗಳಲ್ಲಿ ಮಾಡಿರುವ ಪಾಪಗಳನ್ನು ಪರಿಹರಿಸಿಕೊಳ್ಳಬೇಕು.

## ತೀರ್ಥಯಾತ್ರೆ ಯಾರಿಗೆ ? ಮತ್ತು ಹೇಗೆ ? :

ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾದವರು, ಪತ್ನಿಯನ್ನು ಕಳೆದುಕೊಂಡವರು (ವಿಧುರರು) ಯಾಯಾವರನ್ನು ಮಾಡುವ ಗೃಹಸ್ಥಾಶ್ರಮಿಯು, ಇಂತಹ ಬೇರೆ ಜನರೂ ತೀರ್ಥ ಯಾತ್ರೆಯನ್ನು ಮಾಡಬೇಕು. ಗೃಹಸ್ಥಾಶ್ರಮಿಯೂ ಪತ್ನೀಸಹಿತನಾಗಿ, ಬ್ರಹ್ಮಚಾರಿಯು ಅಗ್ನಿಸಹಿತನಾಗಿ ತೀರ್ಥಯಾತ್ರೆಯನ್ನು ಮಾಡಬೇಕು. ಹೀಗೆ ಮಾಡಿದರೆ ಯಾತ್ರೆ, ಎಲ್ಲ ಪಾಪಗಳಿಂದ ಬಿಡುಗಡೆ ಹೊಂದಿ ಉತ್ತಮಗತಿಯನ್ನು ಹೊಂದುವನು. ಗೃಹಸ್ಥಾಶ್ರಮಿಯು ತನ್ನ ಜೀವನೋಪಾಯವನ್ನು ಮಕ್ಕಳಿಗೆ ಒಪ್ಪಿಸಿ, ಹೆಂಡತಿಯನ್ನು ಅವರ ರಕ್ಷಣೆಯಲ್ಲಿ ಇಟ್ಟು ತೀರ್ಥಯಾತ್ರೆಯನ್ನು ಮಾಡಿ ಪಿತೃ-ದೇವ-ಋಷಿ ಋಣಗಳನ್ನು ಕಳೆದುಕೊಳ್ಳಬೇಕು.

ಪ್ರಾಯಶ್ಚಿತ್ತವನ್ನು ವಿವರಿಸುವ ಪ್ರಸಂಗದಿಂದ ತೀರ್ಥಮಹಿಮೆಯನ್ನು ಹೇಳಲಾಯಿತು. ಇದನ್ನು ಓದುವವರು, ಕೇಳುವವರು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆಯುತ್ತಾರೆ.

* * *

## ಅಧ್ಯಾಯ-೯೮

**ಸೂತ ಉವಾಚ :**

ಶ್ರೀಮನ್ನಾರಾಯಣನು ಕೂರ್ಮರೂಪದಿಂದ ಹೇಳಿದ ವಿಷಯಗಳನ್ನು ಕೇಳಿದ ಮುನಿಗಳು ಪುನಃ ಪ್ರಾರ್ಥಿಸಿದರು.

**ಮುನಯ ಊಚುಃ**

''ಭಗವಂತನೇ! ಇಲ್ಲಿಯವರೆಗೆ ಮೋಕ್ಷಸಾಧನವಾದ ಧರ್ಮ ಮತ್ತು ಪ್ರಮೇಯಗಳನ್ನು, ಸೃಷ್ಟಿಯ ವಿಸ್ತಾರವನ್ನು, ವಂಶಗಳನ್ನೂ, ಮನ್ವಂತರಗಳನ್ನೂ ನಮಗೆ ಉಪದೇಶಿಸಿದಿ. ದೇವೋತ್ತಮನೇ! ಭೂತ-ವರ್ತಮಾನ-ಭವಿಷ್ಯದ್‌ಗಳ ಪ್ರಭುವೇ! ಇನ್ನು ಮುಂದೆ ಜಗತ್ತಿನ ಪ್ರಲಯವನ್ನು ಕುರಿತು ದಯವಿಟ್ಟು ತಿಳಿಸಬೇಕು.''

**ಸೂತ ಉವಾಚ :**

ಅವರ ಮಾತುಗಳನ್ನು ಕೇಳಿ ಕೂರ್ಮರೂಪಧರನಾದ ಶ್ರೀಮನ್ನಾರಾಯಣನು ಪ್ರಲಯವನ್ನು ವಿವರಿಸಿದನು.

**ಕೂರ್ಮ ಉವಾಚ :**

ಪ್ರಲಯ ನಾಲ್ಕು ವಿಧ ಎಂದು ಪುರಾಣಗಳು ವರ್ಣಿಸುತ್ತವೆ. ಅವುಗಳು (೧) ನಿತ್ಯ (೨) ನೈಮಿತ್ತಿಕ (೩) ಪ್ರಾಕೃತ ಮತ್ತು (೪) ಆತ್ಯಂತಿಕ.

**ನಿತ್ಯಪ್ರಲಯ :** ಲೋಕದಲ್ಲಿ ಪ್ರತಿದಿನವೂ ನಡೆಯುತ್ತಿರುವ ಸಾವು ಮತ್ತು ವಿನಾಶಗಳು ನಿತ್ಯಪ್ರಲಯ ಎಂದು ತಿಳಿದವರು ಹೇಳುತ್ತಾರೆ.

**ನೈಮಿತ್ತಿಕ ಪ್ರಲಯ :** ಬ್ರಹ್ಮದೇವರ ಶಾಸನದ ಒಂದುದಿನ ಮುಗಿದಾಗ- ಅಂದರೆ, ಕಲ್ಪದ ಕೊನೆಯಲ್ಲಿ ಆಗುವ ಪ್ರಲಯ ನೈಮಿತ್ತಿಕ ಪ್ರಲಯ.

**ಪ್ರಾಕೃತ ಪ್ರಲಯ** : ಮಹತ್ತ್ವದಿಂದ ಆರಂಭಿಸಿ ಪಂಚಭೂತಗಳ ವಿಕೃತಿಗಳಾದ ಪದಾರ್ಥಗಳವರೆಗಿನ ಎಲ್ಲ ಪದಾರ್ಥಗಳ ನಾಶವೇ ಪ್ರಾಕೃತಪ್ರಲಯ.

**ಆತ್ಯಂತಿಕ ಪ್ರಲಯ** : ಯೋಗಿಗಳು ತಮ್ಮ ಜ್ಞಾನ-ಸಾಮರ್ಥ್ಯದಿಂದ ಪಡೆಯುವ ಮುಕ್ತಿ ಆತ್ಯಂತಿಕ ಪ್ರಲಯ. ಆತ್ಯಂತಿಕ ಪ್ರಲಯಕ್ಕೆ=ಮುಕ್ತಿಗೆ ಪರಮಾತ್ಮನ ಜ್ಞಾನವೇ ಸಾಧನ.

ಈಗ ನೈಮಿತ್ತಿಕ ಪ್ರಲಯವನ್ನು ಸಂಕ್ಷೇಪವಾಗಿ ಹೇಳುತ್ತೇನೆ- ಯುಗ ಚಕ್ರಗಳು ಒಂದುಸಾವಿರ ಬಾರಿ ಸುತ್ತಿದನಂತರ, ಅಂದರೆ ಕೃತ-ತ್ರೇತಾ-ದ್ವಾಪರ-ಕಲಿಯುಗಗಳು ಒಂದು ಸಾವಿರ ಬಾರಿ ನಡೆದನಂತರ ಚತುರ್ಮುಖಬ್ರಹ್ಮನು ಪ್ರಜೆಗಳೆಲ್ಲವನ್ನೂ ತನ್ನಲ್ಲಿ ಅಡಗಿಸಿಕೊಳ್ಳಲು ಬಯಸುವನು. ಆಗ ನೂರುವರ್ಷ ತೀವ್ರ ಅನಾವೃಷ್ಟಿಯು ಸಂಭವಿಸುವದು. ಈ ಸಮಯದಲ್ಲಿ ಅಲ್ಪಸಾರವನ್ನು ಹೊಂದಿರುವ ವಸ್ತುಗಳು ಮೊದಲು ಭೂಮಿಯೊಂದಿಗೆ ಸೇರಿಹೋಗುತ್ತವೆ. ಅನಂತರ ಸೂರ್ಯನು ತನ್ನ ಕಿರಣಗಳಿಂದ ನೀರನ್ನು ಹೀರುತ್ತಾ ಅಸಹನೀಯನಾಗುತ್ತಾನೆ. ಅವನು ಏಳು ರಶ್ಮಿಗಳು ಸಮುದ್ರದ ನೀರನ್ನು ಹೀರುತ್ತವೆ. ಆದರಿಂದ ಒಂದೊಂದು ರಶ್ಮಿಯೂ ಒಂದೊಂದು ಸೂರ್ಯನಂತೆ ಉಜ್ವಲವಾಗುತ್ತವೆ. ಈ ರಶ್ಮಿಗಳು ನಾಲ್ಕು ದಿಕ್ಕುಗಳಲ್ಲಿ ಇರುವ ಎಲ್ಲವನ್ನೂ ಸುಟ್ಟುಬಿಡುತ್ತವೆ. ಈ ರಶ್ಮಿಗಳು ಊರ್ಧ್ವಲೋಕಗಳನ್ನೂ, ಅಧೋಲೋಕಗಳನ್ನು ವ್ಯಾಪಿಸಿಬಿಡುತ್ತವೆ. ಅವುಗಳ ತಾಪಶಕ್ತಿಯು ಹೆಚ್ಚಾಗಿ ಭೂಮಿಯಲ್ಲಿರುವ ಬೆಟ್ಟಗಳು, ನದಿಗಳು, ಸಮುದ್ರಗಳು ದ್ವೀಪಗಳು ನಿರ್ಜಲವಾಗುತ್ತವೆ. ಎಲ್ಲ ಕಡೆ ಬೆಂಕಿ ಹತ್ತಿಕೊಳ್ಳುತ್ತದೆ. ಬೆಂಕಿ ವ್ಯಾಪಿಸುತ್ತಾ ಒಂದೇ ಜ್ವಾಲೆಯಾಗಿಬಿಡುತ್ತದೆ. ಈ ಬೆಂಕಿ ನಾಲ್ಕು ಲೋಕಗಳನ್ನೂ ಸುಟ್ಟುಬಿಡುತ್ತದೆ. ಎಲ್ಲ ಸ್ಥಾವರ-ಜಂಗಮಗಳ ನಾಶವಾಗಿ ಭೂಮಿಯ ಮೇಲೆ ಮರ-ಹುಲ್ಲುಗಳಿಲ್ಲದಿರುವ ಭೂಮಿಯು ಆಮೆಯ ಬೆನ್ನಿನಂತೆ ಕಾಣಿಸುತ್ತದೆ. ಬೆಂಕಿ ಇನ್ನೂ ಉರಿಯುತ್ತಲೇ ಇರುತ್ತದೆ. ಪಾತಾಲದಲ್ಲಿರುವ ಮಹಾಸಾಗರದಲ್ಲಿರುವ ಎಲ್ಲ ವಸ್ತುಗಳೂ ಸುಟ್ಟು ಭೂಮಿಯಲ್ಲಿ ಬೆರೆತುಹೋಗುತ್ತವೆ. ರಸಾತಲವನ್ನೂ, ಭೂಮಿಯನ್ನೂ ಸುಟ್ಟುಹಾಕಿದ ಬೆಂಕಿಯು ಮೇಲಿನ ಲೋಕಗಳನ್ನೂ ಸುಡುತ್ತದೆ. ಜ್ವಾಲೆಗಳು ಹತ್ತಾರು ಸಾವಿರ ಯೋಜನ ಉದ್ದವಾಗಿ ಬೆಳೆಯುತ್ತವೆ. ಸಂಹಾರಕನಾದ ರುದ್ರದೇವರಿಂದ ಪ್ರಚೋದಿಸಲ್ಪಟ್ಟಿರುವ ಈ ಬೆಂಕಿಯು ಗಂಧರ್ವ-ಪಿಶಾಚ-ಯಕ್ಷ-ರಾಕ್ಷಸ-ನಾಗಗಳನ್ನು ನಾಶಮಾಡುತ್ತದೆ. ಭುವರ್ಲೋಕ ಮತ್ತು ಮಹರ್ಲೋಕಗಳನ್ನು ಸುಡುತ್ತದೆ. ಈ ಬೆಂಕಿ ಇಡೀ ಲೋಕವನ್ನು ವ್ಯಾಪಿಸುತ್ತದೆ

ಅನಂತರ ಆನೆಗಳ ಗುಂಪಿನಂತಿರುವ ಭಾರಿ ಮೋಡಗಳು ಮೂಡುತ್ತವೆ. ಭಾರೀ ಮಿಂಚು ಅವುಗಳಿಂದ ಹೊರಹೊಮ್ಮುತ್ತದೆ. ಇವುಗಳಿಗೆ ಸಂವರ್ತಕ ಮೇಘ ಎಂದು ಹೆಸರು. ಕೆಲವು ಮೋಡಗಳ ಬಣ್ಣ ನೀಲಕಮಲದಂತೆ ಇರುತ್ತವೆ. ಕೆಲವು ಕುಮುದಗಳಂತೆ ಇರುತ್ತವೆ. ಕೆಲವು ಹೊಗೆಯಂತಿರುತ್ತವೆ. ಕೆಲವು ಮೋಡಗಳು ಕತ್ತೆಯ ಬಣ್ಣವನ್ನೂ ಮತ್ತೆ ಕೆಲವು

ಜಾತ್ಯಂಜನದಂತೆ ಇರುತ್ತವೆ. ಕೆಲವು ಮನಃಶಿಲೆ ಎಂಬ ಧಾತುವಿನ ಬಣ್ಣವನ್ನು ಹೊಂದಿರುತ್ತವೆ. ಕೆಲವು ಕಪೋತಗಳಂತೆ, ಮತ್ತೆ ಕೆಲವು ಇಂದ್ರಗೋಪ ಎಂಬ ಕೀಟದಂತೆ, ಇನ್ನು ಕೆಲವು ಹರಿತಾಲ ಎಂಬ ಗಿಡದಂತೆಯೂ ಇರುತ್ತವೆ. ಕೆಲವು ಮೋಡಗಳ ಗಾತ್ರ ಪರ್ವತದಂತೆ ಇರುತ್ತದೆ. ಮತ್ತೆ ಕೆಲವು ಮೋಡಗಳ ಗಾತ್ರ ಆನೆಗಳ ಹಿಂಡಿನಂತೆ ಇರುತ್ತದೆ. ಬಹುರೂಪಗಳ, ಘೋರರೂಪಗಳ ಮೋಡಗಳಿಂದ ಭಾರಿ ಸಿಡಿಲು-ಗುಡುಗುಗಳು ಅಬ್ಬರಿಸುತ್ತವೆ

ಈ ಮೋಡಗಳಿಂದ ಭಾರಿ ಮಳೆ ಸುರಿಯುತ್ತದೆ. ಬೆಂಕಿ ಆರುತ್ತದೆ. ಈ ಮಳೆ ನೂರು ವರ್ಷ ಸುರಿಯುತ್ತದೆ. ಎಲ್ಲ ಕಡೆ ನೀರು ತುಂಬುತ್ತದೆ. ಇಡೀ ಜಗತ್ತು ಒಂದು ಸಮುದ್ರವಾಗಿರುತ್ತದೆ. ಆ ಘೋರವಾದ ಸಮುದ್ರದಲ್ಲಿ ಪ್ರಜಾಪತಿಯು ಯೋಗನಿದ್ರೆಯನ್ನು ಮಾಡುತ್ತಾ ಇರುತ್ತಾನೆ.

ಒಂದು ಸಾವಿರ ಯುಗಚಕ್ರಗಳು ಒಂದು ಕಲ್ಪ. ಈಗ ವಾರಾಹಕಲ್ಪವು ನಡೆಯುತ್ತಿದೆ. ಅದರ ವಿಸ್ತಾರವನ್ನೇ ನಿಮಗೆ ನಾನು ವಿವರಿಸಿದ್ದೇನೆ. ಇಂತಹ ಅಸಂಖ್ಯಕಲ್ಪಗಳು ಪುರಾಣ-ಗಳಲ್ಲಿ ವರ್ಣಿಸಲ್ಪಟ್ಟಿವೆ. ಕಾಲಚಿಂತಕರಾದ ಮುನಿಗಳು ಇವುಗಳನ್ನು ತಿಳಿಯಬಲ್ಲರು.

ಸಾತ್ವಿಕಕಲ್ಪಗಳಲ್ಲಿ ಹರಿಯ ಮಹಿಮೆ ಹೆಚ್ಚು ಪ್ರಕಟವಾಗುತ್ತದೆ. ರಾಜಸ ಕಲ್ಪಗಳಲ್ಲಿ ಚತುರ್ಮುಖಬ್ರಹ್ಮನ ಮಹಿಮೆಯು ಹೆಚ್ಚು ಪ್ರಕಟವಾಗುತ್ತದೆ. ತಾಮಸ ಕಲ್ಪಗಳಲ್ಲಿ ಹರನ ಮಹಿಮೆಯು ಹೆಚ್ಚು ಪ್ರಕಟವಾಗುತ್ತದೆ.

ಈಗ ನಡೆಯುತ್ತಿರುವ ವರಾಹಕಲ್ಪ ಸಾತ್ವಿಕ. ಬೇರೆ ಸಾತ್ವಿಕಕಲ್ಪಗಳಲ್ಲೂ ಜನಗಳು ನನ್ನನ್ನು ಪರಿಗ್ರಹಿಸುತ್ತಾರೆ. ಆಗ ಯೋಗಿಗಳು ಜ್ಞಾನವನ್ನು ಪಡೆದು ಧ್ಯಾನವನ್ನು ಮಾಡಿ, ಕೈಲಾಸವಾಸಿಯಾದ ಶಿವನನ್ನು ಆರಾಧಿಸಿ ಪರಮಪದವನ್ನು ಹೊಂದುತ್ತಾರೆ.

ಪ್ರಲಯಕಾಲದಲ್ಲಿ ನಾನು ಮಾಯಾಮಯವಾದ ಯೋಗನಿದ್ರೆಯನ್ನು ಮಾಡುತ್ತಿರು-ತ್ತೇನೆ. ಈ ಸಮಯದಲ್ಲಿ ಜನಲೋಕದಲ್ಲಿ ಇರುವ ಮಹರ್ಷಿಗಳು ಯೋಗದೃಷ್ಟಿಯಿಂದ ನನ್ನನ್ನು ನೋಡುತ್ತಾರೆ.

ನಾನು ಪುರಾಣಪುರುಷ. ಭೂಃ, ಭುವಃ ಎಂಬ ವ್ಯಾಹೃತಿಮಂತ್ರಗಳು ನನ್ನನ್ನು ಪ್ರತಿಪಾದಿಸುತ್ತವೆ. ನಾನು ಸಹಸ್ರಾಕ್ಷ, ಸಹಸ್ರಪಾತ್. ಮಂತ್ರ, ಬ್ರಾಹ್ಮಣ, ಗೋವುಗಳು, ದರ್ಭೆ, ಸಮಿತ್ತುಗಳು, ಹವಿಸ್ಸು, ಸೋಮಲತೆ -ಇವುಗಳಲ್ಲಿ ನನ್ನ ವಿಭೂತಿರೂಪವಿದೆ.

ಪ್ರಲಯಕಾಲದ ಸಂವರ್ತಕ ಮೋಡದಲ್ಲೂ ನನ್ನ ವಿಭೂತಿರೂಪವಿದೆ. ಪವಿತ್ರವಾದ ಕೀರ್ತಿಯಲ್ಲಿ, ಮೇಧಾಶಕ್ತಿಯಲ್ಲಿ, ಗೋಪತಿಯಲ್ಲಿ ನನ್ನ ವಿಭೂತಿ ರೂಪವಿದೆ. ಬ್ರಾಹ್ಮಣನ ಬಾಯಲ್ಲಿ ನನ್ನ ವಿಭೂತಿರೂಪವಿದೆ.

ನಾನು ಅಂತರಹಿತ. ತಾರಕ. ಆಶ್ರಯವುಳ್ಳವರಿಗೆ ಆಶ್ರಯ. ನನಗೆ ಹಂಸ, ಪ್ರಾಣ, ಕಪಿಲ ಎಂಬ ಮೂರ್ತಿಗಳಿವೆ. ಇಡೀ ಪ್ರಪಂಚವೇ ನನ್ನ ಒಂದು ಮೂರ್ತಿ.

ನಾನು ಕ್ಷೇತ್ರಜ್ಞ. ಪ್ರಕೃತಿ-ಕಾಲನಿಯಾಮಕ. ಜಗತ್ತಿನ ಮೂಲ ನಿಮಿತ್ತಕಾರಣ. ಮುಕ್ತಿಕಾರಣ. ನಾನೇ ತಂದೆ-ತಾಯಿ, ಮಹಾದೇವ. ನನಗಿಂತ ಉತ್ತಮ ಯಾರೂ ಇಲ್ಲ. ಆದಿತ್ಯವರ್ಣನೂ, ಲೋಕರಕ್ಷಕನೂ ಆದ ನಾರಾಯಣನು ಯೋಗಮೂರ್ತಿ.

ಯೋಗನಿಷ್ಠರಾದ ಯತಿಗಳು ನನ್ನನ್ನು ತಿಳಿದು ನನ್ನ ದರ್ಶನವನ್ನು ಪಡೆಯುತ್ತಾರೆ.

* * *

## ಅಧ್ಯಾಯ-೯೯

**ಕೂರ್ಮ ಉವಾಚ :**

ಮುನಿಗಳೇ! ಇನ್ನು ಮುಂದೆ ಪ್ರಾಕೃತಪ್ರಲಯವನ್ನು ಸಂಕ್ಷೇಪವಾಗಿ ವರ್ಣಿಸುತ್ತೇನೆ, ಕೇಳಿರಿ.

ಎರಡು ಪರಾರ್ಧಕಾಲವು ಮುಗಿದಾಗ (ಚತುರ್ಮುಖಬ್ರಹ್ಮದೇವರ ಶಾಸನ ಅವಧಿ ದೇವಮಾನದ ನೂರು ವರ್ಷಗಳು. ಮೊದಲನೆಯ ಐವತ್ತು ವರ್ಷ ಪ್ರಥಮ ಪರಾರ್ಧ. ಎರಡನೆಯ ಐವತ್ತು ವರ್ಷ ದ್ವಿತೀಯಪರಾರ್ಧ. ನೂರು ವರ್ಷಕ್ಕೆ ಪರ ಎಂದು ಹೆಸರು.) ಪ್ರಲಯವು ಆರಂಭವಾಗುತ್ತದೆ. ಮಹೇಶ್ವರನು ತನ್ನಲ್ಲಿ ಸರ್ವನಿಯಾಮಕನಾದ ಪರಬ್ರಹ್ಮನ (ವಿಷ್ಣುವಿನ) ಆವೇಶವನ್ನು ಹೊಂದುತ್ತಾನೆ. ಪರಬ್ರಹ್ಮನ ಆವೇಶವನ್ನು ಹೊಂದಿದ ಪರಮೇಶ್ವರನು ಅಗ್ನಿಯಲ್ಲಿ ಪ್ರವೇಶಿಸುತ್ತಾನೆ. ಇಡೀ ಲೋಕವನ್ನು ಸಂಹಾರ ಗೈಯ್ಯುವ ಉಗ್ರರೂಪವನ್ನು ಪಡೆಯುತ್ತಾನೆ. ಈ ಪರಮೇಶ್ವರನು ಸೂರ್ಯಮಂಡಲವನ್ನು ಪ್ರವೇಶಿಸಿ ಬಹುರೂಪಗಳನ್ನು ಪಡೆಯುತ್ತಾನೆ. ಉಗ್ರವಾದ ಸೂರ್ಯರಶ್ಮಿಗಳ ಮೂಲಕ ಲೋಕಗಳೆಲ್ಲ-ವನ್ನೂ ಸುಡುತ್ತಾನೆ. ಅನಂತರ ಬ್ರಹ್ಮಶಿರಸ್ ಎಂಬ ಎಲ್ಲರನ್ನೂ, ಎಲ್ಲವನ್ನೂ ಸುಡುವ ಅಸ್ತ್ರವನ್ನು ದೇವತೆಗಳ ಶರೀರದ ಮೇಲೆ ಪ್ರಯೋಗಿಸುತ್ತಾನೆ. ದೇವತೆಗಳು ಸುಟ್ಟು ಹೋಗುತ್ತಾರೆ. ಪರಮೇಶ್ವರನ ಈ ಎಲ್ಲ ಸಂಹಾರಕಾರ್ಯವನ್ನು ಪಾರ್ವತಿಯು ನೋಡುತ್ತಿರುತ್ತಾಳೆ.

ಸುಟ್ಟು ಉಳಿದ ದೇವತೆಗಳ ತಲೆಗಳ ಕಪಾಲಗಳ ಮಾಲೆಯನ್ನು ಶಿವನು ಧರಿಸುತ್ತಾನೆ. ಸೂರ್ಯ ಮತ್ತು ಚಂದ್ರರ ಗಣಗಳೊಡನೆ ಆಕಾಶವನ್ನು ವ್ಯಾಪಿಸುತ್ತಾನೆ. ಸಹಸ್ರಾಕ್ಷನೂ,

ಸಹಸ್ರಪಾದನೂ, ಸಹಸ್ರಜ್ವಾಲೆವುಳ್ಳವನೂ ಮಹಾಭುಜವುಳ್ಳವನೂ, ಕೋರೆಹಲ್ಲುಗಳಿಂದ ಕರಾಳವಾದ ಮುಖವುಳ್ಳವನೂ, ಉರಿಯುತ್ತಿರುವ ಕಣ್ಣುಗಳುಳ್ಳವನೂ ತ್ರಿಶೂಲ-ಗಜಚರ್ಮಗಳನ್ನು ಧರಿಸಿದವನೂ ಆಗಿ ಜಗತ್ತನ್ನೇ ಗೆಲ್ಲುವ ಯೋಗಸಾಮರ್ಥ್ಯವನ್ನು ಉಪಯೋಗಿಸುತ್ತಾ, ಪರಮಾನಂದಭರಿತನಾಗಿ, ದೇವಿಯನ್ನು ನೋಡುತ್ತಾ ತಾಂಡವ-ನೃತ್ಯವನ್ನು ಮಾಡುತ್ತಾನೆ. ದೇವಿಯು ತನ್ನ ಪತಿಯ ಪರಮಮಂಗಲಕರವಾದ ಅಮೃತ-ಮಯವಾದ ನೃತ್ಯವನ್ನು ನೋಡಿ, ಯೋಗಸಾಮರ್ಥ್ಯದಿಂದ ಅವನ ಶರೀರದಲ್ಲಿ ಲಯ ಹೊಂದುತ್ತಾಳೆ. ಶಿವನು ಸ್ವೇಚ್ಛೆಯಿಂದ ತಾಂಡವನರ್ತನವನ್ನು ಮಾಡುತ್ತಾ ಬ್ರಹ್ಮಾಂಡ-ಮಂಡಲವನ್ನು ಸುಟ್ಟುಬಿಡುತ್ತಾನೆ.

ದೇವತೆಗಳ ಲಯವಾದನಂತರ ಪೃಥಿವಿಯು ತನ್ನ ಎಲ್ಲ ಗುಣಗಳೊಂದಿಗೆ ನೀರಿನಲ್ಲಿ ಲಯವನ್ನು ಹೊಂದುತ್ತದೆ. ಜಲತತ್ತ್ವವು ತನ್ನ ಗುಣಗಳೊಂದಿಗೆ ಅಗ್ನಿಯಲ್ಲಿ ಲಯವನ್ನು ಹೊಂದುತ್ತದೆ. ಅಗ್ನಿತತ್ತ್ವವು ತನ್ನ ಗುಣಗಳೊಂದಿಗೆ ವಾಯುವಿನಲ್ಲಿ ಲಯವನ್ನು ಹೊಂದುತ್ತದೆ. ವಾಯುತತ್ತ್ವವು ತನ್ನ ಗುಣಗಳೊಂದಿಗೆ ಆಕಾಶದಲ್ಲಿ ಲಯವನ್ನು ಹೊಂದುತ್ತದೆ. ಆಕಾಶವು ತನ್ನ ಗುಣಗಳೊಂದಿಗೆ ಭೂತಗಳ ಮೂಲವಾದ ತಾಮಸ ಅಹಂಕಾರತತ್ತ್ವದಲ್ಲಿ ಲಯವನ್ನು ಹೊಂತುತ್ತದೆ. ಇಂದ್ರಿಯಗಳೆಲ್ಲವೂ ತೈಜಸ ಅಹಂಕಾರತತ್ತ್ವದಲ್ಲಿ ಲಯವನ್ನು ಹೊಂದುತ್ತವೆ. ದೇವತೆಗಳ ಸಮುದಾಯ ಮತ್ತು ಮನಸ್ಸು ವೈಕಾರಿಕ ಅಹಂಕಾರದಲ್ಲಿ ಲಯವನ್ನು ಹೊಂದುತ್ತವೆ. ಮೂರುವಿಧವಾದ ಅಹಂಕಾರತತ್ತ್ವವು ಮಹತ್ತತ್ತ್ವದಲ್ಲಿ ಲಯವನ್ನು ಹೊಂದುತ್ತದೆ. ಎಲ್ಲ ತತ್ತ್ವಗಳಿಂದ ಸಹಿತವಾದ ಮಹತ್ತತ್ತ್ವ ಮತ್ತು ಅದರ ಅಭಿಮಾನಿಯಾದ ಚತುರ್ಮುಖ ಬ್ರಹ್ಮನು ಜಗತ್ತಿನ ಮೂಲಕಾರಣವಾದ ಅವ್ಯಕ್ತತತ್ತ್ವದಲ್ಲಿ ಲಯಹೊಂದುತ್ತಾನೆ. ಹೀಗೆ ಪರಮೇಶ್ವರನು ತತ್ತ್ವಗಳ ಲಯವನ್ನು ಸಾಧಿಸಿ ಪ್ರಕೃತಿ ಮತ್ತು ಪುರುಷರಿಗೆ ವಿಯೋಗವನ್ನು ಉಂಟುಮಾಡುತ್ತಾನೆ. ಜನ್ಮರಹಿತರಾದ ಪ್ರಕೃತಿ-ಪುರುಷರ ವಿಯೋಗವೇ ಅದರ ಸಂಹಾರ.

ಸತ್ತ್ವ-ರಜಸ್-ತಮಸ್ ಈ ಮೂರುಗುಣಗಳ ಸಾಮ್ಯಾವಸ್ಥೆಯೇ ಪ್ರಕೃತಿ. ಇದಕ್ಕೆ ಅವ್ಯಕ್ತ, ಪ್ರಧಾನ ಎಂದೂ ಹೆಸರು. ಇದು ಅಚೇತನ. ಜಗತ್ತಿನ ಮೂಲ ಉಪಾದಾನ ಕಾರಣ. ನಿರ್ವಿಕಾರನಾದ, ಚಿನ್ಮಯನಾದ ಆತ್ಮನೇ ಪುರುಷ. ಇವನು ಇಪ್ಪತ್ತೈದನೆಯ ತತ್ತ್ವ. ಜ್ಞಾನಿಗಳು ಇವನನ್ನು ಸಾಕ್ಷಿ ಎಂದೂ, ಮಹಾನ್ ಎಂದು, ಪಿತಾಮಹ ಎಂದು ಹೇಳುತ್ತಾರೆ. ಪ್ರಧಾನದಿಂದ ಆರಂಭಿಸಿ ಪಂಚಭೂತಗಳಿಂದ ಹುಟ್ಟುವ ವಿವಿಧ ಪದಾರ್ಥಗಳವರೆಗಿನ ಎಲ್ಲ ತತ್ತ್ವಗಳೂ, ರುದ್ರನ ದೇಹದಲ್ಲಿ ಅಡಗಿರುತ್ತವೆ. ಇವುಗಳನ್ನು ಸಂಹರಿಸುವ ಶಕ್ತಿಯೂ ಅಲ್ಲೇ ಇರುತ್ತದೆ.

ಪ್ರಾಕೃತಪ್ರಲಯವನ್ನು ಮಾಡಿದ ನಂತರ ಜ್ಞಾನದಲ್ಲೇ ಮನಸ್ಸನ್ನಿಟ್ಟಿರುವ ಎಲ್ಲ ಯೋಗಿಗಳಿಗೂ ಶಿವನು ಮುಕ್ತಿಯನ್ನು ಕೊಡುವನು. ಮುಕ್ತಿಯೇ ಆತ್ಯಂತಿಕ ಪ್ರಲಯ.

''ಸ್ವತಂತ್ರನಾದ ಭಗವಾನ್ ರುದ್ರನು ಸಂಹಾರವನ್ನು ಮಾಡುತ್ತಾನೆ. ನಾರಾಯಣನು ಜಗತ್ತಿಗೆ ಮೋಹವುಂಟುಮಾಡುತ್ತಾನೆ'' ಎಂದು ಶ್ರುತಿಗಳು ಹೇಳುತ್ತವೆ.

ಭಗವಾನ್ ಹಿರಣ್ಯಗರ್ಭನು ಕಾರಣ-ಕಾರ್ಯರೂಪದ, ವ್ಯಕ್ತ-ಅವ್ಯಕ್ತರೂಪದ ಇಡೀ ಜಗತ್ತನ್ನು ಪ್ರಕೃತಿಯನ್ನುಪಯೋಗಿಸಿ ಸೃಷ್ಟಿಸುತ್ತಾನೆ. ಇಪ್ಪತ್ತೈದನೆಯ ತತ್ವವಾದ ಚಿನ್ಮಯ-ಪುರುಷನೇ ಇವನೊಳಗಿದ್ದು ಸೃಷ್ಟಿಸಾಮರ್ಥ್ಯವನ್ನು ಕೊಡುತ್ತಾನೆ. ಬ್ರಹ್ಮ-ವಿಷ್ಣು-ಮಹೇಶ್ವರರು ಇಡೀ ಪ್ರಪಂಚದ ಮೇಲೆ ಪ್ರಭುತ್ವವನ್ನು ಹೊಂದಿರುವ ಶಕ್ತಿಗಳು. ಚೇತನಗಳಿಗೆ ಭುಕ್ತಿ-ಮುಕ್ತಿಗಳನ್ನು ಕೊಡತಕ್ಕವರು.

## ಪರಮೇಶ್ವರನ ಶಕ್ತಿಗಳು ಮತ್ತು ಉಪಾಸನೆ :

ಪ್ರಪಂಚದ ಚೇತನ-ಅಚೇತನಗಳ ವಿವಿಧ ಶಕ್ತಿಗಳೆಲ್ಲವೂ ಮೂಲತಃ ಪರಮೇಶ್ವರನ ಶಕ್ತಿಗಳೇ ಆಗಿವೆ. ಅವನ ಶಕ್ತಿಯೇ ವಿವಿಧ ಪದಾರ್ಥಗಳಲ್ಲಿ ಪ್ರಕಟವಾಗುತ್ತದೆ. ಆದ್ದರಿಂದ ವೇದವಾದಿಗಳಾದ ಬ್ರಾಹ್ಮಣರು ತಾವು ಮಾಡುವ ಎಲ್ಲ ಯಜ್ಞಗಳಲ್ಲೂ ತತ್ವಶಃ ಮಹೇಶ್ವರನನ್ನೇ ಆರಾಧಿಸುತ್ತಾರೆ. ''ರುದ್ರನೇ ಎಲ್ಲರ ಅಪೇಕ್ಷೆಗಳನ್ನು ಪೂರೈಸುತ್ತಾನೆ'' ಎಂದು ಶ್ರುತಿಗಳು ಹೇಳುತ್ತವೆ. ಈ ರುದ್ರದೇವರನ್ನು ನಾರಾಯಣ ಎಂದು ಕೆಲವರು ಹೇಳುತ್ತಾರೆ. ಅಗ್ನಿ ಎಂದು ಮತ್ತಿತರು ಹೇಳುತ್ತಾರೆ. ಇಂದ್ರ ಎಂದೂ ಬೇರೆ ಕೆಲವರು ಭಾವಿಸಿದ್ದಾರೆ. ಪ್ರಾಣ ಎಂದು ಕೆಲವರೂ, ಬ್ರಹ್ಮ ಎಂದು ಕೆಲವರೂ ಭಾವಿಸಿದ್ದಾರೆ. ಬ್ರಹ್ಮ, ವಿಷ್ಣು, ಅಗ್ನಿ, ವರುಣ ಮೊದಲಾದ ಎಲ್ಲ ದೇವತೆಗಳೂ ಎಲ್ಲ ಋಷಿಗಳೂ ಒಬ್ಬನೇ ರುದ್ರನ ಬೇರೆ ಬೇರೆ ಪ್ರಭೇದಗಳು ಎಂದು ತಿಳಿದವರು ಹೇಳುತ್ತಾರೆ. ಆರಾಧಕರು ಶಿವನ ಯಾವ ಪ್ರಭೇದವನ್ನು ಆರಾಧಿಸುತ್ತಾರೋ ಆ ರೂಪದಿಂದ ಅವನು ಫಲವನ್ನು ಕೊಡುತ್ತಾನೆ. ಶಿವನ ಯಾವುದೇ ರೂಪವನ್ನು ಆರಾಧಿಸಿದರೂ, ಆರಾಧಕನಿಗೆ ಸದ್ಗತಿಯು ಲಭಿಸುತ್ತದೆ. ಆದರೆ ಸನಾತನನೂ, ಸರ್ವಶಕ್ತನೂ, ದೇವೋತ್ತಮನೂ, ಕೈಲಾಸಗಿರಿವಾಸಿಯೂ ಆದ ಶಿವನನ್ನು ಸಗುಣ ಅಥವಾ ನಿರ್ಗುಣ ಎಂದು ಆರಾಧಿಸುವುದು ಪ್ರಶಸ್ತ. ಯೋಗಮಾರ್ಗದಲ್ಲಿ ಮೇಲೆ ಏರಬಯಸುವವನು ಪರಮೇಶ್ವರನನ್ನು ಸಗುಣ ಎಂದು ಆರಾಧಿಸಬೇಕು.

ಪಿನಾಕಧಾರಿಯೂ, ಮೂರು ಕಣ್ಣುಳ್ಳವನೂ, ಜಟಾಧಾರಿಯೂ, ಗಜಚರ್ಮ-ಧಾರಿಯೂ, ಸಾವಿರಸೂರ್ಯರ ಕಾಂತಿಗಿಂತಲೂ ಹೆಚ್ಚು ಕಾಂತಿಯನ್ನು ಹೊಂದಿರುವವನೂ ಆದ ಪರಮೇಶ್ವರನನ್ನು ಧ್ಯಾನಿಸಬೇಕು. ವೇದವು ಹೀಗೆ ಹೇಳಿದೆ. ಇದು ಸಬೀಜಯೋಗ.

ಈ ಧ್ಯಾನವನ್ನು ಮಾಡಲು ಅಸಮರ್ಥರಾದವರು ಪರಮೇಶ್ವರನ ಹರರೂಪವನ್ನು ಅಥವಾ ವಿಷ್ಣುರೂಪವನ್ನು ಅಥವಾ ಬ್ರಹ್ಮರೂಪವನ್ನು ಧ್ಯಾನಿಸಬೇಕು. ಈ ರೂಪಗಳ ಉಪಾಸನೆಯನ್ನು ಮಾಡಲು ಅಸಮರ್ಥರಾದವರು ಪರಮೇಶ್ವರನ ವಾಯು-ಅಗ್ನಿ-ಇಂದ್ರ ಮೊದಲಾದ ರೂಪಗಳನ್ನು ಭಕ್ತಿಯಿಂದ ಪೂಜಿಸಬೇಕು. ಅಸಮರ್ಥರು ಕ್ರಮವಾದ

ಉಪಾಸನೆಯಿಂದ ತಮ್ಮ ಅಸಾಮರ್ಥ್ಯವನ್ನು ಪರಿಹರಿಸಿಕೊಳ್ಳುತ್ತಾ ಮೇಲೆ ಏರಬೇಕು. ಬ್ರಹ್ಮ ಮೊದಲಾದ ಎಲ್ಲರನ್ನೂ ಬಿಟ್ಟು ವ್ಯಾಪ್ತನಾದ ವಿರೂಪಾಕ್ಷನ ಉಪಾಸನೆಯನ್ನು ಮಾಡುವ ಸಾಮರ್ಥ್ಯವನ್ನು ಗಳಿಸಬೇಕು. ಅವನ ಉಪಾಸನೆಯನ್ನು, ಸ್ವಧರ್ಮಾನುಷ್ಠಾನವನ್ನು ಮಾಡುತ್ತಾ, ಶುಚಿಯಾಗಿದ್ದು ಭಕ್ತಿಯಿಂದ, ಮಾಡಬೇಕು. ಇದು ಸಬೀಜೋಪಾಸನೆ. ಇದನ್ನು ವಿಧಿಗೆ ಅನುಗುಣವಾಗಿ ಮಾಡುವವರು ಈಶ್ವರನ ಸ್ಥಾನವನ್ನು, ಅಂದರೆ, ಮುಕ್ತಿಯನ್ನು ಹೊಂದುತ್ತಾರೆ.

ಈ ಸಗುಣೋಪಾಸನೆಯನ್ನು ನಾನು ಹಿಂದೆ ಇಂದ್ರದ್ಯುಮ್ನ ಎಂಬ ಮುನಿಗೆ ಉಪದೇಶಿಸಿದ್ದೆನು. ಅದನ್ನೇ ಈಗ ನಿಮಗೂ ಉಪದೇಶಿಸಿದ್ದೇನೆ. ಚೇತನಾಚೇತನಾತ್ಮಕವಾದ ಈ ಜಗತ್ತು ಅವ್ಯಕ್ತ ತತ್ತ್ವವನ್ನು ಆಶ್ರಯಿಸಿದೆ. ಪರಬ್ರಹ್ಮವೇ ಅವ್ಯಕ್ತ ತತ್ತ್ವ. ಆದ್ದರಿಂದ ಜಗತ್ತು ಬ್ರಹ್ಮಮಯ, ಅಂದರೆ, ಬ್ರಹ್ಮಾಧೀನ.

**ಸೂತ ಉವಾಚ :**

ಕೂರ್ಮರೂಪಧರನಾದ ನಾರಾಯಣನು ಇಷ್ಟು ಹೇಳಿ ವಿರಮಿಸಿದನು. ಮುನಿಗಳೆಲ್ಲರೂ ಲಕ್ಷ್ಮೀಪತಿಯಾದ ವಿಷ್ಣುವನ್ನು ಹೀಗೆ ಸ್ತುತಿಸಿದರು.

**ಮುನಯ ಊಚು :**

ಕೂರ್ಮರೂಪನಾದ ವಿಷ್ಣುವೇ ನಿನಗೆ ನಮಸ್ಕಾರ. ಪರಮಾತ್ಮನಿಗೆ ನಮಸ್ಕಾರ. ನಾರಾಯಣನೂ, ವಿಶ್ವನೂ, ವಾಸುದೇವನೂ ಆದ ನಿನಗೆ ನಮಸ್ಕಾರ. ಕೃಷ್ಣನಾದ ನಿನಗೆ ನಮಸ್ಕಾರ. ಗೋವಿಂದನಾದ ನಿನಗೆ ನಮಸ್ಕಾರ. ಮಾಧವನೂ, ಯಜ್ಞೇಶ್ವರನೂ ಆದ ನಿನಗೆ ನಮಸ್ಕಾರ. ಸಾವಿರ ತಲೆಗಳನ್ನು ಹೊಂದಿರುವ, ಸಾವಿರ ಕಣ್ಣುಗಳನ್ನೂ, ಹಸ್ತಗಳನ್ನೂ, ಪಾದಗಳನ್ನೂ ಹೊಂದಿರುವ ನಿನಗೆ ನಮಸ್ಕಾರ. ಜ್ಞಾನರೂಪನೂ, ಪರಮಾತ್ಮನೂ ಆದ ವಿಷ್ಣುವಿಗೆ ನಮಸ್ಕಾರ. ಆನಂದರೂಪನಾದ ನಿನಗೆ ನಮಸ್ಕಾರ. ಮಾಯೆಯನ್ನು ಮೀರಿದ ನಿನಗೆ ನಮಸ್ಕಾರ. ತಿಳಿಯಲಾಗದ ಶರೀರವುಳ್ಳ, ಸತ್ತ್ವ-ರಜಸ್-ತಮಸ್ ಈ ಮೂರುಗುಣಗಳಿಲ್ಲದ ನಿನಗೆ ನಮಸ್ಕಾರ. ಪುರಾಣ ಪುರುಷನಾದ ನಿನಗೆ ನಮಸ್ಕಾರ. ಸಾಂಖ್ಯ-ಯೋಗಗಳಿಗೆ ವಿಷಯನಾದ, ಅದ್ವಿತೀಯನಾದ ನಿನಗೆ ನಮಸ್ಕಾರ. ಮಹಾಯೋಗೇಶ್ವರನಾದ ನಿನಗೆ ನಮಸ್ಕಾರ. ಉತ್ಕೃಷ್ಟರಿಗೂ, ಉತ್ಕೃಷ್ಟರಲ್ಲದವರಿಗೂ ಪ್ರಭುವಾದ, ವೇದವೇದ್ಯನಾದ ನಿನಗೆ ನಮಸ್ಕಾರ. ಬುದ್ಧನೂ, ಶುದ್ಧನೂ ಆದ ನಿನಗೆ ನಮಸ್ಕಾರ. ಸೃಷ್ಟಿ-ಸ್ಥಿತಿ ಮೊದಲಾದವುಗಳಿಗೆ ಕಾರಣನಾದ ನಿನಗೆ ನಮಸ್ಕಾರ. ಸಕಲ ಮಾಯೆಗಳ ಪ್ರಭುವಾದ ನಿನಗೆ ನಮಸ್ಕಾರ. ವರಾಹರೂಪನಾದ ನಿನಗೆ ನಮಸ್ಕಾರ. ನರಸಿಂಹರೂಪನಾದ ನಿನಗೆ ನಮಸ್ಕಾರ. ನಿನ್ನ ವಾಮನ ರೂಪಕ್ಕೆ ನಮಸ್ಕಾರ. ನಿನ್ನ ಹೃಷೀಕೇಶರೂಪಕ್ಕೆ ನಮಸ್ಕಾರ. ಸ್ವರ್ಗ-ಮುಕ್ತಿಗಳನ್ನು

ಕೊಡುವ ನಿನಗೆ ನಮಸ್ಕಾರ. ಯಾವ ತಡೆಯೂ ನಿನಗೆ ಇಲ್ಲ, ಯೋಗಸಾಮರ್ಥ್ಯದಿಂದ ಮಾತ್ರ ನಿನ್ನನ್ನು ತಿಳಿಯಲು ಸಾಧ್ಯ. ಸಾಧಕರಿಗೆ ಯೋಗಶಕ್ತಿಯನ್ನು ಕೊಡುವವನು ನೀನೇ. ಇಂತಹ ನಿನಗೆ ನಮಸ್ಕಾರ. ನೀನು ಸಮಸ್ತದೇವತೆಗಳ ಪ್ರಭು; ಅವರ ದುಃಖವನ್ನು ಪರಿಹರಿಸುವವನು - ಅಂತಹ ನಿನಗೆ ನಮಸ್ಕಾರ.

ಷಡ್ಗುಣೈಶ್ವರ್ಯ ಸಂಪನ್ನನಾದ ಪ್ರಭುವೇ! ಸಂಸಾರ ಬಂಧನದಿಂದ ಬಿಡುಗಡೆಯನ್ನು ಪಡೆಯಲು ನಿನ್ನ ಅನುಗ್ರಹ ಬೇಕೇಬೇಕು. ನಿನ್ನ ಮಹಿಮೆಯನ್ನು ತಿಳಿದವರನ್ನು ಮಾತ್ರ ನೀನು ಅನುಗ್ರಹಿಸುವಿ. ಆದ್ದರಿಂದ ನಿನ್ನ ಮಹಿಮೆಯ ಜ್ಞಾನವೂ ಮುಕ್ತಿಗೆ ಸಾಧನ. ಈ ಜ್ಞಾನವನ್ನು ನಾವು ಈಗ ಪಡೆದಿದ್ದೇವೆ. ನಾವು ನಿನ್ನಿಂದ ವಿವಿಧ ಧರ್ಮಗಳ ಬಗ್ಗೆ, ವಂಶಗಳ, ಮನ್ವಂತರಗಳ ಬಗ್ಗೆ ಕೇಳಿ ತಿಳಿದೆವು. ಸೃಷ್ಟಿ-ಪ್ರಲಯಗಳನ್ನೂ, ಬ್ರಹ್ಮಾಂಡದ ವಿಸ್ತಾರವನ್ನೂ ತಿಳಿದುಕೊಂಡೆವು.

ನೀನು ಜಗತ್ತಿನ ಎಲ್ಲ ಘಟನೆಗಳನ್ನೂ ನೋಡುವವನು. ಆದ್ದರಿಂದ ನೀನು ವಿಶ್ವ. ನೀನು ಸರ್ವೋತ್ತಮನಾದ ನಾರಾಯಣ. ನೀನು ಅನಂತರೂಪವುಳ್ಳವನು. ನಾವು ನಿನಗೆ ಶರಣಾಗತರು. ನಮ್ಮನ್ನು ನೀನು ದಯವಿಟ್ಟು ರಕ್ಷಿಸಬೇಕು.

**ಸೂತ ಉವಾಚ :**

ಗದಾಧರನಾದ ನಾರಾಯಣನು ಕೂರ್ಮರೂಪದಿಂದ ಮುನಿಗಳಿಗೆ ಉಪದೇಶಿಸಿದ ಪುರಾಣವನ್ನು ನಾನು ನಿಮಗೆ ಹೇಳಿದ್ದೇನೆ. ಈ ಕೂರ್ಮಪುರಾಣದ ಅಧ್ಯಯನ-ಶ್ರವಣಗಳು ಭೋಗವನ್ನೂ, ಮೋಕ್ಷವನ್ನು ಕೊಡುತ್ತದೆ.

ಈ ಪುರಾಣದಲ್ಲಿ ಮೊದಲು ಲಕ್ಷ್ಮಿಯ ಜನ್ಮ ಮತ್ತು ಅವಳನ್ನು ವಾಸುದೇವರೂಪನಾದ ಶ್ರೀಹರಿಯು ಪರಿಗ್ರಹಿಸಿದ ಕಥೆಯು ಹೇಳಲ್ಪಟ್ಟಿತು.

ಪ್ರಜಾಪತಿಗಳ ಸೃಷ್ಟಿ, ವರ್ಣಧರ್ಮಗಳು, ಜೀವನೋಪಾಯಗಳು, ಧರ್ಮ-ಅರ್ಥ-ಕಾಮ-ಮೋಕ್ಷ ಇವುಗಳ ಲಕ್ಷಣಗಳೂ ವರ್ಣಿಸಲ್ಪಟ್ಟಿವೆ.

ಬ್ರಹ್ಮ-ವಿಷ್ಣು-ಮಹೇಶ್ವರರ ಏಕತೆ ಮತ್ತು ಪ್ರತ್ಯೇಕತೆಗಳೂ, ಅವರಲ್ಲಿರುವ ವಿಶೇಷಗಳೂ ವರ್ಣಿಸಲ್ಪಟ್ಟಿವೆ. ಭಗವದ್ಭಕ್ತರ ಲಕ್ಷಣ, ಆಚಾರ, ಆಹಾರಗಳನ್ನು, ವರ್ಣ-ಆಶ್ರಮಗಳ ಲಕ್ಷಣಗಳನ್ನು ವರ್ಣಿಸಲಾಗಿದೆ. ಅಂಡಸೃಷ್ಟಿ, ಅದರ ಏಳು ಆವರಣಗಳ ಸೃಷ್ಟಿ, ಹಿರಣ್ಯಗರ್ಭನ ಸೃಷ್ಟಿ ಮತ್ತು ಭೂತಸೃಷ್ಟಿ-ಇವುಗಳನ್ನು ವರ್ಣಿಸಲಾಗಿದೆ.

ಕಾಲವನ್ನು ಇಲ್ಲಿ ವಿವರಿಸಲಾಗಿದೆ. ಈಶ್ವರನ ಮಹಿಮೆ, ಬ್ರಹ್ಮನ ನಾಮಗಳು ಅರ್ಥ -ಇವುಗಳನ್ನು ವರ್ಣಿಸಲಾಗಿದೆ

ಕಾಲವನ್ನು ಇಲ್ಲಿ ವಿವರಿಸಲಾಗಿದೆ. ಈಶ್ವರನ ಮಹಿಮೆ, ಬ್ರಹ್ಮನ ನಾಮಗಳ ಅರ್ಥ -ಇವುಗಳನ್ನು ವರ್ಣಿಸಲಾಗಿದೆ.

ವಿಷ್ಣುವಿನ ವರಾಹರೂಪದಿಂದ ಭೂಮಿಯನ್ನು ಎತ್ತಿದ ಕಥೆ, ಮುಖ್ಯಸೃಷ್ಟಿ ಮೊದಲಾದ ಸೃಷ್ಟಿಯ ವರ್ಣನೆ, ಪ್ರಜಾಪತಿಗಳು ಮಾಡಿದ ಸೃಷ್ಟಿಯ ವರ್ಣನೆ -ಇವುಗಳು ಈ ಪುರಾಣದಲ್ಲಿವೆ.

ಬ್ರಹ್ಮ-ವಿಷ್ಣುಗಳ ನಡುವೆ ವಿವಾದ, ವಿಷ್ಣುವಿನ ಉದರದಲ್ಲಿ ಬ್ರಹ್ಮನ ಪ್ರವೇಶ, ವಿಷ್ಣುವಿನ ನಾಭಿಕಮಲದಿಂದ ಬ್ರಹ್ಮದೇವರ ಉದ್ಭವ, ಅವರ ಮೋಹ, ಅಲ್ಲಿಗೆ ಮಹೇಶ್ವರನ ಆಗಮನ, ವಿಷ್ಣುವಿನಿಂದ ಶಿವ ಮಹಿಮೆಯ ವರ್ಣನೆ, ಬ್ರಹ್ಮನಿಗೆ ದಿವ್ಯದೃಷ್ಟಿದಾನ, ಬ್ರಹ್ಮನಿಂದ ಶಿವಸ್ತುತಿ, ಬ್ರಹ್ಮನಿಗೆ ಶಿವನ ಅನುಗ್ರಹ, ವಿಷ್ಣು-ಶಂಕರರ ಸಂವಾದ, ಶಿವನ ಅಂತರ್ಧಾನ -ಇವುಗಳನ್ನು ಈ ಪುರಾಣದಲ್ಲಿ ವರ್ಣಿಸಲಾಗಿದೆ.

ಮಧು - ಕೈಟಭರ ವಧೆಯನ್ನು ಇಲ್ಲಿ ವರ್ಣಿಸಲಾಗಿದೆ. ಬ್ರಹ್ಮದೇವರ ತಪಸ್ಸು - ಅವರ ವೈಫಲ್ಯ- ಅವರ ಕೋಪ- ಅಶ್ರುಬಿಂದುಗಳ ಪತನ- ಬ್ರಹ್ಮದೇವರ ಮುಖದಿಂದ ರುದ್ರದೇವರ ಸೃಷ್ಟಿ- ಅವರ ಎಂಟು ರೂಪಗಳು ಬ್ರಹ್ಮದೇವರ ಆದೇಶದಂತೆ ರುದ್ರನಿಂದ ಜರಾಮರಣ ವರ್ಜಿತರಾದ ವಿವಿಧ ರುದ್ರರ ಸೃಷ್ಟಿ, ಇಂತಹ ಸೃಷ್ಟಿಯನ್ನು ಮಾಡಬಾರದು ಎಂದು ಜನ್ಮ- ಮರಣಗಳಿರುವ ಪ್ರಾಣಿಗಳನ್ನು ಸೃಷ್ಟಿಸಬೇಕು ಎಂದು ಬ್ರಹ್ಮದೇವರ ವಿನಂತಿ, ಬ್ರಹ್ಮನು ಮಾಡಿದ ರುದ್ರಸ್ತುತಿ, ರುದ್ರದೇವರಿಂದ ವರದಾನ, ಅವರ ಅಂತರ್ಧಾನಗಳು ಇಲ್ಲಿ ವರ್ಣಿತವಾಗಿವೆ.

ಶಿವನ ನರ-ನಾರೀ ರೂಪ, ಸತೀದೇವಿಯು ದಕ್ಷ ಪ್ರಜಾಪತಿಯ ಮಗಳಾಗಿ ಜನಿಸಿದ ವೃತ್ತಾಂತ - ಮುಂದೆ ಹಿಮವಂತನ ಮಗಳಾಗಿ ಜನಿಸಿದ ವೃತ್ತಾಂತ ಇವುಗಳು ವರ್ಣಿತವಾಗಿವೆ.

ಭೃಗು ಮೊದಲಾದವರು ಮಾಡಿದ ಸೃಷ್ಟಿ, ರಾಜರುಗಳ ವಂಶದ ವಿವರಣೆ, ದಕ್ಷ ಪ್ರಜಾಪತಿಯು ಪ್ರಾಚೇತಸನಾದ ಘಟನೆ, ದಕ್ಷಯಜ್ಞಭಂಗ, ಮುನಿಗಳಿಗೆ ದಧೀಚ ಮುನಿಯ ಶಾಪ, ರುದ್ರದೇವರ ಆಗಮನ- ಅನುಗ್ರಹ ಮತ್ತು ಅಂತರ್ಧಾನ ಇವುಗಳು ಈ ಪುರಾಣದಲ್ಲಿ ವರ್ಣಿತವಾಗಿವೆ.

ದಕ್ಷಪ್ರಜಾಪತಿ ಮತ್ತು ಕಶ್ಯಪ ಪ್ರಜಾಪತಿಗಳು ಮಾಡಿದ ಸೃಷ್ಟಿ, ಹಿರಣ್ಯಾಕ್ಷ- ಹಿರಣ್ಯಕಶಿಪುಗಳ ಸಂಹಾರ, ದೇವದಾರು ವನದಲ್ಲಿ ವಾಸಮಾಡುತ್ತಿದ್ದ ವಿಪ್ರರಿಗೆ ಶಾಪ, ಅಂಧಕಾಸುರನ ಸಂಹಾರ, ಅವನಿಗೆ ಶಿವಗಣಗಳ ಅಧಿಪತಿಯ ಸ್ಥಾನದ ಪ್ರಾಪ್ತಿ, ಪ್ರಹ್ಲಾದ ನಿಗ್ರಹ, ಬಲಿಬಂಧನ, ಬಾಣನ ನಿಗ್ರಹ, ಇವನಿಗೆ ಶಿವನ ಅನುಗ್ರಹ ಇವುಗಳನ್ನು ವರ್ಣಿಸಲಾಗಿದೆ.

ಋಷಿಗಳ, ರಾಜರುಗಳ ವಂಶಗಳ ವಿವರಣೆಯೂ ಇಲ್ಲಿದೆ.

ವಸುದೇವನ ಮಗನಾಗಿ ಮಹಾವಿಷ್ಣುವಿನ ಅವತಾರ, ಶ್ರೀಕೃಷ್ಣನಿಗೆ ಉಪಮನ್ಯು-ಮುನಿಯ ದರ್ಶನ, ಶ್ರೀಕೃಷ್ಣನ ತಪಸ್ಸು, ಅವನಿಗೆ ಶಿವಪಾರ್ವತಿಯರ ದರ್ಶನ - ಅವರಿಂದ ವರದಾನ ಕೃಷ್ಣನ ಕೈಲಾಸಯಾತ್ರೆ - ಆ ಸಮಯದಲ್ಲಿ ದ್ವಾರಕೆಯಲ್ಲಿ ಜನಗಳಿಗೆ ಉಂಟಾದ ಭಯ, ಗರುಡನು ಶತ್ರುಗಳನ್ನು ನಿಗ್ರಹಿಸಿ ಅದರ ಭಯವನ್ನು ಪರಿಹರಿಸಿದ ಕಥೆ ಇವುಗಳ ವಿವರಣೆ ಈ ಪುರಾಣದಲ್ಲಿದೆ.

ದ್ವಾರಕೆಗೆ ಕೃಷ್ಣಾಗಮನ, ಕೃಷ್ಣನು ಪ್ರತಿದಿನವೂ ನಡೆಸುತ್ತಿದ್ದ ಶಿವಲಿಂಗಪೂಜೆ, ಲಿಂಗಪೂಜೆಯ ಬಗ್ಗೆ ಮಾರ್ಕಂಡೇಯ ಮುನಿಯ ಪ್ರಶ್ನೆ, ಲಿಂಗಪೂಜೆಯ ಬಗ್ಗೆ, ಲಿಂಗದ ಮಹಿಮೆಯ ವರ್ಣನೆ ಇವುಗಳು ಈ ಪುರಾಣದಲ್ಲಿವೆ. ಕೃಷ್ಣನಿಗೆ ಭೂಲೋಕವನ್ನು ಬಿಟ್ಟು ಹೋಗುವ ಇಚ್ಛೆ, ಆಗ ಋಷಿಗಳ ಆಗಮನ, ಅವರಿಗೆ ಕೃಷ್ಣನ ಉಪದೇಶ ಮತ್ತು ವರದಾನ ಕೃಷ್ಣನ ಮಹಾಯಾತ್ರೆ ಇವುಗಳು ವರ್ಣಿತವಾಗಿವೆ.

ಯುಧಿಷ್ಠಿರನಿಗೆ ಕೃಷ್ಣದ್ವೈಪಾಯನ ಮುನಿಗಳ ದರ್ಶನ, ಅದರಿಂದ ಸನಾತನ ಯುಗಧರ್ಮಗಳ ವಿವರಣೆ, ಯುಧಿಷ್ಠಿರನಿಗೆ ಅವರ ಅನುಗ್ರಹ, ವಾರಾಣಸೀ ಮಹಿಮೆಯ ವರ್ಣನೆ, ತೀರ್ಥಗಳ ಮಹಿಮೆಯ ವರ್ಣನೆ, ಅವರ ತೀರ್ಥಯಾತ್ರೆಯ ವಿವರಣೆ ಇವುಗಳು ವರ್ಣಿತವಾಗಿವೆ.

ವ್ಯಾಸರಿಗೆ ಆದ ಪಾರ್ವತೀ ದರ್ಶನ, ಅವಳಿಂದ ವರದಾನ, ಪ್ರಯಾಗದ, ಬೇರೆ ಬೇರೆ ಕ್ಷೇತ್ರಗಳ ವಿಚಾರ, ತೀರ್ಥ-ಕ್ಷೇತ್ರಗಳ ಯಾತ್ರೆಯಿಂದ ಆಗುವ ವಿವಿಧ ಫಲ -ಇವುಗಳು ವರ್ಣಿತವಾಗಿವೆ.

ಲೋಕಗಳ ಮತ್ತು ಜ್ಯೋತಿರ್ಮಂಡಲದ, ದೇಶಗಳ, ನದಿಗಳ, ಪರ್ವತಗಳ, ದೇವತೆಗಳ ಸ್ಥಾನಗಳ, ದ್ವೀಪಗಳ ವರ್ಣನೆಯು ಈ ಪುರಾಣದಲ್ಲಿದೆ.

ಮನ್ವಂತರಗಳೂ, ವಿಷ್ಣುಮಹಿಮೆಯೂ ಇಲ್ಲಿ ವರ್ಣಿಸಲ್ಪಟ್ಟಿವೆ. ವ್ಯಾಸರು ಮಾಡಿದ ವೇದಶಾಖೆಗಳ ವ್ಯವಸ್ಥೆಯನ್ನೂ, ಆ ಶಾಖೆಗಳ ಅಧ್ಯಯನ ಪರಂಪರೆಯನ್ನು ಬೆಳೆಸಿದ ಋಷಿಗಳನ್ನೂ, ವೇದಾಂಗ ಮೊದಲಾದ ಗ್ರಂಥಗಳ ವಿಚಾರವನ್ನೂ ಇಲ್ಲಿ ವಿವರಿಸಲಾಗಿದೆ.

ವರ್ಣ ಆಶ್ರಮಗಳ ಆಚಾರವಿಧಿಗಳು, ಪಾಪಗಳಿಗೆ ಪ್ರಾಯಶ್ಚಿತ್ತವನ್ನೂ ಇಲ್ಲಿ ವಿವರಿಸ-ಲಾಗಿದೆ. ರುದ್ರನು ಕಪಾಲಿಯಾದ ಘಟನೆಯನ್ನು ವಿವರಿಸಲಾಗಿದೆ. ಪತಿವ್ರತೆಯರ ಕಥೆಗಳನ್ನು ಹೇಳಲಾಗಿದೆ

ಪ್ರಾಕೃತ, ನೈಮಿತ್ತಿಕ ಪ್ರಲಯಗಳನ್ನೂ, ಸಬೀಜ ಯೋಗವನ್ನೂ ಇಲ್ಲಿ ವರ್ಣಿಸಲಾಗಿದೆ.

ಈ ಪುರಾಣದ ಸಂಕ್ಷೇಪವನ್ನು ತಿಳಿದು, ಹೇಳುವವರು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು ಬ್ರಹ್ಮಲೋಕದಲ್ಲಿ ಗೌರವದ ಸ್ಥಾನವನ್ನು ಪಡೆಯುತ್ತಾರೆ.

ಪುರುಷೋತ್ತಮನಾದ ಶ್ರೀಹರಿಯು ಕೂರ್ಮರೂಪದಿಂದ ಪುರಾಣವನ್ನು ಉಪದೇಶಿಸಿ, ಆ ರೂಪವನ್ನು ಬಿಟ್ಟು, ಲಕ್ಷ್ಮೀದೇವಿಯೊಂದಿಗೆ ಹೊರಟು ಹೋದನು. ಹರನೂ ಹೊರಟುಹೋದನು.

ಉಪದೇಶಾಮೃತವನ್ನು ಸ್ವೀಕರಿಸಿದ ದೇವತೆಗಳೂ, ಮುನಿಗಳೂ ವಿಷ್ಣುವನ್ನು ನಮಸ್ಕರಿಸಿ ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು.

ವಿಷ್ಣುವು ಕೂರ್ಮರೂಪದಿಂದ ಉಪದೇಶಿಸಿದ ಈ ಪುರಾಣವನ್ನು ಯಾರು ನಿಯಮದಿಂದ ಓದುತ್ತಾರೋ ಅವರ ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು ಬ್ರಹ್ಮಲೋಕದಲ್ಲಿ ಮಹತ್ವದ ಸ್ಥಾನವನ್ನು ಪಡೆಯುತ್ತಾರೆ.

ಈ ಪುರಾಣವನ್ನು ಬರೆದು ವೈಶಾಖ ಅಥವಾ ಕಾರ್ತೀಕ ಮಾಸದಲ್ಲಿ ವೇದಜ್ಞಾನಿಯಾದ ವಿಪ್ರನಿಗೆ ದಾನಕೊಟ್ಟರೆ ಅವನ ಎಲ್ಲ ಪಾಪಗಳೂ ನಾಶವಾಗುತ್ತವೆ. ಎಲ್ಲ ಐಶ್ವರ್ಯಗಳೂ ಅವನಿಗೆ ಲಭಿಸುತ್ತವೆ. ಮರ್ತ್ಯಲೋಕದ ವಿಪುಲಭೋಗಗಳನ್ನು ಅನುಭವಿಸಿ ಸ್ವರ್ಗಲೋಕಕ್ಕೆ ಹೋಗುತ್ತಾನೆ. ಅಲ್ಲಿಯೂ ಭೋಗಗಳನ್ನು ಅನುಭವಿಸಿ ಪುನಃ ಭೂಲೋಕದಲ್ಲಿ ವಿಪ್ರಕುಲದಲ್ಲಿ ಹುಟ್ಟುತ್ತಾನೆ. ಪೂರ್ವಸಂಸ್ಕಾರದ ಬಲದಿಂದ ಬ್ರಹ್ಮವಿದ್ಯೆಯನ್ನು ಪಡೆಯುತ್ತಾನೆ.

ಕೊನೆಯ ಒಂದು ಅಧ್ಯಾಯವನ್ನು ಓದಿದರೂ ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ. ಅರ್ಥವನ್ನು ಚೆನ್ನಾಗಿ ತಿಳಿದುಕೊಂಡರೆ ಮುಕ್ತಿಯನ್ನು ಹೊಂದುತ್ತಾನೆ.

ಎಲ್ಲ ಪರ್ವಕಾಲಗಳಲ್ಲಿ ದ್ವಿಜರು ಈ ಪುರಾಣವನ್ನು ಓದಬೇಕು. ಕೇಳಬೇಕು. ಇದರಿಂದ ಎಲ್ಲ ಪಾಪಗಳೂ ನಾಶವಾಗುತ್ತವೆ.

ಒಂದು ಕಡೆ ಎಲ್ಲ ಪುರಾಣಗಳನ್ನೂ, ಇತಿಹಾಸವನ್ನೂ ಮತ್ತೊಂದು ಕಡೆ ಈ ಕೂರ್ಮಪುರಾಣವನ್ನು ಇಟ್ಟು ತೂಗಿದರೆ ಈ ಪುರಾಣನೇ ಇತರ ಪುರಾಣ-ಇತಿಹಾಸಗಳನ್ನು ಮೀರಿಸಿದ ಕೃತಿ ಎಂದು ತಿಳಿಯುತ್ತದೆ.

ಈ ಪುರಾಣಕ್ಕಿಂತ ಉತ್ತಮವಾದ ಸಾಧನಶಾಸ್ತ್ರ ಬೇರೊಂದು ಇಲ್ಲ.

ಇಲ್ಲ ಭಗವಾನ್ ನಾರಾಯಣನ ಮಹಿಮೆಯು ಯಥಾರ್ಥವಾಗಿ ಹೇಳಲ್ಪಟ್ಟಿದೆ. ಈ ಪುರಾಣವು ಹೇಳುವಂತೆ ವಿಷ್ಣು ಮಹಿಮೆಯನ್ನು ಬೇರೆ ಯಾವ ಪುರಾಣವೂ ಹೇಳುವುದಿಲ್ಲ.

ಪರಬ್ರಹ್ಮನನ್ನು ಬೋಧಿಸುವ ಈ ಪುರಾಣವು ಎಲ್ಲ ಪಾಪಗಳನ್ನೂ ನಾಶಮಾಡುತ್ತದೆ.

ಇಲ್ಲಿ ವರ್ಣಿಸಲ್ಪಡುವ ಪರಬ್ರಹ್ಮವು ಎಲ್ಲ ತೀರ್ಥಗಳಿಗಿಂತ ಶ್ರೇಷ್ಠವಾದ ತೀರ್ಥ. ಎಲ್ಲ ತಪಸ್ಸುಗಳ ಪರಮಗುರಿ. ಈ ಪರಬ್ರಹ್ಮನ ಜ್ಞಾನವೇ ಶ್ರೇಷ್ಠವಾದ ಜ್ಞಾನ. ಈ ಪುರಾಣವನ್ನು ಅಯೋಗ್ಯನ ಸಮೀಪದಲ್ಲಿ ಓದಬಾರದು. ಓದಿದರೆ ಬಹುವಿಧ ನರಕಗಳನ್ನು ಹೊಂದುತ್ತಾನೆ. ದೇವತಾಕಾರ್ಯದ ಸಮಯದಲ್ಲಿ, ಶ್ರಾದ್ಧಕಾಲದಲ್ಲಿ ದ್ವಿಜರು ಈ ಪುರಾಣವನ್ನು ಕೇಳಬೇಕು. ಯಜ್ಞದ ಕೊನೆಯಲ್ಲಿ ಕೇಳಲೇಬೇಕು. ಶ್ರವಣದಿಂದ ಆಯಾಯಾ ಕಾರ್ಯಗಳಲ್ಲಿ ಸಂಭವಿಸಿದ ದೋಷಗಳ ಪರಿಹಾರವಾಗುತ್ತದೆ. ವೇದಾರ್ಥವನ್ನು ಸ್ಪಷ್ಟಪಡಿಸುವ ಈ ಪುರಾಣವನ್ನು ಮೋಕ್ಷವನ್ನು ಬಯಸುವವರೆಲ್ಲರೂ ವಿಶೇಷವಾಗಿ ಶ್ರವಣ ಮಾಡಿ, ಮನನ ಮಾಡಬೇಕು. ತಾನು ತಿಳಿದು ಬೇರೆ ಭಕ್ತನಾದ ವಿಪ್ರರಿಗೆ ತಿಳಿಸಬೇಕು. ಹೀಗೆ ಮಾಡಿದವನು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು ಬ್ರಹ್ಮಸಾಯುಜ್ಯವನ್ನು ಹೊಂದುವನು.

ಶ್ರದ್ಧೆಯಿಲ್ಲದ, ಅಧಾರ್ಮಿಕ ಪುರುಷನಿಗೆ ಈ ಪುರಾಣವನ್ನು ಉಪದೇಶಿಸಬಾರದು. ಉಪದೇಶಿಸುವವನು ಮರಣಾನಂತರ ನರಕಕ್ಕೆ ಹೋಗುತ್ತಾನೆ ಮತ್ತು ನಾಯಿಯ ಜನ್ಮವನ್ನು ಪಡೆಯುತ್ತಾನೆ. ಜಗಜ್ಜನ್ಮಾದಿಕಾರಣನಾದ, ಸನಾತನನಾದ ವಿಷ್ಣುವನ್ನು, ಕೃಷ್ಣದ್ವೈಪಾಯನ-ರನ್ನು ನಮಸ್ಕರಿಸಿ ಈ ಪುರಾಣದ ಅಧ್ಯಯನವನ್ನು ಮಾಡಬೇಕು ಎಂದು ದೇವೋತ್ತಮನಾದ ವಿಷ್ಣುವಿನ, ಪರಾಶರ ಮುನಿಗಳ ಮತ್ತು ವೇದವ್ಯಾಸರ ಆದೇಶವಿದೆ.

## ಕೂರ್ಮಪುರಾಣದ ಆಗತಿಕ್ರಮ :

ಹಿಂದೆ ನಾರದಮಹರ್ಷಿಗಳು ನಾರಾಯಣದೇವರಿಂದ ಈ ಪುರಾಣವನ್ನು ಕೇಳಿ ತಿಳಿದು ಗೌತಮ ಮುನಿಗಳಿಗೆ ಉಪದೇಶಿಸಿದರು. ಗೌತಮರಿಂದ ಪರಾಶರರು ಕೇಳಿದರು. ಪರಾಶರರು, ಧರ್ಮ-ಅರ್ಥ-ಕಾಮ-ಮೋಕ್ಷಗಳಿಗೆ ಸಾಧನವಾದ ಈ ಪುರಾಣವನ್ನು ಗಂಗಾದ್ವಾರವೆಂಬ ಪ್ರದೇಶದಲ್ಲಿ ಮುನಿಗಳಿಗೆ ಉಪದೇಶಿಸಿದರು.

ಹಿಂದೆ ಚತುರ್ಮುಖಬ್ರಹ್ಮದೇವರು ಧೀಮಂತರಾದ ಸನಕರಿಗೆ ಮತ್ತು ಸನತ್ಕುಮಾರರಿಗೆ ಈ ಪುರಾಣವನ್ನು ಉಪದೇಶಿಸಿದ್ದರು. ಸನಕರು ದೇವಲ ಎಂಬ ಮುನಿಗೆ ಉಪದೇಶಿಸಿದ್ದರು. ದೇವಲರು ಪಂಚಶಿಖ ಎಂಬ ಮುನಿಗೆ ಉಪದೇಶಿಸಿದ್ದರು.

ಸನತ್ಕುಮಾರರು ಸತ್ಯವತೀ ಸುತನಾದ ವ್ಯಾಸರಿಗೆ ಸರ್ವಾರ್ಥವನ್ನೊಳಗೊಂಡಿರುವ ಈ ಪುರಾಣವನ್ನು ಉಪದೇಶಿಸಿದ್ದರು. ಆ ವ್ಯಾಸರಿಂದ ಕೇಳಿದ ನಾನು ನಿಮಗೆ ಉಪದೇಶಿಸಿದ್ದೇನೆ. ನೀವು ಧಾರ್ಮಿಕರಿಗೆ ಇದನ್ನು ಉಪದೇಶಿಸಬೇಕು.

ಸರ್ವಜ್ಞರೂ, ಪರಾಶರ ಸುತರೂ, ಶಾಂತರೂ ನಾರಾಯಣ ಸ್ವರೂಪರೂ ಆದ ವ್ಯಾಸರಿಗೆ ನಮಸ್ಕಾರ. ಜಗಜ್ಜನ್ಮಾದಿ ಕಾರಣನಾದ, ದೇವೋತ್ತಮನಾದ ಕೂರ್ಮರೂಪಿಯಾದ ವಿಷ್ಣುವಿಗೆ ನಮಸ್ಕಾರ.

*-ಗ್ರಂಥ ಸಮಾಪ್ತಿ-*

